॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೮


ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1952

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೮

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1952

# ಮುನ್ನುಡಿ

ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶವು ಈ ಪುಸ್ತಕದಲ್ಲಿ ಆರಂಭವಾಗಿದೆ. ಪ್ರತಿಯೊಂದು ಅಂಶಕ್ಕೂ ಇಲ್ಲಿ ಒಂದೊಂದು ಪರಮೇಶ್ವರನ ನಾಮವನ್ನೇ ಅಂಕಿತವನ್ನಾಗಿಟ್ಟಿರುವರು. 'ಮಹಾದೇವ' ಎಂಬ ಅಂಕಿತದಿಂದ ಪ್ರಸಿದ್ಧವಾಗಿರುವ ಈ ಏಕಾದಶಾಂಶವು ಐವತ್ತು ಅಧ್ಯಾಯಗಳಿಂದ ಕೂಡಿದೆ. ಅದರಲ್ಲಿ ಮೊದಲನೆಯ ಇಪ್ಪತ್ತೈದು ಅಧ್ಯಾಯಗಳ ಗ್ರಂಥಭಾಗವನ್ನು ಮಾತ್ರ ಕನ್ನಡಭಾಷಾಪರಿವರ್ತನೆಯೊಂದಿಗೆ ಈ ಪ್ರತಿಯಲ್ಲಿ ಮುದ್ರಿಸಲಾಗಿದೆ. ಒಂದರಿಂದ ಹದಿಮೂರು ಅಧ್ಯಾಯಗಳಲ್ಲಿ ಪೂರ್ತಿಯಾಗಿ ನಾನಾವಿಧಗಳಾದ ಶಿವಮೂರ್ತಿಗಳು, ಆ ಮೂರ್ತಿಗಳನ್ನು ಪೂಜಾರ್ಥವಾಗಿ ಪ್ರತಿಷ್ಠಿಸುವ ವಿಧಾನ, ಶಿವಾಭಿಷೇಕವಿಧಿ, ಚರಾಚರಲಿಂಗಪೂಜಾಕ್ರಮ, ಶಿವನಿರ್ಮಾಲ್ಯಧಾರಣಫಲ ಇವೇ ಮೊದಲಾದ ಸಾಮಾನ್ಯನಿಯಮಗಳು ವಿವರವಾಗಿ ವರ್ಣಿತವಾಗಿವೆ. ಮುಂದಿನ ಹನ್ನೆರಡು ಅಧ್ಯಾಯಗಳಲ್ಲಿ, ಚೈತ್ರಾದಿ ಹನ್ನೆರಡು ಚಾಂದ್ರಮಾನಮಾಸಗಳಲ್ಲಿಯೂ ಮಾಡಬೇಕಾದ ಶಿವಪೂಜಾಕ್ರಮವನ್ನು ವಿಸ್ತರಿಸಿರುವರು. ಹನ್ನೆರಡು ತಿಂಗಳುಗಳಲ್ಲಿಯೂ ನಡೆಸಬೇಕಾದ ಪೂಜಾಕ್ರಮದಲ್ಲಿ ಅಷ್ಟೋತ್ತರಶತನಾಮಗಳೊಂದನ್ನು ಬಿಟ್ಟರೆ ಮತ್ತಾವ ಹೆಚ್ಚಿನ ವ್ಯತ್ಯಾಸವೂ ಕಂಡುಬರುವುದಿಲ್ಲ. ಗ್ರಂಥಕಾರರು ಶಿವಪೂಜಾಕ್ರಮವನ್ನು ವಿವರಿಸುವಾಗ ಸ್ವಯಂ ಭಕ್ತಿಪರವಶರಾಗಿ ಶಿವಪೂಜಾಸಾಮಗ್ರಿಗಳ ವರ್ಣನೆಯಲ್ಲಿ ಮೈಮರೆತು ಸಕಲ ಪೂಜಾದ್ರವ್ಯಗಳನ್ನು ಅಸಂಖ್ಯಾಕವಾಗಿ ಹೇಳಿಬಿಟ್ಟಿರುವರು. ಶಿವಸ್ತೋತ್ರಗಳಂತೂ ಹನ್ನೆರಡು ತಿಂಗಳಿಗೂ ಹನ್ನೆರಡು ರೀತಿಯಲ್ಲಿ ನಿರೂಪಿತಗಳಾಗಿವೆ. ಶಿವಾಷ್ಟೋತ್ತರಶತನಾಮಾವಳಿಗಳು ಬೇರೆಬೇರೆಯಾಗಿ ಹನ್ನೆರಡು ರೀತಿಯಿಂದಲೇ ಉಕ್ತವಾಗಿವೆ. ಕೆಲವು ಕಡೆ ನಾಮಾವಳಿಗಳ ಸಂಖ್ಯೆಯಲ್ಲಿ ಸ್ವಲ್ಪ ಹೆಚ್ಚುಕಡಿಮೆ ಕಂಡುಬಂದಿದೆ. ಶ್ರಾವಣಮಾಸಪೂಜಾವಿಧಿಯಲ್ಲಿ "ಏವಂ ವೈ ಶ್ರಾವಣೇ ಪೂಜ್ಯೋ ಬಿಲ್ವೈರ್ನಾಮಶತಾಷ್ಟಕೈಃ" ಎಂದು ಹೇಳಿ, ಶಿವಾಷ್ಟೋತ್ತರಶತನಾಮಾವಳಿ ಶ್ಲೋಕಗಳನ್ನು ಪೂರೈಸಿರುವರು. ಆ ಶ್ಲೋಕಗಳಲ್ಲಿರುವ ಪ್ರಕಾರ ನಾಮಾವಳಿಗಳನ್ನು ಕ್ರಮಗೊಳಿಸಿದರೆ ಎಂಬತ್ತೆರಡಕ್ಕಿಂತ ಹೆಚ್ಚಿನ ಶಿವನಾಮಗಳು ದೊರೆಯುವುದಿಲ್ಲ. ಹೀಗೆಯೇ ಭಾದ್ರಪದಮಾಸದ ಪೂಜಾವಿಧಿಯಲ್ಲಿಯೂ ತೋರಿಬರುತ್ತಿದೆ. ಪ್ರಾಯಶಃ ಮೂಲದ ಆ ಭಾಗದಲ್ಲಿ ಕೆಲವು ಶ್ಲೋಕಗಳು ಕೈತಪ್ಪಿಹೋಗಿವೆಯೋ! ಏನೋ! ಎಂಬ ಭ್ರಾಂತಿ ಬರುವಂತಿದೆ. ಆದರೆ ಕೆಲವು ತಿಂಗಳಲ್ಲಿ, ಅಷ್ಟೋತ್ತರಶತನಾಮಗಳಿಗಿಂತ ಹೆಚ್ಚಿನ ಸಂಖ್ಯೆಯ ನಾಮಗಳೂ ಕಂಡುಬರುತ್ತಿವೆ. ಇದಿಷ್ಟು ಮೂಲದ ವ್ಯತ್ಯಾಸ. ಮೇಲೆ ಹೇಳಿದ ಹನ್ನೆರಡು ರೀತಿಯ ಶಿವಾಷ್ಟೋತ್ತರಗಳಲ್ಲಿಯೂ ಉಪಕ್ರಮ,

ಉಪಸಂಹಾರದಲ್ಲಿ ಶಿವನಾಮಗಳು ವ್ಯತ್ಯಾಸವಾಗಿ ಕಂಡುಬಂದರೂ, ವಿಶೇಷವಾಗಿ ಒಂದು ಸಾರಿ ಬಂದ ಶಿವನಾಮಗಳೇ ಮತ್ತೆ ಮತ್ತೆ ಬರುತ್ತಿವೆ. ಕನ್ನಡ ಪರಿವರ್ತನಾ ಭಾಗದಲ್ಲಿ ಆ ಅಷ್ಟೋತ್ತರಶತನಾಮಾವಳಿಗೂ ಅರ್ಥ ಬರೆಯಲು ಆರಂಭಿಸಿ, ಚೈತ್ರ ಮಾಸಕ್ಕೆ ಸಂಬಂಧಿಸಿದ ನಾಮಾವಳಿಗೆಲ್ಲಾ ಪೂರ್ತಿಯಾಗಿ ಅರ್ಥಾನುವಾದ ಮಾಡಲಾಯಿತು. ಆದರೆ ಮುಂದಿನ ಮಾಸಾಷ್ಟೋತ್ತರ ಶತನಾಮಾವಳಿಗಳಲ್ಲೆಲ್ಲಾ ಬಂದ ಪದಗಳೇ ಪುನಃ ಪುನಃ ಬಂದಿರುವುದನ್ನು ನೋಡಿ, ಆ ನಾಮಾವಳಿಗಳ ಅರ್ಥಾನುವಾದವನ್ನು ನಿಲ್ಲಿಸಿ, ವ್ರತಮಾಡುವವರ ಸಹಾಯಾರ್ಥವಾಗಿ, ಮೂಲದಲ್ಲಿ ಪ್ರಥಮಾವಿಭಕ್ತಿಯಿಂದ ಕಂಡುಬರುವ ನಾಮಾವಳಿಗಳನ್ನು ಚತುರ್ಥ್ಯಂತವಾಗಿ ನಮಶ್ಶಬ್ದಾಂತದೊಡನೆ ವಿಂಗಡಿಸಿ ಅಚ್ಚುಹಾಕಿಸಲಾಗಿದೆ. ಸಾಮಾನ್ಯವಾಗಿ ಶಿವಾಷ್ಟೋತ್ತರಗಳು ಇಷ್ಟು ಭೇದಪ್ರಭೇದದೊಡನೆ ತೋರುತ್ತಿರುವುದು ಈ ಗ್ರಂಥವೊಂದರಲ್ಲಿಯೇ ಎಂದು ಹೇಳಬಹುದು. ದ್ವಾದಶಮಾಸಗಳಲ್ಲಿಯೂ ಪೂಜಾದಿಗಳನ್ನು ನಡೆಸಿ, ತದಂಗವಾಗಿ ಹೋಮ, ಗೋದಾನ, ಶಿವಾರ್ಚಕರ ಸಂತೃಪ್ತಿ ಇವುಗಳನ್ನು ಪ್ರತಿಯೊಂದು ಜನಾಂಗದ ಮಾನವನೂ ನಡೆಸಬಹುದೆಂದು ಈ ಗ್ರಂಥದಲ್ಲಿ ಉಕ್ತವಾಗಿದೆ. ಈ ಮಾಸಪೂಜೆಯ ಮಹಿಮೆಯಿಂದ ಭಕ್ತನ ಸಕಲ ಇಷ್ಟಾರ್ಥಗಳೂ ನೆರವೇರುವುವು ಎಂಬುದು ಗ್ರಂಥಕಾರರ ದೃಢನಿಶ್ಚಯ. ಪೂಜಾಂತದಲ್ಲಿ ಮಾಡಬೇಕಾದ ಶಿವಧ್ಯಾನಪರವಾದ ಶಿವಸ್ತೋತ್ರಗಳಂತೂ ಓದುವವರಿಗೆ ವಿಶೇಷ ಆಕರ್ಷಕಗಳಾಗಿವೆ.

ನಮ್ಮನ್ನಾಳುವ ಶ್ರೀಮನ್ಮಹಾರಾಜರವರ ಆಸ್ತಿಕಮನೋಭಾವನೆಯ ಫಲವಾಗಿ ಇಂತಹ ಅನೇಕ ಪ್ರಾಚೀನ ಮಹಾಗ್ರಂಥಗಳು ಕನ್ನಡಿಗರಿಗೆ ಸುಲಭವಾಗಿ ದೊರೆಯುವಂತಾಗಿವೆ. ಇದೇ ರೀತಿ ಇನ್ನೂ ನಾನಾರೀತಿಯ ಸದ್ಧರ್ಮ ಕಾರ್ಯಗಳನ್ನೆಸಗುತ್ತಾ ಪ್ರಜಾರಂಜನೆಯಿಂದ ನಮ್ಮ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಸ್ವಾಮಿಯವರು ಆಚಂದ್ರಾರ್ಕವಾದ ಕೀರ್ತಿಯನ್ನು ಗಳಿಸಿ ಚಿರಾಯುಷ್ಮಂತರಾಗಿ ಸಮಸ್ತ ಪರಿವಾರದೊಂದಿಗೆ ಸುಖಸಂತೋಷಗಳಿಂದ ಬಾಳಲಿ ಎಂದು ಸರ್ವಜಗನ್ನಿಯಾಮಕನಾದ ಸರ್ವೇಶ್ವರನಲ್ಲಿ ನಾನು ಭಕ್ತಿಪುರಸ್ಸರವಾಗಿ ಶ್ರೇಯಃ ಪ್ರಾರ್ಥನೆಮಾಡುವೆನು.

ಶ್ರೀನಂದನಸಂವತ್ಸರದ
ಆಶ್ವಯುಜ ಶುದ್ಧ
ತ್ರಯೋದಶೀ ಗುರುವಾರ
ತಾ॥ 16—10—1952.

ಸಜ್ಜನ ವಿಧೇಯ
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದ

## ವಿಷಯಾನುಕ್ರಮಣಿಕಾ

(೧— ೨೫ ಅಧ್ಯಾಯಗಳು ಪೂರ್ತಿ)



## ಎಂಟನೆಯ ಅಧ್ಯಾಯ



## ಒಂಬತ್ತನೆಯ ಅಧ್ಯಾಯ



## ಹತ್ತನೆಯ ಅಧ್ಯಾಯ



## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ



## ಹದಿನಾರನೆಯ ಅಧ್ಯಾಯ



## ಹದಿನೇಳನೆಯ ಅಧ್ಯಾಯ

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಪ್ರಥಮೋಽಧ್ಯಾಯಃ

ಓಂ ವಿಘ್ನಾದ್ರಿಭಂಗಕುಲಿಶಾಕೃತಿಚಾರುಶುಂಡಾ-
ದಂಡಾಗ್ರಧಾರಿತರದಂ ದ್ವಿರದೇಂದ್ರವಕ್ತ್ರಂ ।
ಕರ್ಣಾಂತರಾಳಸಿತರಾಜಿತಚಾಮರೌಘ-
ಸಂವೀಜನಪ್ರಸೃತದಾನಕರಂ ನಮಾಮಿ ॥೧॥

॥ ಸೂತ ಉವಾಚ ॥

ಶೃಣು ಶೌನಕ ಭೂಯೋಽಪಿ ಸಂವಾದಂ ಪರಮಂ ಶುಭಂ ।
ಜೈಗೀಷವ್ಯಸ್ಯ ಚ ಮುನೇಸ್ತಾರಕಾರೇಃ ಶುಭಾಸ್ಪದಂ ॥೨॥

---

## ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಮೊದಲನೆಯ ಅಧ್ಯಾಯವು

ಗ್ರಂಥಕಾರರು ಅಂಶಾದಿಯಲ್ಲಿ ವಿಘ್ನನಿವಾರಣೆಗಾಗಿ ವಿಘ್ನೇಶ್ವರನನ್ನು ಈರೀತಿ ಪ್ರಾರ್ಥಿಸುವರು :— ವಿಘ್ನಗಳೆಂಬ ಬೆಟ್ಟಗಳನ್ನು ಭೇದಿಸುವುದರಲ್ಲಿ ವಜ್ರಾಯುಧದಂತಿರುವ ತನ್ನ ಮನೋಹರವಾದ ಸೊಂಡಿಲಿನಲ್ಲಿ ದಂತವನ್ನು ಧರಿಸಿರುವವನೂ, ಗಜೇಂದ್ರಮುಖನೂ ಆದ ವಿಘ್ನೇಶ್ವರನು ತನ್ನ ಕಿವಿಗಳ ಮಧ್ಯಭಾಗದಲ್ಲಿ ಶುಭ್ರವಾಗಿ ಶೋಭಿಸುವ ಚಾಮರಗಳನ್ನು ಹೊಂದಿ, ಅದರಿಂದ ಉಂಟಾದ ವಾಯುವಿನಿಂದ ತನ್ನ ಮದಧಾರೆಯನ್ನು ಸರ್ವತ್ರ ಎರೆಚುತ್ತಾ, ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತಾ ಪ್ರಸನ್ನಮುಖದಿಂದಿರುವನು. ಇಂತಹ ಮಹಾಗಣಪತಿಗೆ ವಂದನೆಗಳು.॥೧॥

ಅಯ್ಯ ಶೌನಕನೆ! ಕೇಳು. ಜೈಗೀಷವ್ಯಮುನಿ ಮತ್ತು ಷಣ್ಮುಖಸ್ವಾಮಿಯ ಮಂಗಳಾಸ್ಪದವೂ, ಪರಮಶುಭವೂ ಆದ ಪರಸ್ಪರ ಸಂವಾದವನ್ನು ಹೇಳುವೆನು;

ಸಹೈಭಿರ್ಮುನಿಭಿರ್ವಿಪ್ರ ಶಾಂಭವ್ಯಾಃ ಶಂಭುಸತ್ಕಥಾಃ ।
ತ್ವಮತೀವ ಶಿವೇ ಭಕ್ತಃ ಶಿವಲಿಂಗಾರ್ಚನಪ್ರಿಯಃ ॥೩॥

॥ ಶೌನಕ ಉವಾಚ ॥

ಭವಭಕ್ತೋಽಸಿ ನಿತರಾಂ ಭಸ್ಮರುದ್ರಾಕ್ಷಭೂಷಣಃ ।
ತ್ವದ್ವಾಕ್ಪಂಕಜನಿಷ್ಯಂದಿಮಕರಂದೋಪಮಾಃ ಕಥಾಃ ॥೪॥

ಸಹೈಭಿರ್ಮುನಿಭಿಃ ಸೂತ ಮಚ್ಚಿತ್ತಭ್ರಮರೋಽಧುನಾ ।
ಪಾತುಮಿಚ್ಛತಿ ನಿಃಶಂಕಂ ಕೃತಾಂತಹರಸತ್ಕಥಾಃ ॥೫॥

॥ ಸೂತ ಉವಾಚ ॥

ಧನ್ಯಾ ಯೂಯಂ ಸದಾಮಾನ್ಯಾ ಮುನಯಃ ಶಾಂಭವೋತ್ತಮಾಃ ।
ವದಾಮಿ ಭವತಾಂ ಭೂಯೋ ರಹಸ್ಯಂ ಶೈವಮುತ್ತಮಂ ॥೬॥

ದಶಧರ್ಮಾರ್ಥಕಥನಂ ಶ್ರುತ್ವಾ ಪೃಚ್ಛತಿ ಷಣ್ಮುಖಂ ।
ಜೈಗೀಷವ್ಯಃ ಪುರಾ ಯೋಗೀ ಶಿವಭಕ್ತೋ ಜಿತೇಂದ್ರಿಯಃ ॥೭॥

---

ಪ್ರೀತಿಯಿಂದ ಲಾಲಿಸು. ಈಶ್ವರಭಕ್ತರಾದ ಈ ಮುನಿಗಳೂ ಪರಶಿವನ ಸಚ್ಚರಿತೆಗಳನ್ನು ಕೇಳಲು ಕುತೂಹಲವುಳ್ಳವರಾಗಿರುವರು. ನೀನೂ ಸಹ ಪರಶಿವನಲ್ಲಿ ವಿಶೇಷ ಭಕ್ತಿಯುಳ್ಳವನು; ಶಿವಲಿಂಗಪೂಜೆಯಲ್ಲಿ ಹೆಚ್ಚಿನ ಪ್ರೀತಿಯುಳ್ಳವನು; ಎಂದು ಸೂತಮಹಾಮುನಿಯು ಶೌನಕನನ್ನು ಕುರಿತು ಹೇಳಲು, ಶೌನಕನು ಸೂತನನ್ನು ನೋಡುತ್ತಾ, ॥೨-೩॥

"ಸೂತಮಹರ್ಷಿಯೇ, ಭಸ್ಮ ರುದ್ರಾಕ್ಷಗಳಿಂದಲಂಕೃತನಾದ ನೀನು ಪರಮ ಶೈವನೆನಿಸಿರುವೆ; ನಿನ್ನ ಮಾತುಗಳೆಂಬ ಕಮಲಗಳಿಂದ ಹರಿಯುವ ಮಕರಂದ ಸದೃಶವಾದ ಈಶ್ವರನ ಕಥೆಗಳನ್ನು ಈ ಮುನಿಗಳೊಡನೆ ಕೂಡಿ ನನ್ನ ಮನಸ್ಸೆಂಬ ಭ್ರಮರವು ಸಂದೇಹವಿಲ್ಲದೇ ಪಾನಮಾಡಲು ಬಯಸುತ್ತಿದೆ, ದಯೆಯಿಟ್ಟು ವಿವರವಾಗಿ ಹೇಳಬೇಕು" ಎಂದು ಪ್ರಾರ್ಥಿಸಿದನು. ॥೪-೫॥

ಆಗ ಸೂತಮಹರ್ಷಿಗಳು ಈ ರೀತಿ ಹೇಳಲು ಉಪಕ್ರಮಿಸಿದರು. ಶೈವವರ್ಯರಾದ ನೀವೆಲ್ಲರೂ ಯಾವಾಗಲೂ ಧನ್ಯರೇ ಸರಿ; ಲೋಕದಲ್ಲಿ ಪೂಜಾರ್ಹರೂ ನೀವೇ ಆಗಿರುವಿರಿ. ನಿಮಗೆ ಉತ್ತಮವಾದ ಶಿವರಹಸ್ಯವನ್ನು ಇನ್ನೂ ಹೇಳುವೆನು ಕೇಳಿರಿ;

ಪ್ರಣಮ್ಯಾಹ ತದಾ ಸ್ಕಂದಂ ಪ್ರಾಂಜಲಿರ್ವಿನಯಾನ್ವಿತಃ ॥೮॥

॥ ಜೈಗೀಷವ್ಯ ಉವಾಚ ॥

ನಮೋ ಬ್ರಹ್ಮಣ್ಯಪತಯೇ ಸುಬ್ರಹ್ಮಣ್ಯಾಯ ತೇ ನಮಃ ।
ಪಂಚಾಸ್ಯಾಮಲಪಾಥೋಜಮಿತ್ರರೂಪಾಯ ತೇ ನಮಃ ॥೯॥

ಅಪರ್ಣಾಹೃದಯಾನಂದಸಂದೋಹಾಯಾಮಲಾತ್ಮನೇ ।
ಶೂರತಾರಕಸಂಹಾರ ಶಕ್ತಿಹಸ್ತಾಯ ತೇ ನಮಃ ॥೧೦॥

ಪ್ರಣವಾರ್ಥಮಹಾಸಾರಪ್ರವಣಾಯಾಖಿಲಾತ್ಮನೇ ।
ದ್ವಿಜರಾಜಕಲಾಮೌಲಿಪಾದಪಂಕಜಚೇತಸೇ ॥೧೧॥

ದೇವಸೇನಾಪತೇ ತುಭ್ಯಂ ಲವಲೀಪತಯೇ ನಮಃ ।
ಕೇಕೀಕುಕ್ಕುಟವಾಹಾಯ ಕುಮಾರಾಯ ನಮೋನಮಃ ॥೧೨॥

---

ಲೋಕದಲ್ಲಿ ಪೂಜಾರ್ಹರೂ ನೀವೇ ಆಗಿರುವಿರಿ. ನಿಮಗೆ ಉತ್ತಮವಾದ ಶಿವರಹಸ್ಯವನ್ನು ಇನ್ನೂ ಹೇಳುವೆನು ಕೇಳಿರಿ. ಯೋಗಿಯೂ, ಈಶ್ವರಭಕ್ತನೂ, ಜಿತೇಂದ್ರಿಯನೂ ಆದ ಜೈಗೀಷವ್ಯನು ಹತ್ತುವಿಧಗಳಾದ ಧರ್ಮಾರ್ಥನಿರೂಪಣೆಯನ್ನು ಕೇಳಲು ಆಸೆಪಟ್ಟು ಮತ್ತೆ ಆ ಷಣ್ಮುಖಸ್ವಾಮಿಗೆ ಪ್ರಣಾಮಮಾಡಿ, ವಿನಯದಿಂದ ಕೈಜೋಡಿಸಿ ಇಂತೆಂದನು. ॥೬-೭-೮॥

ಬ್ರಹ್ಮಜ್ಞಾನಿಯೆನಿಸಿರುವ ಶ್ರೀ ಸುಬ್ರಹ್ಮಣ್ಯಸ್ವಾಮಿಯೆ, ನಿನಗೆ ನಮಸ್ಕಾರ ಮಾಡುವೆನು. ಪಂಚಮುಖನೆನಿಸಿದ ಶಿವನೆಂಬ ತಾವರೆಗೆ ಸೂರ್ಯನಂತಿರುವ ನಿನಗೆ ಪ್ರಣಾಮವು. ಪಾರ್ವತಿಯ ಮನಸ್ಸಿಗೆ ಆನಂದವನ್ನುಂಟುಮಾಡುವವನೂ, ನಿರ್ಮಲಸ್ವರೂಪಿಯೂ, ವೀರನಾದ ತಾರಕಾಸುರನನ್ನು ಸಂಹರಿಸುವುದಕ್ಕಾಗಿ ಶಕ್ತ್ಯಾಯುಧವನ್ನು ಕೈಯ್ಯಲ್ಲಿ ಧರಿಸಿದವನೂ ಆದ ನಿನಗೆ ನಮಸ್ಕಾರ. ॥೯-೧೦॥

ಓಂಕಾರಾರ್ಥವಾದ ಮಹಾವೇದಸಾರದಲ್ಲಿ ನಿರತನೂ, ಸಕಲ ಪ್ರಪಂಚಸ್ವರೂಪಿಯೂ, ಚಂದ್ರಶೇಖರನೆನಿಸಿದ ಶಿವನ ಪಾದಕಮಲದಲ್ಲಿಟ್ಟ ಮನವುಳ್ಳವನೂ, ದೇವತೆಗಳ ಸೈನ್ಯಕ್ಕೆ ಸ್ವಾಮಿಯೂ, ವಲ್ಲೀದೇವಿಯ ರಮಣನೂ ಆದ ನಿನಗೆ ಪ್ರಣಾಮವು. ಮಯೂರ (ನವಿಲು) ಮತ್ತು ಕುಕ್ಕುಟವಾಹನನಾದ ಕುಮಾರಸ್ವಾಮಿಯೆ! ನಿನಗೆ ಅನಂತ ನಮಸ್ಕಾರಗಳು. ॥೧೧-೧೨॥

ಗಜಾನನಾನುಜಾಯಾಥ ಸರ್ವಮಂತ್ರಾತ್ಮನೇ ನಮಃ ।
ಶೈವಾನಂದರಹಸ್ಯಾಬ್ಧಿಸೋಮಧಾಮ್ನೇ ನಮೋ ನಮಃ ।೧೩॥

ತ್ವತ್ತೋ ವೇದಾಂತಸಾರಾರ್ಥೋ ದಶಮಾಂಶಃ ಶ್ರುತೋ ಮಯಾ ।
ಭಸ್ಮರುದ್ರಾಕ್ಷಮಹಿಮಾ ತಥಾ ಪಂಚಾಕ್ಷರಸ್ಯ ಚ ॥೧೪॥

ರುದ್ರಸ್ಯ ಮಹಿಮಾ ಚೈವ ಶಿವಲಿಂಗಾರ್ಚನೇ ವಿಧಿಃ ।
ಶಿವಧರ್ಮಸ್ಯ ಮಹಿಮಾ ಶಿವನಾಮ್ನಃ ಫಲಂ ಸ್ಮೃತೇಃ ॥೧೫॥

ಶಿವಭಕ್ತಸ್ಯ ಮಹಿಮಾ ಭಕ್ತಲಕ್ಷಣಮೇವ ಚ ।
ಶಿವದ್ರೋಹವತಾಂ ಪುಂಸಾಂ ದುಃಖಾನಿ ವಿವಿಧಾನಿ ಚ ॥೧೬॥

ಶ್ರುತೋ ಹಿ ವಿಸ್ತರೇಣೈವ ಗಣೈಃ ಸುರಗಣೈರ್ಮಯಾ ।
ಪುನಶ್ಚ ಶ್ರೋತುಮಿಚ್ಛಾಮಿ ಶಂಭೋಶ್ಚಾನ್ಯತ್ಕಥಾನಕಂ ॥೧೭॥

ಯದ್ಯಪ್ಯನ್ಯತ್ಸುಗೋಪ್ಯಂ ಸ್ಯಾತ್ತದೇದಂ ಮಮ ಶಾಂಕರ ॥೧೮॥

---

ಶ್ರೀಗಣೇಶನ ತಮ್ಮನೂ, ಸಕಲ ಮಂತ್ರಸ್ವರೂಪಿಯೂ ಆದ ನಿನಗೆ ನಮಸ್ಕಾರವು. ಶಿವನ ಆನಂದಪ್ರದವಾದ ರಹಸ್ಯಗಳೆಂಬ ಸಮುದ್ರಕ್ಕೆ ಚಂದ್ರಕಾಂತಿಯಂತಿರುವ ನಿನಗೆ ಪ್ರಣಾಮವು. ಸ್ಕಂದದೇವನೇ, ನಿನ್ನ ಅನುಗ್ರಹದಿಂದ ವೇದಾಂತಗಳ ತತ್ವಾರ್ಥಪ್ರತಿಪಾದಕವಾದ ಹತ್ತನೆಯ ಅಂಶವು ನನಗೆ ಸಂಪೂರ್ಣವಾಗಿ ತಿಳಿದಂತಾಯಿತು. ॥೧೩॥

ಭಸ್ಮ ಮತ್ತು ರುದ್ರಾಕ್ಷಗಳ ಮಹಿಮೆ, ಶಿವಪಂಚಾಕ್ಷರ ಮತ್ತು ರುದ್ರಮಂತ್ರಗಳ ಪ್ರಭಾವ, ಶಿವಲಿಂಗಪೂಜಾವಿಧಿ, ಶಿವಧರ್ಮಮಹಿಮಾ, ಸ್ಮೃತಿಪ್ರತಿಪಾದ್ಯವಾದ ಶಿವನಾಮಗಳ ಫಲ, ಶೈವನ ಮಹಿಮೆ, ಭಕ್ತನ ಲಕ್ಷಣ, ಅಲ್ಲದೆ ಶಿವದ್ರೋಹಿಗಳಾದ ಪುರುಷರಿಗೆ ಒದಗುವ ಬಗೆಬಗೆಯ ದುಃಖಗಳು, ಇವೆಲ್ಲವನ್ನೂ ದೇವತೆಗಳ ಸಮೂಹ ಮತ್ತು ಗಣಗಳೊಡನೆ ಸೇರಿ ನಾನು ನಿನ್ನನುಗ್ರಹದಿಂದ ವಿಸ್ತಾರವಾಗಿಯೇ ಹಿಂದಿನ ಅಂಶದಲ್ಲಿ ಅರಿತೆನು. ॥೧೪-೧೫-೧೬॥

ಈಶ್ವರ ಭಕ್ತಾಗ್ರೇಸರನಾದ ಕುಮಾರಸ್ವಾಮಿಯೆ! ಇನ್ನೂ ನನಗೆ ತಿಳಿಯದಿರುವ ಶಿವನ ಬೇರೆ ಕಥೆಯನ್ನು ಕೇಳಬಯಸುತ್ತೇನೆ. ಅದು ಅತ್ಯಂತ ರಹಸ್ಯಗಿದ್ದರೂ ಅದನ್ನು ನನಗೆ ದಯವಿಟ್ಟು ತಿಳಿಸು. ಪ್ರಭೊ! ಎಂದು ಜೈಗೀಷವ್ಯ

ಸಚೇತ್ಥಂ ಮುನಿನಾ ಪೃಷ್ಟಃ ತುಷ್ಟಃ ಸೇನಾಪತಿಸ್ತದಾ ।
ಜೈಗೀಷವ್ಯಮುಖಾಂಭೋಜಂ ವೀಕ್ಷ್ಯತಾನ್ಗಣಪಾನ್ಸುರಾನ್ ॥೧೯॥

ಷಡ್ವಕ್ತ್ರನೇತ್ರಭ್ರಮರೈಃ ಪ್ರಪಿಬನ್ನಿವ ಸಂಭ್ರಮಾತ್ ।
ತತ್ಸ್ತುತ್ಯಾ ಚೈವ ಸಂತುಷ್ಟಚಂದ್ರೋದಯ ಇವಾಂಬುಧಿಃ ॥೨೦॥

ಪ್ರಾವರ್ಧತ ಮಹಾಸೇನಃ ಪಾತ್ರಂ ವೀಕ್ಷ್ಯಾತುಲಪ್ರಭಂ ।
ಜೈಗೀಷವ್ಯಂ ಮುನಿಂ ಶಾಂತಂ ಜಿತಷಡ್ವೈರಿವಿಕ್ರಮಂ ॥೨೧॥

ಸಸ್ಮಾರ ದೇವ್ಯೈ ಯತ್ಪ್ರೋಕ್ತಂ ಮಹೇಶೇನ ದಯಾಲುನಾ ।
ಕೈಲಾಸೇ ಲಾಸ್ಯಸದನೇ ಮದನಾಂತಕರೇಣ ಹಿ ॥೨೨॥

ತದಾ ಶಿವರಹಸ್ಯೇಽಸ್ಮಿನ್ಪೂಜಾವಿಧಿವಿನಿರ್ಣಯಂ ।
ಉವಾಚ ವೀಕ್ಷ್ಯ ಪ್ರಸಭಂ ತ್ರ್ಯಕ್ಷಪಾದಾಂಬುಜಾಶ್ರಯಃ ॥೨೩॥

---

ಮುನಿಯಿಂದ ಪ್ರಾರ್ಥಿಸಲ್ಪಟ್ಟು ಆದರಿಂದ ಸಂತುಷ್ಟನಾದ ಆ ಕುಮಾರಸ್ವಾಮಿಯು ಆಗ ಜೈಗೀಷವ್ಯನ ಮುಖಕಮಲವನ್ನೂ, ಆವನ ಸುತ್ತಲೂ ಕುಳಿತಿದ್ದ ದೇವತೆಗಳು ಮತ್ತು ಗಣಪುಂಗವರನ್ನೂ ಪ್ರೀತಿಯಿಂದ ನೋಡಿ, ತನ್ನ ಆರು ಮುಖಗಳಲ್ಲಿರುವ ಕಣ್ಣುಗಳೆಂಬ ದುಂಬಿಗಳಿಂದ ಶಿವಕಥಾಮೃತವನ್ನು ಪಾನಮಾಡುವನೋ ಎಂಬಂತೆ ಶಿವಕಥಾವಿಸ್ತಾರದಲ್ಲಿ ವಿಶೇಷ ಸಂಭ್ರಮಯುಕ್ತನಾದನು. ಈ ರೀತಿಯಾದ ಆ ಜೈಗೀಷವ್ಯನ ಸ್ತುತಿಯಿಂದ ಸಂತುಷ್ಟನಾದ ಆ ಕುಮಾರಸ್ವಾಮಿಯು, ಚಂದ್ರೋದಯ ವನ್ನು ಕಂಡ ಸಮುದ್ರದಂತೆ ಅಪರಿಮಿತ ತೇಜಸ್ವಿಯೆನಿಸಿ, ಶಾಂತನೂ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಷಡ್ವರ್ಗಗಳನ್ನು ಗೆದ್ದವನೂ, ಶಿವರಹಸ್ಯೋಪದೇಶಕ್ಕೆ ಸತ್ಪಾತ್ರನೂ ಆದ ಜೈಗೀಷವ್ಯಮಹಾಮುನಿಯನ್ನು ಕಂಡು ಆನಂದದಿಂದ ಉಬ್ಬಿಹೋದನು. ||೧೭-೧೮-೧೯-೨೦-೨೧||

ಅನಂತರ ದಯಾಳುವೂ ಮನ್ಮಥಾಂತಕನೂ ಆದ ಮಹೇಶನು ಕೈಲಾಸ ಪರ್ವತದ ನಾಟ್ಯಗೃಹದಲ್ಲಿ ಪಾರ್ವತಿಗೆ ಪ್ರೀತಿಯಿಂದ ಹೇಳಿದುದನ್ನು ಸ್ಮರಿಸಿಕೊಂಡು ಶಿವರಹಸ್ಯದಲ್ಲಿ ಒಂದು ಭಾಗವಾದ ಶಿವಪೂಜಾವಿಧಿಯ ನಿರ್ಣಯವನ್ನು ಆ ಮಹೇಶನ ಪಾದಕಮಲಧ್ಯಾನಪೂರ್ವಕವಾಗಿ ಜೈಗೀಷವ್ಯನಿಗೆ ಅರುಹಿದನು. ಓ ಶೌನಕಾದಿ ಮುನಿಗಳಿರಾ! ಶ್ರವಣಾದ್ಭುತವೂ ಸರಳವೂ ರಸಭರಿತವೂ, ಆದ ಆ

ತದ್ಭ್ಯೋ ವದಾಮಿ ಸರಸಂ ಸಂವಾದಂ ಶ್ರವಣಾದ್ಭುತಂ ।
ಕುಮಾರಸ್ಯ ಮುನೇಸ್ತಸ್ಯ ಭವದ್ಭ್ಯೋ ಬ್ರಾಹ್ಮಣೋತ್ತಮಾಃ ॥೨೪॥

॥ ಸುಬ್ರಹ್ಮಣ್ಯ ಉವಾಚ ॥

ಶೃಣುಷ್ವ ಶಾಂಭವಶ್ರೇಷ್ಠ ರಹಸ್ಯಂ ಶ್ರುತಿಸಂಮತಂ ।
ಪುರಾ ಕೈಲಾಸಶಿಖರೇ ಸುಖಾಸೀನಂ ಮಹೇಶ್ವರಂ ॥೨೫॥

ರತ್ನಸಿಂಹಾಸನೇ ದಿವ್ಯೇ ವೈದ್ರುಮೇ ಮಂಟಪೋತ್ತಮೇ ।
ಸಾಯಂತನಾಭ್ರಪಟಲೀಪ್ರಭಾಧಿಕವಿರಾಜಿತೇ ॥೨೬॥

ಶೋಭಭೃತ್ಸ್ತಂಭಕುಂಭಾಗ್ರವೃಷಭಾರಾಜಿತೇ ಮುನೇ ।
ಧೂಪದೀಪಾದಿವಿತತೇ ಗಣವೃಂದವಿರಾಜಿತೇ ॥೨೭॥

ರಮ್ಯಪುಷ್ಪವನಾಪಾರಗಂಧಮೇದುರದಿಙ್ಮುಖೇ ।
ವಿತಾನಪ್ರಚ್ಛದಪಟಪಾಟಿತಾಂತರಸುಂದರೇ ॥೨೮॥

---

ಜೈಗೀಷವ್ಯ ಸ್ಕಂದರ ಸಂವಾದವನ್ನು ನಿಮಗೆ ಈಗ ಹೇಳುವೆನು ಕೇಳಿರೆಂದು ಸೂತರು ಶೌನಕಾದಿಗಳಿಗೆ ಈರೀತಿ ಮುಂದುವರಿದು ನುಡಿದರು. ॥೨೨-೨೩-೨೪॥

ಅಯ್ಯ ಶೈವವರ್ಯನಾದ ಜೈಗೀಷವ್ಯನೇ, ವೇದಸಂಮತವಾದ ಶಿವರಹಸ್ಯವನ್ನು ಹೇಳುತ್ತೇನೆ ಕೇಳು ; ಹಿಂದೆ ಒಂದು ದಿನ ಕೈಲಾಸ ಶಿಖರದಲ್ಲಿ ಹವಳಗಳಿಂದ ರಚಿತವಾದ ದಿವ್ಯ ಮಂಟಪಮಧ್ಯಗತವಾದ ರತ್ನಸಿಂಹಾಸನದಲ್ಲಿ ಮಹೇಶನು ಸುಖವಾಗಿ ಕುಳಿತಿದ್ದನು. ಆ ಶ್ರೇಷ್ಠವಾದ ಮಂಟಪವು ಸಂಜೆಯ ಮೇಘಪಂಕ್ತಿಗಳ ಕಾಂತಿಗಿಂತಲೂ ಮಿಗಿಲಾಗಿ ವಿರಾಜಿಸುತ್ತಿದ್ದಿತು. ॥೨೫-೨೬॥

ಅಯ್ಯ ಮುನಿಯೆ ! ಆ ದಿವ್ಯಮಂಟಪವು ಶೋಭಿಸುತ್ತಿರುವ ಕಂಬಸಾಲುಗಳಿಂದ ಯುಕ್ತವಾಗಿದ್ದಿತು. ಪ್ರತಿ ಕಂಬಗಳ ಮೇಲೆಯೂ ರತ್ನಮಯವಾದ ಕಲಶಗಳೂ ಅದರ ತುದಿಯಲ್ಲಿ ವೃಷಭಗಳ ವಿಗ್ರಹಗಳೂ ವಿರಾಜಿಸುತ್ತಿದ್ದುವು. ಧೂಪ, ದೀಪ ಮುಂತಾದವುಗಳಿಂದ ಬೆಳಗುತ್ತಾ ಆ ಮಂಟಪವು ಗಣಸಮೂಹಗಳಿಂದ ಶೋಭಿಸುತ್ತಿದ್ದಿತು. ಮನೋಹರವಾದ ಅರಣ್ಯದ ಪುಷ್ಪಗಳ ಅಪಾರವಾದ ಸುಗಂಧದಿಂದ ದಿಗಂತವೆಲ್ಲಾ ಸಾರಭರಿತವಾಗಿದ್ದಿತು. ಸುತ್ತಲೂ ಇರುವ ಮೇಲ್ಕಟ್ಟಿನ ಬಟ್ಟೆಯ ಪ್ರಕಾಶದಿಂದ ಅದು ಸುಂದರವಾಗಿ ತೋರುತ್ತಿದ್ದಿತು. ಸಂಪಿಗೆ, ಅಶೋಕ, ಪುನ್ನಾಗ,

ಚಂಪಕಾಶೋಕಪುನ್ನಾಗಸೌಗಂಧಿಕಸಮಾಸ್ತೃತೇ ।
ಪ್ರೋತ್ಫುಲ್ಲಕೇತಕೋದ್ದಾಮಮಲ್ಲೀಪಂಕಜಗಂಧಿಲೇ ॥೨೯॥

ನಂದಿಭೃಂಗಿಮಹಾಕಾಲಚಂಡಭೈರವಸೇವಿತೇ ।
ಮಯಾ ದ್ವಿರದವಕ್ತ್ರೇಣ ಪಾರ್ಶ್ವತಃ ಪರಿಸೇವಿತೇ ॥೩೦॥

ಪಪ್ರಚ್ಛ ಪಾರ್ವತೀ ಶಾಂತಂ ನಿತಾಂತಂ ಶಾಂತವಿಗ್ರಹಂ ।
ಕೃತಾಂತಹರಮಾಶಾಸ್ಯಂ ವೇದಾಂತಾರ್ಥೈಕಗೋಚರಂ ॥೩೧॥

ಪ್ರಣಮ್ಯ ಪ್ರಾಂಜಲಿರ್ದೇವೀ ಭರ್ತುರ್ವಕ್ತ್ರಮುದೈಕ್ಷತ ।
ಉತ್ಪಲಾಭಕಟಾಕ್ಷೇಣ ಸರಸಾನನಪಂಕಜಾ ॥೩೨॥

ಸರ್ವಹೃತ್ಪ್ರವಣೋದಾರಜಗಚ್ಚಕ್ರಪ್ರವರ್ತಕಃ ।
ಇಂಗಿತಜ್ಞಸ್ತದಾ ಪ್ರಾಹ ದೇವೀಮಾನಂದವಿಗ್ರಹಾಂ ॥೩೩॥

ಸರಸೇಣ ಕಟಾಕ್ಷೇಣ ಕೃಪಾಮೂರ್ತಿರ್ಮಹೇಶ್ವರಃ ॥೩೪॥

---

ಕಲ್ಹಾರವೇ ಮೊದಲಾದ ಪುಷ್ಪಗಳು ಅಲ್ಲಲ್ಲಿ ಅಲಂಕರಿಸಲ್ಪಟ್ಟಿದ್ದವು. ಅರಳಿದ ತಾಳೆ, ಮಲ್ಲಿಗೆ ಮತ್ತು ತಾವರೆಯ ಹೂಗಳಿಂದ ಅದು ವಿಶೇಷವಾಗಿ ಸುಗಂಧಮಯವಾಗಿದ್ದಿತು. ॥೨೭-೨೮-೨೯॥

ನಂದಿ, ಭೃಂಗಿ, ಮಹಾಕಾಲಿ, ಚಂಡಭೈರವ ಮುಂತಾದ ಗಣಗಳಿಂದಲೂ, ಎರಡು ಪಕ್ಕಗಳಲ್ಲಿಯೂ ಗಜಾನನನಿಂದಲೂ ನನ್ನಿಂದಲೂ(ಕುಮಾರಸ್ವಾಮಿ)ಸೇವಿಸಲ್ಪಡುತ್ತಾ, ಶಾಂತಮೂರ್ತಿಯೂ, ಯಮಾಂತಕನೂ, ಸ್ತುತ್ಯನೂ, ಉಪನಿಷತ್ತು ಅರ್ಥಗಳಿಂದ ಮಾತ್ರ ಗೋಚರಿಸುವನೂ ಆದ ತನ್ನ ಪತಿಯನ್ನು ಕುರಿತು ಪಾರ್ವತಿಯು ಶಿವರಹಸ್ಯ ವಿಚಾರವಾಗಿ ಪ್ರಶ್ನೆಮಾಡಲು ಮನಸ್ಸುಮಾಡಿದಳು. ॥೩೦-೩೧॥

ಕೈಮುಗಿದು ನಮಸ್ಕಾರಮಾಡುತ್ತಾ, ರಸಭರಿತವಾದ ತಾವರೆಯಂತೆ ಮುಖವುಳ್ಳ ಪಾರ್ವತಿಯು ಕನ್ನೈದಿಲೆಯ ಕಾಂತಿಯುಳ್ಳ ತನ್ನ ಕಟಾಕ್ಷವನ್ನು ಲೋಕೇಶ್ವರನಾದ ಪತಿಯ ಮುಖದ ಮೇಲೆ ಬೀರಿದಳು. ಆದರೆ ಸಕಲ ಪ್ರಪಂಚದ ಹೃದಯದಲ್ಲಿಯೂ ಅಡಗಿ ಉದಾರವಾಗಿ ಈ ಜಗನ್ಮಂಡಲವನ್ನೇ ನಡೆಸುತ್ತಿರುವ ದಯಾಮೂರ್ತಿಯಾದ ಮಹೇಶನು ದೇವಿಯ ಇಂಗಿತವನ್ನರಿತು, ಆನಂದಮೂರ್ತಿಯಾದ ದೇವಿಯನ್ನು ಸರಸದೃಷ್ಟಿಯಿಂದ ನೋಡಿ ಇಂತೆಂದನು. ॥೩೨-೩೩-೩೪॥

॥ ಈಶ್ವರ ಉವಾಚ ॥

ಕಾ ವಿವಕ್ಷಾಸ್ತಿ ತೇ ಸುಭ್ರು ನಿಃಶಂಕಂ ಮೇ ವದಾಗ್ರತಃ ।
ತ್ವಂ ಮೇ ಶಕ್ತಿಃ ಪರಾ ದೇವಿ ತ್ವಯಾಹಂ ಶಕ್ತಿಮಾಂಭವೇ ॥೩೫॥

ತ್ವತ್ತೇಜಸಾ ಜಗದ್ವ್ಯಾಪ್ತಂ ಸ ದೇವಾಸುರಮಾನುಷಂ ।
ರಹಸ್ಯಂ ವಾ ಪ್ರಕಾಶಂ ವಾ ವದಾಮಿ ಪ್ರಮುದೇತ್ವಯಿ ॥೩೬॥

ತ್ವಂ ಮೇ ಶರೀರಾಧಿಕೃತಾ ವದ ಮೇ ತ್ವದ್ಧೃದಿ ಸ್ಥಿತಂ ॥೩೭॥

॥ ಕುಮಾರ ಉವಾಚ ॥

ಇತಿ ಶಂಭೋರ್ವಚಃ ಶ್ರುತ್ವಾ ಗಿರಿಜಾಹರ್ಷನಿರ್ಭರಾ ।
ಸಮುದ್ಯದಶ್ರುಪುಲಕಾ ಪ್ರಾಹ ಕಾಮಾರಿಮೀಶ್ವರೀ ॥೩೮॥

॥ ಗಿರಿಜೋವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಸ್ವಾನಂದರಾಶಿವಾರಾಶೇ ಕೃಪಾರಾಶೇ ಮಹೇಶ್ವರ ॥೩೯॥

---

ಸುಂದರವಾದ ಹುಬ್ಬುಳ್ಳ ದೇವಿಯೆ, ನೀನು ಏನು ಹೇಳಬೇಕೆಂದಿರುವೆಯೋ ಅದನ್ನು ಸಂಕೋಚವಿಲ್ಲದೆ ನನ್ನ ಮುಂದೆ ಈಗ ಹೇಳು; ಪಾರ್ವತಿಯೇ, ನೀನು ನನ್ನ ಪರಮಶಕ್ತಿಯಾಗಿರುವೆ. ನಿನ್ನಿಂದಲೇ ನಾನು ಶಕ್ತಿಯುಳ್ಳವನಾಗಿರುವೆನು. ಈ ದೇವದಾನವಮರ್ತ್ಯಲೋಕಗಳೆಲ್ಲವೂ ನಿನ್ನ ತೇಜಸ್ಸಿನಿಂದಲೇ ವ್ಯಾಪಿಸಲ್ಪಟ್ಟಿದೆ. ದೇವಿ, ನಿನ್ನ ಪ್ರಶ್ನೆಗೆ ಉತ್ತರವು ರಹಸ್ಯವಾಗಿರಲಿ, ಪ್ರಕಾಶವಾಗಿರಲಿ ನಿನ್ನ ಸಂತೋಷ ಕ್ಕೋಸ್ಕರ ಅದನ್ನು ಮರೆಮಾಜದೆ ಹೇಳುವೆನು. ಈ ನನ್ನ ದೇಹಕ್ಕೆ ನೀನೇ ಅಧಿಕಾರಿಣಿಯು. ದೇವಿ, ನಿನ್ನ ಮನದಲ್ಲಿರುವುದನ್ನು ಜಾಗ್ರತೆ ತಿಳಿಸೆಂದು ಶಿವನು ಪಾರ್ವತಿಗೆ ಹೇಳಿದನು. ॥೩೫-೩೬-೩೭॥

ಹೀಗೆ ನುಡಿದ ಶಂಭುವಿನ ಮಾತುಗಳನ್ನು ಕೇಳಿ ಗಿರಿಜೆಯು ಆನಂದ ತುಂದಿಲಳಾಗಿ ರೋಮಾಂಚದಿಂದ ಕೂಡಿ ಮನ್ಮಥಾಂತಕನನ್ನು ಕುರಿತು ಇಂತೆಂದಳು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೩೮॥

ದೇವಾದಿದೇವನಾದ ಮಹೇಶನೆ, ಮರೆಹೊಕ್ಕವರಲ್ಲಿ ವಾತ್ಸಲ್ಯವುಳ್ಳವನೇ, ಆತ್ಮಾನಂದಸಮುದ್ರನೆ, ದಯಾಸಾಗರನಾದ ಮಹೇಶ್ವರನೆ, ಉಚಿತಕಾಲ ಮತ್ತು

ಶಿವಾರ್ಚನವಿಧಾನಂ ಮೇ ಕಾಲತಿಥ್ಯರ್ಕ್ಷಕೇ ತವ ।
ಲಿಂಗೇಽಭಿಷೇಕಸಂಭಾರಃ ಫಲಪಂಚಾಮೃತೈಃ ಕೃತಃ ॥೪೦॥

ಪುಷ್ಪಂ ದೀಪಾದಿದಾನೇ ಚ ಧೂಪಸ್ಯನೈವೇದ್ಯಕಲ್ಪನೈಃ ।
ಧಾತುಪಾತ್ರೇ ತಾರತಮ್ಯಂ ಅರ್ಘ್ಯಂ ತಾಂಬೂಲಕಲ್ಪನಂ ॥೪೧॥

ತತ್ಫಲಂ ತಾರತಮ್ಯಂ ಚ ವದ ಮೇ ಕರುಣಾರ್ಣವ ॥೪೨॥

॥ ಸೂತ ಉವಾಚ ॥

ಇತ್ಯಪರ್ಣಾವಚಃ ಶ್ರುತ್ವಾ ಸಂಪೂರ್ಣಹೃದಯಃ ಶಿವಃ ।
ಪ್ರಾಪ ಪ್ರಮೋದಭರಿತಃ ದೃಷ್ಟ್ವಾ ತಾಮದ್ರಿಕನ್ಯಕಾಂ ॥೪೩॥

ಮಹಾದೇವೋ ಮಹಾನಂದಃ ಪರಾನಂದಮಹೋದಧಿಃ ॥೪೪॥

॥ ಈಶ್ವರ ಉವಾಚ ॥

ಅಯೇ ಸುಗಿರಿಕನ್ಯಕೇ ತವ ಸರೋಜರಾಜಾನನಂ
ವಿಲೋಕ್ಯ ಮದಪೂರಿತಃ ಪ್ರಭೃತಿ ಸಾರಪಾರಂಗತಃ ।

---

ತಿಥಿ ನಕ್ಷತ್ರಗಳಲ್ಲಿ ಮಾಡಬೇಕಾದ ಶಿವಪೂಜಾವಿಧಿ, ಶಿವಲಿಂಗಕ್ಕೆ ಬೇಕಾದ ಅಭಿಷೇಕಸಾಮಗ್ರಿಗಳು, ಹಣ್ಣು ಮತ್ತು ಪಂಚಾಮೃತಗಳು, ಹೂ, ದೀಪ, ಧೂಪಾದಿಗಳು, ನೈವೇದ್ಯಸಮರ್ಪಣೆ, ಹಾಗೆ ಸಮರ್ಪಿಸುವುದರಿಂದುಂಟಾಗುವ ಫಲವನ್ನೂ ಲೋಹದ ಪಾತ್ರೆಗಳಲ್ಲಿ ಅರ್ಘ್ಯಕೊಡುವುದರಿಂದುಂಟಾಗುವ ಫಲತಾರತಮ್ಯವನ್ನೂ, ತಾಂಬೂಲಸಮರ್ಪಣೆ, ಅದರಪ್ರಯೋಜನ, ಇವನ್ನೆಲ್ಲಾ ದಯಾಸಮುದ್ರನಾದ ನೀನು ನನಗೆ ದಯವಿಟ್ಟು ಹೇಳಬೇಕೆಂದು ಪಾರ್ವತಿಯು ಶಿವನನ್ನು ಪ್ರಾರ್ಥಿಸಿದಳು. ॥೩೯-೪೦-೪೧-೪೨॥

ಇಂಥ ಪಾರ್ವತಿಯ ಮಾತುಗಳನ್ನು ಕೇಳಿ, ಸಂಪೂರ್ಣಮನಸ್ಸಿನಿಂದ, ಆನಂದಭರಿತನಾಗಿ, ಪರಮಾನಂದಸಾಗರದಲ್ಲಿ ಮುಳುಗಿದವನಂತೆ ಆ ಮಹಾದೇವನು ಪರ್ವತರಾಜಕುಮಾರಿಯನ್ನು ನೋಡಿ, ಸಂತೋಷದಿಂದ ಇಂತೆಂದನೆಂದು ಸೂತರು ಶೌನಕಾದಿಗಳಿಗೆ ನಿರೂಪಿಸಿದರು. ॥೪೩-೪೪॥

ಎಲೌ ಗಿರಿರಾಜಕುಮಾರಿಯೆ, ಸುಂದರವಾದ ನಿನ್ನ ತಾವರೆಮೊಗವನ್ನು ನೋಡಿ, ಮೊದಲಿನಿಂದಲೂ ನಾನು ಆನಂದಭರಿತನಾಗಿದ್ದೇನೆ. ದೇವಿ! ಅಪಾರ

ಅನಂತಮಹಿಮಾಸ್ಪದಂ ಶಿವರಹಸ್ಯರತ್ನಾಕರಂ
ಸುಗೋಪ್ಯಮಪಿ ತದ್ವದೇ ಶಿವಗಣೇಷು ತುಷ್ಟಿಪ್ರದಂ ॥೪೫॥

ಪ್ರಕಾಶ್ಯಮಿದಮೇವ ತೇ ಮಮ ಹೃದಿ ಪ್ರಕೃಷ್ಟಂ ಚಿರಂ
ಪ್ರತುಷ್ಟಿದಮಿದಂ ಶಿವೇ ವಿಹಿತಸರ್ವಧರ್ಮೈರಪಿ ।
ನ ಯಾಗಶತಕೋಟಿಭಿರ್ವಿವಿಧದಾನಕೋಟ್ಯಾಪಿ ಚ
ತುರಂಗಗಜಗೋಗಣೈರ್ದ್ವಿಜವರೇಷು ದತ್ತೇನ ಕಿಂ ॥೪೬॥

ಸುಮಂತ್ರಶತಜಾಪ್ಯತೋಽಪ್ಯಖಿಲಭೂಮಿದಾನಾಧಿಕಂ ।
ವಿಮುಕ್ತಿದಮಿದಂ ಪ್ರಿಯೇ ಮಮ ಸದೈವ ಲಿಂಗಾರ್ಚನಂ ॥೪೭॥

ಭಕ್ತೋ ಮೇ ಯದಿ ತುಂಗಲಿಂಗನಿಹಿತಾನಂಗಾಂಗಸಂಗೋಜ್ಝಿತೋ
ಗಂಗಾ ತುಂಗತರಂಗಚಂಚಲಮನಃ ಸ್ನಾಯಾಂತರಂಗಚ್ಯುತಃ ।

---

ಮಹಿಮೆಗಳಿಗೆ ಆಶ್ರಯವಾಗಿ ಶಿವಗಣಗಳಿಗೆ ಸಂತೋಷಕರವಾಗಿರುವ ಈ ಶಿವರಹಸ್ಯವೆಂಬ ಸಮುದ್ರವು ಅತಿ ಗೋಪ್ಯವಾದರೂ ನಿನ್ನಮೇಲಿನ ವಿಶ್ವಾಸದಿಂದ ಈಗ ಹೇಳುವೆನು. ಕೇಳು. ॥೪೫॥

ಪಾರ್ವತಿಯೆ, ನನ್ನ ಹೃದಯದಲ್ಲಿ ಬಹುಕಾಲದಿಂದಲೂ ನೆಲಸಿದ್ದು, ಶ್ರೇಷ್ಠವೂ, ನಿನಗೆ ಸಂತೋಷಪ್ರದವೂ ಆಗಿರುವ ಇದನ್ನೇ ನಾನು ಪ್ರಕಾಶಪಡಿಸುವೆನು ; ದೇವಿ, ಸಕಲಧರ್ಮಾನುಷ್ಠಾನ, ನೂರುಕೋಟಿ ಯಾಗ, ಬಗೆಬಗೆಯ ಅನೇಕ ದಾನಗಳು, ಅಲ್ಲದೆ ಬ್ರಾಹ್ಮಣೋತ್ತಮರಿಗೆ ಕೊಟ್ಟ ಕುದುರೆ, ಆನೆ, ಹಸು ಇಂತಹ ದಾನ ಸಮೂಹಗಳಿಂದಲೂ ವಿಶೇಷ ಪ್ರಯೋಜನವಿರುವುದಿಲ್ಲ. ವಿಶೇಷ ಪ್ರಯೋಜನ ವಿರುವ ಭಾಗವಾದ ಶಿವಲಿಂಗಪೂಜೆಯ ಕ್ರಮವನ್ನು ಈಗ ಹೇಳುವೆನು ಕೇಳು. ॥೪೬॥

ಪ್ರಿಯೆ ! ಯಾವಾಗಲೂ ನನ್ನ ಲಿಂಗಪೂಜೆಯು, ಉತ್ತಮವಾದ ನೂರಾರು ಮಂತ್ರಜಪ, ಮತ್ತು ಸಮಸ್ತ ಭೂಮಂಡಲದಾನಕ್ಕಿಂತಲೂ ಅಧಿಕವೂ ಮೋಕ್ಷಪ್ರದವೂ ಆಗಿರುವುದೆಂದು ತಿಳಿ. ॥೪೭॥

ಪಾರ್ವತಿಯೇ, ಮಾನವನು ಕೇವಲ ಕಾಮಕ್ರೀಡಾಲಂಪಟನಾಗದೇ, ಮಹಿಮಾಪೂರ್ಣವಾದ ನನ್ನ ಲಿಂಗಪೂಜೆಯಲ್ಲಿ ಆಸಕ್ತನಾದವನಾಗಿ ಗಂಗಾನದಿಯ ದೊಡ್ಡ ಅಲೆಯಂತೆ ಚಂಚಲವಾದ ತನ್ನ ಮನಸ್ಸನ್ನು ಬಿಗಿಹಿಡಿದು ಅಂತರಂಗದಲ್ಲಿ

ಭೂಯಾದ್ವ್ಯಾಪುಕಭಕ್ತಿಭಾವಹೃದಯೋ ಭಾವೋಭವೇಷ್ವಪ್ಯನೇ
ಲಿಂಗಾರ್ಚಾಸು ನಿಷಿಕ್ತಮುಕ್ತಹೃದಯೋ ವ್ಯಕ್ತ್ಯಾಂ ಸ ಮುಕ್ತಿಂ ಗತಃ॥೪೬॥

ಇತಿ ಶ್ರೀಶಿವರಹಸ್ಯೇ ಮಹಾದೇವಾಖ್ಯೇ ಏಕಾದಶಾಂಶೇ
ಶಿವಪಾರ್ವತೀ ಸಂವಾದೇ ಲಿಂಗಾರ್ಚನಮಹಿಮಾಕಥನಂ ನಾಮ
ಪ್ರಥಮೋಽಧ್ಯಾಯಃ

---

ಮಂಗಳಕರವಾದ ನನ್ನ ಭಕ್ತಿಭಾವನೆಯಿಂದ ಪ್ರೇರಿತನಾಗಿ, ಅನವರತವೂ ಲಿಂಗ ಪೂಜೆಯಲ್ಲಿ ನಿರತನಾದ ಚಿತ್ತವುಳ್ಳ ನನ್ನ ಭಕ್ತನು ನಿಜವಾಗಿಯೂ ಮುಕ್ತಿಯನ್ನೈದು ಮವನು, ಎಂದು ಶಿವನು ಪಾರ್ವತಿಗೆ ಹೇಳಿದುದನ್ನು ಜೈಗೀಷವ್ಯನಿಗೆ ಕುಮಾರ ಸ್ವಾಮಿಯು ಹೀಗೆ ಅರುಹಿದನು. ||೪೬||

ಇಂತು ಶಿವರಹಸ್ಯದಲ್ಲಿ ಮಹಾದೇವಸಂಜ್ಞಕವಾದ ಹನ್ನೊಂದನೆಯ ಅಂಶದಲ್ಲಿ
ಶಿವ ಮತ್ತು ಪಾರ್ವತಿಯರ ಸಂವಾದದಲ್ಲಿ ಲಿಂಗಪೂಜಾಪ್ರಭಾವವರ್ಣನೆ
ಯೆಂಬ ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ದ್ವಿತೀಯೋಽಧ್ಯಾಯಃ

|| ಶ್ರೀ ಪಾರ್ವತ್ಯುವಾಚ ||

ದೇವದೇವ ಮಹಾದೇವ ವಾಮದೇವ ಸನಾತನ ।
ವಿಶ್ವರೂಪ ವಿರೂಪಾಕ್ಷ ಸರ್ವೇಶ್ವರ ಮಹೇಶ್ವರ ||೧||

ಸುಖೋಪಾಯಮತೋ ಬ್ರೂಹಿ ಶಿವಧರ್ಮಂ ಸನಾತನಂ ।
ವಿಮುಕ್ತಿದಂ ವಿರೂಪಾಕ್ಷ ಸರ್ವೇಷಾಂ ಭಕ್ತಿವರ್ಧನಂ ||೨||

ತವ ಪ್ರಿಯಕರಂ ಶಂಭೋ ಧರ್ಮಸರ್ವಸ್ವಮುತ್ತಮಂ ।
ಸುಗೋಪ್ಯಮಪಿ ಮೇ ಬ್ರೂಹಿ ಶಿವಶಂಕರಸರ್ವಗ ||೩||

---

ಎರಡನೆಯ ಅಧ್ಯಾಯ

ದೇವಾದಿದೇವನಾದ ಮಹೇಶನೆ, ಅರ್ಧನಾರೀಶ್ವರನೆನಿಸಿದ ದೇಹವುಳ್ಳವನೆ, ಸನಾತನನೆ, ಜಗದ್ವ್ಯಾಪಿಯೆ, ಮುಕ್ಕಣ್ಣನೆ, ಸಕಲ ಜಗದೀಶನೆ, ಮಹೈಶ್ವರ್ಯ ಯುಕ್ತನೆ, ಇನ್ನು ಮುಂದೆ ಎಲ್ಲರಿಗೂ ಭಕ್ತಿಯನ್ನು ಹೆಚ್ಚಿಸಿ ಮೋಕ್ಷಪ್ರಾಪ್ತಿಗೆ ಸುಖೋಪಾಯವೆನಿಸಿರುವ ಸನಾತನವಾದ ಶಿವಧರ್ಮವನ್ನು ಹೇಳು. ||೧-೨||

ಯೋಗಿಹೃದಯವಾಸಿಯಾದ ಶಂಕರನೆ, ಸರ್ವವ್ಯಾಪಿಯಾದ ಶಂಭುವೆ, ನಿನಗೆ ಪ್ರಿಯಕರವಾದ ಮತ್ತು ಉತ್ತಮವೂ ಧರ್ಮಸರ್ವಸ್ವವೆನಿಸಿದ ಆ ಪೂಜಾ ವಿಧಾನವು ಅತಿ ರಹಸ್ಯವಾಗಿದ್ದರೂ ನನಗೆ ದಯವಿಟ್ಟು ಹೇಳು. ಜನನ ಮರಣ ಮುಪ್ಪುಗಳೆಂಬ ಪೀಡೆಯನ್ನುಂಟುಮಾಡುವ ಈ ಭಯಂಕರವಾದ ಸಂಸಾರದಲ್ಲಿ ಬಿದ್ದು ಭ್ರಾಂತರಾಗಿರುವ, ಜರಾಯುಜ (ಗರ್ಭದಿಂದ ಶಿಶುರೂಪದಲ್ಲಿ ಜನಿಸುವ)

ಭ್ರಾಂತಸ್ಯ ಘೋರಸಂಸಾರೇ ಜನ್ಮಮೃತ್ಯುಜರಾರ್ತಿದೇ ।
ಜರಾಯುಜಾಂಡಜಸ್ವೇದಭೂಮಿಜಾತೇಷು ಜಂತುಷು ॥೫॥

ಚರಾಚರೇಷು ಜಾತಸ್ಯ ಸುಖದುಃಖಾಭಿಮಾನಿನಃ ।
ಪುರುಷಸ್ಯ ಭವೇ ಭಕ್ತಿಃ ಕದಾಚಿಜ್ಜಾಯತೇ ವಿಭೋ ॥೬॥

ತವ ಪ್ರಸಾದಸಂಪನ್ನೋ ಯದಾ ಜಂತುರ್ಭವಿಷ್ಯತಿ ।
ತದೇವ ಲಭತೇ ಭಕ್ತಿಂ ತತೋ ಮುಕ್ತಿಂ ಚ ವಿಂದತಿ ॥೭॥

ಕೀಟೋ ವಾಪಿ ಪತಂಗೋ ವಾ ಸುರೋ ವಾಪಿ ನರೋಽಪಿ ವಾ ।
ಬ್ರಾಹ್ಮಣೋ ವಾಂತ್ಯಜೋ ವಾಪಿ ತವ ಭಕ್ತ್ಯಾ ವಿಮುಚ್ಯತೇ ॥೮॥

ಸರ್ವೇಷಾಂ ಮುಕ್ತಿದಂ ಧರ್ಮಂ ವದ ಮೇ ಕರುಣಾಕರ ॥೯॥

॥ ಸುಬ್ರಹ್ಮಣ್ಯ ಉವಾಚ ॥

ಏವಂ ದೇವ್ಯಾ ತದಾ ಪೃಷ್ಟೋ ಭಗವಾನ್ಪರಮೇಶ್ವರಃ ।
ಕೈಲಾಸನಿಲಯೋ ಯೋಗೀ ಸರ್ವೇಶಃ ಸರ್ವಭಾವನಃ ॥೧೦॥

---

ಅಂಡಜ (ಮೊಟ್ಟೆಗಳನ್ನಿಟ್ಟನಂತರ ಜನ್ಮತಾಳುವ ಪಕ್ಷಿಗಳು) ಸ್ವೇದಜರೂಪವಾದ (ಹೇನು ಕೂರೆ ಮುಂತಾದ ಬೆವರಿನಿಂದ ಜನಿಸುವ) ಭೂಮಿಜ (ಭೂಮಿಯಲ್ಲಿ ಹುಟ್ಟುವ ಸಸ್ಯವೃಕ್ಷಾದಿಗಳು) ಸ್ಥಾವರ ಜಂಗಮಾತ್ಮಕವಾದ ಪ್ರಾಣಿಸಮೂಹಗಳಲ್ಲಿ ಸುಖದುಃಖಾಭಿಮಾನಿಯಾದ ಪುರುಷನಿಗೆ ಯಾವಾಗಲೋ ಒಂದು ಸಾರಿ ಸರ್ವಸಮರ್ಥನಾದ ನಿನ್ನಲ್ಲಿ ಭಕ್ತಿಯುಂಟಾಗುವುದು. ॥೪-೫-೬॥

ಪರಶಿವಸ್ವಾಮಿಯೇ, ನಿನ್ನ ಅನುಗ್ರಹವುಂಟಾದಾಗಲೇ ಪ್ರಾಣಿಗಳಿಗೆ ನಿನ್ನಲ್ಲಿ ಭಕ್ತಿಹುಟ್ಟಿ ಅದರಿಂದ ಅವುಗಳಿಗೆ ಮುಕ್ತಿಯು ದೊರಕುವುದು. ಕ್ರಿಮಿಕೀಟ, ಪಕ್ಷಿ, ದೇವತೆ, ಮನುಜ, ಬ್ರಾಹ್ಮಣ, ಪಂಚಮ ಇವರಲ್ಲಾರಾದರೂ ನಿನ್ನ ಭಕ್ತಿಯಿಂದ ಮುಕ್ತಿಯನ್ನು ಪಡೆಯುವರು. ದಯಾಮಯನಾದ ಶಂಕರನೆ, ಹಾಗೆ ಎಲ್ಲರಿಗೂ ಮೋಕ್ಷಪ್ರದವಾದ ಆ ನಿನ್ನ ಭಕ್ತಿಬೋಧಕವಾದ ಧರ್ಮವನ್ನು ನನಗೆ ತಿಳಿಸೆಂದು ಪಾರ್ವತಿಯು ಮಹೇಶನನ್ನು ಪ್ರಾರ್ಥಿಸಿದಳು. ॥೭-೮-೯॥

ಮುನಿವರ್ಯನೇ, ಈರೀತಿ ಪಾರ್ವತಿಯಿಂದ ಪ್ರಶ್ನೆಮಾಡಲ್ಪಟ್ಟ ಷಡ್ಗುಣಪೂರ್ಣನಾದ ಕೈಲಾಸವಾಸಿಯೂ, ಯೋಗಿಯೂ, ಸರ್ವೇಶ್ವರನೂ, ಸಕಲ ಬ್ರಹ್ಮಾಂಡ

ಪಾರ್ವತ್ಯೈ ಪ್ರಾಹ ದೇವೇಶಃ ಸುಖೋಪಾಯಂ ಮಹೋದಯಂ ।
ಪರಮಂ ಸರ್ವಧರ್ಮಾಣಾಂ ಶಿವಧರ್ಮಂ ಮಹಾಮುನೇ ॥೧೧॥

ಶ್ರೂಯತಾಮಭಿಧಾಸ್ಯಾಮಿ ಗಣೈಃ ಸುರಗಣೈರ್ಮುನೇ ।
ಶಿವೇನ ಕಥಿತಂ ದೇವ್ಯೈ ದೇವೀ ಮಾಮಾಹ ಸಾದರಂ ॥೧೨॥

ತದ್ವಕ್ಷ್ಯಾಮಿ ಸುವಿಸ್ತಾರಂ ಶಿವಪ್ರಿಯಕರಂ ಮುನೇ ।
ಶಿವಧರ್ಮಂ ಶಿವಪ್ರೀತಿಕರಣಂ ಕಾರಣಂ ನೃಣಾಂ ॥೧೩॥

ಸರ್ವೇಷಾಂ ಪ್ರಾಣಿನಾಂ ವಿಪ್ರ ಸಂಸಾರಾಬ್ಧೇಸ್ತು ತಾರಕಂ ।
ಅಜ್ಞಾನಾರ್ಣವಮಗ್ನಾನಾಂ ಸರ್ವೇಷಾಂ ಪ್ರಾಣಿನಾಮಯಂ ॥೧೪॥

ಸಂಸಾರೋದಧಿಮಗ್ನಾನಾಂ ಜನ್ಮಮೃತ್ಯುಜರಾವತಾಂ ।
ಶಿವಧರ್ಮೋಡುಪಃ ಶ್ರೀಮಾನುತ್ತಾರಕ ಉದಾಹೃತಃ ॥೧೫॥

---

ನಿಲಯನೂ ದೇವತಾಧಿಪನೂ ಆದ ಪರಮೇಶನು ಸಕಲ ಧರ್ಮಗಳಲ್ಲಿಯೂ ಪ್ರಮಾಣವೂ ಸಕಲ ಮಹತ್ವವನ್ನೂ ಉಂಟುಮಾಡುವುದೂ, ಸುಖಪ್ರಾಪ್ತಿಗೆ ಉಪಾಯವೂ ಆದ ಶಿವಧರ್ಮವನ್ನು ದೇವಿಗೆ ಈರೀತಿ ಹೇಳಿದನು. ॥೧೦-೧೧॥

ಅಯ್ಯ ಜೈಗೀಷವ್ಯಮುನಿಯೆ, ಅದನ್ನೇ ಹೇಳುವೆನು ಕೇಳು; ರುದ್ರಗಣ ಮತ್ತು ದೇವಗಣಗಳೊಡನೆ ಕೂಡಿ ಪರಶಿವನು ದೇವಿಗೆ ಈ ಶಿವಧರ್ಮವನ್ನು ಹೇಳಿದನು. ದೇವಿಯೇ ನನಗೆ ಅದನ್ನು ಪ್ರೀತಿಯಿಂದ ಹೇಳಿರುವಳು. ಅಯ್ಯ ಮುನಿಯೆ, ತುಂಬಾ ವಿಸ್ತಾರವೂ ಶಿವನಿಗೆ ಪ್ರೀತಿಕರವೂ, ಮಾನವರಿಗೆ ಶಿವನಲ್ಲಿ ಪ್ರೀತಿಯುಂಟಾಗಲು ಕಾರಣವೂ ಆದ ಆ ಶಿವಧರ್ಮವನ್ನು ಈಗ ನಿನಗೆ ಹೇಳುವೆನು ಕೇಳು; ॥೧೨-೧೩॥

ಅಯ್ಯ ವಿಪ್ರನೆ, ಇದು ಸಕಲ ಪ್ರಾಣಿಗಳನ್ನೂ ಸಂಸಾರಸಾಗರದಿಂದ ಉದ್ಧಾರ ಮಾಡುವುದು. ಅಜ್ಞಾನವೆಂಬ ಸಮುದ್ರದಲ್ಲಿ ಮುಳುಗಿ ಸಂಸಾರಸಾಗರದಲ್ಲಿ ಮಗ್ನರಾಗಿ, ಜನನ, ಮರಣ, ಜರಾಯುಕ್ತರಾದವರಿಗೆ ಸಂಪತ್ಕರವಾದ ಈ ಶಿವಧರ್ಮವೆಂಬುದು ಒಂದು ಸಮುದ್ರವನ್ನು ದಾಟಿಸುವ ತೆಪ್ಪವೆಂದು ಹೇಳಲ್ಪಟ್ಟಿರುವುದು. ॥೧೪-೧೫॥

ಸ್ವರ್ಗಕಾಮಪ್ರದಾ ಧರ್ಮಾ ಯಜ್ಞಾದ್ಯಾಃ ಸಕಲಾ ಅಪಿ ।
ಮಹಾದಾನಾದಯೋ ಧರ್ಮಾ ಅನ್ನಗೋಭೂಮಿಪೂರ್ವಕಾಃ ॥೧೬॥

ವ್ರತಕೃಚ್ಛ್ರಾದಿಚರಣಾ ಆಶ್ರಮಶ್ರಮದಾಯಕಾಃ ।
ಇಷ್ಟಾಪೂರ್ತಾದಯಃ ಸರ್ವೇ ಸೌಖ್ಯಪಾತಾಂತಸುಂದರಾಃ ॥೧೭॥

ಬಹ್ವಾಯಾಸಪ್ರದಾ ವಿಪ್ರಾ ನೈವ ಮುಕ್ತಿಪ್ರದಾಯಕಾಃ ।
ಶಿವಧರ್ಮೋಽತ್ರ ವಿಹಿತಃ ಶಿವೇನೈವ ದಯಾಲುನಾ ॥೧೮॥

ಅಜ್ಞಾನಜ್ಞಾನಿನಾಂ ತುಲ್ಯೋ ಭುಕ್ತಿಮುಕ್ತಿಪ್ರದಾಯಕಃ ।
ಸಾಕ್ಷಾತ್ತ್ರ್ಯಕ್ಷಪ್ರೀತಿಕರಾ ಮೋಕ್ಷಜ್ಞಾನೈಕಸಾಧನಾಃ ॥೧೯॥

ಶಿವಧರ್ಮಾಃ ಶಿವಪ್ರೋಕ್ತಾ ಶಿವಾಯೈ ತೇ ಶಿವಾಯ ಚ ।
ತದ್ವಕ್ಷ್ಯಾಮಿ ಮುನಿಶ್ರೇಷ್ಠ ಸಂವಾದಂ ಶಿವಯೋರ್ವರಂ ॥೨೦॥

---

ಸ್ವರ್ಗಪ್ರಾಪ್ತಿಯನ್ನುಂಟುಮಾಡುವ ಯಾಗಾದಿಸಕಲಧರ್ಮಗಳೂ, ಅನ್ನ, ಹಸು, ಭೂಮಿ ಮುಂತಾದುವುಗಳ ಮಹಾದಾನಾದಿಗಳೂ, ಆಶ್ರಮಕ್ಲೇಶಕರಗಳಾದ ಕೃಚ್ಛ್ರಚಾಂದ್ರಾಯಣಾದಿವ್ರತಗಳೂ, ಇಷ್ಟಾಪೂರ್ತ, ಅಪ್ತೋರ್ಯಾಮಾದಿ ಸಕಲ ಯಾಗಗಳೂ, ಸೌಖ್ಯಪ್ರಾಪ್ತ್ಯಂತವಾಗಿ ಸುಂದರಗಳೆನಿಸುವುವು. ಮತ್ತು ಆಚರಿಸಲು ಆಯಾಸಕರಗಳೆನಿಸಿರುವುವು. ಇವುಗಳೆಂದಿಗೂ ಸ್ಥಿರವಾದ ಮುಕ್ತಿಯುಂಟುಮಾಡಲಾರವು. ॥೧೬-೧೭॥

ಅಜ್ಞಾನಿಗಳಿಗೂ, ಜ್ಞಾನಿಗಳಿಗೂ ಸಮಾನನಾಗಿ ಭಕ್ತಿ, ಮೋಕ್ಷಗಳನ್ನು ಕೊಡುವ ದಯಾಳುವಾದ ಆ ಪರಶಿವನಿಂದಲೇ ಶಿವಧರ್ಮವು ಹೇಳಲ್ಪಟ್ಟಿರುವುದು. ಈ ಧರ್ಮಗಳು ಸಾಕ್ಷಾತ್ಪರಶಿವನಿಗೆ ಪ್ರೀತಿಕರಗಳೂ ಮೋಕ್ಷಜ್ಞಾನಕ್ಕೆ ಮುಖ್ಯ ಸಾಧನಗಳೂ ಆಗಿರುವುವು. ಜಗನ್ಮಂಗಳಕ್ಕಾಗಿ ದೇವಿಗೆ ಆ ಪರಮೇಶನು ಈ ಧರ್ಮಗಳನ್ನು ಹೇಳಿರುವನು. ಓ ಮುನಿಶ್ರೇಷ್ಠನೆ, ಶಿವಪಾರ್ವತಿಯರ ಶ್ರೇಷ್ಠವಾದ ಆ ಸಂವಾದವನ್ನು ನಿನಗೆ ಈಗ ಹೇಳುವೆನು ಕೇಳು ಎಂದು ಷಣ್ಮುಖಸ್ವಾಮಿಯು ಜೈಗೀಷವ್ಯನಿಗೆ ಇಂತೆಂದನು. ॥೧೮-೧೯-೨೦॥

॥ ಶ್ರೀ ಶಿವ ಉವಾಚ ॥

ಶೃಣು ಶೈಲಸುತೇ ಭದ್ರಂ ಸುಖೋಪಾಯಂ ಮಹೋದಯಂ ।
ಸಂಸಾರೇ ಕ್ಲಿಶ್ಯತಾಂ ನೃಣಾಂ ಮಯಾ ಚೋತ್ತಾರಕಃ ಕೃತಃ ॥೨೧॥

ಶಿವಧರ್ಮೋ ವಿಶಿಷ್ಟೋಽತ್ರ ಶಿವವಿಷ್ಣುಪದಾಶ್ರಯಃ ।
ಸಂಸೇವ್ಯೋಽಯಂ ಪರಂ ದೇವಿ ಶಿವಾಖ್ಯೋಽಯಂ ಶಿವಾರ್ಥಿಭಿಃ ॥೨೨॥

ಯೇ ಸೇವಂತೇ ಪರಂ ಧರ್ಮಂ ತೇ ರುದ್ರಾ ನಾತ್ರ ಸಂಶಯಃ ।
ಗ್ರಾಮೇ ವಾ ಯದಿ ವಾರಣ್ಯೇ ಜಲೇ ವಾಪಿ ಸ್ಥಲೇಽಪಿ ವಾ ॥೨೩॥

ಕ್ಷೇತ್ರೇ ವಾ ನಗರೇ ವಾಪಿ ಕೀಕಟೇ ವಾ ಜನಾವೃತೇ ।
ಯತ್ರ ವಾ ವಿದ್ಯತೇ ಲಿಂಗಂ ಸರ್ವತೀರ್ಥಾನಿ ತತ್ರ ವೈ ॥೨೪॥

ಯತ್ರ ವಾ ರಮತೇ ಚಿತ್ತಂ ತತ್ರೈವ ಶಿವಮರ್ಚಯೇತ್ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ವಾ ॥೨೫॥

ಯೇಽರ್ಚಯಂತಿ ಮಹಾದೇವಂ ವಿಜ್ಞೇಯಾಸ್ತೇ ಗಣಾಃ ಶಿವೇ ।
ಕೀರ್ತಯಿಷ್ಯಂತಿ ಮಾಮೀಶೇ ಸಕೃದಪ್ಯಾಶು ಯೇ ನರಾಃ ॥೨೬॥

---

ಓ ಗಿರಿರಾಜಕುವರಿಯೇ, ಮಂಗಳಕರವೂ, ಸುಖಸಾಧನವೂ ಮಹಾಸೌಭಾಗ್ಯಕರವೂ ಆದ ಈ ಶಿವಧರ್ಮವನ್ನರುಹುವೆನು ಕೇಳು ; ಈ ಸಂಸಾರದಲ್ಲಿ ಬಿದ್ದು ಕ್ಲೇಶಪಡುವ ಮಾನವರನ್ನು ಉದ್ಧಾರಗೊಳಿಸಲು ಈ ಶಿವಧರ್ಮವನ್ನು ರಚಿಸಿರುವೆನು. ಇದು ಶ್ರೇಷ್ಠವಾದ ಈ ಶಿವಪದಾಶ್ರಯವಾಗಿರುವುದು. ಶಿವಸಂಜ್ಞಕವಾದ ಈ ಶ್ರೇಷ್ಠಧರ್ಮವನ್ನು ಮಂಗಳಾಕಾಂಕ್ಷಿಗಳು ಯಾವಾಗಲೂ ಸೇವಿಸಬೇಕು.॥೨೧-೨೨॥

ಶ್ರೇಷ್ಠವಾದ ಈ ಶಿವಧರ್ಮವನ್ನು ಯಾರು ಸೇವಿಸುವರೋ ಆವರು ರುದ್ರರೆನಿಸುವುದರಲ್ಲಿ ಸಂದೇಹವೇ ಇಲ್ಲ. ಹಳ್ಳಿ, ಕಾಡು, ನೀರು, ಭೂಮಿ, ಕ್ಷೇತ್ರ ಮತ್ತು ಪಟ್ಟಣ, ಜನಭರಿತವಾದ ದೇಶ, ಇವುಗಳಲ್ಲಿ ಎಲ್ಲಿ ಶಿವಲಿಂಗವಿರುವುದೋ ಅಲ್ಲಿ ಸಕಲ ತೀರ್ಥಗಳೂ ನೆಲಸಿರುವುವೆಂದೇ ಅರಿಯಬೇಕು. ॥೨೩-೨೪॥

ತನಗೆ ಮನಸ್ಸು ಒಲಿದಕಡೆ ಶಿವನನ್ನು ಪೂಜೆಮಾಡಬಹುದು. ಒಂದು, ಎರಡು, ಮೂರು ಕಾಲಗಳಲ್ಲಿಯೂ ಅಥವಾ ಯಾವಾಗಲೂ ಆ ಮಹಾದೇವನನ್ನು ಪೂಜಿಸುವವರು ಶಿವಗಣಗಳೆನಿಸುವರು. ಈಶ್ವರಿಯೇ, ಒಂದುಬಾರಿಯಾದರೂ ನನ್ನನ್ನು ಕೀರ್ತಿಸುವ ಮಾನವರು ; ॥೨೫-೨೬॥

ಸರ್ವಪಾಪೈಃ ಪ್ರಮುಚ್ಯಂತೇ ಕೋಟಿಜನ್ಮಕೃತೈರಪಿ ।
ಯೇ ಪೂಜಯಂತಿ ಲಿಂಗಂ ಮೇ ತ್ರಿಕಾಲಂ ಬಿಲ್ವಪಲ್ಲವೈಃ ॥೨೭॥

ಯೇ ಪಶ್ಯಂತಿ ಸಕೃದ್ದೇವಿ ಶಿವಲಿಂಗಂ ಮಮಾಶ್ರಯಂ ।
ಭೂಭಾಗಸಂಚರಾ ರುದ್ರಾಸ್ತೇ ಕೃತಾರ್ಥಾ ನ ಸಂಶಯಃ ॥೨೮॥

ಪ್ರಾತಃ ಸಂಗಮಮಧ್ಯಾಹ್ನೇ ಪ್ರದೋಷೇ ವಾಪಿ ಶಂಕರಂ ।
ಯೇ ಪಶ್ಯಂತ್ಯರ್ಚಯಂತೋ ವಾ ತ ಏವ ಗಣಪುಂಗವಾಃ ॥೨೯॥

ಅಸ್ಮಿನ್ಕೈಲಾಸಸದನೇ ವಸ್ತುಂ ಯೋಗ್ಯಾ ಭವಂತಿ ಹಿ ।
ಯಃ ಕ್ಷಣಂ ವಾ ಮುಹೂರ್ತಂ ವಾ ಶಿವಂ ಮಾಂ ಯೋವಿಚಿಂತಯೇತ್ ॥೩೦॥

ಸರ್ವೋಽಪಿ ದಿವಸೋ ವಂಧ್ಯೋ ಭವತ್ಯೇವ ಗಿರೀಂದ್ರಜೇ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ಯೇಽರ್ಚಯಂತಿ ಸದಾಶಿವಂ ॥೩೧॥

ತೇಷಾಂ ಹಿ ಸಫಲಂ ಜನ್ಮ ಭಸ್ಮರುದ್ರಾಕ್ಷಧಾರಿಣಾಂ ।
ಶಿವಭಕ್ತಿಪರಾ ಯೇತು ಶಿವಪ್ರಣತಮಸ್ತಕಾಃ ॥೩೨॥

---

ನಿಜವಾಗಿಯೂ ಕೋಟಿಜನ್ಮಗಳಲ್ಲಿ ಮಾಡಿದ ಸಕಲ ಪಾಪಗಳಿಂದಲೂ ಮುಕ್ತರಾಗುವರು. ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ತ್ರಿಕಾಲಗಳಲ್ಲಿಯೂ ನನ್ನ ಲಿಂಗವನ್ನು ಪೂಜೆಮಾಡುವವರೂ, ನನ್ನ ನೆಲೆಮನೆಯಾಗಿರುವ ಆ ಲಿಂಗವನ್ನು ಒಂದುಬಾರಿಯಾದರೂ ದರ್ಶನಮಾಡುವವರೂ, ಭೂಮಿಯಮೇಲೆ ಸಂಚರಿಸುವ ರುದ್ರರೆನಿಸಿ ಕೃತಕೃತ್ಯರೆನಿಸುವುದರಲ್ಲಿ ಸಂದೇಹವೇ ಇಲ್ಲ. ॥೨೭-೨೮॥

ಬೆಳಗ್ಗೆ, ಸಂಗಮಕಾಲ, ಮಧ್ಯಾಹ್ನ ಮತ್ತು ಪ್ರದೋಷಕಾಲ ಇವುಗಳಲ್ಲಿ ಯಾವ ಕಾಲದಲ್ಲಾಗಲೀ ಶಿವಲಿಂಗವನ್ನು ನೋಡಿ, ಪೂಜೆಮಾಡುವವರೇ ಗಣಶ್ರೇಷ್ಠರೆನಿಸುವರು. ಒಂದು ಕ್ಷಣಕಾಲ ಅಥವಾ ಮುಹೂರ್ತಕಾಲ ಮಂಗಳಕರನಾದ ನನ್ನನ್ನು ಧ್ಯಾನಮಾಡುವವರು ಈ ಕೈಲಾಸಪರ್ವತದಲ್ಲಿ ವಾಸಮಾಡಲು ಯೋಗ್ಯರಾಗುತ್ತಾರೆ. ॥೨೯-೩೦॥

ಒಂದು ಕ್ಷಣ, ಅಥವಾ ಮುಹೂರ್ತಕಾಲವಾದರೂ ನನ್ನ ಚಿಂತನೆಮಾಡದಿದ್ದರೆ ಆ ದಿನವೆಲ್ಲವೂ ವ್ಯರ್ಥವೇ ಆಗುವುದೆಂದು ತಿಳಿ; ದೇವಿ! ದುರ್ಲಭವಾದ ಈ ಮಾನವಜನ್ಮತಾಳಿಯೂ ಸದಾಶಿವನನ್ನು ಪೂಜಿಸಿದವರ ಜನ್ಮವು ವ್ಯರ್ಥವೇ ಸರಿ,

ಶಿವಲೋಕೇಕ್ಷಣಾ ದೇವಿ ವಿಕ್ಷೀಣಾಘಾ ಭವಂತಿ ತೇ ।
ಶಿವಪೂಜಾಕರಪರಾಃ ಶಿವಾಲಯಗತಾಂಘ್ರಯಃ ॥೩೩॥

ಶಿವಾರ್ಪಿತಲಸದ್ಘ್ರಾಣಾ ನೈವೇದ್ಯಾಸ್ವಾದಜಿಹ್ವಕಾಃ ।
ಶಿವಧ್ಯಾನೈಕಹೃದಯಾಃ ನ ತೇ ದುಃಖಸ್ಯ ಭಾಜನಂ ॥೩೪॥

ತೇಷಾಂ ಹಿ ಸಫಲಂ ಜನ್ಮ ಕೃತಾರ್ಥಾಃ ಶಾಂಭವೋತ್ತಮಾಃ ।
ಭವನಾನಿ ಮನೋಜ್ಞಾನಿ ಮಂಚಾಶ್ಚಾಭರಣಂ ಸ್ತ್ರಿಯಃ ॥೩೫॥

ಧನಂ ಚಾಭೀಷ್ಟಪರ್ಯಂತಂ ಮಮ ಪೂಜಾವಿಧೇಃ ಫಲಂ ।
ತುರಂಗವರಮಾತಂಗಗೋಮಹಿಷ್ಯಾದಿಕೋಟಯಃ ॥೩೬॥

ತದ್ದ್ವಾರಿ ವರವೃಕ್ಷಾಶ್ಚ ನಿತ್ಯಂ ಸನ್ನಿಹಿತಾಃ ಶಿವೇ ।
ಯೇ ವಾಂಛಂತಿ ಮಹಾಭೋಗಂ ರಾಜ್ಯಂ ಚ ತ್ರಿದಶಾಲಯಂ ॥೩೭॥

---

ಭಸ್ಮರುದ್ರಾಕ್ಷಗಳನ್ನು ಧರಿಸಿ, ಶಿವಭಕ್ತಿನಿರತರಾಗಿ, ಶಿವನಿಗೆ ವಿನಯದಿಂದ ತಲೆಬಾಗಿ ನಮಸ್ಕರಿಸುವವರ ಜನ್ಮವು ಸಫಲವೇ ಸರಿ. ॥೩೧-೩೨॥

ದೇವಿ ! ಶಿವಲೋಕಸಂದರ್ಶನಮಾತ್ರದಿಂದಲೇ ಅವರು ಪಾಪರಹಿತರಾಗುವರು. ಶಿವಪೂಜಾಚರಣನಿರತರೂ, ಶಿವದೇವಾಲಯಾಸಕ್ತಚರಣರೂ, ಶಿವನಿಗೆ ಸಮರ್ಪಿಸಿದ ವಸ್ತುಗಳನ್ನು ಮೂಗಿನಿಂದ ಆಘ್ರಾಣಿಸುವವರೂ, ಶಿವನೈವೇದ್ಯವನ್ನು ರುಚಿನೋಡುವ ನಾಲಿಗೆಯುಳ್ಳವರೂ, ಅನವರತವೂ ಶಿವಧ್ಯಾನದಲ್ಲಿಯೇ ಆಸಕ್ತವಾದ ಮನವುಳ್ಳವರೂ ಆದ ನನ್ನ ಭಕ್ತರು ಎಂದೂ ದುಃಖಕ್ಕೆ ಭಾಗಿಗಳೇ ಆಗುವುದಿಲ್ಲ. ॥೩೩-೩೪॥

ಅವರ ಜನ್ಮವೇ ಸಾರ್ಥಕವೆನಿಸುವುದು. ಆ ಶೈವವರ್ಯರೇ ಕೃತಕೃತ್ಯರು. ಅವರಿಗೆ ಮನೋಹರವಾದ ಮನೆಗಳು, ಮಂಚ, ಆಭರಣ, ಸ್ತ್ರೀಯರು, ಬೇಕಾದಷ್ಟು ಹಣ ಇವೆಲ್ಲವೂ ನನ್ನ ಪೂಜಾಮಹಿಮೆಯಿಂದಲೇ ಫಲಿಸುವುದು. ಕುದುರೆ, ದಿವ್ಯ ಗಜಗಳು, ಹಸು, ಎಮ್ಮೆ ಮುಂತಾದ ಪ್ರಾಣಿಗಳ ಸಮೂಹವೂ, ಮನೆಯ ಬಾಗಿಲಿನಲ್ಲಿ ಶ್ರೇಷ್ಠವಾದ ಕಲ್ಪಾದಿವೃಕ್ಷಗಳೂ ಅವರಿಗೆ ಯಾವಾಗಲೂ ಸಂನಿಹಿತವಾಗಿರುವುವು. ॥೩೫-೩೬॥

ಪಾರ್ವತಿಯೇ, ಉತ್ತಮವಾದ ಭೋಗ, ರಾಜ್ಯ, ಸ್ವರ್ಗಲೋಕ, ಬ್ರಹ್ಮ, ವಿಷ್ಣು, ಇಂದ್ರ ಇವರ ಪದವಿಗಳನ್ನು ಬಯಸುವವರು ಯಾವಾಗಲೂ ನನ್ನ ಪಾದ

ಬ್ರಹ್ಮತ್ವಂ ವಾಥ ವಿಷ್ಣುತ್ವಮಿಂದ್ರತ್ವಂ ಚಾಪಿ ಪಾರ್ವತಿ ।
ತೇಽರ್ಚಯಂತಿ ಸದಾಕಾಲಂ ಮಮೈವ ಚರಣಾಂಬುಜಂ ॥೩೮॥

ಸೌಭಾಗ್ಯಂ ಕಾಂತಿಮದ್ರೂಪಂ ಶೌರ್ಯಂ ತ್ಯಾಗಃ ಪ್ರಭಾವತಾ ।
ಯಶಶ್ಚ ಜಗತಿ ಖ್ಯಾತಿಃ ಶಿವಮರ್ಚಯತೋ ಭವೇತ್ ॥೩೯॥

ದೇವಾಸುರೇಷು ಮುನಿಷು ಯದ್ಯದುತ್ಕೃಷ್ಟಮೀಶ್ವರಿ ।
ತತ್ಸರ್ವಂ ಮತ್ಪ್ರಸಾದೇನ ಲಬ್ಧಮೀಶೇ ಶಿವಾರ್ಚನಾತ್ ॥೪೦॥

ಮಮೈವ ಪೂಜಯಾ ವಿಷ್ಣುಃ ಪಾಲಯೇಜ್ಜಗತೀತ್ರಯಂ ।
ಮಮೈವ ಪೂಜಯಾ ಬ್ರಹ್ಮಾ ಜಗತ್ಸರ್ವಂ ಕರೋತ್ಯಪಿ ॥೪೧॥

ಮಮೈವ ಪೂಜಯಾ ರುದ್ರೋ ಅಂತೇ ಸಂಹರತೇ ಜಗತ್ ।
ಮಮೈವ ಪೂಜಯಾ ಶಕ್ರಃ ಪಾಲಯತ್ಯಮರಾವತೀಂ ॥೪೨॥

ಮಮೈವ ಪೂಜಯಾ ದೇವಾ ದಿಕ್ಪಾಲಾ ವರುಣೋ ಯಮಃ ।
ವಸವೋ ದ್ವಾದಶಾದಿತ್ಯಾ ಮರುತಶ್ಚಾಶ್ವಿನಾವಪಿ ॥೪೩॥

---

ಕಮಲಗಳನ್ನೇ ಯಾವಾಗಲೂ ಪೂಜೆಮಾಡುವರು. ಸೌಭಾಗ್ಯ, ಮತ್ತು ಕಾಂತಿ ಯುಕ್ತವಾದ ಸೌಂದರ್ಯ, ಶೌರ್ಯ, ತ್ಯಾಗ, ಸಾಮರ್ಥ್ಯ, ಕೀರ್ತಿ, ಲೋಕದಲ್ಲಿ ಪ್ರಖ್ಯಾತಿ, ಇವುಗಳು ಶಿವನನ್ನು ಪೂಜೆಮಾಡುವವರಿಗೆ ಮಾತ್ರವೇ ಲಭಿಸುವುದು. ಶಿವಪೂಜಾ ವಿಹೀನರಿಗೆ ಇವೆಲ್ಲಾ ದುರ್ಲಭವೇ ಸರಿ. ॥೩೭-೩೮-೩೯॥

ಈಶ್ವರಿಯೇ, ದೇವದಾನವಮುನಿಗಳಲ್ಲಿ ಯಾವುದು ಉತ್ಕೃಷ್ಟವೆನಿಸಿರು ವುದೋ ಅದೆಲ್ಲವೂ ನನ್ನನ್ನು ಪೂಜಿಸಿ ಪಡೆದ ನನ್ನ ಅನುಗ್ರಹದಿಂದಲೇ ದೊರಕಿರು ವುದೆಂದು ತಿಳಿ. ನನ್ನ ಪೂಜೆಯಿಂದಲೇ ವಿಷ್ಣುವು ಮೂರುಲೋಕಗಳನ್ನೂ ಪಾಲಿಸು ತ್ತಿರುವನು; ಬ್ರಹ್ಮನು ಪ್ರಪಂಚವನ್ನೆಲ್ಲಾ ಸೃಷ್ಟಿಮಾಡುತ್ತಿರುವನು; ರುದ್ರನು ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಸಂಹರಿಸುತ್ತಿರುವನು. ಇಂದ್ರನು ಅಮರಾ ವತಿಯನ್ನು ಕಾಪಾಡುತ್ತಿರುವನು. ಅಲ್ಲದೇ ನನ್ನ ಪೂಜೆಯಿಂದಲೇ ಸಕಲ ದೇವತೆ ಗಳೂ, ದಿಕ್ಪಾಲಕರಾದ ವರುಣ, ಯಮ ಮುಂತಾದವರೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಸಪ್ತಮರುತ್ತುಗಳೂ, ಅಶ್ವಿನೀದೇವತೆಗಳೂ ದೇವಲೋಕದಲ್ಲಿ ಪ್ರಸಿದ್ಧದೇವತೆಗಳೆನಿಸಿರುವರು. ॥೪೦-೪೧-೪೨-೪೩॥

ರುದ್ರಾ ಏಕಾದಶಗಣಾ ವಾಯವೋ ಗ್ರಹನಾಯಕಾಃ ।
ಮನವೋ ಮುನಯಃ ಸಿದ್ಧಾಃ ಗಂಧರ್ವಾಗರುಡಾಃ ಖಗಾಃ ॥೪೪॥

ಯಕ್ಷಾಃ ಕಿಂಪುರುಷಾ ನಾಗಾ ನೃಪಾ ಯೇ ಕಾಲಸಂಭವಾಃ ।
ಯುಗೇ ಯುಗೇ ಪ್ರಜಾ ಯಾಸ್ತಾಃ ಸರ್ವಾ ಮತ್ಪೂಜಯಾವರಾಃ ॥೪೫॥

ಭಾಂತ್ಯೇವ ಭಾನವಃ ಸರ್ವೇ ವಾಂತಿ ವಾತಾಃ ಸದಾ ಶಿವೇ ।
ವರ್ಷಂತಿ ಮೇಘಾಃ ಸತತಂ ಪಾಂತಿ ದಿಕ್ಪತಯೋ ಜಗತ್ ॥೪೬॥

ಜ್ಯೋತೀಂಷ್ಯಪಿ ಪ್ರಕಾಶಂತೇ ನಗಾ ನಾಗಾಶ್ಚ ಭೂಧರಾಃ ।
ಶೇಷೋಽಪ್ಯಶೇಷಶಿರಸಾ ಭುವಂ ಧತ್ತೇ ಶಿವಾರ್ಚನಾತ್ ॥೪೭॥

ಸ್ವಾಂಶುಭಿಃ ಪೋಷಯತ್ಯೇವ ಸೋಮೋಽಪ್ಯೋಷಧಿಮಂಡಲಂ ।
ನದ್ಯಃ ಸಮುದ್ರಾಶ್ಚ ಶಿವೇ ನೋದ್ವೇಲಾಃ ಸಂವಹಂತ್ಯಪಿ ॥೪೮॥

---

ಏಕಾದಶ (ಹನ್ನೊಂದು) ರುದ್ರಗಣಗಳೂ, ವಾಯುಗಳೂ, ಸೂರ್ಯಾದಿ ಗ್ರಹಾಧಿಪತಿಗಳೂ, ಮನುಗಳೂ, ಮುನಿಗಳೂ, ಸಿದ್ಧರೂ, ಗಂಧರ್ವ, ಗರುಡ, ಮತ್ತು ಪಕ್ಷಿಗಳೂ, ಯಕ್ಷರೂ, ಕಿಂಪುರುಷರೂ, ನಾಗರೂ, ಆಯಾಕಾಲದಲ್ಲಿ ಹುಟ್ಟಿದ ರಾಜರೂ, ಪ್ರತಿಯುಗದಲ್ಲಿಯೂ ಜನ್ಮತಾಳುವ ಪ್ರಜೆಗಳೆಲ್ಲರೂ ನನ್ನ ಪೂಜೆಯಿಂದಲೇ ಶ್ರೇಷ್ಠರೆನಿಸುವರು. ॥೪೪-೪೫॥

ಪಾರ್ವತಿಯೇ, ಪ್ರತಿಯುಗದ ಸೂರ್ಯರೆಲ್ಲರೂ ನನ್ನ ಪೂಜಾಪ್ರಭಾವದಿಂದಲೇ ಪ್ರಕಾಶಿಸುವರು. ಸಪ್ತವಾಯುಗಳೂ ಯಾವಾಗಲೂ ಬೀಸುತ್ತಿರುವುವು. ಅನವರತವೂ ಮೋಡಗಳು ನನ್ನ ಪೂಜಾಮಹಿಮೆಯಿಂದಲೇ ಮಳೆಗರೆಯುವುವು. ದಿಕ್ಪಾಲಕರು ಯಾವಾಗಲೂ ಲೋಕಗಳನ್ನು ರಕ್ಷಣೆಮಾಡುತ್ತಿರುವರು. ನಕ್ಷತ್ರ ಮತ್ತು ತಾರಾ ರೂಪವಾದ ಜ್ಯೋತಿಸ್ಸುಗಳೂ ಸರ್ವದಾ ಪ್ರಕಾಶಿಸುತ್ತಿರುವುವು. ಬೆಟ್ಟಗಳೂ, ಸರ್ಪಗಳೂ, ಪರ್ವತಗಳೂ, ಪ್ರಸಿದ್ಧಿಗೊಂಡಿರುವುವು. ಶಿವಪೂಜಾಪ್ರಭಾವದಿಂದಲೇ ಆದಿಶೇಷನೂ ಸಹ ತನ್ನ ಸಮಸ್ತತಲೆಗಳಿಂದಲೂ ಭೂಮಿಯನ್ನು ಹೊತ್ತಿರುವನು. ॥೪೬-೪೭॥

ಕಿಂ ಶಿವೇ ಬಹುನೋಕ್ತೇನ ಸರ್ವಂ ಮತ್ಪೂಜಯಾ ಸ್ಥಿರಂ ।
ಚರಂ ವಾಪ್ಯಚರಂ ವಾದ್ಯ ಜಗಚ್ಚಕ್ರಂ ಪ್ರವರ್ತತೇ ॥೪೯॥

ನಾರುದ್ರಃ ಸಂಸ್ಮರೇದ್ರುದ್ರಂ ನಾರುದ್ರೋ ರುದ್ರಮರ್ಚಯೇತ್ ।
ನಾರುದ್ರಃ ಕೀರ್ತಯೇದ್ರುದ್ರಂ ನಾರುದ್ರೋ ರುದ್ರಮಾಪ್ನುಯಾತ್ ॥೫೦॥

ಸಂಪರ್ಕಾತ್ಕೌತುಕಾಲ್ಲೋಭಾದ್ಭಯಾದ್ವಾಪಿ ಚ ಸಂಸ್ಮರೇತ್ ।
ಕೀರ್ತಯೇದರ್ಚಯೇದ್ಯೋ ಮಾಂ ಸ ಮೇ ಪ್ರಿಯಕರೋ ಗಣಃ ॥೫೧॥

ಶಿವಧರ್ಮಸ್ಯ ಸಾರೋಽಯಂ ಶಿವಭಕ್ತಿಃ ಸುನಿಶ್ಚಲಾ ।
ಸಾ ಚಾಷ್ಟಾಂಗಾ ಮಯೈವೋಕ್ತಾ ಕಾರ್ಯಾ ನಿತ್ಯಂ ವಿಶೇಷತಃ ॥೫೨॥

ಮದ್ಭಕ್ತಜನವಾತ್ಸಲ್ಯಂ ಪೂಜಾಯಾಶ್ಚಾನುಮೋದನಂ ।
ಸ್ವಯಮಭ್ಯರ್ಚನಂ ಭಕ್ತ್ಯಾ ಮಮಾರ್ಥೇ ಚಾಂಗಚೇಷ್ಟನಂ ॥೫೩॥

---

ದೇವಿ! ಈ ಶಿವಪೂಜಾಮಹಿಮೆಯಿಂದಲೇ ಚಂದ್ರನೂ ತನ್ನ ಕಿರಣಗಳಿಂದ ಜ್ಯೋತಿರ್ಲತೆಗಳ ಸಮೂಹವನ್ನು ಪುಷ್ಟಿಗೊಳಿಸುತ್ತಿರುವನು. ನದಿಗಳೂ ಸಮುದ್ರಗಳೂ ಎಲ್ಲೆಮೀರದೇ ಚಲಿಸುತ್ತಿರುವುವು. ಪಾರ್ವತಿಯೆ, ಹೆಚ್ಚುಮಾತಿನಿಂದೇನು ಪ್ರಯೋಜನ! ಸ್ಥಾವರಜಂಗಮಾತ್ಮಕವಾದ ಈ ಜಗನ್ಮಂಡಲವೆಲ್ಲವೂ ಈ ನನ್ನ ಪೂಜೆಯಿಂದಲೇ ಸ್ಥಿರವಾಗಿರುವುದೆಂದು ತಿಳಿ. ||೪೮-೪೯||

ಈಶ್ವರಾಂಶವಿಲ್ಲದವನು ಶಿವನ ಸ್ಮರಣೆ, ಪೂಜೆ ಮತ್ತು ರುದ್ರಪಾರಾಯಣಾದಿಗಳನ್ನೆಸಗಲಾರನು. ಅಲ್ಲದೇ ಆತನು ಶಿವನ ಸಾನ್ನಿಧ್ಯವನ್ನು ಪಡೆಯಲಾರನು. ಶೈವರ ಸಂಪರ್ಕದಿಂದಾಗಲಿ, ಕುತೂಹಲ, ಲೋಭ, ಭಯ, ಮುಂತಾದವುಗಳಿಂದಲೇ ಆಗಲಿ, ಯಾರು ನನ್ನನ್ನು ಸ್ಮರಿಸುವರೋ, ಯಾರು ನೈಜವಾದವಿಶ್ವಾಸದಿಂದ ಜಪಿಸುತ್ತಾ ಪೂಜೆಮಾಡುವರೋ ಅವರೇ ನನ್ನ ಪ್ರೀತಿಪಾತ್ರರೆನಿಸುವರು. ಶಿವಗಣಗಳಲ್ಲಿ ಅಂತಹವರೂ ಸೇರುವರು. ||೫೦-೫೧||

ದೇವಿಯೇ, ದೃಢವಾದ ಶಿವಭಕ್ತಿಯೇ ಶಿವಧರ್ಮದ ಸಾರವು. ಎಂಟು ಬಗೆಯಾದ ಈ ಶಿವಭಕ್ತಿಯು ಹಿಂದೆಯೇ ನನ್ನಿಂದ ಹೇಳಲ್ಪಟ್ಟಿದೆ. ಅದನ್ನು ನಿತ್ಯವೂ ವಿಶೇಷವಾಗಿ ಕಾರ್ಯರೂಪದಲ್ಲಿ ಅನುಷ್ಠಿಸಬೇಕು. ನನ್ನ ಭಕ್ತರಲ್ಲಿ ಪ್ರೀತಿಯಿಡುವುದು, ನನ್ನ ಪೂಜೆಯನ್ನು ಅನುಮೋದಿಸುವುದು, ಸ್ವತಃ ತಾನೇ ಭಕ್ತಿಯಿಂದ ಪೂಜಿಸು

ಮತ್ಕಥಾಶ್ರವಣೇ ಭಕ್ತಿಃ ಸ್ವರನೇತ್ರೇಷು ವಿಕ್ರಿಯಾ ।
ಮಮಾನುಸ್ಮರಣಂ ನಿತ್ಯಂ ಯಶ್ಚ ಮಾಂಚೋಪಜೀವತಿ ॥೫೪॥

ಭಕ್ತಿರಷ್ಟವಿಧಾಹ್ಯೇಷಾ ಯಸ್ಮಿನ್ಮ್ಲೇಚ್ಛೇಽಪಿ ವರ್ತತೇ ।
ಸ ಶಾಂಭವೋ ಮುನಿಶ್ರೇಷ್ಠಃ ಸ ಯತಿಃ ಸ ಚ ಪಂಡಿತಃ ॥೫೫॥

ನ ಮೇ ಪ್ರಿಯಶ್ಚತುರ್ವೇದೀ ಸತ್ರಯಾಜ್ಯಪಿ ಶಂಕರಿ ।
ಬ್ರಾಹ್ಮಣೋ ವಾಂತ್ಯಜೋ ವಾಪಿ ಮದ್ಭಕ್ತಃ ಶ್ವಪಚೋ ವರಃ ॥೫೬॥

ತಸ್ಮೈ ದೇಯಂ ತತೋ ಗ್ರಾಹ್ಯಂ ಸ ಹಿ ಪೂಜ್ಯೋಯಥಾಹ್ಯಹಂ ।
ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ॥೫೭॥

ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ।
ನಾರ್ಚಯೇದ್ಯಃ ಸದಾತ್ಮಸ್ಥಂ ಯೋ ಮಾಂ ಸಮಯಮಾಸ್ಥಿತಃ ॥೫೮॥

---

ವುದು, ನನಗಾಗಿ ಅವಯವ ಚೇಷ್ಟೆಗಳನ್ನೆಸಗುವುದು, ನನ್ನ ಸಂಬಂಧವಾದ ಕಥೆಗಳನ್ನಾಲಿಸುವುದರಲ್ಲಿ ಭಕ್ತಿ, ಮುಕ್ಕಣ್ಣನಾದ ನನ್ನಲ್ಲಿ ಯಾವಾಗಲೂ ಪೂಜಾದಿ ವ್ಯಾಪಾರಗಳು, ನಿತ್ಯವೂ ನನ್ನನ್ನು ಸ್ಮರಿಸುವುದು, ಮತ್ತು ನನ್ನನ್ನಾಶ್ರಯಿಸಿ ಜೀವಿಸುವುದು. ಇವೇ ನನ್ನ ಭಕ್ತಿಯ ಅಷ್ಟಾಂಗಗಳು. ॥೫೨-೫೩-೫೪॥

ಎಲೌ ಪಾರ್ವತಿಯೆ, ಈ ಎಂಟುಬಗೆಯ ಭಕ್ತಿಯು ಯಾರಲ್ಲಿರುವುದೋ ಅವನು ಜಾತಿಯಿಂದ ಮ್ಲೇಚ್ಛನಾದರೂ, ಅವನೇ ಶೈವವರ್ಯನು, ಮುನಿಶ್ರೇಷ್ಠನು, ಸಂನ್ಯಾಸಿಯು, ಅವನೇ ಪಂಡಿತನೂ, ಎನಿಸುವನು ; ದೇವಿಯೇ ಕೇಳು, ಋಗ್ಯಜುಃ ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನು ಬಲ್ಲವನಾದರೂ ನನಗೆ ಪ್ರಿಯನಲ್ಲ. ಯಾಗಶೀಲನೂ ಪ್ರಿಯಕರನಾಗಲಾರನು. ನನ್ನಲ್ಲಿ ಭಕ್ತಿಯಿಟ್ಟವನು ಜಾತಿಯಿಂದ ಬ್ರಾಹ್ಮಣ, ಅಂತ್ಯಜ, ಅಥವಾ ಶ್ವಪಚನೇ ಆಗಲಿ ಅವನೇ ಶ್ರೇಷ್ಠನೆಂದು ತಿಳಿ. ॥೫೫-೫೬॥

ಏನಾದರೂ ದಾನಮಾಡುವುದಾದರೆ ಅಂತಹ ನನ್ನ ಭಕ್ತನಿಗೇ ದಾನಮಾಡಬೇಕು, ಅವನಿಂದಲೇ ಏನನ್ನಾದರೂ ಗ್ರಹಣಮಾಡಬೇಕು. ನನ್ನಂತೆಯೇ ಅವನೂ ಪೂಜ್ಯನೇ ಆಗಿರುವನು. ಪತ್ರೆ, ಹೂ, ಹಣ್ಣು, ನೀರು, ಮುಂತಾದವುಗಳನ್ನೇ ಆಗಲಿ, ಯಾವನು ನನಗೆ ಭಕ್ತಿಯಿಂದ ಸಮರ್ಪಿಸುತ್ತಾನೆಯೋ ಅವನಿಗೆ ನಾನು

ಸ ಮಾಂ ಪರ್ವತದುರ್ಗೇಷು ಮಾರ್ಗಮಾಣೋ ನ ಪಶ್ಯತಿ ।
ಯೋ ಮಾಂ ಸರ್ವಗತಂ ಪಶ್ಯೇತ್ಸರ್ವಂ ಚ ಮಯಿ ಪಶ್ಯತಿ ॥೫೯॥

ತಸ್ಯಾಹಂ ನಿತ್ಯಮಾತ್ಮಸ್ಥಃ ಸ ಚ ನಿತ್ಯಂ ಮಯಿ ಸ್ಥಿತಃ ।
ಸುದುರ್ಲಭಾ ಶಿವೇ ಭಕ್ತಿರ್ದುರ್ಲಭಂ ಚ ಶಿವಾರ್ಚನಂ ॥೬೦॥

ಸುದುರ್ಲಭಂ ಶಿವೇ ದಾನಂ ಶಿವೇ ಹೋಮಶ್ಚ ದುರ್ಲಭಃ ।
ಸುದುರ್ಲಭಂ ಶಿವಜ್ಞಾನಂ ತದಭ್ಯಾಸೋಽಪಿ ದುರ್ಲಭಃ ॥೬೧॥

ಸುದುರ್ಲಭತರಂ ಜ್ಞೇಯಂ ಜಪಧ್ಯಾನಂ ಶಿವಾತ್ಮಕಂ ।
ಅತ್ಯಂತದುರ್ಲಭಂ ದೇವಿ ಶಿವಲಿಂಗೇ ಶಿವಾರ್ಚನಂ ॥೬೨॥

ಸುದುರ್ಲಭಂ ತು ತದ್ಭಕ್ತಿಸ್ತದಭ್ಯಾಸೋಽತಿದುರ್ಲಭಃ ।
ಸುದುರ್ಲಭಮಿದಂ ಜ್ಞಾತ್ವಾ ಶಿವಭಕ್ತಿಂ ಸಮಾಶ್ರಯೇತ್ ॥೬೩॥

---

ಎಂದೂ ತೊಂದರೆಕೊಡುವುದಿಲ್ಲ. ಅಲ್ಲದೇ ಅವನೂ ನನ್ನಿಂದ ತೊಂದರೆಹೊಂದಲಾರನು. ಯಾವಾಗಲೂ ತನ್ನಲ್ಲಿಯೇ ಅಡಗಿರುವ ನನ್ನನ್ನು ಪೂಜಿಸದೇ, ಬೇರೆ ಸ್ಥಳದಲ್ಲಿ ಇತರ ದೇವತೆಗಳನ್ನು ಹುಡುಕುವವನು, ಮೂಢನೆನಿಸುವನು. ಪರ್ವತ, ದುರ್ಗ ಮುಂತಾದೆಡೆಗಳಲ್ಲಿ ಎಲ್ಲಿ ಹುಡುಕಿದರೂ ನನ್ನನ್ನು ಆತನು ನೋಡಲಾರನು. ಯಾವನು ಸರ್ವಾಂತರ್ಯಾಮಿಯಾದ ನನ್ನನ್ನು ತಿಳಿದು ಎಲ್ಲವನ್ನೂ ನನ್ನಲ್ಲಿಯೇ ನೋಡುತ್ತಾನೆಯೋ, ಅಂತಹವನ ಅಂತರಂಗದಲ್ಲಿಯೇ ನಾನು ಯಾವಾಗಲೂ ನೆಲಸಿರುವೆನು. ಅವನೂ ನನ್ನಲ್ಲಿ ಅನವರತವೂ ಅಡಗಿರುವನು. ॥೫೭-೫೮-೫೯॥

ದೇವಿಯೇ, ಶಿವನಲ್ಲಿ ಭಕ್ತಿಯುಂಟಾಗುವುದು ತುಂಬಾ ದುರ್ಲಭವು. ಶಿವಪೂಜೆಯೂ ಅಂತೆಯೇ ; ಶಿವವಿಷಯದಲ್ಲಿ ದಾನ, ಹೋಮಗಳೂ ಸುಲಭಸಾಧ್ಯವಲ್ಲ. ಶಿವಜ್ಞಾನವೂ ದುರ್ಲಭವೆನಿಸಿರುವುದು. ಪಾರ್ವತಿಯೇ! ಆ ಜ್ಞಾನವನ್ನು ಅಭ್ಯಾಸ ಮಾಡುವುದೂ ಅತಿಕಷ್ಟವೇ ಆಗಿರುವುದು. ಶಿವಸ್ವರೂಪದಿಂದ ಜಪ ಮತ್ತು ಧ್ಯಾನಗಳು ಅತ್ಯಂತ ಕಷ್ಟಸಾಧ್ಯಗಳೆನಿಸಿರುವುವು. ಗಿರಿಜೆ! ಶಿವಲಿಂಗದಲ್ಲಿ ಶಿವನನ್ನು ಭಕ್ತಿಯಿಂದ ಪೂಜಿಸುವುದು ಅತ್ಯಂತ ಶ್ರಮವೇ ಸರಿ. ॥೬೦-೬೧-೬೨॥

ಶಿವಭಕ್ತಿಯೂ, ಅದರ ಅಭ್ಯಾಸವೂ ಸುಲಭವಾಗಿ ಲಭಿಸಲಾರದು. ಇದು ಸುಲಭವಾಗಿ ದೊರೆಯಲಾರದೆಂದೇ ತಿಳಿದು ಎಲ್ಲರೂ ಈ ಶಿವಭಕ್ತಿಯನ್ನು ಆಶ್ರ

ಲಾಭಸ್ತೇಷಾಂ ಜಯಸ್ತೇಷಾಂ ಯಶಸ್ತೇಷಾಂ ಪದೇ ಪದೇ ।
ಯೇ ಶಿವಂ ಶರಣಂ ಪ್ರಾಪ್ತಾಃ ಶಿವಾರ್ಚನಪರಾಯಣಾಃ ॥೬೪॥

ಯೇಷಾಂ ದಿವಾ ಚ ರಾತ್ರೌ ಚ ನಿತ್ಯಂ ಶಿವಗತಾ ಸ್ಮೃತಿಃ ।
ನಮಸ್ಕಾರಾದಿಸಂಯುಕ್ತಂ ಶಿವಾಯೇತ್ಯಕ್ಷರತ್ರಯಂ ॥೬೫॥

ಜಿಹ್ವಾಗ್ರೇ ವರ್ತತೇ ಯಸ್ಯ ಸಫಲಂ ತಸ್ಯ ಜೀವಿತಂ ।
ಯದಂಗಂ ಭಸ್ಮಸಂಯುಕ್ತಂ ತ್ರಿಪುಂಡ್ರಲಲಿತಾಲಕಂ ॥೬೬॥

ರುದ್ರಾಕ್ಷಮಾಲಾಭರಣಂ ಚಂದ್ರಚೂಡಾಲಯಂ ಶಿವೇ ।
ಜಾತೇನಾತ್ಮದ್ರುಹಾ ಯೇನ ಭಗವಾನ್ನ ಸಮರ್ಚಿತಃ ॥೬೭॥

ಸ ಚಿರಂ ಸಂಚರತ್ಯಸ್ಮಿನ್ಸಂಸಾರೇ ದುಃಖಸಾಗರೇ ।
ದುರ್ಲಭಂ ಪ್ರಾಪ್ಯ ಮಾನುಷ್ಯಂ ಸ ಮೂಕೋ ಬಧಿರೋಭವೇತ್ ॥೬೮॥

ಯದಿ ಸರ್ವಾಂಗತಾಸಿದ್ಧಿರ್ವಿಪ್ರತ್ವಂ ಚ ನರೇಷು ಚ ।
ಇಹಾಮುತ್ರಸುಖಪ್ರಾಪ್ತ್ಯೈ ಶಿವೇ ಭಕ್ತಿಂ ಸಮಾಶ್ರಯೇತ್ ॥೬೯॥

---

ಯಿಸಬೇಕು. ಶಿವನನ್ನು ಸರ್ವದಾ ಮರೆಹೊಕ್ಕು ಶಿವಪೂಜಾಪರಾಯಣರಾಗಿರುವರಿಗೇ ಲಾಭವೂ, ಜಯವೂ, ಕೀರ್ತಿಯೂ, ಪದೇಪದೇ ಉಂಟಾಗುವುವು. ॥೬೩-೬೪॥

ಹಗಲು ರಾತ್ರಿಗಳಲ್ಲಿಯೂ ಯಾರಿಗೆ ನಿತ್ಯವೂ ಶಿವಸ್ಮರಣೆಯೂ, ನಾಲಗೆಯ ತುದಿಯಲ್ಲಿ ನಮಸ್ಕಾರಾರ್ಥಕವಾದ ಶಬ್ದದೊಡಗೂಡಿದ ಶಿವಾಯ ಎಂಬ ಮೂರಕ್ಷರ ಗಳು ಇರುವುವೋ, ಅವನ ಜನ್ಮವೇ ಸಾರ್ಥಕವು. ಯಾರ ಅವಯವವು ಭಸ್ಮ ಲೇಪಿತವಾಗಿ, ಭಸ್ಮತ್ರಿಪುಂಡ್ರಗಳಿಂದ ಮನೋಹರವಾದ ಮುಂಗುರುಳುಳ್ಳುದಾ ಗಿರುವುದೋ, ರುದ್ರಾಕ್ಷಮಾಲೆಯೆಂಬ ಭೂಷಣದಿಂದ, ಚಂದ್ರಶೇಖರನಿಗೆ ಆಶ್ರಯವೂ ಆಗಿರುವುದೋ ಅವನ ಜನ್ಮವೇ ಕೃತಕೃತ್ಯವಾದದ್ದು. ॥೬೫-೬೬॥

ಭೂಮಿಯಲ್ಲಿ ಹುಟ್ಟಿ ಭಗವಂತನನ್ನು ಪೂಜಿಸದೇ ವ್ಯರ್ಥಜನ್ಮತಾಳಿದ ಆತ್ಮದ್ರೋಹಿಯಿಂದ ಜಗತ್ತಿನಲ್ಲಿ ಏನು ತಾನೇ ಪ್ರಯೋಜನ? ಅವನು ಬಹುಕಾಲ ದುಃಖಸಾಗರವಾದ ಈ ಘೋರಸಂಸಾರದಲ್ಲಿ ಬಿದ್ದು ನರಳುವನು. ಮೂಗು ಅಥವಾ ಕಿವುಡುತನವಿಲ್ಲದೆ ದುರ್ಲಭವಾದ ಮಾನವ ಜನ್ಮತಾಳಿ ಆ ಮಾನವ ವರ್ಗದಲ್ಲಿಯೂ ಬ್ರಾಹ್ಮಣ್ಯವನ್ನು ಹೊಂದಿ, ಸಕಲ ಅವಯವಸಂಪತ್ತುಗಳನ್ನೂ

ದುರ್ಲಭಾ ದುರ್ಲಭಾ ದೇವಿ ಮಮ ಭಕ್ತಿಃ ಸುದುರ್ಲಭಾ ।
ಭುಕ್ತಿದಾ ಮೋಕ್ಷದಾತ್ರೀ ಚ ಪಶುಪಾಶನಿಕೃಂತನೀ ॥೭೦॥

॥ ಈಶ್ವರ ಉವಾಚ ॥

ಯೋ ಕಾಲಕಾಲಲಲನೇನ ಸಯಂತಿ ಕಾಲಂ
ಶೀಲೇನ ಫಾಲನಯನಾರ್ಚನತಸ್ತ್ರಿಕಾಲಂ ।
ಧನ್ಯಾಸ್ತ ಏವ ಜಗತೀತಲಚಾರಿರುದ್ರಾ
ವಿದ್ರಾವಿತಾಘನಿಚಯಾಃ ಶುಚಯೋ ಭವಂತಿ ॥೭೧॥

ಕ್ಷಣಂ ಕ್ಷೀಣಾಘೌಘಃ ಕಲಯತಿ ಕೃತಾಂತಾಂತಕಮುಮೇ
ನಿರಾತಂಕಂ ಶಾಂತೋ ಭವಭಯಜತಾಂತೋ ಮುಹುರಹೋ ।
ತನುಃ ಶೇಷೇ ಶೋಷೋ ಭವತಿ ವಿಪುಲೇ ಚಾಯುಷಿರಹೋ
ವಿಶೇಷೋ ನೋ ಭಾಗ್ಯೇ ಪ್ರಶಿಥಿಲಗತಾ ಕ್ಷೋಣಿವಲಯೇ ॥೭೨॥

---

ಪಡೆದವನು, ಇಹಪರಗಳಲ್ಲಿ ಸುಖಪ್ರಾಪ್ತಿಗೋಸ್ಕರ ಶಿವನಲ್ಲಿ ಭಕ್ತಿಯನ್ನಿಡಬೇಕು. ॥೬೭-೬೮-೬೯॥

ದೇವಿಯೇ, ಸಮಸ್ತ ಭೋಗಮೋಕ್ಷಗಳನ್ನು ಕರುಣಿಸಿ, ಸಂಸಾರಬಂಧನವನ್ನು ತೊಲಗಿಸುವ ಈ ನನ್ನ ಭಕ್ತಿಯು ಮಾನವರಿಗೆ ಅತ್ಯಂತ ದುರ್ಲಭವೆಂದೇ ತಿಳಿ. ॥೭೦॥

ಫಾಲನೇತ್ರನಾದ ಶಿವನ ಪೂಜೆಯಲ್ಲಿಯೇ ಪ್ರಾತರ್ಮಧ್ಯಾಹ್ನಸಾಯಂ ಕಾಲಗಳನ್ನೂ ಕಳೆಯುತ್ತಾ, ಇತರ ಸಮಯಗಳಲ್ಲಿ ಯಮಾಂತಕನಾದ ಆ ದೇವ ದೇವನ ಧ್ಯಾನ, ಭಜನಾದಿಗಳನ್ನು ಮಾಡುವವರೇ ಧನ್ಯರೆನಿಸುವರು. ಅವರೇ ಭೂಮಂಡಲದಲ್ಲಿ ಸಂಚರಿಸುವ ರುದ್ರರೆನಿಸಿ, ಸಕಲ ಪಾಪಗಳನ್ನೂ ಕಳೆದು ಕೊಂಡು ಪವಿತ್ರರೆನಿಸುವರು. ॥೭೧॥

ಉಮೆಯೇ, ಕ್ಷಣಕಾಲ ಯಮಾಂತಕನಾದ ಮಹಾದೇವನನ್ನು ಧ್ಯಾನಮಾಡು ವವನು ಯಾವ ಆತಂಕವೂ ಇಲ್ಲದೇ ಶಾಂತನೂ ಈ ಸಂಸಾರ ಭಯವನ್ನು ಗೆದ್ದ ಅಂತಃಕರಣವುಳ್ಳವನೂ ಆಗುವನು. ಅಹೋ ಏನಾಶ್ಚರ್ಯವಿದು ! ಮಾನವರಿಗೆ ತಮ್ಮ ಇಳಿವಯಸ್ಸಿನಲ್ಲಿ ಅವಯವ ಶೈಥಿಲ್ಯವುಂಟಾಗುವ ಸಮಯದಲ್ಲಿಯಾದರೂ

ವೈರಾಗ್ಯಭಾಗ್ಯರಹಿತಸ್ಯ ಭವೋರುದುಃಖಂ
ಸಂಜಾನತೋಽ ಜನಿವಿನಾಶನಲೋಕಜಾಲಂ ।
ಆಲೋಕಯನ್ನ ಘುಕುಲಾನಲಶೀಲನೇನ
ಆರೋಗ್ಯಭಾಗ್ಯರಹಿತಾಃ ಪ್ರಚಲಂತ್ಯಭಾಗ್ಯಾಃ ॥೭೩॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಿವಪೂಜಾಮಹಿಮಾನುವರ್ಣನಂ
ನಾಮ ದ್ವಿತೀಯೋಽಧ್ಯಾಯಃ

---

ಪರಶಿವನ ಪೂಜಾಧ್ಯಾನಾದಿಗಳುಂಟಾಗುವುದು ನಿಜವಾಗಿಯೂ ಅವರ ವಿಶೇಷವಾದ ಭಾಗ್ಯವೇ ಸರಿ. ಇಲ್ಲದಿದ್ದಲ್ಲಿ ಆ ದೇಹವು ಕೇವಲ ಒಣಗಿದ ಕಟ್ಟಿಗೆಯಂತೆ ವ್ಯರ್ಥವಾದಂತೆಯೇ ಆಗುವುದು. ॥೭೨॥

ವೈರಾಗ್ಯಭಾಗ್ಯಶೂನ್ಯರಾದವರಿಗೆ ಜನನ, ಮರಣ ರೂಪವಾದ ಸಾಂಸಾರಿಕ ಘೋರ ದುಃಖಗಳು ಎಂದಿಗೂ ಪರಿಹಾರವಾಗುವುದಿಲ್ಲ. ಪ್ರಪಂಚದಲ್ಲಿರುವ ಸಕಲ ಪ್ರಾಣಿಗಳೂ ಜನನ ಮರಣರೂಪವಾದ ದುಃಖಕ್ಕೆ ಸಿಕ್ಕಿ ನರಳುವುವೆಂಬುದನ್ನು ತಿಳಿದೂ, ಅದನ್ನು ತಪ್ಪಿಸಿಕೊಳ್ಳಲು ಯತ್ನಿಸದೆ ಭಾಗ್ಯಹೀನರಾದ ಜನಗಳು ಶಿವಜ್ಞಾನವನ್ನು ಪಡೆಯದೆ ಆರೋಗ್ಯಭಾಗ್ಯಹೀನರಾಗಿ ಅಲೆಯುತ್ತಿರುತ್ತಾರೆ, ಎಂದು ಶಿವನು ಪಾರ್ವತಿಗೆ ನಿರೂಪಿಸಿದನು. ॥೭೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಪೂಜಾಪ್ರಭಾವ
ವರ್ಣನೆಯೆಂಬ ಎರಡನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ತೃತೀಯೋಽಧ್ಯಾಯಃ

॥ ಶ್ರೀಸಾರ್ವತ್ಯುವಾಚ ॥

ಲಿಂಗಾರ್ಚನವಿಧಿಂ ಪುಣ್ಯಂ ಶ್ರೋತುಮಿಚ್ಛಾಮಿ ಶಂಕರ ।
ತ್ವತ್ಪ್ರಸಾದಾದಶೇಷೇಣ ಭಗವನ್‌ಚಂದ್ರಶೇಖರ ॥೧॥

ಯತ್ಪುಣ್ಯಂ ಸ್ಥಾಪಿತೇ ಲಿಂಗೇ ಕೃತೇ ಯಚ್ಚ ಶಿವಾಲಯೇ ।
ಮೃದ್ದಾರ್ವಿಷ್ಟಕಪಾಷಾಣಸುಧಾಭಿಃ ಪರಿಕಲ್ಪಿತೇ ॥೨॥

ಲಿಂಗಬೇರಪ್ರತಿಷ್ಠಾಯಾಂ ಚರಸ್ಥಾವರಪೂಜನೇ ।
ಸಂಮಾರ್ಜನೇನ ಯತ್ಪುಣ್ಯಂ ಯತ್ಪುಣ್ಯಮುಪಲೇಪನೇ ॥೩॥

---

## ಮೂರನೆಯ ಅಧ್ಯಾಯ

ಲೋಕಶಂಕರನೇ, ನಿನ್ನ ಅನುಗ್ರಹದಿಂದ ಪುಣ್ಯಕರವಾದ ಶಿವಲಿಂಗಪೂಜಾ ವಿಧಿಯುನ್ನು ಸಂಪೂರ್ಣವಾಗಿ ಕೇಳಬಯುಸುವೆನು. ಎಲೈ ಭಗವಂತನಾದ ಚಂದ್ರ ಶೇಖರಸ್ವಾಮಿಯೆ, ಮಣ್ಣು, ಮರ, ಇಟ್ಟಿಗೆ, ಕಲ್ಲು, ಸುಣ್ಣ ಮುಂತಾದವುಗಳಿಂದ ರಚಿತವಾದ ಶಿವಾಲಯದಲ್ಲಿ ಸ್ಥಾಪಿಸಿದ ಶಿವಲಿಂಗಪೂಜೆಯಿಂದ ಉಂಟಾಗುವ ಪುಣ್ಯವೇನು ? ॥೧-೨॥

ಲಿಂಗಶರೀರಿಯಾದ ಶಿವನನ್ನು ಸ್ಥಾಪಿಸುವುದು, ಸ್ಥಾವರಜಂಗಮಾತ್ಮಕವಾದ ಲಿಂಗಪೂಜೆ, ಗುಡಿಸುವುದು, ಸಾರಿಸುವುದು, ಆರತಿ, ಗಿಡಮೂಲಿಕೆಗಳ ಬೀಜಗಳಿಂದ

ನೀರಾಜನೋಷಧೀಬೀಜಸ್ನಾನಮಂಗಲವಾದನೈಃ ।
ವಾಹನೋತ್ಸವದೀಪಾನಾಂ ಪ್ರದಾನೇ ವಾ ಕಿಯತ್ಫಲಂ ॥೪॥

ಯತ್ಪುಣ್ಯಮರ್ಘ್ಯದಾನೇನ ತೋಯಸ್ನಾನೇನ ಯದ್ಭವೇತ್ ।
ಕ್ಷೀರಸ್ನಾನೇನ ಯತ್ಪುಣ್ಯಂ ಖಂಡದಧ್ನಾ ಮಹೇಶ್ವರ ॥೫॥

ಘೃತಸ್ನಾನೇನ ಯತ್ಪುಣ್ಯಂ ಶರ್ಕರಾಭಿರ್ಮಹೇಶ್ವರ ।
ಮಧುಸ್ನಾನೇನ ಯತ್ಪುಣ್ಯಂ ತಥಾ ಪುಂಡ್ರೇಕ್ಷುಸಾರತಃ ॥೬॥

ಪಂಚಗವ್ಯವರಸ್ನಾನೇ ತೈಲಾಭ್ಯಂಗೇನ ಯದ್ಭವೇತ್ ।
ಗಂಧಚಂದನತೋಯೈಶ್ಚ ಕರ್ಪೂರಾಗರುಮಿಶ್ರಿತೈಃ ॥೭॥

ನಾರಿಕೇಲೇಕ್ಷುಜಂಬೀರಮೋಚಾಮ್ರವರಪಾನಸೈಃ ।
ತತ್ತದ್ರಸವರೈಃ ಶಂಭೋಽಪ್ಯಭಿಷೇಕೇ ಫಲಂ ಚ ಕಿಂ ॥೮॥

ಸ್ವರ್ಣರತ್ನಾದಿ ತೋಯೈಶ್ಚ ಪುಷ್ಪಮಿಶ್ರಾಂಬುಭಿಃ ಶಿವ ।
ಕರ್ಪೂರಾಗರುತೋಯೈಶ್ಚ ವಸ್ತ್ರಪೂತೈಶ್ಚ ವಾರಿಭಿಃ ॥೯॥

---

ಸ್ನಾನ, ಮಂಗಳವಾದ್ಯ, ವಾಹನ, ಉತ್ಸವ, ದೀಪ ಇವುಗಳನ್ನು ನಡೆಸುವುದರಿಂದ ಎಂತಹ ಪುಣ್ಯಫಲವುಂಟಾಗುತ್ತದೆ? ॥೩-೪॥

ಅರ್ಘ್ಯಕೊಡುವುದು, ಜಲಸ್ನಾನ, ಕ್ಷೀರಸ್ನಾನ, ಗಟ್ಟಿಮೊಸರಿನಿಂದಭಿಷೇಕ, ಆಜ್ಯ ಸ್ನಾನ, ಸಕ್ಕರೆಯಿಂದ ಸ್ನಾನ, ಜೇನಿನಿಂದ ಅಭಿಷೇಕ ಮತ್ತು ಕಬ್ಬಿನಹಾಲಿನಿಂದ ಮಾಡುವ ಅಭಿಷೇಕಗಳಿಂದ ಮಾನವರಿಗೆ ಎಷ್ಟೆಷ್ಟು ಪುಣ್ಯವುಂಟಾಗುತ್ತದೆ? ॥೫-೬॥

ಮಹೇಶ್ವರನೆ, ಶ್ರೇಷ್ಠವಾದ ಪಂಚಗವ್ಯಗಳ ಅಭಿಷೇಕ, (ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ) ಎಣ್ಣೆಯ ಅಭ್ಯಂಗನ, ಗಂಧ, ಚಂದನ ಮಿಶ್ರಿತವಾದ ನೀರುಗಳಿಂದಲೂ, ಕರ್ಪೂರ, ಅಗರು ಮಿಶ್ರಿತ ಜಲದಿಂದಲೂ ಅಭಿಷೇಕಮಾಡುವುದು, ಎಳನೀರು, ಕಬ್ಬಿನ ಹಾಲು, ನಿಂಬೆ, ಬಾಳೆ, ಹಲಸು ಮುಂತಾದ ಶ್ರೇಷ್ಠಫಲಗಳ ರಸಗಳಿಂದಲೂ ಶಂಭುವಿಗೆ ಅಭಿಷೇಕಮಾಡುವುದ ರಿಂದುಂಟಾಗುವ ಶುಭಫಲಗಳಾವುವು? ॥೭-೮॥

ಶಂಕರನೆ, ಚಿನ್ನ, ರತ್ನ ಮುಂತಾದವುಗಳಿಂದ ಬೆರೆತ ನೀರಿನಿಂದಲೂ, ಪುಷ್ಪಮಿಶ್ರವಾದ ಜಲ, ಕರ್ಪೂರಾಗರುಮಿಶ್ರೋದಕ, ಬಟ್ಟೆಯಿಂದ ಶೋಧಿಸಿದ

ಸಹಸ್ರಧಾರಾಕಲಶೈಃ ಶತಧಾರಾಘಟೈಸ್ತಥಾ ।
ಸಹಸ್ರಶತಶಂಖಾನಾಂ ಸ್ನಪನೈಃ ಪುಣ್ಯವಾರಿಭಿಃ ॥೧೦॥

ನದೀನದಸಮುದ್ರಾಣಾಂ ವಾಪೀಕೂಪೋದ್ಭವೈರ್ಜಲೈಃ ।
ಗವಾಂ ಶೃಂಗೋದಕಸ್ನಾನೇ ಕುಶೋದಕವಿಶೋಧನೇ ॥೧೧॥

ಯವಗೋಧೂಮಪಿಷ್ಟಾನಾಂ ಲೇಪನಸ್ನಪನೇನ ಕಿಂ ।
ವಿಲೇಪನೈಶ್ಚ ಗಂಧಾದ್ಯೈರ್ವಿಲಿಪ್ತೇನ ಚ ಯದ್ಭವೇತ್ ॥೧೨॥

ಸುವರ್ಣರೌಪ್ಯತಾಮ್ರಾದಿಕಾಂಸ್ಯಪಿತ್ತಲಮಾರ್ತಿಕೈಃ ।
ದಾರವಾಶ್ಮಮಯೈಃ ಪಾತ್ರೈಸ್ತಥಾಪರ್ಣಪುಟೈರಪಿ ॥೧೩॥

ಪಾತ್ರಕಲ್ಪನತೋ ವಾಪಿ ಕಿಂ ಫಲಂ ಸ್ಯಾನ್ಮಹೇಶ್ವರ ।
ಶ್ರೀಖಂಡಾಗರುಕಸ್ತೂರೀಮಿಶ್ರಗಂಧವಿಲೇಪನೈಃ ॥೧೪॥

ಯಕ್ಷಕರ್ದಮಜಾಲೇನ ಫಲಂ ಸ್ಯಾಚ್ಛಿವಪೂಜನೇ ।
ಹೇಮಕಾರ್ಪಾಸಕೌಶೇಯವಸ್ತ್ರದಾನೇ ಚ ಯತ್ಫಲಂ ॥೧೫॥

---

ನೀರಿನಿಂದ ಅಭಿಷೇಕಮಾಡಿದರೆ ಉಂಟಾಗುವ ಫಲವಾವುದು? ಸಾವಿರ ಮತ್ತು ನೂರುಸಂಖ್ಯೆಯ ಧಾರೆಗಳನ್ನು ಸುರಿಸುವ ಕಲಶಗಳಿಂದಭಿಷೇಕಮಾಡಿದರುಂಟಾಗುವ ಫಲವೇನು? ಲಕ್ಷಶಂಖಗಳಲ್ಲಿ ಪುಣ್ಯೋದಕಗಳನ್ನು ತುಂಬಿ ಅಭಿಷೇಕ ಮಾಡುವುದರಿಂದುಂಟಾಗುವ ಸುಕೃತವಾವುದು? ॥೯-೧೦॥

ನದಿ, ನದ, ಸಮುದ್ರ, ವಾಪಿ, ಕೂಪಗಳ ನೀರಿನಿಂದಲೂ, ಹಸುಗಳ ಕೊಂಬಿನಲ್ಲಿ ತೆಗೆದುಕೊಳ್ಳುವ ನೀರು, ದರ್ಭೆಯ ನೀರು ಇವುಗಳಿಂದ ಸ್ನಾನ ಮಾಡಿಸಿದರೆ ಏನು ಫಲವುಂಟು? ಅಕ್ಕಿ, ಗೋದುವೆ ಹಿಟ್ಟುಗಳನ್ನು ಲೇಪನ ಮಾಡುತ್ತಾ ಸ್ನಾನಮಾಡಿಸುವುದರಿಂದುಂಟಾಗುವ ಫಲವಾವುದು? ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ, ಮಣ್ಣು, ಮರ, ಕಲ್ಲುಗಳಿಂದ ಮಾಡಿದ ಪಾತ್ರೆಗಳಿಂದಲೂ ಹಾಗೆಯೇ ಎಲೆಗಳ ದೊನ್ನೆಗಳಿಂದಲೂ; ॥೧೧-೧೨-೧೩॥

ಮಹಾದೇವನೇ! ಅಭಿಷೇಕವನ್ನು ನಡೆಸಿದರೆ ಉಂಟಾಗುವ ಫಲವಾವುದು? ಚಂದನ, ಅಗರು, ಕಸ್ತೂರಿಗಳಿಂದ ಮಿಶ್ರವಾದ ಗಂಧವನ್ನು ಲೇಪನಮಾಡುವುದರಿಂದಲೂ, ಯಕ್ಷಕರ್ದಮ(ಕರ್ಪೂರಾಗರು ಮುಂತಾದವುಗಳಿಂದ ಮಿಶ್ರವಾದ ಧೂಪ)

ಘೃತತೈಲವರಾಣಾಂ ಚ ಕರ್ಪೂರವರದೀಪತಃ ।
ಫಲಂ ಕಿಯನ್ಮಹಾದೇವ ಧೂಪೇಷು ಪರಮೇಶ್ವರ ॥೧೬॥

ಸಾಮ್ರಾಣಿಗುಗ್ಗುಲುಕೃತೇ ಬಿಲ್ವತ್ವಕ್ಪರಿಕಲ್ಪಿತೇ ।
ಪಂಚವರ್ಣಕಪಿಷ್ಟೈಶ್ಚ ರಂಗವಲ್ಯಾ ಚ ಕಿಂ ಫಲಂ ॥೧೭॥

ಕಿಂ ಫಲಂ ಸ್ಯಾಚ್ಛಿವೇ ದತ್ತೇ ವದ ಶಂಕರ ಸರ್ವಗ ।
ಮುಕ್ತಪುಷ್ಪಾರ್ಚನೇ ಯಚ್ಚ ಮಾಲಾಭಿರ್ಲಿಂಗಪೂರಣೇ ॥೧೮॥

ಪುಷ್ಪಮಂಟಪಿಕಾಯಾಶ್ಚ ಪುಷ್ಪಮಾಲಾವಲಂಬನೇ ।
ತಥಾ ಪುಷ್ಪವಿಶೇಷೇ ಚ ಗ್ರಾಮಾರಣ್ಯೋದ್ಭವೇಷು ಚ ॥೧೯॥

---

ಗಂಧರಾಶಿಯಿಂದ ಲೇಪನಮಾಡುವುದರಿಂದಾಗಲೀ ಒದಗುವ ಶಿವಪೂಜಾಫಲ ವೆಂತಹದು? ಚಿನ್ನ, ಹತ್ತಿ, ರೇಷ್ಮೆಗಳ ವಸ್ತ್ರಗಳನ್ನು ಸಮರ್ಪಿಸುವುದರಿಂದುಂಟಾ ಗುವ ಫಲವಾವುದು? ಮಹೇಶ್ವರ! ತುಪ್ಪ, ಎಣ್ಣೆ ಮುಂತಾದವುಗಳಿಂದ ಶ್ರೇಷ್ಠ ವಾದ ದೀಪಗಳನ್ನು ಹತ್ತಿಸುವುದರಿಂದಲೂ, ಶ್ರೇಷ್ಠವಾದ ಕರ್ಪೂರದ ದೀಪದಾನ ದಿಂದಲೂ ಬರುವ ಪುಣ್ಯಫಲವಾವುದು? ಓ ಪರಮೇಶ್ವರನೆ! ಯಾವಯಾವ ಧೂಪಗಳನ್ನಿಡುವುದರಿಂದ ಎಷ್ಟೆಷ್ಟು ಫಲವುಂಟಾಗುವುದು? ॥೧೪-೧೫-೧೬॥

ಓ ಮಹೇಶ್ವರನೆ! ಸಾಮ್ರಾಣಿ ಮತ್ತು ಗುಗ್ಗುಲಗಳ ಧೂಪಹಾಕುವುದು, ಬಿಲ್ವದ ತೊಗಟೆಯನ್ನು ಧೂಪದ್ರವ್ಯಮಾಡುವುದು, ಇವುಗಳಿಂದೇನು ಫಲ? ಐದು ಬಣ್ಣದ ಹಿಟ್ಟುಗಳಿಂದ ರಂಗವಲ್ಲಿಯನ್ನಿಡುವುದರಿಂದುಂಟಾಗುವ ಫಲವಾವುದು? ಸರ್ವವ್ಯಾಪಿಯಾದ ಶಂಕರನೇ! ಇವುಗಳನ್ನು ಶಿವನಿಗೆ ಸಮರ್ಪಿಸುವುದರಿಂದ ಏನು ಫಲವುಂಟಾಗುವುದು? ಮುತ್ತುಗಳಿಂದ ಪುಷ್ಪಾರ್ಚನೆಮಾಡಿದರೆ, ಹೂಮಾಲೆಗಳಿಂದ ಲಿಂಗವನ್ನು ಅಲಂಕರಿಸಿದರೆ ಬರುವ ಪುಣ್ಯವಾವುದು? ಹೂಮಾಲೆಗಳಿಂದ ಜೋಲುಬಿದ್ದಿರುವ ಪುಷ್ಪಮಂಟಪವನ್ನು ರಚಿಸಿದರೆ ಬರುವ ಫಲವಾವುದು? ಹಾಗೆಯೇ ಊರುಮತ್ತು ಕಾಡುಗಳಲ್ಲಿ ಬೆಳೆದ ಪುಷ್ಪವಿಶೇಷಾರ್ಚನೆಯಿಂದ ಪೂಜಿಸಿದರೆ ಬರುವ ಸುಕೃತವೇನು? ಮಹೇಶನೆ! ಬಿಲ್ವದಳಗಳಿಂದ ಲಿಂಗಾರ್ಚನೆ ಮಾಡಿದರೆ ಬರುವ ಪುಣ್ಯವಾವುದು? ॥೧೭-೧೮-೧೯॥

ಕಿಂ ಫಲಂ ಶ್ರೀಮಹಾದೇವ ಬಿಲ್ವೈರಭ್ಯರ್ಚನೇ ಕೃತೇ ।
ನವರತ್ನಾದಿಪುಷ್ಪೇಷು ಸ್ವರ್ಣರೌಪ್ಯಸುಮೇಷು ಚ ॥೨೦॥

ನವಧಾನ್ಯಮಹಾಪೂಜಾಫಲಂ ಕಿಂ ವಾ ಮಹೇಶ್ವರ ।
ಅನ್ನಾಭಿಷೇಕೇ ಯತ್ಪುಣ್ಯಮವಿಚ್ಛಿನ್ನಾಂಬುಧಾರಯಾ ॥೨೧॥

ಅಭಿಷೇಕೇ ಕಿಯತ್ಪುಣ್ಯಂ ಫಲಂ ಕಿಂ ವಾ ಮಹೇಶ್ವರ ।
ಉದ್ವರ್ತನಾಂತರಸ್ನಾನೇ ಕೋಷ್ಣೇನ ಚ ಸುವಾರಿಣಾ ॥೨೨॥

ನಾನಾರತ್ನಾದಿಮಾಲಾನಾಂ ಪ್ರದಾನೇ ಚ ಮಹಾಫಲಂ ।
ರತ್ನಗೋಲಕದಾನೇ ವಾ ಸ್ವರ್ಣರೌಪ್ಯವಿನಿರ್ಮಿತೇ ॥೨೩॥

ಸಹಸ್ರಶತದೀಪಾನಾಂ ದರ್ಶನೇ ಚ ಕಿಯತ್ಫಲಂ ।
ಯವಗೋಧೂಮಶಾಲ್ಯನ್ನಭಕ್ಷ್ಯಭೋಜ್ಯಪ್ರದಾನತಃ ॥೨೪॥

ಶಾಕಾಪೂಪಾದಿದಾನೇ ಚ ಫಲಂ ಕಂದನಿವೇದನೇ ।
ಛತ್ರದಾನೇ ಮಹಾದೇವ ಚಾಮರಾಣಾಂ ಪ್ರದಾನತಃ ॥೨೫॥

---

ಮಹೇಶನೇ! ನವರತ್ನಮಯವಾದಪುಷ್ಪಗಳು, ಸುವರ್ಣ, ಮತ್ತು ಬೆಳ್ಳಿಯ ಹೂಗಳು ಇವುಗಳ ಪೂಜೆಯಿಂದುಂಟಾಗುವ ಫಲವಾವುದು ? ಒಂಬತ್ತುಬಗೆಯ ಧಾನ್ಯಗಳ ಮಹಾಪೂಜೆಯಿಂದ ತಾನೆ ಏನುಫಲವುಂಟು ? ಅನ್ನವನ್ನು ಅಭಿಷೇಕ ಮಾಡುವುದರಿಂದಬರುವ ಪುಣ್ಯವಾವುದು? ಎಡಬಿಡದೆ ಮಾಡುವ ಜಲಧಾರೆಗಳ ಅಭಿಷೇಕದಿಂದ ಯಾವ ಪುಣ್ಯವುಂಟು ? ಮಂದೋಷ್ಣವಾದ ದಿವ್ಯಜಲದಿಂದ ಉದ್ವರ್ತನ ಮಾಡಿ ಅನಂತರ ಸ್ನಾನಮಾಡಿಸಿದರೆ ಏನುಫಲವು ಬರುವುದು ? ಬಗೆಬಗೆಯ ರತ್ನವೇ ಮೊದಲಾದವುಗಳ ಹಾರಗಳ ದಾನದಿಂದ ಬರುವ ಮಹಾಫಲವೇನು ? ||೨೦-೨೧-೨೨||

ರತ್ನದ ಗೋಲಕ ಅಥವಾ ಚಿನ್ನ, ಬೆಳ್ಳಿಗಳಿಂದ ರಚಿತವಾದ ಗೋಲಕದಾನಗಳಿಂದ ಬರುವ ಫಲವಾವುದು ? ಲಕ್ಷದೀಪಗಳನ್ನು ಹಚ್ಚಿಸುವುದರಿಂದಲಾದರೂ ಬರುವ ಪುಣ್ಯವೇನು ? ಯವ, ಗೋಧಿ, ಅಕ್ಕಿಶಾಲ್ಯನ್ನ, ಮತ್ತು ಭಕ್ಷ್ಯಭೋಜ್ಯಗಳನ್ನು ದಾನಮಾಡಿದರೇನುಫಲ ? ತರಕಾರಿ, ಅಪೂಪ ಮುಂತಾದವುಗಳ ದಾನವು ಎಂತಹ ಫಲಕಾರಿಯು ? ಗೆಡ್ಡೆಗೆಣಸುಗಳನ್ನು ನಿವೇದನಮಾಡುವುದರಿಂದ ಬರುವ

ತಾಲವೃಂತಮಯೂರಾಚ್ಛಪಕ್ಷಕೋತ್ತಮನಿರ್ಮಿತೇ ।
ಚಿತ್ರಧ್ವಜಪತಾಕಾನಾಂ ದರ್ಪಣಾನಾಂ ಚ ದರ್ಶನೇ ॥೨೬॥

ತಾಂಬೂಲದಾನೇ ಯತ್ಪುಣ್ಯಂ ವಾದಿತ್ರಾಣಾಂ ಪ್ರದಾನತಃ ।
ಘಂಟಾವಾದಿತ್ರಶಂಖಾನಾಂ ಕಾಹಲಾನಾಂ ಚ ವಾದನೇ ॥೨೭॥

ವೇಣುವೀಣಾಮೃದಂಗಾನಾಂ ದುಂದುಭೀನಾಂ ರವೇಷು ಚ ।
ಸ್ತ್ರೀಣಾಂ ಸಂಗೀತನಾಟ್ಯೇನ ಕೃತೇನ ಚ ಫಲಂ ಕಿಯತ್ ॥೨೮॥

ರಥೋತ್ಸವಾದಿಕರಣೇ ನಗರಾಂತಪರಿಭ್ರಮೈಃ ।
ಕಿಯತ್ಫಲಂ ಮಹಾದೇವ ಮಹೋಕ್ಷವರದಾನತಃ ॥೨೯॥

ವಿತಾನದಾನೇ ಯತ್ಪುಣ್ಯಂ ಬಲಿಹೋಮಕ್ರಿಯಾಸು ಕಿಂ ।
ಗವಾಶ್ವಭೃತ್ಯನಾಗಾನಾಂ ಭೂಮಿದಾನೇ ಮಹೇಶ್ವರೇ ॥೩೦॥

ಗ್ರಾಮಖೇಟಪುರಾಣಾಂ ಚ ದೇಶದಾನೇ ಚ ಯತ್ಫಲಂ ।
ನೀಲೋತ್ಪಲಸಹಸ್ರಾಣಾಂ ಮಾಲಾದಾನೇ ಫಲಂ ಚ ಕಿಂ ॥೩೧॥

---

ಫಲವೇನು ? ಮಹಾದೇವನೇ ! ಛತ್ರಿ, ಚಾಮರ, ಉತ್ತಮವಾದ ನವಿಲುಗರಿಯೇ ಮುಂತಾದವುಗಳಿಂದ ರಚಿತವಾದ ಬೀಸಣಿಗೆಗಳ ದಾನದಿಂದಲೂ, ಚಿತ್ರವರ್ಣದ ಧ್ವಜ, ಪತಾಕೆ ಮತ್ತು ಕನ್ನಡಿಗಳ ದರ್ಶನದಿಂದಲೂ ಲಭಿಸುವ ಪುಣ್ಯವೇನು ? ॥೨೩-೨೪-೨೫-೨೬॥

ತಾಂಬೂಲ, ವಾದಿತ್ರ (ವಾದ್ಯವಿಶೇಷ) ಇವುಗಳ ದಾನದಿಂದಾವ ಫಲವುಂಟು ? ಗಂಟೆ, ವಾದಿತ್ರ, ಶಂಖ, ಕಹಳೆ ಇವುಗಳನ್ನು ಬಾರಿಸುವುದರಿಂದ ಬರುವ ಫಲವಾವುದು ? ಕೊಳಲು, ವೀಣೆ, ಮೃದಂಗ ಮತ್ತು ನಗಾರೀವಾದ್ಯಗಳ ಧ್ವನಿಗಳಿಂದ ಬರುವ ಪುಣ್ಯವಾವುದು ? ಓ ಮಹೇಶ್ವರನೆ ! ಲಿಂಗದಮುಂದೆ ನಾರಿಯರ ಸಂಗೀತ, ನರ್ತನಗಳನ್ನುಮಾಡಿಸುವುದರಿಂದ ಬರುವ ಫಲವೇನು ? ರಥೋತ್ಸವಾದಿಗಳನ್ನು ಮಾಡಿಸುವುದು, ಊರೊಳಗೆಲ್ಲಾ ಉತ್ಸವಮಾಡಿಸುವುದು, ಮತ್ತು ದೊಡ್ಡ ವೃಷಭಗಳನ್ನು ದಾನಮಾಡುವುದರಿಂದ ಎಂತಹ ಫಲವುಂಟು ? ॥೨೭-೨೮-೨೯॥

ಮೇಲ್ಕಟ್ಟನ್ನು ದಾನಮಾಡುವುದರಿಂದ ಬರುವ ಪುಣ್ಯವೇನು ? ಬಲಿ, ಹೋಮಗಳನ್ನೆಸಗುವುದರಿಂದೆಷ್ಟು ಫಲ ? ಮಹೇಶ್ವರನಿಗೆ ಗೋವು, ಕುದುರೆ,

ಸ್ವಯಂ ಮಾಲ್ಯೋಪಹಾರೇಣ ಪುಂಸಾಂ ಪುಣ್ಯಂ ಚ ಯದ್ಭವೇತ್ ।
ತತ್ಫಲನಾಪಹಾರೇಣ ಪುಣ್ಯಾಪುಣ್ಯಂ ಚ ಯದ್ಭವೇತ್ ॥೩೨॥

ಪ್ರಾತಃಕಾಲಾರ್ಚನೇ ಕಿಂ ವಾ ಮಧ್ಯಾಹ್ನೇ ವಾ ಫಲಂ ಕಿಯತ್ ।
ಸಾಯಂತನೇ ಪ್ರದೋಷೇ ವಾ ನಿಶೀಥೇ ವಾ ಮಹೇಶ್ವರ ॥೩೩॥

ಭೂತಾಸು ಸೋಮವಾರೇಷು ಅಷ್ಟಮೀಷು ಚ ಪರ್ವಸು ।
ಶಿವರಾತ್ರ್ಯಾಂ ಮಹಾದೇವ ಪೂಜಯಾ ಕಿಂ ಫಲಂ ಭವೇತ್ ॥೩೪॥

ತಿಥಿನಕ್ಷತ್ರಪೂಜಾಯಾ ಮಾಸಿಮಾಸ್ಯರ್ಚನೇ ಚ ಕಿಂ ।
ಮಾಸಿ ಮಾಸಿ ಚ ಪೂಜಾಸು ದ್ರವ್ಯೇ ಲಿಂಗೇಷು ಕಿಂ ಫಲಂ ॥೩೫॥

ಪ್ರದಕ್ಷಿಣನಮಸ್ಕಾರೇ ಸ್ತುತೌ ವಾ ಚ ಕಿಯದ್ಭವೇತ್ ।
ಶಿವಕ್ಷೇತ್ರೇ ನದೀತೀರೇ ಗೋಷ್ಠೇ ವಾ ವನಪರ್ವತೇ ॥೩೬॥

---

ಸೇವಕರು, ಆನೆಗಳು, ಮತ್ತು ಭೂ, ಈ ದಾನಗಳಿಂದ ಬರುವ ಪುಣ್ಯವಾವುದು ? ಮಹೇಶ್ವರನೇ ! ಅಲ್ಲದೆ ಹಳ್ಳಿ, ಊರು, ಪಟ್ಟಣ, ಮತ್ತು ದೇಶ ಈ ದಾನಗಳಿಂದೇನೇನು ಫಲವುಂಟು ? ಸಾವಿರ ಕನ್ನೈದಿಲೆಯ ಹೂಗಳ ಮಾಲೆಯನ್ನು ಸಮರ್ಪಿಸುವುದರಿಂದ ಫಲವೇನು ? ತಾನಾಗಿ ಹೂಮಾಲೆಯನ್ನರ್ಪಿಸುವುದರಿಂದ ಪುರುಷರಿಗೆ ಬರುವ ಪುಣ್ಯವೆಷ್ಟು ? ಅದನ್ನು ರಕ್ಷಿಸುವುದು ಮತ್ತು ಅಪಹರಿಸುವುದರಿಂದ ಬರಬಹುದಾದ ಪುಣ್ಯಪಾಪಗಳಾವುವು ? ||೩೦-೩೧-೩೨||

ಪರಮೇಶ್ವರನೇ ! ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಅಥವಾ ರಾತ್ರಿವೇಳೆಗಳಲ್ಲಿಯೂ, ಭೂತತಿಥಿಗಳು, ಸೋಮವಾರ, ಅಷ್ಟಮಿ, ಪರ್ವಕಾಲ ಮತ್ತು ಶಿವರಾತ್ರಿಗಳಲ್ಲಿಯೂ ಪೂಜೆಮಾಡುವುದರಿಂದ ಬರುವ ಪುಣ್ಯವೆಂತು ? ||೩೩-೩೪||

ತಿಥಿ, ನಕ್ಷತ್ರಗಳನ್ನು ಅನುಸರಿಸಿಮಾಡುವ ಮತ್ತು ಪ್ರತಿ ತಿಂಗಳು ಮಾಡುವ ಪೂಜೆಯಿಂದ ಫಲವೇನು ? ಪ್ರತಿತಿಂಗಳಲ್ಲಿಯೂ ಬೇರೆಬೇರೆ ಸಾಮಾನುಗಳಿಂದ ಶಿವಲಿಂಗಪೂಜೆಮಾಡುವುದರಿಂದೇನು ಫಲ ? ಪ್ರದಕ್ಷಿಣೆ, ನಮಸ್ಕಾರ, ಸ್ತುತಿ ಇವುಗಳಿಂದಲಾದರೂ ಬರುವ ಪುಣ್ಯವಾವುದು ? ಶಿವಕ್ಷೇತ್ರ, ನದೀದಡ, ಕೊಟ್ಟಿಗೆ, ಕಾಡು, ಪರ್ವತ, ಬಿಲ್ವವೃಕ್ಷಮೂಲ ಇಂತಹ ಸ್ಥಳಗಳಲ್ಲಿ ಮಾಡಿದ ಪೂಜೆಯಿಂದ ಎಷ್ಟುಫಲವು ಹೇಳಲ್ಪಟ್ಟಿದೆ? ಶಿವನಿಗೆ ಘೃತಕಂಬಲಪೂಜೆಗಳಿಂದಲೂ, ಪವಿತ್ರಾ

ಬಿಲ್ವಮೂಲೇಷು ಪೂಜಾಯಾಂ ಕಿಯತ್ಫಲಮುದೀರಿತಂ ।
ಘೃತಕಂಬಲಪೂಜಾಭಿಃ ಪವಿತ್ರಾರೋಪಣೇ ಶಿವೇ ॥೩೭॥

ಶ್ರಾವಣೇ ಕಾರ್ತಿಕೇ ವಾಪಿ ಪೂಜಯಾ ಕಿಂ ಫಲಂ ಭವೇತ್ ।
ಧನುರ್ಮಾಸ್ಯುಷಸಿ ಪ್ರೀತ್ಯಾ ಪೂಜಯಾ ಕಿಂ ಫಲಂ ಭವೇತ್ ॥೩೮॥

ಗ್ರಹಣೇ ಸೋಮಸೂರ್ಯಾಣಾಂ ವಿಷುವಾಯನಯೋರಪಿ ।
ಸಂಕ್ರಾಂತೌ ಚ ವ್ಯತೀಪಾತೇ ಮಹಾಪೂಜಾಪ್ರಕಲ್ಪನೇ ॥೩೯॥

ಸ್ನಾನಾಭ್ಯಂಗೇ ಕಿಂ ಫಲಂ ಸ್ಯಾದ್ವದ ಮೇ ಕರುಣಾಕರ ।
ಶಿವಾರಾಮಕರಾಣಾಂ ಚ ಪುಷ್ಪಾರ್ಥಂ ಶಿವಪೂಜನೇ ॥೪೦॥

ಕಿಂ ಬಿಲ್ವವನಕರ್ತ್ರೂಣಾಂ ವಾಪೀಕೂಪಕ್ರಿಯಾಸು ಚ ।
ಶಿವಾಲಯೇ ವಿಶೇಷೇಣ ಶಿವಕ್ಷೇತ್ರೇಷು ವಾ ಪಥಿ ॥೪೧॥

ಛಾಯಾವೃಕ್ಷಾಗ್ರಹಾರಾಣಾಂ ಕರಣೇ ಶಾಂಭವೇಷು ಚ ।
ವೇದಾನಾಂ ಪಾಠನೇ ವಾಪಿ ಬ್ರಹ್ಮಚಾರೀಸು ಪೋಷಣೇ ॥೪೨॥

---

ರೋಪಣೆಯಿಂದಲೂ ಬರುವ ಪುಣ್ಯವೆಷ್ಟು? ಶ್ರಾವಣ, ಅಥವಾ ಕಾರ್ತೀಕಮಾಸಗಳಲ್ಲಿಮಾಡುವ ಪೂಜೆಗಳಿಂದ ದೊರೆಯುವ ಪುಣ್ಯಫಲವೆಷ್ಟು? ॥೩೫-೩೬-೩೭॥

ಧನುರ್ಮಾಸದ ಉಷಃಕಾಲದಲ್ಲಿ ಪ್ರೀತಿಯಿಂದಮಾಡುವ ಪೂಜೆಯಿಂದೇನು ಫಲವುಂಟಾಗುವುದು? ಚಂದ್ರ, ಸೂರ್ಯಗ್ರಹಣಗಳು, ವಿಷುವತ್ಪುಣ್ಯಕಾಲ, ದಕ್ಷಿಣ ಮತ್ತು ಉತ್ತರಾಯಣಗಳು, ಸಂಕ್ರಮಣ, ವ್ಯತೀಪಾತ, ಈ ಕಾಲಗಳಲ್ಲಿ ಮಹಾಪೂಜೆಯಂಗೈದರೆ ಮತ್ತು ಸ್ನಾನ, ಅಭಿಷೇಕಾದಿಗಳನ್ನು ಮಾಡಿದರೆಷ್ಟು ಫಲವುಂಟು? ದಯಾಮಯನಾದ ಮಹಾದೇವನೆ! ಅದನ್ನು ನನಗೆ ಈಗಲೇ ಹೇಳು? ॥೩೮-೩೯॥

ಶಂಕರನೇ; ಶಿವನಪೂಜೆಗೆ ಹೂಬಿಡಲೆಂದು ಶಿವೋದ್ಯಾನಗಳನ್ನು ಮಾಡಿಸುವವರಿಗೂ, ಬಿಲ್ವಾರಣ್ಯಗಳನ್ನೇರ್ಪಡಿಸುವರಿಗೂ ಬರುವ ಪುಣ್ಯವಾವುದು? ಶಿವನಿಗಾಗಿ ಬಾವಿಕಟ್ಟೆಗಳನ್ನು, ವಿಶೇಷವಾಗಿ ಶಿವದೇವಾಲಯದಲ್ಲಿಯೂ, ಶಿವಕ್ಷೇತ್ರಗಳಲ್ಲಿಯೂ, ಮಾರ್ಗದಲ್ಲಿಯೂ ರಚಿಸುವುದರಿಂದುಂಟಾಗುವ ಪುಣ್ಯವಾವುದು? ಪರಶಿವಭಕ್ತರಿಗೋಸ್ಕರ ನೆಳಲುಂಟಾಗಲೆಂದು ಸಾಲುಮರ ಮತ್ತು ಅಗ್ರಹಾರಗಳನ್ನು ಕಟ್ಟಿಸುವುದು,

ಯತೀನಾಮನ್ನದಾನಾದಿಮಠೋಪಕರಣಾನಿ ಚ ।
ನಮಸ್ಕಾರೇ ತಥಾ ತೇಷಾಂ ಪ್ರತ್ಯುತ್ಥಾನಾಭಿವಾದನೇ ॥೪೩॥

ಭಿಕ್ಷಾಂ ಪ್ರತಿಶ್ರಯಂ ವಸ್ತ್ರಂ ದತ್ವಾಥ ಶಿವಯೋಗಿಷು ।
ಸರ್ವವರ್ಣೇ ಶಾಂಭವೇಷು ದತ್ವಾನ್ನಂ ಲಭತೇ ಫಲಂ ॥೪೪॥

ಶಿವಪ್ರೀತ್ಯರ್ಥಮೇವೇಹ ಮಖಾನಾಂ ಕರಣೇ ಚ ಕಿಂ ।
ಶಿವಭಕ್ತಾರ್ಚನೇ ಕಿಂ ಸ್ಯಾತ್ಫಲಂ ಮೇ ವದ ಶಂಕರ ॥೪೫॥

ತತ್ಸರ್ವಂ ಕೃಪಯಾ ಪುಣ್ಯಂ ಸುಸೂಕ್ಷ್ಮಮತಿ ತದ್ವದ ।
ಸುಗೋಪ್ಯಮಪಿ ದೇವೇಶ ಯದ್ಯನುಗ್ರಾಹ್ಯತಾಮಪಿ ॥೪೬॥

ನಾಹಂ ವದಾಮ್ಯಭಕ್ತೇಷು ಸತ್ಯಂ ಸತ್ಯಂ ಮಹೇಶ್ವರ ।
ಅಸ್ಮಿನ್ಕೈಲಾಸಸದನೇ ಮದನಾಂತಕರಪ್ರಿಯೇ ॥೪೭॥

---

ವಟುಗಳನ್ನು ಕಾಪಾಡಿ ಅವರಿಗೆ ವೇದಪಾಠಹೇಳಿಸುವುದು, ಇವುಗಳಿಂದೇನು ಫಲವುಂಟು ? ॥೪೦-೪೧-೪೨॥

ಸಂನ್ಯಾಸಿಗಳಿಗೆ ಅನ್ನದಾನವೇ ಮೊದಲಾದವುಗಳನ್ನು ನಡೆಸಿ ಮಠವೇ ಮುಂತಾದವುಗಳನ್ನೂ ಕಟ್ಟಿಸಿಕೊಟ್ಟು ಅವರನ್ನೆದುರುಗೊಂಡು, ಅವರಿಗೆ ಉಪಚಾರ ಮತ್ತು ನಮಸ್ಕಾರಗಳನ್ನು ಮಾಡುವುದರಿಂದೇನು ಪುಣ್ಯವುಂಟು ? ಶಿವಯೋಗಿಗಳಿಗೆ ಭಿಕ್ಷೆ, ವಸ್ತ್ರ ಮುಂತಾದವುಗಳನ್ನು ದಾನಮಾಡುವುದರಿಂದ ಬರುವ ಪುಣ್ಯವೇನು ? ಸಕಲ ವರ್ಣದ ಶಾಂಭವರಿಗೂ ಅನ್ನದಾನಮಾಡುವುದರಿಂದೇನು ಫಲವುಂಟು ? ಶಿವನ ಸಂತೋಷಾರ್ಥವಾಗಿ ಯಾಗಗಳನ್ನು ಮಾಡುವುದರಿಂದೇನು ಪುಣ್ಯವು ? ಶಂಕರನೆ, ನಿನ್ನ ಭಕ್ತರ ಪೂಜೆಯಿಂದಲೂ ಸಹ ಏನುಫಲವುಂಟೆಂಬುದನ್ನು ನನಗೆ ತಿಳಿಸು. ॥೪೩-೪೪-೪೫॥

ದೇವೇಶ್ವರನೆ, ಅತಿ ಸೂಕ್ಷ್ಮವಾಗಿದ್ದರೂ ಈ ಎಲ್ಲ ವಿಷಯವನ್ನೂ ನನಗೆ ಮರೆಮಾಚದೆಹೇಳು ; ಸ್ವಾಮಿಯೇ, ನಿನ್ನ ಅನುಗ್ರಹಕ್ಕೆ ಪಾತ್ರರಾದವರಿಗೆ ಮಾತ್ರ ಹೇಳಲುಯೋಗ್ಯವಾಗಿ ಅತಿ ರಹಸ್ಯವಾಗಿದ್ದರೂ ನನಗರುಹುವನಾಗು ; ಓ ಮಹೇಶ್ವರನೇ ! ಈವಿಷಯವನ್ನು ನಾನು ಸತ್ಯವಾಗಿಯೂ ಅಭಕ್ತರಿಗೆ ಹೇಳುವುದಿಲ್ಲ. ಮನ್ಮಥಾಂತಕನಿಗೆ ಪ್ರಿಯಕರವಾದ ಈ ಕೈಲಾಸಪರ್ವತದಲ್ಲಿ ನಿನ್ನ ಅಡಿದಾವರೆಗಳನ್ನು

ಶಪಾಮಿ ಶಿವಪಾದಾಬ್ಜೇ ತ್ರಿಃಸತ್ಯಂ ನಾತ್ರ ಸಂಶಯಃ ॥೪೮॥

॥ ದೇವ್ಯುವಾಚ ॥

ಏವಂ ಮೇ ಶಿವಧರ್ಮಸಾರಮತುಲಂ ಕುರ್ವಂತಿ ತೇಷಾಂ ಫಲಂ
ಕಿಂ ವಾ ಸ್ಯಾತ್ಪರಮೇಶ್ವರ ತ್ರಿಭುವನೇ ತನ್ಮೇ ವದೈವಾದರಾತ್ ।
ಏವಂ ತ್ವತ್ಪದಪೂಜನೈಕಮತಯೋ ಭಕ್ತಾಸ್ತ ಏವ ಧ್ರುವಂ
ಪುಣ್ಯಂ ಚಾದ್ಯ ದರಿದ್ರಕೇಷು ಚ ಕಥಂ ಪ್ರಾಪ್ನೋತಿ ತಚ್ಛಂಕರ ॥೪೯॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಪರ್ವತನಂದಿನೀಪ್ರಿಯವಚೋವೀಚೀಭಿರಾಪ್ಲಾವಿತಃ
ಸದ್ಯೋ ಹೃದ್ಯಮಭೇದ್ಯಮದ್ಭುತಮಹಾಧರ್ಮೇಷು ಸಾರಂ ಶಿವಃ ।
ಪ್ರಾಹಾನಂದಭರೇಣ ಭಾವಿತಮಹಾನಂದೈಕಸಾರಾದರೋ
ಮೋಚಾಧಿಕ್ಯಸುಧಾರ್ಝರೀಕೃತಮಹಾವಾಚಾ ನಗೇಂದ್ರಾತ್ಮಜಾಂ ॥೫೦॥

---

ಮುಟ್ಟಿ ಮೂರುಸಲ ಸತ್ಯವಾಗಿಯೂ ಪ್ರಮಾಣಮಾಡುತ್ತೇನೆ. ಇದರಲ್ಲಿ ಸಂದೇಹ ವಿಟ್ಟುಕೊಳ್ಳಬೇಕಾಗಿಲ್ಲವೆಂದು ದೇವಿಯು ಮಹೇಶನನ್ನು ಪ್ರಾರ್ಥಿಸಿದಳು. ॥೪೬-೪೭-೪೮॥

ಪರಮೇಶ್ವರನೆ, ಹೀಗೆ ಸಾಮ್ಯವಿಲ್ಲದ ಈ ಶಿವಧರ್ಮಸಾರವನ್ನು ಆಚರಿಸು ವವರಿಗೆ ಈ ಮೂರು ಲೋಕಗಳಲ್ಲಿಯೂ ಏನು ಫಲವುಂಟಾಗುವುದೆಂಬುದನ್ನು ನನಗೆ ಆದರದಿಂದ ಹೇಳುವನಾಗು? ದೇವ! ಈ ರೀತಿ ನಿನ್ನ ಪಾದಪೂಜೆಯೊಂದರ ಲ್ಲಿಯೇ ನೆಟ್ಟಮನಸ್ಸುಳ್ಳವರೇ ನಿಜವಾದ ಭಕ್ತರೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ. ಶಂಕರನೇ, ಈ ಪುಣ್ಯವು ಬಡಪಾಯಿಗಳಿಗೆ ಹೇಗೆತಾನೆ ಉಂಟಾದೀತು? ॥೪೯॥

ಈ ರೀತಿ ಪಾರ್ವತಿಯ ಪ್ರಿಯನುಡಿಗಳೆಂಬ ತರಂಗಗಳಿಂದ ತೊಯ್ಯಲ್ಪಟ್ಟ ಪರಶಿವನು ಆ ಕೂಡಲೆ ಮನೋಹರವೂ, ಅಭೇದ್ಯವೂ, ಅದ್ಭುತವೂ ಆದ ಮಹಾ ಧರ್ಮಸಾರವನ್ನು ಆನಂದಭರಿತನಾಗಿ, ಆನಂದಮಯವಾದ ಮನಸ್ಸಿನಿಂದ ಕೂಡಿ ಬಾಳೆಹಣ್ಣು ಮತ್ತು ಅಮೃತಗಳನ್ನೂ ತಿರಸ್ಕರಿಸುತ್ತಿರುವ ಮಧುರನುಡಿಗಳಿಂದ ಪರ್ವತರಾಜಕುಮಾರಿಗೆ ಇಂತೆಂದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೫೦॥

ಇತಿ ಶ್ರೀ ಶಿವರಹಸ್ಯೇ ಮಹಾದೇವಾಖ್ಯೇ ಏಕಾದಶಾಂಶೇ
ಶ್ರೀ ಶಿವಗೌರೀಸಂವಾದೇ ಶಿವಧರ್ಮಪ್ರಶ್ನವರ್ಣನಂ ನಾಮ
ತೃತೀಯೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದ ಮಹಾದೇವಸಂಜ್ಞಕವಾದ ಹನ್ನೊಂದನೆಯ ಅಂಶದಲ್ಲಿ ಶ್ರೀಶಿವ ಮತ್ತು ಗೌರಿಯರ ಸಂವಾದದಲ್ಲಿ ಪಾರ್ವತಿಕೃತ ಶಿವಧರ್ಮಪ್ರಶ್ನೆಯ ವರ್ಣನೆಯೆಂಬ ಮೂರನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಚತುರ್ಥೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

ಶೃಣು ಪರ್ವತರಾಜೇಂದ್ರತನಯೇ ಗೋಪ್ಯಮಪ್ಯಥ ।
ಪ್ರಕಾಶ್ಯಂ ತ್ವಯಿ ಮೇ ಸತ್ಯಂ ತ್ವತ್ತಃ ಪ್ರಿಯತರಾ ನ ಮೇ ॥೧॥

ತೇನ ತೇ ಚಾಖಿಲಂ ವಕ್ಷ್ಯೇ ಶೃಣುಷ್ವೈಕಾಗ್ರಮಾನಸಾ ।
ಪೂರ್ಣಮೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ॥೨॥

ವಿವಾದಃ ಸುಮಹಾನಾಸೀದ್ಬ್ರಹ್ಮವಿಷ್ಣ್ವೋಃ ಪರಸ್ಪರಂ ।
ಅಹಂ ಕರ್ತಾಹ್ಯಹಂ ಕರ್ತಾ ನ ಮತ್ತೋಽನ್ಯೋ ಜಗತ್ಪಿತಾ ॥೩॥

---

## ನಾಲ್ಕನೆಯ ಅಧ್ಯಾಯ

ಪಾರ್ವತಿಯೇ, ಕೇಳು; ನೀನು ಕೇಳಿದ ಪ್ರಶ್ನೆಗೆ ಉತ್ತರವು ಅತಿರಹಸ್ಯವಾಗಿದ್ದರೂ ನಿನಗೆ ಅದನ್ನು ಈಗ ಪ್ರಕಾಶಪಡಿಸುವೆನು. ಸತ್ಯವಾಗಿ ನಿನಗಿಂತಲೂ ನನಗೆ ಪ್ರಿಯಕರರಾದವರು ಬೇರೆ ಯಾರೂ ಇಲ್ಲ. ನಿನಗೆ ಸಕಲವನ್ನೂ ಈಗ ಹೇಳುವೆನು; ನೆಟ್ಟಮನಸ್ಸಿನಿಂದ ಲಾಲಿಸು, ಎಂದು ಪರಶಿವನು ದೇವಿಗೆ ಇಂತೆಂದನು; ಹಿಂದೆ ಸಕಲ ಚರಾಚರಾತ್ಮಕವಾದ ಪ್ರಪಂಚವೂ ಪ್ರಳಯದಲ್ಲಿ ಸೇರಿ ಭಯಂಕರವಾದ ನೀರೊಂದೇ ಎಲ್ಲೆಲ್ಲೂ ವ್ಯಾಪಿಸಿರಲು ಬ್ರಹ್ಮವಿಷ್ಣುಗಳಿಬ್ಬರಿಗೂ ಪರಸ್ಪರವಾಗಿ 'ನಾನು ಜಗತ್ಕರ್ತನು, ನಾನು ಜಗತ್ಸ್ವಾಮಿಯೆಂದು ವಿವಾದವುಂಟಾಗಿ ಬ್ರಹ್ಮನು ವಿಷ್ಣುವನ್ನೂ, ವಿಷ್ಣುವು ಬ್ರಹ್ಮನನ್ನೂ ತಿರಸ್ಕರಿಸಿದರು. ॥೧-೨-೩॥

ಏವಮಾಹ ಹರಿಂ ಬ್ರಹ್ಮಾಬ್ರಹ್ಮಾಣಂ ಚ ಹರಿಸ್ತಥಾ ।
ತಯೋರ್ದರ್ಪಾಪಹಾರಾಯ ಪ್ರಬೋಧಾರ್ಥಂ ಚ ದೇವಯೋಃ ॥೪॥

ಮಧ್ಯೇ ಸಮಭವಲ್ಲಿಂಗಮೈಶ್ವರಂ ತೈಜಸಂ ಪರಂ ।
ಜ್ವಾಲಮಾಲಾವೃತಂ ದಿವ್ಯಮಪ್ರಮೇಯಮನೂಪಮಂ ॥೫॥

ಯೋಜನಾಯುತವಿಸ್ತೀರ್ಣಂ ಸ್ಥಿತಂ ತತ್ರಾಮಲಾಂಭಸಿ ।
ಜ್ವಾಲಾಭಿರ್ಮೋಹಿತೌ ತಸ್ಯ ಲಿಂಗಸ್ಯ ಸುರಸತ್ತಮೌ ॥೬॥

ತದಾ ವಿಸ್ಮಯಮಾಪನ್ನೌ ಪಶ್ಯಂತಾವಮರಾಧಿಪೌ ।
ಗತಾವೂರ್ಧ್ವಮಧಸ್ತಸ್ಯ ಸಂಪ್ರಧಾರ್ಯ ಪರಸ್ಪರಂ ॥೭॥

ಅಧೋ ದ್ರಷ್ಟುಂ ಗತೋ ವಿಷ್ಣುರಗಾದೂರ್ಧ್ವಂ ಪಿತಾಮಹಃ ।
ಅದೃಷ್ಟ್ವಾ ತಮಧಶ್ಚೋರ್ಧ್ವಂ ತೌ ಸಮೇತ್ಯ ಪರಸ್ಪರಂ ॥೮॥

ಕೃತಾಂಜಲಿಪುಟೌ ಭೂತ್ವಾ ಲಿಂಗಂ ತುಷ್ಟುವತುಸ್ತದಾ ॥೯॥

---

ಆ ಬ್ರಹ್ಮವಿಷ್ಣುಗಳ ಅಹಂಕಾರವನ್ನು ಹೋಗಲಾಡಿಸುವುದಕ್ಕೋಸ್ಕರವೂ ಅವರಿಗೆ ಜ್ಞಾನೋದಯವನ್ನುಂಟುಮಾಡುವುದಕ್ಕೂ, ಅವರಿಬ್ಬರ ಮಧ್ಯದಲ್ಲಿ ತೈಜಸಾತ್ಮಕವೂ ಶ್ರೇಷ್ಠವೂ ಜ್ವಾಲೆಗಳ ಸಮೂಹದಿಂದ ವ್ಯಾಪೃತವೂ, ಪ್ರಮಾಣಾತೀತವೂ, ಅಸದೃಶವೂ, ದಿವ್ಯವೂ ಆದ ಈಶ್ವರಲಿಂಗವು ಹತ್ತುಸಾವಿರಯೋಜನ ವಿಸ್ತೀರ್ಣವುಳ್ಳದ್ದಾಗಿ ಪರಿಶುದ್ಧವಾದ ನೀರಿನಲ್ಲಿ ಕಾಣಿಸಿಕೊಂಡಿತು. ಆಗ ಶಿವಲಿಂಗದ ಜ್ವಾಲೆಗಳ ಗುಂಪಿನಿಂದ ಆ ದೇವೋತ್ತಮರಿಬ್ಬರೂ ಮೂರ್ಛಿತರಾದರು. ||೪-೫-೬||

ಆಗ ಆ ದೇವತೋತ್ತಮರಿಬ್ಬರೂ ಆಶ್ಚರ್ಯಗೊಂಡು, ಒಬ್ಬರನ್ನೊಬ್ಬರು ನೋಡುತ್ತಾ ತಮ್ಮಲ್ಲಿಯೇ ನಿಶ್ಚಯಿಸಿಕೊಂಡು ಆ ಲಿಂಗದ ಕೆಳಭಾಗವನ್ನು ಪರೀಕ್ಷಿಸಲು ವಿಷ್ಣುವೂ, ಮೇಲ್ಭಾಗವನ್ನು ನೋಡಲು ಬ್ರಹ್ಮನೂ ಹೊರಟರು. ಕೊನೆಗೆ ಆ ತೈಜಸಲಿಂಗದ ಕೆಳಮೇಲ್ಭಾಗಗಳನ್ನು ಕಾಣದೇ ಇಬ್ಬರೂ ಹಿಂತಿರುಗಿ ಬಂದು ಒಟ್ಟಿಗೆ ಕೈಮುಗಿದುಕೊಂಡು ಆಗ ಶಿವಲಿಂಗವನ್ನು ಈರೀತಿ ಸ್ತೋತ್ರ ಮಾಡಿದರು ||೭-೮-೯||

॥ ಬ್ರಹ್ಮವಿಷ್ಣೂ ಊಚತುಃ ॥

ಅನಾದಿದೇವದೇವೇಶ ವಿಶ್ವೇಶ್ವರ ಮಹೇಶ್ವರ ।
ಸರ್ವಜ್ಞ ಜ್ಞಾನವಿಜ್ಞಾನಪ್ರದಾನೇಶ ನಮೋಽಸ್ತುತೇ ॥೧೦॥

ಅನೇಕಕಾಂತಿಸಂಪನ್ನ ಅನಂತಾಸನಸಂಸ್ಥಿತ ।
ಅನಂತಶಕ್ತಿಸಂಭೋಗ ಪರಮೇಶ ನಮೋಽಸ್ತುತೇ ॥೧೧॥

ಪರಾತ್ಪರತರಾತೀತ ಉತ್ಪತ್ತಿಸ್ಥಿತಿಕಾರಣ ।
ಸರ್ವಾರ್ಥಸಾಧನೋಪಾಯ ವಿಶ್ವೇಶ್ವರ ನಮೋಽಸ್ತುತೇ ॥೧೨॥

ಬಹುರೂಪ ಮಹಾರೂಪ ಸರ್ವರೂಪೋತ್ತಮೋತ್ತಮ ।
ಪಶುಪಾಶಾರ್ಣವಾತೀತ ವರಾರೋಹ ನಮೋಽಸ್ತುತೇ ॥೧೩॥

ಸ್ವಭಾವನಿರ್ಮಲಾಭೋಗ ಸರ್ವಸ್ವಾಮಿನ್ಮಹೇಶ್ವರ ।
ಯೋಗಯೋಗಿನ್ಮಹಾಯೋಗಿನ್ಯೋಗೇಶ್ವರ ನಮೋಽಸ್ತುತೇ ॥೧೪॥

---

ಅನಾದಿದೇವನೆ, ದೇವತಾಧಿಪನೆ, ಜಗದೊಡೆಯನೆ, ಮಹೈಶ್ವರ್ಯಸಂಪನ್ನನೆ, ಸರ್ವಜ್ಞನೆ, ಜ್ಞಾನ ವಿಜ್ಞಾನಗಳನ್ನು ಭಕ್ತರಿಗೆ ದಯಪಾಲಿಸುವ ಸ್ವಾಮಿಯೇ, ನಿನಗೆ ನಮಸ್ಕಾರಮಾಡುತ್ತೇವೆ. ಅನೇಕ ಕಾಂತಿಯುಕ್ತನೆ, ಅಶೇಷಾಸನದಲ್ಲಿ ಮಂಡಿಸಿದವನೆ, ಅಪಾರಶಕ್ತಿಸಂಪನ್ನನೆ, ಪರಮೇಶ್ವರನೆ, ನಿನಗೆ ಪ್ರಣಾಮವು. ॥೧೦-೧೧॥

ಪರಾತ್ಪರವೆನಿಸಿದುದನ್ನೂ ಮೀರಿದವನೆ! ಪ್ರಪಂಚದ ಸೃಷ್ಟಿಸ್ಥಿತಿಗಳಿಗೆ ಕಾರಣಭೂತನೆ, ಸಕಲ ಇಷ್ಟಾರ್ಥಗಳ ಸಾಧನೆಗೂ ಉಪಾಯಭೂತನಾಗಿರುವವನೆ, ಲೋಕಸ್ವಾಮಿಯೆ, ನಿನಗೆ ಪ್ರಣಾಮವು. ಅನೇಕರೂಪಗಳುಳ್ಳವನೆ, ಸಮಸ್ತ ರೂಪಗಳಿಗಿಂತಲೂ ಅತ್ಯುತ್ತಮನೆನಿಸಿರುವವನೆ, ಪ್ರಾಣಿಗಳ ಜನನ ಮರಣರೂಪವಾದ ಬಂಧನವೆಂಬ ಸಮುದ್ರವನ್ನೂ ಮೀರಿದವನೆ, ದಿವ್ಯವಾದ ವಾಹನವುಳ್ಳವನೆ, ನಿನಗೆ ನಮಸ್ಕರಿಸುವೆವು. ॥೧೨-೧೩॥

ಸ್ವಭಾವವಾಗಿಯೇ ಶುದ್ಧವಾದ ದೇಹವುಳ್ಳವನೆ, ಸಕಲಪ್ರಪಂಚಕ್ಕೂ ಒಡೆಯನಾದ ಮಹೇಶ್ವರನೆ, ಯೋಗಾಭ್ಯಾಸಿಯೆ, ಮಹಾಯೋಗಿಯಾದವನೆ, ಯೋಗೇಶ್ವರ ಸ್ವಾಮಿಯೆ, ನಿನಗೆ ನಮಸ್ಕಾರವು. ನಿರ್ಲಿಪ್ತನೆ, ಆಧಾರರಹಿತನೆ, ಆದರೆ ತಾನುಮಾತ್ರ

ನಿರಂಜನನಿರಾಧಾರ ಸ್ವಾಧಾರ ನಿರುಪಪ್ಲವ ।
ಪ್ರಸನ್ನ ಪರಮೇಶಾನ ಯೋಗೇಶ್ವರ ನಮೋಽಸ್ತು ತೇ ॥೧೫॥

ಜಿಹ್ವಾಚಪಲಭಾವೇನ ಯದಿದಂ ಗದಿತಂ ಮಯಾ ।
ತತ್ಕ್ಷಂತವ್ಯಮುಸೌಯುಸ್ಯ ಕಸ್ತೇ ಸ್ತೌತಿ ಗುಣಾರ್ಣವಂ ॥೧೬॥

ನಮಸ್ತೇ ನಾಮಲಿಂಗಾಯ ಶಿವಲಿಂಗಾಯ ತೇ ನಮಃ ।
ನಮಸ್ತೇ ಗೂಢಲಿಂಗಾಯ ಪರಲಿಂಗಾಯ ಭೋಗಿನೇ ॥೧೭॥

ನಮಸ್ತೇ ಜ್ಯೋತಿರ್ಲಿಂಗಾಯ ದೇವಲಿಂಗಾಯ ಲಿಂಗಿನೇ ।
ನಮಸ್ತೇ ಸೂಕ್ಷ್ಮಲಿಂಗಾಯ ಬುದ್ಧಿಲಿಂಗಾಯ ಬುದ್ಧಯೇ ॥೧೮॥

ನಮಃ ಪರ್ವತಲಿಂಗಾಯ ಭಾವಲಿಂಗಾಯ ತೇ ನಮಃ ।
ಜಗತ್ಕಾರಣಲಿಂಗಾಯ ಜಗತಾಂ ಪತಯೇ ನಮಃ ॥೧೯॥

ಆವಯೋಃ ಪತಯೇ ಚೈವ ಯತೀನಾಂ ಪತಯೇ ನಮಃ ।
ಸರ್ವೇಷಾಂ ಪತಯೇ ಚೈವ ದೇವಾನಾಂ ಪತಯೇ ನಮಃ ॥೨೦॥

ಜ್ಞಾನಾನಾಂ ಪತಯೇ ಚೈವ ಮೋಕ್ಷಾಣಾಂ ಪತಯೇ ನಮಃ ।
ಜನಾನಾಂ ಪತಯೇ ಚೈವ ಧರ್ಮಾಣಾಂ ಪತಯೇ ನಮಃ ॥೨೧॥

---

ಸಕಲ ಬ್ರಹ್ಮಾಂಡಕ್ಕೂ ಆಧಾರವಾಗಿರುವವನೆ, ನಾಶರಹಿತನೆ, ಪ್ರಸಾದಗುಣ ಪೂರ್ಣನೆ, ಪರಮೇಶನೆ, ಯೋಗೀಶನೆ, ನಿನಗೆ ಪ್ರಣಾಮವು. ॥೧೪-೧೫॥

ಮಹೇಶ್ವರನೇ, ನಾಲಿಗೆಯ ಚಾಪಲ್ಯದಿಂದ ನಾವು ಹೇಳಿದ ಅಹಂಕಾರದ ಮಾತನ್ನು ಕ್ಷಮಿಸು; ಮಹಾದೇವನೇ, ಗುಣಗಳಿಗೆ ಸಮುದ್ರದಂತಿರುವ ನಿನ್ನನ್ನು ಯಾರುತಾನೇ ಸ್ತುತಿಸಬಲ್ಲರು ? ನಾಮಲಿಂಗಸ್ವರೂಪನಾದ ನಿನಗೆ ನಮಸ್ಕಾರ; ಶಿವಲಿಂಗ, ಗೂಢಲಿಂಗ ಮತ್ತು ಪರಮಲಿಂಗರೂಪಿಯಾದ ನಿನಗೆ ಪ್ರಣಾಮವು; ॥೧೬-೧೭॥

ಜ್ಯೋತಿರ್ಲಿಂಗರೂಪಿಯೂ, ದೇವಲಿಂಗಾತ್ಮಕನೂ, ಲಿಂಗರೂಪಿಯೂ, ಸೂಕ್ಷ್ಮಲಿಂಗ, ಬುದ್ಧಿಲಿಂಗ, ಪರ್ವತಲಿಂಗ, ಭಾವಲಿಂಗ, ಲೋಕಕಾರಣ ಲಿಂಗರೂಪಿಯಾದ ನಿನಗೆ ಪ್ರಣಾಮವು; ಜಗದೊಡೆಯನೂ, ನಮ್ಮಿಬ್ಬರ ಸ್ವಾಮಿಯೂ, ಯತಿಗಳೊಡೆಯನೂ, ಸರ್ವಸ್ವಾಮಿಯೂ, ದೇವತೆಗಳೊಡೆಯನೂ,

ಲಿಂಗೋತ್ಪತ್ತಿಸ್ತವಂ ಪುಣ್ಯಂ ಯಃ ಶೃಣೋತಿ ನರಃ ಸದಾ ।
ನೋತ್ಪದ್ಯತೇತಿಸಂಸಾರೇ ಸ್ಥಾನಮಾಪ್ನೋತಿ ಶಾಶ್ವತಂ ॥೨೨॥

ತಸ್ಮಾತ್ಸರ್ವಪ್ರಯತ್ನೇನ ಶೃಣುಯಾದ್ವಾಚಯೇತ್ತಥಾ ।
ಪಾಪಕಂಚುಕಮುತ್ಸೃಜ್ಯ ಪ್ರಾಪ್ನೋತಿ ಪರಮಂ ಪದಂ ॥೨೩॥

ಏವಂ ಸ್ತುತ್ವಾ ಮಹಾದೇವಂ ಪ್ರಣಮ್ಯ ಶಿರಸಾಪ್ರಭುಂ ।
ಬ್ರಹ್ಮವಿಷ್ಣೂ ಸಮಾಪನ್ನೌ ಭಕ್ತ್ಯಾ ಪರಮಯಾ ಯುತೌ ॥೨೪॥

ಲಿಂಗಮಧ್ಯೇ ಪರಂ ಲಿಂಗಂ ಸ್ಥಿತಂ ಪ್ರಾದೇಶಸಂಮಿತಂ ।
ಸಮಾಧಿಸ್ತೋತ್ರಸಂಪನ್ನೌ ದೃಷ್ಟವಂತೌ ಶಿವಾತ್ಮಕಂ ॥೨೫॥

ನೈವ ತತ್ಕಾಂಚನಂ ರೌಪ್ಯಂ ನ ಭೂಸ್ಫಟಿಕಮೌಕ್ತಿಕಂ ।
ಲಕ್ಷ್ಯಮಾತ್ರಂ ಸ್ಥಿತಂ ಶಾಂತಂ ಕೇವಲಂ ತಚ್ಛಿವಾತ್ಮಕಂ ॥೨೬॥

---

ಜ್ಞಾನ, ಮೋಕ್ಷ, ಜನ ಮತ್ತು ಧರ್ಮಗಳಿಗೀಶ್ವರನೂ ಆದ ನಿನಗೆ ನಮಸ್ಕಾರವು, ಎಂದು ಬ್ರಹ್ಮವಿಷ್ಣುಗಳಿಬ್ಬರೂ ಶಂಕರನನ್ನು ಸ್ತುತಿಸಿದರು. ॥೧೮-೧೯-೨೦-೨೧॥

ಪುಣ್ಯಕರವಾದ ಈ ಲಿಂಗೋತ್ಪತ್ತಿಸ್ತೋತ್ರವನ್ನು ಯಾವಾಗಲೂ ಕೇಳುವ ಮಾನವನು ಘೋರವಾದ ಸಂಸಾರದಲ್ಲಿ ಜನ್ಮತಾಳದೇ ಶಾಶ್ವತವಾದ ಮುಕ್ತಿಸ್ಥಾನ ವನ್ನೈದುವನು. ಆದ್ದರಿಂದ ಸಕಲರೀತಿಯಿಂದಲೂ ಈ ಲಿಂಗೋತ್ಪತ್ತಿಸ್ತವವನ್ನು ಕೇಳುವವನೂ, ಓದುವವನೂ ಸಹ ಪಾಪವೆಂಬ ಕವಚವನ್ನು ತೊರೆದು ಪರಮ ಪದವನ್ನೈದುವನು. ॥೨೨-೨೩॥

ಹೀಗೆ ಮಹಾದೇವನನ್ನು ಸ್ತೋತ್ರಮಾಡಿ, ಆ ಪ್ರಭುವಿಗೆ ತಲೆಬಾಗಿ ನಮಸ್ಕರಿಸಿ, ಬ್ರಹ್ಮವಿಷ್ಣುಗಳಿಬ್ಬರೂ ಪರಮಭಕ್ತಿಸಂಪನ್ನರಾಗಿ ಲಿಂಗಮಧ್ಯದಲ್ಲಿ ಜ್ಯೋತಿರ್ದ್ವಾಕಾರದಲ್ಲಿ ಶಿವಸ್ವರೂಪವಾಗಿರುವ ದಿವ್ಯತೇಜಸ್ಸನ್ನು ಭಕ್ತಿಸ್ತುತಿ ಯುಕ್ತರಾದ ಆವರು ಆಶ್ಚರ್ಯದಿಂದ ನೋಡಿದರು. ॥೨೪-೨೫॥

ಆ ಶಿವಾಕಾರವು ಚಿನ್ನ, ಬೆಳ್ಳಿ, ಮೃತ್ತಿಕೆ, ಸ್ಫಟಿಕ ಮತ್ತು ಇವುಗಳಲ್ಲಿ ಯಾವುದ ರಿಂದಲೂ ರಚಿತವಾಗಿರಲಿಲ್ಲ. ಶಾಂತವೂ, ಗೋಚರವಾಗುವಷ್ಟುಮಾತ್ರವೂ, ಆದ ಕೇವಲ ಶಿವಸ್ವರೂಪವಾಗಿದ್ದಿತು. ಹಾಗೆ ಆ ಬ್ರಹ್ಮವಿಷ್ಣುಗಳಿಂದ ಸ್ತುತಿಸಲ್ಪಟ್ಟ

ತಯೋಸ್ತುಷ್ಟೋ ಮಹಾದೇವಃ ಪ್ರದಾಯ ವರಮುತ್ತಮಂ ।
ಕಾರಣತ್ವಮನುಜ್ಞಾಯ ತತ್ರೈವಾಂತರಧೀಯತ ॥೨೭॥

ತದಾಪ್ರಭೃತಿ ಬ್ರಹ್ಮಾದ್ಯಾಃ ಪ್ರತಿಷ್ಠಾಪ್ಯ ಸುರಾಸುರಾಃ ।
ತಲ್ಲಿಂಗಾನುಕೃತಿಂ ಲಿಂಗಂ ಪೂಜಯೇಯುಸ್ತಪೋಧನಾಃ ॥೨೮॥

ಪರಂ ಶುದ್ಧಶರೀರಂ ಚ ಲಿಂಗಕ್ಷೇತ್ರಮನಾದಿಮತ್ ।
ಯದಾದ್ಯಮೈಶ್ವರಂ ತೇಜಸ್ತಲ್ಲಿಂಗಂ ಪಂಚಸಂಜ್ಞಿತಂ ॥೨೯॥

ಕಲ್ಪಾಂತೇ ತಸ್ಯಲಿಂಗಸ್ಯ ಲೀಯಂತೇ ಸರ್ವದೇವತಾಃ ।
ದಕ್ಷಿಣೇ ಲೀಯತೇ ಬ್ರಹ್ಮಾ ವಾಮತಸ್ತು ಜನಾರ್ದನಃ ॥೩೦॥

ಹೃದಯೇ ಚೈವ ಗಾಯತ್ರೀ ಸರ್ವವೇದೋತ್ತಮೋತ್ತಮಾ ।
ಮೂರ್ಧ್ನಿ ಲೀಯಂತಿ ವೈವೇದಾಃ ಷಟ್‌ಷಡಂಗಪದಕ್ರಮಾಃ ॥೩೧॥

ಜಠರೇ ಲೀಯತೇ ಸರ್ವಂ ಜಗತ್ಸ್ಥಾವರಜಂಗಮಂ ।
ಉತ್ಪದ್ಯತೇ ಪುನಸ್ತಸ್ಮಾದ್ಬ್ರಹ್ಮಾದಿಸಚರಾಚರಂ ॥೩೨॥

---

ಮಹೇಶನು, ಅವರಿಬ್ಬರಿಗೂ ಉತ್ತಮ ವರವನ್ನಿತ್ತು ಆ ರೂಪವೇ ಜಗತ್ತಿಗೆ ಕಾರಣ ಎಂಬುದನ್ನು ತಿಳಿಸಿ ಅಲ್ಲಿಯೇ ಮರೆಯಾದನು. ॥೨೬-೨೭॥

ಅದು ಮೊದಲುಗೊಂಡು ಬ್ರಹ್ಮನೇ ಮೊದಲಾದ ದೇವದಾನವರೆಲ್ಲರೂ ಅದೇ ಲಿಂಗದ ಆಕೃತಿಯುಳ್ಳ ಶಿವಲಿಂಗವನ್ನು ಪೂಜಿಸಲಾರಂಭಿಸಿದರು. ಓ ತಪಸ್ವಿಗಳಿರಾ, ತುಂಬಾ ಶುದ್ಧವೂ, ಅನಾದಿಯೂ, ಲಿಂಗಕ್ಷೇತ್ರವೂ ಮೊದಲನೆಯ ಈಶ್ವರನ ತೇಜೋರೂಪವೂ ಆದ ಆ ಲಿಂಗವು ಈಗ " ಪಂಚಲಿಂಗ "ವೆಂದು ಹೇಳಲ್ಪಟ್ಟಿದೆ.॥೨೮-೨೯॥

ಪ್ರಳಯದ ಕೊನೆಯಲ್ಲಿ ಎಲ್ಲಾ ದೇವತೆಗಳೂ ಆ ಲಿಂಗದಲ್ಲಿ ಐಕ್ಯವಾಗುತ್ತಾರೆ (ಅಡಗುತ್ತಾರೆ). ಲಿಂಗದ ಬಲಗಡೆ ಬ್ರಹ್ಮನೂ, ಎಡಗಡೆ ವಿಷ್ಣುವೂ, ಹೃದಯದಲ್ಲಿ ಸಕಲ ವೇದೋತ್ತಮಳೆನಿಸಿದ ಗಾಯತ್ರಿಯೂ, ತಲೆಯಲ್ಲಿ, ಶಿಕ್ಷಾವ್ಯಾಕರಣಾದಿ ಷಡಂಗಗಳೂ ಪದಕ್ರಮಸಮೇತವಾದ ವೇದಗಳೂ, ಹೊಟ್ಟೆಯಲ್ಲಿ ಚರಾಚರಾತ್ಮಕವಾದ ಸಕಲ ಪ್ರಪಂಚವೂ ಅಡಗುತ್ತವೆ. ಅನಂತರ ಈಶ್ವರೇಚ್ಛೆಯಿಂದ ಬ್ರಹ್ಮನೇ ಮೊದಲಾದ ಚರಾಚರಾತ್ಮಕ ಜಗತ್ತೆಲ್ಲವೂ ಪುನಃ ಉತ್ಪನ್ನವಾಗುತ್ತದೆ॥೩೦-೩೧-೩೨॥

ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ ।
ಆಲಯಃ ಸರ್ವಭೂತಾನಾಂ ಲಯನಾಲ್ಲಿಂಗಮುಚ್ಯತೇ ॥೩೩॥

ತಸ್ಮಾಲ್ಲಿಂಗಂ ಪ್ರತಿಷ್ಠಾಪ್ಯ ಸರ್ವದೇವಭವೋದ್ಭವಂ ।
ಸ್ಥಾಪಿತಂ ತೇನ ಸರ್ವಂ ಸ್ಯಾತ್ಪೂಜಿತಂ ಚ ನ ಸಂಶಯಃ ॥೩೪॥

ಕೃತಾಂಜಲಿಪುಟೋ ವಿಷ್ಣುರ್ಬ್ರಹ್ಮಾ ಚಾಪಿ ವಿಶೇಷತಃ ।
ಪೂರ್ವಂ ಲಿಂಗಂ ಸಮಭ್ಯರ್ಚ್ಯ ಪಶ್ಚಾತ್ಕರ್ಮಾಣಿ ಚಕ್ರತುಃ ॥೩೫॥

ಬ್ರಹ್ಮಾ ಬ್ರಹ್ಮಾಕ್ಷರೈರ್ದಿವ್ಯೈರ್ಲಿಂಗಂ ಪೂಜಯತೇ ಸದಾ ।
ಗಂಧಪುಷ್ಪಾದಿಭಿರ್ನಿತ್ಯಂ ವಿಷ್ಣುಃ ಪೂಜಯತೇ ಸದಾ ॥೩೬॥

ಬ್ರಹ್ಮಾ ಶೈಲಮಯಂ ಭಕ್ತ್ಯಾ ಲಿಂಗಂ ಪೂಜಯತೇ ಸದಾ ।
ತಸ್ಯ ಸಂಪೂಜನಾದೇವ ಪ್ರಾಪ್ತಂ ಬ್ರಹ್ಮತ್ವಮುತ್ತಮಂ ॥೩೭॥

---

ಆಕಾಶವನ್ನೇ ಶಿವಲಿಂಗವೆಂದೂ ಹೇಳುವರು. ಭೂಮಿಯೇ ಅದಕ್ಕೆ ಪೀಠಸ್ಥಾನವಾಗಿದೆ. ಸಕಲಪ್ರಾಣಿಗಳಿಗೂ ಆಶ್ರಯವಾದ ಈ ಲಿಂಗವು ಜಗತ್ಪ್ರಳಯಕಾರಕವೆನಿಸಿ ಅಥವಾ ಜಗದಾಶ್ರಯವಾಗಿರುವುದರಿಂದ ಲಿಂಗವೆನಿಸುವುದು. ಆದ್ದರಿಂದ ಸಕಲ ದೇವತೆಗಳ ಉತ್ಪತ್ತಿಗೂ ಆಶ್ರಯಸ್ಥಾನವಾಗಿರುವ ಲಿಂಗವನ್ನು ಪ್ರತಿಷ್ಠೆಮಾಡುವವನು ಎಲ್ಲವನ್ನೂ ಸ್ಥಾಪಿಸಿ ಪೂಜೆಮಾಡಿದ ಫಲವನ್ನೂ ತಪ್ಪದೇ ಪಡೆಯುವನು. ॥೩೩-೩೪॥

ಬ್ರಹ್ಮ ಮತ್ತು ವಿಷ್ಣುಗಳಿಬ್ಬರೂ ಕೈಮುಗಿದುಕೊಂಡು ವಿಶೇಷವಾಗಿ ಮೊದಲು ಶಿವಲಿಂಗವನ್ನು ಪೂಜಿಸಿ ಅನಂತರ ತಮ್ಮ ಕೆಲಸಗಳಲ್ಲಿ ತೊಡಗಿದರು. ಆದಾದನಂತರ ಬ್ರಹ್ಮನು ಯಾವಾಗಲೂ ಲಿಂಗವನ್ನು ದಿವ್ಯವಾದ ಪಂಚಾಕ್ಷರಗಳಿಂದ ಪೂಜೆಮಾಡುತ್ತಿರುವನು. ವಿಷ್ಣುವೂ ಸಹ ಸದಾ ಗಂಧಪುಷ್ಪಾಕ್ಷತೆಗಳಿಂದ ನಿತ್ಯವೂ ಶಿವಲಿಂಗಾರ್ಚನೆಗೈಯುತ್ತಿರುವನು. ॥೩೫-೩೬॥

ಬ್ರಹ್ಮನು ಯಾವಾಗಲೂ ಭಕ್ತಿಯಿಂದ ಶಿಲೆಯ ಲಿಂಗವನ್ನು ಪೂಜಿಸಿ, ಆದರಿಂದ ಉತ್ತಮವಾದ ಬ್ರಹ್ಮಪದವಿಯನ್ನು ಪಡೆದನು. ವಿಷ್ಣುವು ಇಂದ್ರನೀಲಮಣಿಯ ಲಿಂಗವನ್ನು ಅನವರತವೂ ಅರ್ಚಿಸಿ ಅದರ ಪ್ರಭಾವದಿಂದ ಅದ್ಭುತವೂ ಅದ್ವಿತೀಯವೂ ಸನಾತನವೂ ಆದ ವಿಷ್ಣುಪದವಿಯನ್ನು ಹೊಂದಿದನು. ಇಂದ್ರನೂ

ಇಂದ್ರನೀಲಮಯಂ ಲಿಂಗಂ ವಿಷ್ಣುರರ್ಚಯತೇ ಸದಾ ।
ವಿಷ್ಣುತ್ವಂ ಪ್ರಾಪ್ತವಾಂಸ್ತೇನ ಸೋಽಪ್ಯಚ್ಯುತೈಕಂ ಸನಾತನಂ ॥೩೮॥

ಶಕ್ರೋಽಪಿ ದೇವದೇವಸ್ಯ ಲಿಂಗಂ ಮಣಿಮಯಂ ಶುಭಂ ।
ನಿತ್ಯಮರ್ಚಯತೇ ಭಕ್ತ್ಯಾ ತೇನ ಶಕ್ರತ್ವಮಾಪ್ತವಾನ್ ॥೩೯॥

ಲಿಂಗಂ ಹೈಮಮಯಂ ಕಾಂತಂ ಧನದೋಽರ್ಚಯತೇ ಸದಾ ।
ತೇನಾಸೌ ಧನದೋ ದೇವೋ ಧನದತ್ವಮವಾಪ್ತವಾನ್ ॥೪೦॥

ವಿಶ್ವೇದೇವಾ ಮಹಾತ್ಮಾನೋ ರೌಪ್ಯಲಿಂಗಮಯಂ ಹರಂ ।
ಅರ್ಚಂತಿ ವಿಧಿವತ್ತೇನ ವಿಶ್ವೇದೇವತ್ವಮಾಪ್ನುಯುಃ ॥೪೧॥

ವಾಯುಃ ಪೂಜಯತೇ ನಿತ್ಯಂ ಲಿಂಗಂ ಪಿತ್ತಲಸಂಭವಂ ।
ವಾಯುತ್ವಂ ತೇನ ಸಂಪ್ರಾಪ್ತಂ ಸರ್ವಪ್ರಾಣಿಶರೀರಗಂ ॥೪೨॥

ವಸವಃ ಕಾಂಸ್ಯಕಂ ಲಿಂಗಂ ಪೂಜಯಂತಿ ವಿಧಾನತಃ ।
ಪ್ರಾಪ್ತಾಸ್ತೇನ ಮಹಾತ್ಮಾನೋ ವಸುತ್ವಂ ಸುಮಹೋದಯಂ ॥೪೩॥

---

ದೇವದೇವನ ಶುಭಕರವಾದ ರತ್ನಲಿಂಗವನ್ನು ನಿತ್ಯವೂ ಭಕ್ತಿಪೂರ್ವಕವಾಗಿ ಪೂಜಿಸಿ, ಆದರಿಂದ ದೇವೇಂದ್ರಪದವಿಯನ್ನು ಪಡೆದಿರುವನು. ||೩೭-೩೮-೩೯||

ಕುಬೇರನು ಹೊಳೆಯುವ ಚಿನ್ನದ ಲಿಂಗವನ್ನು ಯಾವಾಗಲೂ ಪೂಜಿಸುತ್ತಾ ಧನಾಧಿಪತಿಸ್ಥಾನವನ್ನು ಪಡೆದನು. ಮಹಾತ್ಮರಾದ ವಿಶ್ವೇದೇವತೆಗಳು ಬೆಳ್ಳಿಯ ಶಿವಲಿಂಗವನ್ನು ವಿಧಿಪ್ರಕಾರವಾಗಿ ಅರ್ಚಿಸುತ್ತಾ ಅದರಿಂದ ವಿಶ್ವೇದೇವಪಟ್ಟವನ್ನೈದಿರುವರು. ವಾಯುವು ಹಿತ್ತಾಳೆಯ ಲಿಂಗವನ್ನು ನಿತ್ಯವೂ ಅರ್ಚಿಸುತ್ತಾ ಆದರಿಂದ ಸಕಲ ಪ್ರಾಣಿಗಳ ದೇಹದಲ್ಲಿಯೂ ಸಂಚರಿಸುವಂಥ ವಾಯುಪದವಿಯನ್ನು ಪಡೆದನು. ||೪೦-೪೧-೪೨||

ಅಷ್ಟವಸುಗಳೂ ಕಂಚಿನ ಲಿಂಗವನ್ನು ವಿಧಿಪ್ರಕಾರ ಪೂಜಿಸುತ್ತಾ ಆದರಿಂದ ಒಳ್ಳೆಯ ಆವಿರ್ಭಾವವುಳ್ಳ ವಸುಪದವಿಯನ್ನು ಪಡೆದಿರುವರು. ಅಶ್ವಿನೀದೇವತೆಗಳು ವಿಧಿಪ್ರಕಾರ ಪಾರ್ಥಿವಲಿಂಗವನ್ನು ಪೂಜೆಮಾಡುತ್ತಾ ಆದರಿಂದ ದೇವತೆಗಳ ಉತ್ತಮ ವೈದ್ಯರಾದರು. ವರುಣನು ಸದಾ ನಿರ್ಮಲವಾದ ಸ್ಫಟಿಕಲಿಂಗವನ್ನು ಪೂಜೆ

ಅಶ್ವಿನೌ ಪಾರ್ಥಿವಂ ಲಿಂಗಂ ಪೂಜಯಂತೌ ವಿಧಾನತಃ ।
ತೇ ತಾವಶ್ವಿನೌ ದೇವೌ ದೇವಾನಾಂ ಚ ಭಿಷಗ್ವರೌ ॥೪೪॥

ಸ್ಫಾಟಿಕಂ ನಿರ್ಮಲಂ ಲಿಂಗಂ ವರುಣೋಽರ್ಚಯತೇ ಸದಾ ।
ತೇನ ತದ್ವರುಣತ್ವಂ ಹಿ ಪ್ರಾಪ್ತವಾನಪ್ಪತಿತ್ವತಾಂ ॥೪೫॥

ಲಿಂಗಮನ್ನಮಯಂ ದೇವಿ ಹವ್ಯವಾಡ್ಯಜತಿ ಸ್ವಯಂ ।
ಅಗ್ನಿತ್ವಂ ಪ್ರಾಪ್ತವಾಂಸ್ತೇನ ತೇಜೋರೂಪಂ ಗುಣಾನ್ವಿತಂ ॥೪೬॥

ತಾಮ್ರಲಿಂಗಂ ಸದಾಕಾಲಂ ಭಕ್ತ್ಯಾ ದೇವೋ ದಿವಾಕರಃ ।
ತ್ರಿಕಾಲಂ ಯಜತೇ ತೇನ ಪ್ರಾಪ್ತಂ ಸೂರ್ಯತ್ವಮುತ್ತಮಂ ॥೪೭॥

ಮುಕ್ತಾಫಲಮಯಂ ಲಿಂಗಂ ಸೋಮಃ ಪೂಜಯತೇ ಸದಾ ।
ತೇನ ಸೋಮತ್ವಮಾಪನ್ನಃ ಸರ್ವಕಾಂತಶರೀರಭೃತ್ ॥೪೮॥

ಪ್ರವಾಳಕಮಯಂ ಲಿಂಗಂ ನಾಗಾಃ ಸಂಪೂಜಯಂತ್ಯಪಿ ।
ತೇನ ನಾಗಾಃ ಸುಭೋಗಾಢ್ಯಾಃ ಪಾತಾಲೇ ನಿತ್ಯಮಾಸ್ಥಿತಾಃ ॥೪೯॥

ಕೃಷ್ಣಾಯಸಮಯಂ ಲಿಂಗಂ ಪೂಜಯಂತ್ಯಸುರೋತ್ತಮಾಃ ।
ರಾಕ್ಷಸಾ ದೈತ್ಯನಾಥಾಶ್ಚ ತೇನ ತೇಽನಮಿತವಿಕ್ರಮಾಃ ॥೫೦॥

---

ಮಾಡುತ್ತಾ ಆದರಿಂದ ಜಲಾಧಿಪಪದವಿಯಾದ ವರುಣತ್ವವನ್ನು ಪಡೆದಿರುವನು. ॥೪೩-೪೪-೪೫॥

ದೇವಿ, ಅನ್ನಮಯವಾದ ಶಿವಲಿಂಗವನ್ನು ಯಜ್ಞೇಶ್ವರನು ತಾನು ಪೂಜಿಸಿ ತೇಜಃಸ್ವರೂಪವೂ, ಗುಣಭರಿತವೂ ಆದ ಅಗ್ನಿಪದವಿಯನ್ನು ಹೊಂದಿದನು. ಭಕ್ತಿ ಪುರಸ್ಸರವಾಗಿ ಸೂರ್ಯನು ತಾಮ್ರಲಿಂಗವನ್ನು ಪ್ರಾತರ್ಮಧ್ಯಾಹ್ನ ಮತ್ತು ಸಾಯಂ ಕಾಲಗಳಲ್ಲಿ ಪೂಜಿಸುತ್ತಾ ಉತ್ತಮವಾದ ಸೂರ್ಯಪದವಿಯನ್ನೈದಿದನು. ಚಂದ್ರನು ಸದಾ ಮುತ್ತಿನ ಲಿಂಗವನ್ನು ಅರ್ಚಿಸುತ್ತಾ ಆದರಿಂದ ಎಲ್ಲರಿಗಿಂತಲೂ ಸುಂದರ ದೇಹವುಳ್ಳವನಾಗಿ ಚಂದ್ರಪದವಿಯನ್ನು ಪಡೆದನು. ನಾಗರು ಯಾವಾಗಲೂ ಹವಳದ ಲಿಂಗವನ್ನರ್ಚಿಸುತ್ತಾ ದಿವ್ಯದೇಹಧಾರಿಗಳಾಗಿ ಪಾತಾಳಲೋಕದಲ್ಲಿ ಸದಾ ವಾಸಮಾಡುತ್ತಿರುವರು. ರಾಕ್ಷಸಶ್ರೇಷ್ಠರು ಕಬ್ಬಿಣದ ಲಿಂಗವನ್ನು ಪೂಜೆಮಾಡಿ

ತ್ರಪುಸೀಸಮಯಂ ಲಿಂಗಂ ಪಿಶಾಚಾಃ ಪೂಜಯಂತಿ ಹಿ ।
ಗಂಧರ್ವಾಪ್ಸರಸೋ ಯಕ್ಷಾ ಯಾತುಧಾನಾ ಮಹೇಶ್ವರಿ ॥೫೧॥

ವಜ್ರವೈಡೂರ್ಯ ಗೋಮೇದಪುಷ್ಯರಾಗೋದ್ಭವಾನಿ ಚ ।
ಲಿಂಗಾನಿ ಪೂಜಯಂತ್ಯೇವ ಭಕ್ತ್ಯಾ ಸರ್ವೇಶ್ವರಸ್ಯ ಹಿ ॥೫೨॥

ತೇನ ಶುದ್ಧಿಬಲೋಪೇತಾಃ ಪ್ರಾಪ್ತಾಸ್ತೇ ಪರಮಂಪದಂ ।
ತ್ರೈಲೋಹಿಕಂ ಮಹಾಲಿಂಗಂ ಯಜಂತೇ ಗುಹ್ಯಕಾಃ ಸದಾ ॥೫೩॥

ತೇನ ಭೋಗಬಲೋಪೇತಾಃ ಪ್ರಯಾಂತಿ ಪರಮಂ ಪದಂ ।
ವನ್ಯಂ ದಾರುಮಯಂ ಲಿಂಗಂ ಯಜಂತೇ ಮಾತರಃ ಸದಾ ॥೫೪॥

ಮಾತೃತ್ವಂ ಪ್ರಾಪ್ಯ ತಾಃ ಸರ್ವಾಃ ಪ್ರಯಾಂತ್ಯೇವ ಮಹೇಶ್ವರಂ ।
ಮುನಯೋ ಮನವೋ ಯಕ್ಷಾ ರಕ್ಷೋರಗಮರುದ್ಗಣಾಃ ॥೫೫॥

---

ಕೊಂಡು ಅದರಿಂದ ದೈತ್ಯದಾನವವರ್ಯರೆನಿಸಿ ವಿಶೇಷ ಪರಾಕ್ರಮಿಗಳಾಗಿರುವರು. ||೪೬-೪೭-೪೮-೪೯-೫೦||

ಪಿಶಾಚರು, ತವರ ಮತ್ತು ಸೀಸಗಳ ಲಿಂಗಗಳನ್ನು ಪೂಜೆಮಾಡುವರು. ಗಂಧರ್ವ, ಅಪ್ಸರ, ಯಕ್ಷ ಮತ್ತು ರಾಕ್ಷಸರು ವಜ್ರ, ವೈಢೂರ್ಯ, ಗೋಮೇದ ಮತ್ತು ಪುಷ್ಯರಾಗಗಳಿಂದ ಮಾಡಿದ ಲಿಂಗಗಳನ್ನು ಭಕ್ತಿಯಿಂದ ಪೂಜೆಮಾಡುವರು. ಎಲೌ ಮಹೇಶ್ವರಿ, ಆ ಸರ್ವೇಶ್ವರನ ಲಿಂಗಪೂಜೆಯಿಂದ ಅವರು ಐಶ್ವರ್ಯ ಮತ್ತು ಬಲಯುಕ್ತವಾದ ಪರಮಪದವನ್ನು ಪಡೆದಿರುವರು. ಗುಹ್ಯಕರು ಸದಾ ಮೂರು ಲೋಹದ ಲಿಂಗಗಳನ್ನು ಅರ್ಚಿಸುತ್ತಾ ಅದರಿಂದ ದಿವ್ಯಶರೀರಬಲಪೂರ್ಣರಾಗಿ ಪರಮಪದವನ್ನಡರಿರುವರು. ||೫೧-೫೨-೫೩||

ಹಾಗೆಯೇ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ ಮತ್ತು ಚಾಮುಂಡಾ ಎಂಬ ಸಪ್ತಮಾತೃದೇವತೆಗಳೂ ಯಾವಾಗಲೂ ಅರಣ್ಯದಲ್ಲಿ ಬೆಳೆದ ಮರಗಳಿಂದ ಮಾಡಿದ ಲಿಂಗಗಳನ್ನು ಪೂಜಿಸಿ, ಅದರಿಂದ ಎಲ್ಲರೂ ಮಾತೃಪದವಿಯನ್ನಲಂಕರಿಸಿ, ಕೊನೆಗೆ ಮಹೇಶ್ವರನ ಸಾಯುಜ್ಯವನ್ನೈದುವರು. ಮುನಿಗಳೂ, ಮನುಗಳೂ, ಯಕ್ಷರೂ, ರಾಕ್ಷಸರೂ, ನಾಗರೂ, ಮರುತ್ತುಗಳೂ, ದೇವತೆಗಳೂ, ದೈತ್ಯರೂ, ಗಂಧರ್ವರೂ, ವಿದ್ಯಾಧರರೂ, ಮಹಾನಾಗಗಳೂ

ದೇವಾ ದೈತ್ಯಾಃ ಸಗಂಧರ್ವಾ ವಿದ್ಯಾಧರಮಹೋರಗಾಃ ।
ಪೂಜಯಂತಿ ಶಿವೇ ಲಿಂಗೇ ಮಾಮೀಶಂ ದೇವನಾಯಕಂ ॥೫೬॥

ಸರ್ವೇ ಲಿಂಗಮಯೋಲೋಕಃ ಸರ್ವೇ ಲಿಂಗೇ ಪ್ರತಿಷ್ಠಿತಃ ।
ತಸ್ಮಾತ್ಸಂಪೂಜಯೇಲ್ಲಿಂಗಂ ಯದಿಚ್ಛೇತ್ಸಿದ್ಧಿಮಾತ್ಮನಃ ॥೫೭॥

ಲಿಂಗೇ ತ್ವಯಾಹಂ ದೇವೇಶಿ ಸರ್ವದಾ ಸಂಸ್ಥಿತೋ ಹ್ಯಹಂ ।
ಅನುಗ್ರಹಾಯ ಲೋಕಾನಾಂ ತಥಾ ಲಿಂಗೇಪ್ರಪೂಜಯೇತ್ ॥೫೮॥

ಯೋ ನ ಪೂಜಯತೇ ಲಿಂಗೇ ಮಾಮೀಶಂ ಭುವನೇಶ್ವರಿ ।
ನಾಸೌ ಸ್ವರ್ಗಸ್ಯ ಮೋಕ್ಷಸ್ಯ ನೈವ ರಾಜ್ಯಸ್ಯ ಭಾಜನಂ ॥೫೯॥

ತಸ್ಮಾದೇಕಮನಾ ದೇವಿ ಯಾವಜ್ಜೀವಂ ಪ್ರತಿಜ್ಞಯಾ ।
ಅರ್ಚಯೇತ ಸದಾ ಲಿಂಗೇ ಮಾಮಿಶಂ ಭುವನೇಶ್ವರಿ ॥೬೦॥

ವರಂ ಜೀವಪರಿಚ್ಛೇದಃ ಸ್ವಶಿರಶ್ಛೇದನಂ ವರಂ ।
ನ ತ್ವನಭ್ಯರ್ಚ್ಯ ಭುಂಜೀಯಾದ್ಭಗವಂತಂ ಮಹೇಶ್ವರಂ ॥೬೧॥

---

ಸಹ ದೇವನಾಯಕನಾದ ನನ್ನನ್ನು ಶಿವಲಿಂಗದಲ್ಲಿ ಪೂಜಿಸಿ, ಧನ್ಯರಾಗುತ್ತಿರುವರು. ॥೫೪-೫೫-೫೬॥

ಮಹೇಶ್ವರಿ, ಲೋಕವೆಲ್ಲವೂ ಶಿವಲಿಂಗಮಯವೇ ಆಗಿ ಎಲ್ಲವೂ ಶಿವಲಿಂಗದಲ್ಲಿ ಪ್ರತಿಷ್ಠಿತವಾಗಿದೆ. ಆದ್ದರಿಂದ ಸಿದ್ಧಿಯನ್ನು ಬಯಸುವ ಮಾನವನು ಶಿವಲಿಂಗವನ್ನು ಪೂಜಿಸಬೇಕು. ಪಾರ್ವತಿಯೇ, ನಾನು ಯಾವಾಗಲೂ ನಿನ್ನೊಡನೆ ಶಿವಲಿಂಗದಲ್ಲಿಯೇ ಲೋಕಾನುಗ್ರಹಕ್ಕೋಸ್ಕರ ನೆಲಸಿರುವೆನು. ಆದ್ದರಿಂದ ಲಿಂಗದಲ್ಲಿ ನನ್ನನ್ನು ಪೂಜೆಮಾಡಬೇಕು. ॥೫೭-೫೮॥

ದೇವಿ, ನನ್ನನ್ನು ಲಿಂಗದಲ್ಲಿ ಪೂಜಿಸದಿರುವವನು ಸ್ವರ್ಗ, ಮೋಕ್ಷ, ಅಥವಾ ಇತರ ಯಾವ ರಾಜ್ಯಪ್ರಾಪ್ತಿಗೂ ಸಹ ಯೋಗ್ಯನಾಗಲಾರನು. ಎಲೌ ಪಾರ್ವತಿ, ಆದ್ದರಿಂದ ಒಂದೇ ಮನಸ್ಸಿನಿಂದ ಬದುಕಿರುವವರೆಗೂ ಸರ್ವವರ್ಗದವರೂ ಈಶ್ವರನೆನಿಸಿದ ನನ್ನನ್ನು ಲಿಂಗದಲ್ಲಿ ಪೂಜಿಸಬೇಕು. ॥೫೯-೬೦॥

ಪ್ರಾಣತ್ಯಾಗ, ಕೆಲವುವೇಳೆ ತನ್ನ ತಲೆಯನ್ನೇ ಕತ್ತರಿಸಿಕೊಳ್ಳುವುದೂ ಸಹ ಶ್ರೇಷ್ಠಕಾರ್ಯವೆನಿಸುವುದು. ಭಗವಂತನಾದ ಮಹೇಶ್ವರನನ್ನು ಪೂಜೆಮಾಡದೇ

ಮಾನುಷೇಷೂಪಪದ್ಯೈವ ಲಭೇದ್ರುದ್ರಗಣತ್ವತಾಂ ।
ದೇವಿ ಲಿಂಗಾರ್ಚನಾತ್ಪುಣ್ಯಮಧಿಕಂ ನಾಸ್ತಿ ಕಿಂಚನ ॥೬೨॥

ಇತಿ ವಿಜ್ಞಾಯ ಯತ್ನೇನ ಪೂಜನೀಯಃ ಸದಾ ಶಿವಃ ।
ನಾಸ್ತಿ ಲಿಂಗಾರ್ಚನಸಮಂ ತಪೋ ವಾ ಗಿರಿಕನ್ಯಕೇ ॥೬೩॥

ತಪೋಽನ್ಯತ್ಕ್ಷರತೇ ಸರ್ವಮಮುತ್ರ ಫಲಭೋಗತಃ ।
ನ ಲಿಂಗಾರ್ಚನಪುಣ್ಯಸ್ಯ ಕ್ಷಯೋ ನಾಸ್ತಿ ಗಿರೀಂದ್ರಜೇ ॥೬೪॥

ವರ್ಧತೇ ಭಕ್ತಿಭಾವೇನ ಅಲ್ಪಮಪ್ಯಂತತಃ ಕೃತಂ ।
ಯೋ ವಾ ಲಿಂಗಾರ್ಚನಂ ದ್ವೇಷ್ಟಿ ಧಿಗ್ಧಿಕ್ತಸ್ಯ ಕುಮಾನಸಂ ॥೬೫॥

ಸ ಖರೋದ್ಭವ ಏವ ಸ್ಯಾದ್ಬ್ರಾಹ್ಮಣೋಽಪಿ ಸ ಚಾಂತ್ಯಜಃ ।
ತಾದೃಶಂ ತು ಸಕೃದ್ದೃಷ್ಟ್ವಾ ಸವಾಸಾಜಲಮಾವಿಶೇತ್ ॥೬೬॥

ನರೋ ನರಕಗಾಮೀ ಸ್ಯಾತ್ತಸ್ಯ ಸಂಭಾಷಣಾದಮೇ ।
ಮಹೇಶ್ವರಂ ಮಹಾದೇವಿ ಯೇ ದ್ವಿಷಂತಿ ಮಹೀತಲೇ ॥೬೭॥

---

ಊಟಮಾಡುವುದು ಒಳ್ಳೆಯದಲ್ಲ. ಮನುಷ್ಯನಾಗಿ ಹುಟ್ಟಿದಮೇಲೆ ರುದ್ರಗಣತ್ವವನ್ನು ಹೊಂದಬೇಕು. ದೇವಿ! ಲಿಂಗಪೂಜೆಗಿಂತಲೂ ಹೆಚ್ಚಿನ ಪುಣ್ಯಕಾರ್ಯವೇ ಯಾವುದೂ ಇಲ್ಲ. ॥೬೧-೬೨॥

ಹೀಗೆಂದು ತಿಳಿದು ಯಾವಾಗಲೂ ನಿಯಮದಿಂದ ಶಿವನನ್ನು ಪೂಜೆಮಾಡಬೇಕು. ಗಿರಿರಾಜಕುಮಾರಿಯೇ! ಲಿಂಗಪೂಜೆಗೆ ಸಮಾನವಾದ ತಪಸ್ಸೂ ಬೇರೊಂದಿಲ್ಲ. ಇಹಪರಗಳಲ್ಲಿ ಫಲಾನುಭವಮಾಡುವುದರಿಂದ ತಪಸ್ಸು ಕ್ಷೀಣವಾಗುವುದು. ದೇವಿಯೇ! ಈ ಲಿಂಗಪೂಜಾಪುಣ್ಯಕ್ಕಾದರೋ ಕ್ಷಯವೇ ಇಲ್ಲ; ಕೊನೆಯವರೆಗೂ ತಾನು ಮಾಡಿದ ಅಲ್ಪಪೂಜೆಯೂ ಸಹ ಹೆಚ್ಚುತ್ತಲೇ ಇರುವುದು. ॥೬೩-೬೪॥

ಶಿವಲಿಂಗಪೂಜೆಯನ್ನು ದ್ವೇಷಿಸುವವನ ಕೆಟ್ಟಮನಸ್ಸಿಗೆ ಧಿಕ್ಕಾರ; ಅವನು ಕತ್ತೆಯ ಜನ್ಮದಲ್ಲಿ ಹುಟ್ಟಿದವನೆಂದೇ ತಿಳಿಯಬೇಕು. ಅಂಥವನು ಬ್ರಾಹ್ಮಣನಾಗಿದ್ದರೂ ಅವನನ್ನು ಅಂತ್ಯಜನೆಂದೇ ಭಾವಿಸಬೇಕು. ಅಂಥವನನ್ನು ಒಂದು ಬಾರಿ ನೋಡಿದರೂ ಸಚೇಲಸ್ನಾನಮಾಡಬೇಕು. ಅವನೊಡನೆ ಸಂಭಾಷಣೆ ನಡೆಸುವುದರಿಂದ ಮಾನವನು ನರಕವನ್ನೈದುವನು. ಮಹೇಶ್ವರಿ, ಭೂಮಂಡಲದಲ್ಲಿ ಮಹೇಶ್ವರನನ್ನು ಯಾರು ದ್ವೇಷಿಸುವರೋ ಅವರು ಕೃತಘ್ನರೆನಿಸುವರು. ॥೬೫-೬೬-೬೭॥

ತೇ ಕೃತಘ್ನಾ ಭವಂತೀಹ ಯೇ ನ ಭಕ್ತಾ ಮಹೇಶ್ವರೇ ।
ರುದ್ರಪಿಂಡಸಮುದ್ಭೂತಾ ಬ್ರಾಹ್ಮಣಾ ರುದ್ರದೇವತಾಃ ॥೬೮॥

ತಸ್ಮಾದ್ರುದ್ರಾರ್ಚನಂ ಶ್ರೇಷ್ಠಂ ಬ್ರಾಹ್ಮಣಾನಾಂ ಮಹೇಶ್ವರಿ ।
ತಸ್ಮಾಲ್ಲಿಂಗಾರ್ಚನಂ ಸರ್ವೈಃ ಕಾರ್ಯಂ ವರ್ಣಾಶ್ರಮೈರಪಿ ॥೬೯॥

ಯಸ್ಮಾತ್ಸರ್ವೇಷು ಭೂತೇಷು ಗತಿರ್ದೇವೋ ಮಹೇಶ್ವರಃ ।
ತಸ್ಮಾತ್ಸರ್ವಪ್ರಯತ್ನೇನ ಶಿವಮೇವ ಸಮಾಶ್ರಯೇತ್ ॥೭೦॥

ಸಾಗರಾಣಾಂ ಕ್ಷಯೋಽಸ್ತ್ಯೇವ ಕ್ಷೀಯತೇ ಹಿಮವಾನಪಿ ।
ರುದ್ರಾರ್ಚನಜಪುಣ್ಯಸ್ಯ ಕ್ಷಯೋ ನಾಸ್ತ್ಯೇವ ಶಂಕರಿ ॥೭೧॥

ಏಷ್ಟವ್ಯಾ ಬಹವಃ ಪುತ್ರಾಃ ಶರ್ವಲಿಂಗಾರ್ಚಕಾಃ ಸದಾ ।
ಯದ್ಯೇಕೋ ಮಮ ಲಿಂಗಾರ್ಚಾಂ ಯೇ ಕರಿಷ್ಯಂತಿ ಭೂತಲೇ॥೭೨॥

ಸಮುದ್ಧರಂತಿ ತೇ ಗೋತ್ರಂ ರಜ್ಜುಃ ಕೂಪಾದ್ಘಟಂ ಯಥಾ ।
ಸಮುದ್ಧೃತ್ಯ ತಥಾಹ್ಯಂತೇ ಕುಲಾನಾಮೇಕವಿಂಶತಿಂ ॥೭೩॥

ಶಿವತ್ವಂ ಯಾಂತಿ ತೇ ಕ್ಷಿಪ್ರಂ ಧರ್ಮಾಧರ್ಮವಿವರ್ಜಿತಾಃ ॥೭೪॥

---

ಮಹೇಶ್ವರಿ, ರುದ್ರದೇವತಾಕರಾದ ಬ್ರಾಹ್ಮಣರು ರುದ್ರಪಿಂಡದಿಂದ ಜನಿಸಿದವರು. ಆದ್ದರಿಂದ ಎಲೌ ದೇವಿ, ಬ್ರಾಹ್ಮಣರಿಗೆ ರುದ್ರಾರ್ಚನೆಯು ಶ್ರೇಷ್ಠವಾಗಿರುವುದು. ಒಟ್ಟಿನಲ್ಲಿ ಭೂಮಿಯಲ್ಲಿರುವ ಎಲ್ಲಾ ವರ್ಣಾಶ್ರಮದವರೂ ಲಿಂಗಪೂಜೆಯನ್ನು ಮಾಡಬೇಕು. ಸಕಲ ಪ್ರಾಣಿಗಳಿಗೂ ಮಹೇಶ್ವರನೇ ಗತಿಯಾಗಿರುವುದರಿಂದ ಸಕಲ ವಿಧದಲ್ಲಿಯೂ ಆ ಶಿವನನ್ನೇ ಆಶ್ರಯಿಸಬೇಕು. ॥೬೮-೬೯-೭೦॥

ಸಾಗರಗಳಿಗೂ ಕ್ಷಯವಿರುವುದು; ಹಿಮಾಲಯ ಪರ್ವತವೂ ಒಮ್ಮೆ ಕ್ಷೀಣವಾಗುವುದು. ಶಂಕರಿ, ಆದರೆ ರುದ್ರಾರ್ಚನೆಯಿಂದ ಬಂದ ಪುಣ್ಯಕ್ಕೆ ಮಾತ್ರ ಎಂದಿಗೂ ಕ್ಷಯವೇ ಇಲ್ಲ. ಮಾತಾಪಿತೃಗಳು ಶಿವಲಿಂಗಪೂಜಕರಾದ ಅನೇಕ ಮಕ್ಕಳನ್ನೇ ಅಪೇಕ್ಷಿಸಬೇಕು. ಅವರಲ್ಲಿ ಯಾರೊಬ್ಬನು ನನ್ನ ಲಿಂಗಪೂಜೆಯನ್ನು ಈ ಭೂಮಂಡಲದಲ್ಲಿ ಮಾಡಿದರೂ ಹಗ್ಗವು ಬಾವಿಯಿಂದ ಗಡಿಗೆಯನ್ನು ಮೇಲೆತ್ತುವಂತೆ ತನ್ನ ವಂಶವನ್ನೇ ಉದ್ಧರಿಸುತ್ತಾನೆ. ತನ್ನ ಇಪ್ಪತ್ತೊಂದು ಕುಲದವರನ್ನೂ

॥ ಈಶ್ವರ ಉವಾಚ ॥

ಲಿಂಗೋತ್ಪತ್ತಿಸ್ತವಮಿದಮುಮೇ ಯಃ ಶೃಣೋತೀಹ ಭಕ್ತ್ಯಾ
ತಸ್ಯಾಪಾರಮಹಾಘಸಂಘನಿಚಯಂ ಸದ್ಯೋ ವಿನಾಶಂ ವ್ರಜೇತ್ ।
ಲಿಂಗಸ್ಥಾಪನಪುಣ್ಯಮಪ್ಯತಿತರಾಂ ಸಂಪ್ರಾಪ್ಯ ಗಾಣತ್ವಮ
ಪ್ಯಂತೇ ಯಾತಿ ಮಮಾದ್ರಿರಾಜಶಿಖರಂ ಸತ್ಯಂ ವದಾಮ್ಯದ್ರಿಜೇ ॥೭೫॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಲಿಂಗೋತ್ಪತ್ತಿಕಥಾವರ್ಣನಂ ನಾಮ
ಚತುರ್ಥೋಽಧ್ಯಾಯಃ

---

ಉದ್ಧಾರಮಾಡುವನಲ್ಲದೇ ಕೊನೆಗೆ ಧರ್ಮಾಧರ್ಮ ವಿವೇಚನೆಯೇ ಇಲ್ಲದೆ ಶಿವ ಸ್ವರೂಪವನ್ನೇ ಹೊಂದುವನು. ॥೭೧-೭೨-೭೩-೭೪॥

ಉಮೆ, ಈ ಲಿಂಗೋತ್ಪತ್ತಿಸ್ತೋತ್ರವನ್ನು ಭಕ್ತಿಯಿಂದ ಕೇಳುವವನ ಅಪಾರವಾದ ಮಹಾಪಾಪರಾಶಿಯು ಕೂಡಲೇ ನಾಶವಾಗುವುದು. ಅಲ್ಲದೆ ಲಿಂಗಪ್ರತಿಷ್ಠಾಪುಣ್ಯವನ್ನೂ ವಿಶೇಷವಾಗಿ ಹೊಂದಿ ಕೊನೆಗೆ ರುದ್ರಗಣತ್ವವನ್ನು ಪಡೆದು, ನನ್ನ ಕೈಲಾಸಪರ್ವತದ ಶಿಖರವನ್ನು ಸೇರುವನು ; ಗಿರಿಜೆ, ನಾನು ಸತ್ಯವಾಗಿ ಈ ವಿಷಯವನ್ನು ನಿನಗೆ ಹೇಳುವೆನು ಕೇಳು, ಎಂದು ಶಿವನು ಪಾರ್ವತಿಗೆ ನುಡಿದನು. ॥೭೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಲಿಂಗೋತ್ಪತ್ತಿ
ಕಥಾವರ್ಣನೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಪಂಚಮೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಏವಂ ದೇವ್ಯಾ ತದಾ ಪೃಷ್ಟೋ ಮಹಾದೇವೋಽಭ್ಯುವಾಚ ತಾಂ ।
ಲಿಂಗಪ್ರತಿಷ್ಠಾಸು ವಿವಿಧಂ ದೇವ್ಯೈ ಪ್ರೋವಾಚ ಶಂಕರಃ ॥೧॥

ತತ್ತೇಽಹಂ ಸಂಪ್ರವಕ್ಷ್ಯಾಮಿ ಸಮಾಹಿತಮನಾಃ ಶೃಣು ॥೨॥

॥ ಜೈಗೀಷವ್ಯ ಉವಾಚ ॥

ಯತ್ಕಥಾಂ ತಾರಕಾರಾತೇ ದೇವ್ಯೈ ಪ್ರೋವಾಚ ಶಂಕರಃ ।
ಲಿಂಗಪ್ರತಿಷ್ಠಾನವಿಧಿಂ ತನ್ಮೇ ವದ ವಿಶೇಷತಃ ॥೩॥

---

## ಐದನೆಯ ಅಧ್ಯಾಯ

ಓ ಜೈಗೀಷವ್ಯಮುನಿಯೇ, ಹೀಗೆ ದೇವಿಯಿಂದ ಪ್ರಶ್ನಿಸಲ್ಪಟ್ಟ ಮಹಾದೇವನು, ಪಾರ್ವತಿಗೆ ಲಿಂಗಪ್ರತಿಷ್ಠೆಗಳಲ್ಲಿರುವ ವೈವಿಧ್ಯವನ್ನು ಹೇಳಿದನು. ಅಯ್ಯ ಮುನಿಯೆ, ಶಂಕರನು ಪಾರ್ವತಿಗೆ ಅರುಹಿದ ಅದೇ ವಿಧಾನವನ್ನು ನಿನಗೆ ತಿಳುಹುವೆನು; ಸಾವಧಾನ ಮನಸ್ಸಿನಿಂದ ಲಾಲಿಸು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಲುಪಕ್ರಮಿಸಿದನು. ॥೧-೨॥

ಷಣ್ಮುಖಸ್ವಾಮಿಯೆ, ಶಂಕರನು ಪಾರ್ವತಿಗೆ ಅರುಹಿದ ಕಥೆಯ ಸಂಬಂಧವಾದ ಶಿವಲಿಂಗಪ್ರತಿಷ್ಠಾವಿಧಿಯನ್ನು ವಿಶೇಷವಾಗಿ ನನಗೆ ತಿಳಿಸು; ದೇವತೆಗಳು

ಸುರೈಶ್ಚ ಗಣವೃಂದೈಶ್ಚ ಶ್ರೋತುಮುತ್ಕಂಠಿತಂ ಮನಃ ॥೪॥

॥ ಸೂತ ಉವಾಚ ॥

ತಸ್ಯ ಸ್ಕಂದೋ ಮುನೇಃ ಶ್ರುತ್ವಾ ವಚನಂ ಪ್ರತ್ಯಭಾಷತ ॥೫॥

ಶ್ರೀ ಸ್ಕಂದ ಉವಾಚ

ಪುರಾ ಕೈಲಾಸಶಿಖರೇ ಸುಖಾಸೀನಂ ಜಗತ್ಪ್ರಭುಂ ।
ಪಾರ್ವತೀ ಪ್ರಣತಾ ಪ್ರಾಹ ಮಹಾದೇವಂ ಘೃಣಾನಿಧಿಂ ॥೬॥

॥ ಪಾರ್ವತ್ಯುವಾಚ ॥

ದೇವದೇವ ಮಹಾದೇವ ಮಹಾಕಾರುಣಿಕೋತ್ತಮ ।
ಲಿಂಗಪ್ರತಿಷ್ಠಾಮಹಿಮಾಂ ವದ ಮೇ ಪರಮೇಶ್ವರ ॥೭॥

ಯತ್ಪುಣ್ಯಂ ಸ್ಥಾಪಿತೇ ಲಿಂಗೇ ಸ್ಥಾವರೇ ನಾಥ ಜಂಗಮೇ ।
ಕಿಂ ತತ್ಪುಣ್ಯಫಲಂ ಶಂಭೋ ಕಸ್ಮಿನ್ಕಾಲೇ ವಿಶೇಷತಃ ॥೮॥

ಕೋಽಧಿಕಾರೀ ವಿಶೇಷೇಣ ಆಗಮೇ ವೈದಿಕೇಽಪಿ ವಾ ।
ಕೇಷು ಸ್ಥಾನೇಷು ಭಗವನ್ಪ್ರತಿಷ್ಠಾ ಸುಫಲಪ್ರದಾ ॥೯॥

ಪ್ರಸೀದ ದಯಯಾ ಶಂಭೋ ಹೃಚ್ಛಯಂ ವಕ್ತುಮರ್ಹಸಿ ॥೧೦॥

---

ಮತ್ತು ರುದ್ರಗಣಗಳೊಡನೆ ಅದನ್ನು ಕೇಳಲು ನನ್ನ ಮನವು ಉತ್ಕಂಠಿತವಾಗಿರುವುದೆಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಬೇಡಿದನು. ॥೩-೪॥

ಸ್ಕಂದದೇವನು ಜೈಗೀಷವ್ಯನ ಮಾತುಗಳನ್ನು ಕೇಳಿ ಹೀಗೆ ಉಪದೇಶಿಸಿದನೆಂದು ಸೂತರು ಶೌನಕಾದಿಗಳಿಗೆ ಹೇಳಿದರು. ಅಯ್ಯ ಜೈಗೀಷವ್ಯನೆ, ಹಿಂದೆ ಕೈಲಾಸಶಿಖರದಲ್ಲಿ ಸುಖವಾಗಿ ಕುಳಿತಿದ್ದ ಜಗದೊಡೆಯನೂ; ದಯಾನಿಧಿಯೂ ಆದ ಮಹಾದೇವನನ್ನು ಕುರಿತು ಒಮ್ಮೆ ಪಾರ್ವತಿಯು ನಮಸ್ಕರಿಸಿ ಕೇಳುತ್ತಾಳೆ. ॥೫-೬॥

'ದೇವಾದಿದೇವನಾದ ಮಹಾದೇವನೆ, ಪೂರ್ಣ ದಯಾಶಾಲಿಯಾದ ಪರಶಿವನೆ, ಲಿಂಗಪ್ರತಿಷ್ಠಾಪನಪ್ರಭಾವವನ್ನು ನನಗೆ ಹೇಳು ; ಚರ ಅಥವಾ ಸ್ಥಿರವಾದ(ಸ್ಥಾವರ) ಲಿಂಗವನ್ನು ಪ್ರತಿಷ್ಠಿಸುವುದರಿಂದ ಯಾವ ಪುಣ್ಯವುಂಟು ? ಆ ಪುಣ್ಯಫಲಸ್ವರೂಪ

॥ ಶ್ರೀಮಹಾದೇವ ಉವಾಚ ॥

ಶೃಣು ಪದ್ಮಪಲಾಶಾಕ್ಷಿ ಪ್ರತಿಷ್ಠಾವಿಧಿಮುತ್ತಮಂ ।
ಶಿವಲಿಂಗಸ್ಯ ದಿವಿ ಮೇ ಜಂಗಮಸ್ಥಾವರಸ್ಯ ಚ ॥೧೧॥

ಶಿವಕ್ಷೇತ್ರೇ ಗಿರೌ ನದ್ಯಾಂ ವನೇ ಗಂಗಾತಟೇ ಶುಭೇ ।
ಹಿಮಾಲಯೇ ಚ ಕೇದಾರೇ ವಾರಾಣಸ್ಯಾಂ ಮಹೇಶ್ವರಿ ॥೧೨॥

ಗಂಗಾಬ್ಧಿಸಂಗಮೇ ವಾಪಿ ವೈದ್ಯನಾಥೇ ಕುರುಸ್ಥಲೇ ।
ತಥಾ ಭದ್ರವಟೇ ಪುಣ್ಯೇ ರುದ್ರಕೋಟೌ ಪ್ರಭಾಸಕೇ ॥೧೩॥

ಪುಷ್ಕರೇ ಚ ತಥೋಂಕಾರೇ ಮಹಾಕಾಲೇ ತ್ರಿಶೂಲಕೇ ।
ಪಿಂಡಾರಕೇ ತ್ರ್ಯಂಬಕೇ ವಾ ಪ್ರತಿಷ್ಠಾನೇ ಚ ವಿಂಧ್ಯಕೇ ॥೧೪॥

ಶ್ರೀಶೈಲೇ ದಂಡಕಾರಣ್ಯೇ ಗೋಕರ್ಣೇ ವಾ ಮಹೇಶ್ವರಿ ।
ತುಂಗಾಯಾಶ್ಚಾಥ ಪಂಪಾಯಾಂ ವೇಗವತ್ಯಾಂ ತಟದ್ವಯೇ ॥೧೫॥

---

ವಾವುದು ? ಯಾವ ಕಾಲದಲ್ಲಿ ವಿಶೇಷವಾಗಿ ಆಚರಿಸಬೇಕು. ಅದಕ್ಕೆ ವಿಶೇಷವಾಗಿ ಆಗಮ, (ತಂತ್ರ) ಅಥವಾ ವೈದಿಕಕರ್ಮಗಳಲ್ಲಿ ಯಾರ್ಯಾರು ಅಧಿಕಾರಿಗಳು ? ಯಾವ ಸ್ಥಳಗಳಲ್ಲಿ ಭಗವಂತನ ಪ್ರತಿಷ್ಠೆಯು ಉತ್ತಮ ಫಲಕಾರಿಯು ? ಶಂಭುವೆ, ನನ್ನಲ್ಲಿ ಪ್ರಸನ್ನನಾಗಿ ನನ್ನ ಹೃದಯದಲ್ಲಡಗಿರುವ ಈ ಸಂಶಯವನ್ನು ತಿಳುಹಿ ಪರಿಹರಿಸು' ಎಂದು ಪಾರ್ವತಿಯು ಮಹಾದೇವನನ್ನು ಪ್ರಾರ್ಥಿಸಿದಳು. ॥೭-೮-೯-೧೦॥

ತಾವರೆಯದಳದಂತೆ ಕಣ್ಗಳುಳ್ಳ ದೇವಿಯೆ! ಸ್ಥಾವರ ಅಥವಾ ಜಂಗಮ ರೂಪವಾದ ಉತ್ತಮ ಶಿವಲಿಂಗ ಪ್ರತಿಷ್ಠಾವಿಧಿಯನ್ನೆ ಈಗ ಹೇಳುವೆನು ಕೇಳು ; ಶಿವ ಕ್ಷೇತ್ರ, ಬೆಟ್ಟ, ನದಿ, ವನ, ಗಂಗಾನದಿಯತೀರ, ಶುಭಕರವಾದ ಹಿಮಾಚಲಪರ್ವತ, ಕೇದಾರಕ್ಷೇತ್ರ, ಕಾಶಿ, ಗಂಗಾನದಿ ಮತ್ತು ಸಮುದ್ರಗಳ ಸಂಗಮಸ್ಥಳ, ವೈದ್ಯನಾಥ, ಕುರುಕ್ಷೇತ್ರ, ಪುಣ್ಯಕರವಾದ ಭದ್ರವಟ, ರುದ್ರಕೋಟಿ, ಪ್ರಭಾಸಕ, ಪುಷ್ಕರಕ್ಷೇತ್ರ, ಓಂಕಾರಕ್ಷೇತ್ರ, ಮಹಾಕಾಲ, ತ್ರಿಶೂಲ, ಪಿಂಡಾರಕ, ತ್ರ್ಯಂಬಕ, ಮತ್ತು ವಿಂಧ್ಯ ಪರ್ವತಪ್ರದೇಶಗಳಲ್ಲಿ ಪ್ರತಿಷ್ಠೆಮಾಡುವುದು ವಿಶೇಷಪುಣ್ಯಕರವು. ॥೧೧-೧೨-೧೩-೧೪॥

ಗಿರಿಜೆ ! ಶ್ರೀಶೈಲ, ದಂಡಕಾರಣ್ಯ, ಗೋಕರ್ಣ, ಇತರ ನದೀತೀರಗಳು, ಇವುಗಳಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿದವನು, ವಿಶೇಷ ಪುಣ್ಯಭಾಗಿಯಾಗುವನು. ಅಲ್ಲದೇ

ನದೀನಾಂ ಚೈವ ತೀರೇಷು ಲಿಂಗಂ ಸ್ಥಾಪ್ಯ ಸುಪುಣ್ಯಭಾಕ್ ।
ಕೃಷ್ಣವೇಣ್ಯಾಪಯೋಷ್ಣ್ಯೋಶ್ಚ ಗೋದಾವರ್ಯಾ ಮಹೇಶ್ವರಿ ॥೧೬॥

ಕ್ಷಿಪ್ರಾಯಾ ನರ್ಮದಾಯಾಶ್ಚ ಗಂಗಾಯಮುನಯೋಸ್ತಟೇ ।
ನೀರಾಯಾಃ ಭೀಮರಥ್ಯಾಶ್ಚ ಚರ್ಮಣ್ವತ್ಯಾ ಮಹೇಶ್ವರಿ ॥೧೭॥

ಕವೇರಜಾಯಾಸ್ತೀರೇಷು ಕ್ಷೇತ್ರೇಷ್ವೇತೇಷು ಶಂಕರಿ ।
ಶ್ರೀಕಂಠೇ ಚ ತೃಣಾವರ್ತೇ ಮಾತೃರತ್ನಗಿರೌ ತಥಾ ॥೧೮॥

ಜಂಬುಕೇಶೇ ಪಂಚನದೇ ಕುಂಭಘೋಣೇಽರ್ಜುನೇ ತಥಾ ।
ಶ್ವೇತಾರಣ್ಯೇ ಬ್ರಹ್ಮವನೇ ಪುಣ್ಯೇ ಛಾಯಾವನೇ ಶಿವೇ ॥೧೯॥

ಘಂಟೇಶ್ವರೇ ಸುಂದರೇ ಚ ವೇದಾರಣ್ಯೇ ಮಹೇಶ್ವರಿ ।
ಕಮಲಾಲಯಸಂಜ್ಞೇ ಚ ಹಾಲಾಸ್ಯೇ ಗಂಧಮಾದನೇ ॥೨೦॥

ಶ್ರೀಮದ್ದಕ್ಷಿಣಕೈಲಾಸೇ ಶಿವೇ ಶೋಣಾಚಲೇ ಮಮ ।
ಶ್ರೀಮದ್ದಭ್ರಸಭಾಯಾಂ ವಾ ವೃದ್ಧಾದ್ರೌ ಗೋನಗೇ ತಥಾ ॥೨೧॥

ಲಿಂಗಪ್ರತಿಷ್ಠಾದೇಶಾಃ ಸ್ಯುರ್ನದೀಕ್ಷೇತ್ರಾಣ್ಯಮೂನಿ ಮೇ ।
ಪುಣ್ಯಾನಿ ಚ ಪ್ರತಿಷ್ಠಾಸು ನವಾರಣ್ಯಾನಿ ಶಂಕರಿ ॥೨೨॥

---

ಕೃಷ್ಣವೇಣೀ, ಪಯೋಷ್ಣಿ, ಗೋದಾವರಿ, ತುಂಗಾ, ಪಂಪಾ, ವೇಗವತೀನದಿಯ ಎರಡು ದಡಗಳು, ಕ್ಷಿಪ್ರಾ, ನರ್ಮದಾ, ಗಂಗಾ ಮತ್ತು ಯಮುನೆಗಳ ಎರಡು ದಡಗಳು, ನೀರಾ, ಭೀಮರಥಿ, ಚರ್ಮಣ್ವತಿ, ಕಾವೇರಿ ನದಿಗಳ ಎರಡು ದಡಗಳಲ್ಲಿಯೂ, ಶ್ರೀಕಂಠ, ತೃಣಾವರ್ತ, ಮಾತೃರತ್ನಗಿರಿ, ಜಂಬುಕೇಶ, ಪಂಚನದ, ಕುಂಭಕೋಣ, ಅರ್ಜುನ, ಶ್ವೇತಾರಣ್ಯ, ಬ್ರಹ್ಮವನ, ಪುಣ್ಯಕರವಾದ ಛಾಯಾವನ, ಘಂಟೇಶ್ವರ, ಸುಂದರವಾದ ವೇದಾರಣ್ಯ, ಕಮಲಾಲಯ, ಹಾಲಾಸ್ಯ, ಗಂಧಮಾದನ, ಸಂಪದ್ಯುಕ್ತವಾದ ದಕ್ಷಿಣಕೈಲಾಸ, ಮಂಗಳಕರವಾದ ಶೋಣಾಚಲ, ಶ್ರೀದಭ್ರಸಭೆ, ವೃದ್ಧಾಚಲ, ಗೋನಗ, ಮುಂತಾದ ಈ ನದೀಕ್ಷೇತ್ರಗಳು ಶಿವ ಲಿಂಗಪ್ರತಿಷ್ಠೆಗೆ ಯೋಗ್ಯವಾದ ಪ್ರದೇಶಗಳೆಂದು ತಿಳಿ. ॥೧೫-೧೬-೧೭-೧೮-೧೯-೨೦-೨೧॥

ಎಲೌ ಶಂಕರಿ, ಶಿವಲಿಂಗಗಳನ್ನು ಪ್ರತಿಷ್ಠೆಮಾಡಲು ನೈಮಿಶಾರಣ್ಯ, ದಂಡಕಾರಣ್ಯ, ಬ್ರಹ್ಮಾರಣ್ಯ, ಕುಶಾರಣ್ಯ, ದೇವವನ, ರುದ್ರಾರಣ್ಯ, ಬೃಹದ್ವನ,

ನೈಮಿಶಂ ದಂಡಕಾರಣ್ಯಂ ಬ್ರಹ್ಮಾರಣ್ಯಂ ಮಹೇಶ್ವರಿ ।
ಕುಶಾರಣ್ಯಂ ದೇವವನಂ ರುದ್ರಾರಣ್ಯಂ ಬೃಹದ್ವನಂ ॥೨೩॥

ಕಾಲಂಜರಂ ಪದ್ಮವನಂ ಸಪ್ತಪುರ್ಯೋಽತ್ರ ಪುಣ್ಯದಾಃ ।
ಪ್ರತಿಷ್ಠಾಯಾಂ ಮಹಾದೇವಿ ಶಿವಲಿಂಗಸ್ಯ ಸತ್ತಮೋ ॥೨೪॥

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।
ಪುರೀ ದ್ವಾರಾವತೀ ದೇವಿ ಪ್ರತಿಷ್ಠಾಸು ಮಹಾಫಲಾಃ ॥೨೫॥

ಕುಲಾಚಲಾ ಅಪೀಶಾನಿ ಪ್ರತಿಷ್ಠಾಸು ಮಹಾಫಲಾ ।
ನಿಷಧಃ ಕುಮುದೋ ವಿಂಧ್ಯಃ ಪಾರಿಯಾತ್ರಶ್ಚ ನೀಲಕಃ ॥೨೬॥

ಮೇರುರ್ದರ್ದುರಕೈಲಾಸೋ ದಕ್ಷಿಣೋ ಹೇಮಕೂಟಕಃ ।
ಕುಲಾಚಲೇಷ್ವಥೈತೇಷು ಸ್ಥಾಪ್ಯ ಲಿಂಗಂ ಮಹಾಫಲಂ ॥೨೭॥

ಮಹಾಕೈಲಾಸಶೈಲಾ ತು ಶಿವಲಿಂಗಪ್ರತಿಷ್ಠಿತಿಃ ।
ದುರ್ಲಭಾ ಸರ್ವದೇವಾನಾಂ ಮನುಷ್ಯಾಣಾಂ ಚ ಕಾ ಪುನಃ ॥೨೮॥

---

ಕಾಲಿಂಜರ ಮತ್ತು ಪದ್ಮವನಗಳೆಂಬ ಒಂಬತ್ತು ಪುಣ್ಯವನಗಳು ಶ್ರೇಷ್ಠಗಳಾಗಿವೆ. ಮಹೇಶ್ವರಿಯೇ, ಇದರಂತೆಯೆ ಶಿವಲಿಂಗಪ್ರತಿಷ್ಠೆಗೆ ಏಳು ಪಟ್ಟಣಗಳೂ ಪುಣ್ಯಕರ ಗಳಾಗಿರುವುವು ; ಅವುಗಳನ್ನು ಹೇಳುವೆನು ಕೇಳು. ॥೨೨-೨೩-೨೪॥

ಅಯೋಧ್ಯೆ, ಮಥುರೆ, ಮಾಯೆ, ಕಾಶೀ, ಕಾಂಚೀ, ಅವಂತೀ ಮತ್ತು ದ್ವಾರಾವತಿಗಳೆಂಬ ಏಳು ಪಟ್ಟಣಗಳು ಶಿವಲಿಂಗಪ್ರತಿಷ್ಠೆಯಲ್ಲಿ ತುಂಬಾ ಫಲ ಕಾರಿಗಳಾಗಿರುವುವು. ಹಾಗೆಯೇ ನಿಷಧ, ಕುಮುದ, ವಿಂಧ್ಯ, ಪಾರಿಯಾತ್ರ, ನೀಲ, ಮೇರು, ದರ್ದುರ, ಕೈಲಾಸ, ದಕ್ಷಿಣದ ಹೇಮಕೂಟ ಈ ಕುಲಪರ್ವತಗಳೂ ಜಗತ್ತಿನಲ್ಲಿ ಪ್ರಖ್ಯಾತವಾಗಿರುವುವು. ಈ ಪರ್ವತಗಳಲ್ಲಿ ಶಿವಲಿಂಗಪ್ರತಿಷ್ಠೆಯು ಮಹಾ ಫಲಪ್ರದವು. ॥೨೫-೨೬-೨೭॥

ಮಹಾಕೈಲಾಸಪರ್ವತದ ಶಿಖರದಲ್ಲಾದರೋ ಶಿವಲಿಂಗಪ್ರತಿಷ್ಠೆಯು ಎಂತಹ ದೇವತೆಗಳಿಗೂ ದುರ್ಲಭವಾಗಿರುವಾಗ, ಮನುಷ್ಯರ ವಿಷಯದಲ್ಲಿ ಮತ್ತೆ ಹೇಳಬೇಕಾದ್ದೇನು ! ಮಹಾದೇವಿ, ಎಲ್ಲಾ ಕ್ಷೇತ್ರ, ನದೀದಡ, ಕಾಡು, ಪರ್ವತ

ಸರ್ವಕ್ಷೇತ್ರನದೀತೀರವನಪರ್ವತಮೌಲಿತಃ ।
ವಿಶಿಷ್ಟಾತ್ರ ಮಹಾದೇವಿ ಕೋಟಿಕೋಟಿಗುಣಾಧಿಕಾ ॥೨೯॥

ಸ್ವಾಯಂಭುವಂ ತಥಾ ದೈವಮಾರ್ಷಂ ಮಾನುಷಮೇವ ಚ ।
ಸ್ವಾಯಂಭುವಸ್ಯ ಲಿಂಗಸ್ಯ ಪರಿತಃ ಕ್ರೋಶಮೇವ ಹಿ ॥೩೦॥

ತತ್ರ ವಾಸೋ ವಿಶಿಷ್ಟಾನಾಂ ಭವತೀತ್ಯೇವ ಮೇ ಮನಃ ।
ತತ್ರೈವ ಮರಣಾಜ್ಜಂತೋಃ ಶಿವಲೋಕೋ ನ ಸಂಶಯಃ ॥೩೧॥

ದೈವೇ ಚಾಪಿ ತದರ್ಧಂ ಸ್ಯಾತ್ಪರಿಮಾಣಂ ತು ಮಾನುಷೇ ।
ಪಾದನ್ಯೂನಂ ಮಹಾದೇವಿ ಮಾರ್ತಿಕೇ ತು ಫಲಂ ವಿದುಃ ॥೩೨॥

ಬಾಣಂ ಸ್ವಯಂಭುತುಲ್ಯಂ ಸ್ಯಾತ್ಕ್ಷೇತ್ರಮಾನಂ ಸದೈವ ಹಿ ।
ಕ್ಷೇತ್ರೇ ಲಿಂಗಸ್ಥಾಪನಾಚ್ಚ ಪುಣ್ಯಂ ನದ್ಯಾಸ್ತಟೇ ಶತಂ ॥೩೩॥

ವನೇಷು ಸ್ಥಾಪಿತಂ ತಸ್ಮಾತ್ತತೋಽಪಿ ಗಿರಿಮೌಲಿಷು ।
ನವಧಾತುಜಲಿಂಗಾನಿ ಸಮುತ್ಕೃಷ್ಟಾನಿ ಶಂಕರಿ ॥೩೪॥

---

ಶಿಖರಗಳಿಗಿಂತ ಈ ಕೈಲಾಸಪರ್ವತದ ಶಿಖರವು ಲಿಂಗಪ್ರತಿಷ್ಠೆಗೆ ಕೋಟ್ಯಂತರ ಗುಣಗಳಿಂದ ಮಿಗಿಲೆನಿಸಿಕೊಂಡಿದೆ. ||೨೮-೨೯||

ಶಿವಲಿಂಗಗಳು ಸ್ವಯಂಭು, ದೈವ, ಆರ್ಷ ಮತ್ತು ಮಾನುಷಲಿಂಗಗಳೆಂದು ನಾಲ್ಕುಬಗೆಯಲ್ಲಿವೆ. ಅದರಲ್ಲಿ ಸ್ವಾಯಂಭುವ ಲಿಂಗದ ಸುತ್ತಲೂ ಒಂದು ಹರಿದಾರಿ ದೂರದೊಳಗೆ ಶ್ರೇಷ್ಠರಾದವರು ವಾಸಮಾಡಬೇಕೆಂದು ನನ್ನಭಿಪ್ರಾಯ ; ಆ ಸ್ಥಳದಲ್ಲಿ ಮರಣಹೊಂದುವುದರಿಂದ ಪ್ರಾಣಿಗೆ ಶಿವಲೋಕಪ್ರಾಪ್ತಿಯಾಗುವುದರಲ್ಲಿ ಸಂದೇಹ ವಿಲ್ಲ. ||೩೦-೩೧||

ದೈವಲಿಂಗದಲ್ಲಿ ಸ್ವಯಂಭುಲಿಂಗದ ಅರ್ಧಮಹಿಮೆಯೂ, ಮಾನುಷಲಿಂಗಕ್ಕೆ ಅದ ರರ್ಧವೂ, ಮೃತ್ತಿಕಾಲಿಂಗಕ್ಕೆ ನಾಲ್ಕನೆಯ ಮೂರು (3/4) ಭಾಗದ ಮಹಿಮೆಯೂ ಇರುವುದೆಂದು ಹೇಳುವರು. ಬಾಣಲಿಂಗವು ಸ್ವಯಂಭುಲಿಂಗಕ್ಕೆ ಸಮಾನವೆಂದು ತಿಳಿ ; ಅದರ ಕ್ಷೇತ್ರ ಮಹಿಮೆಯೂ ಯಾವಾಗಲೂ ಅಷ್ಟೇ ಇರುವುದು. ಕ್ಷೇತ್ರದಲ್ಲಿ ಲಿಂಗವನ್ನು ಸ್ಥಾಪಿಸುವುದಕ್ಕಿಂತಲೂ ನದೀದಡದಲ್ಲಿ ಸ್ಥಾಪಿಸುವುದು ನೂರರಷ್ಟು ಹೆಚ್ಚು ಪುಣ್ಯಫಲಕಾರಿಯು ; ಉದ್ಯಾನವನಗಳಲ್ಲಿ ಸ್ಥಾಪಿಸುವುದು, ಅದಕ್ಕಿಂತಲೂ

ನವರತ್ನೋದ್ಭವಾನ್ಯೇವ ತತೋತ್ಕೃಷ್ಟಾನಿ ಶೈಲಜೇ ।
ತತೋ ರಸೇಂದ್ರಕಲಿತಂ ಬಾಣಲಿಂಗಂ ತತೋಽಧಿಕಂ ॥೩೫॥

ನ ಪ್ರತಿಷ್ಠಾ ನ ಚ ಸ್ಪರ್ಶೋ ಬಾಣಲಿಂಗೇಷು ವಿದ್ಯತೇ ।
ಸ ಪೀಠಮಸ್ತ್ವಪೀಠಂ ವಾ ಬಾಣಲಿಂಗಂ ಪ್ರಪೂಜಯೇತ್ ॥೩೬॥

ಬಾಣಲಿಂಗಂ ತು ಶೂದ್ರೇಣ ಯದಿ ದೇವಿ ಪ್ರತಿಷ್ಠಿತಂ ।
ಸರ್ವೇಷಾಂ ದರ್ಶನಾರ್ಚಾಸು ಅಧಿಕಾರೋ ಭವಿಷ್ಯತಿ ॥೩೭॥

ಕೇವಲಂ ಸ್ಯಾಚ್ಛಿಲಾಲಿಂಗಂ ನ ದೃಶ್ಯಂ ಸರ್ವಥಾ ದ್ವಿಜೈಃ ।
ಅರ್ವಾಗಾಮಲಕಾಲ್ಲಿಂಗಂ ನ ಕಾರ್ಯಂ ರತ್ನವರ್ಜಿತಂ ॥೩೮॥

ಧಾತುಜಂ ಚಾಂಗುಲ್ಯೈಃ ಷಡ್ಭಿಃ ಸ್ಫಾಟಿಕಂ ಸ್ಯಾದ್ಯಥೋಚಿತಂ ।
ವಿತಸ್ತಿಮಾತ್ರಂ ಮೃಲ್ಲಿಂಗಂ ಕಾರ್ಯಂ ವೈ ಸರ್ವಥಾ ಶಿವೇ ॥೩೯॥

---

ಶ್ರೇಷ್ಠವು; ಅದಕ್ಕಿಂತಲೂ ಬೆಟ್ಟದ ಶಿಖರಗಳಲ್ಲಿ ಸ್ಥಾಪಿಸುವುದು ಉತ್ತಮ; ಶಂಕರಿ, ಪ್ರತಿಷ್ಠಾವಿಧಿಯಲ್ಲಿ ನವಧಾತುಗಳಿಂದ ರಚಿತವಾದ ಶಿವಲಿಂಗಗಳು ಅತ್ಯುತ್ಕೃಷ್ಟ ಗಳಾಗುವುವು. ॥೩೨-೩೩-೩೪॥

ಪಾರ್ವತಿಯೇ! ಇವಕ್ಕಿಂತಲೂ ನವರತ್ನಗಳಿಂದ ರಚಿತವಾದ ಲಿಂಗವು ಉತ್ಕೃಷ್ಟ ವಾದದ್ದು. ಅದಕ್ಕಿಂತಲೂ ಪಾದರಸದಲಿಂಗವೂ, ಇದಕ್ಕಿಂತ ಬಾಣಲಿಂಗವೂ ಅಧಿಕಫಲಪ್ರದವು. ಬಾಣಲಿಂಗಗಳಿಗೆ ಪ್ರತಿಷ್ಠೆಗಳಾಗಲೀ, ಸ್ಪರ್ಶವಾಗಲೀ ಬೇಕಾಗಿಲ್ಲ. ಪೀಠವಿರಲಿ, ಇಲ್ಲದಿರಲಿ ಬಾಣಲಿಂಗವನ್ನು ಪೂಜಿಸಬಹುದು. ॥೩೫-೩೬॥

ದೇವಿ! ಶೂದ್ರನಿಂದಲೇ ಬಾಣಲಿಂಗವು ಪ್ರತಿಷ್ಠೆಮಾಡಲ್ಪಟ್ಟಿದ್ದಾದರೂ ಎಲ್ಲರಿಗೂ ಅದರ ದರ್ಶನ, ಪೂಜೆ ಮುಂತಾದವುಗಳಲ್ಲಿ ಅಧಿಕಾರವುಂಟಾಗುವುದು. ಕೇವಲ ಶಿಲಾಲಿಂಗವು ಬ್ರಾಹ್ಮಣರಿಂದ ಸರ್ವಥಾ ನೋಡಲ್ಪಡಬಾರದು. ರತ್ನಲಿಂಗ ವನ್ನು ಬಿಟ್ಟು ಇತರ ಲಿಂಗಗಳನ್ನು ನೆಲ್ಲಿಯಕಾಯಿಗಿಂತ ಚಿಕ್ಕದಾಗಿ ಮಾಡಲೇ ಬಾರದು. ॥೩೭-೩೮॥

ಧಾತುಲಿಂಗವನ್ನು ಆರಂಗುಲಗಳಿಗಿಂತ ಹೆಚ್ಚಾಗಿಯೇ ಮಾಡಿಸಬೇಕು. ಸ್ಫಟಿಕ ಲಿಂಗವನ್ನು ಬೇಕಾದ ಪ್ರಮಾಣದಲ್ಲಿ ಮಾಡಿಕೊಳ್ಳಬಹುದು. ಮಣ್ಣಿನ ಲಿಂಗವನ್ನು ಮಾತ್ರ ಹನ್ನೆರಡಂಗುಲಗಳಿಗಿಂತ ಕಡಿಮೆಪ್ರಮಾಣದಲ್ಲಿ ಮಾಡಿಸಲೇ ಬಾರದು.

ತತೋ ನ್ಯೂನಂ ಹರೇದಾಯುಃ ಬಾಣಂ ಸ್ಯಾದ್ದೇಶಸಂಮಿತಂ ।
ಗೃಹಸ್ಥೈಶ್ಚ ಗೃಹೇ ಪೂಜ್ಯಂ ಸ್ಥಾವರೇಷು ತತೋಽಧಿಕಂ ॥೪೦॥

ಲಿಂಗಮಸ್ತಕವಿಸ್ತಾರೋ ಲಿಂಗೋಚ್ಛ್ರಾಯಸಮಃ ಶಿವೇ ।
ವೇದೀ ಚ ತದ್ದ್ವಿಗುಣಿತಾ ತದ್ವತ್ಪೀಠಮುಮೇ ಸ್ಥಿತಂ ॥೪೧॥

ಗೋಮುಖೀ ತದ್ದ್ವಿಗುಣಿತಾ ಪಂಚಸೂತ್ರಂ ವಿದುಃ ಶಿವೇ ।
ಪಂಚಪಾತಕನಾಶಾಯ ಪಂಚಸೂತ್ರಂ ಸಮಂ ಸದಾ ॥೪೨॥

ನ್ಯೂನಾಧಿಕೇ ಹರೇದಾಯುಃ ಕೀರ್ತಿರಾರೋಗ್ಯನಾಶನಂ ।
ಸರ್ವದ್ರವ್ಯಕೃತಂ ಲಿಂಗಂ ಪಂಚಸೂತ್ರಂ ಪ್ರಶಸ್ಯತೇ ॥೪೩॥

ನೈವಾಯಂ ನಿಯಮೋ ದೇವಿ ಸ್ವಯಂಭೂತೇಽಥ ಶಸ್ಯತೇ ।
ಅರತ್ನಿಮಾತ್ರಾದೂರ್ಧ್ವಂ ಯತ್ಸ್ಥಾವರಂ ಲಿಂಗಮೇವ ಹಿ ॥೪೪॥

---

ಅದಕ್ಕಿಂತ ಕಡಿಮೆಪ್ರಮಾಣದಲ್ಲಿ ರಚಿತವಾದ ಮೃತ್ತಿಕಾಲಿಂಗವು ಪೂಜಕರ ಆಯು ಸ್ಸನ್ನು ಅಪಹರಿಸುವುದು. ಬಾಣಲಿಂಗವು ಚೋಟುದ್ದ ಪ್ರಮಾಣದಲ್ಲಿರಬೇಕು. ಗೃಹಸ್ಥರು ಚರಲಿಂಗಗಳನ್ನು ಈ ಪ್ರಮಾಣಗಳಲ್ಲಿಯೇ ಪೂಜಿಸಬೇಕು. ಸ್ಥಾವರ ಲಿಂಗಗಳ ಪ್ರಮಾಣವು ಇದಕ್ಕಿಂತ ಹೆಚ್ಚಾಗಿರುವುದು. ॥೩೯-೪೦॥

ದೇವಿ! ಶಿವಲಿಂಗದ ತಲೆಯ ವಿಸ್ತಾರವು ಲಿಂಗದ ಎತ್ತರಕ್ಕೆ ಸಮವಾಗಿರ ಬೇಕು. ವೇದಿಕೆಯು ಅದಕ್ಕೆರಡರಷ್ಟು ಪ್ರಮಾಣದಲ್ಲಿರಬೇಕು. ಎಲೌ ಉಮೆ! ಪೀಠಪ್ರಮಾಣವೂ ಅಷ್ಟೇ ಇರಬೇಕು. ಗೋಮುಖಿಯು (ಪಾಣಿಬಟ್ಟಲು) ಅದರೆರಡ ರಷ್ಟು ಪ್ರಮಾಣದಲ್ಲಿರಬೇಕು. ಆ ಗೋಮುಖಕ್ಕೆ ಐದು ಸೂತ್ರಗಳಿರಬೇಕು. ಬ್ರಹ್ಮಹತ್ಯಾದಿ ಪಂಚಮಹಾಪಾಪಗಳ ನಾಶಕ್ಕೋಸ್ಕರ ಈ ಪಂಚಸೂತ್ರಗಳೂ ಸಮಾನವಾಗಿಯೇ ಇರಬೇಕು. ॥೪೧-೪೨॥

ಶಿವಲಿಂಗಪ್ರಮಾಣವು ಸ್ವಲ್ಪ ಹೆಚ್ಚುಕಡಿಮೆಯಾದರೂ, ಅದು ಆಯುಸ್ಸು, ಕೀರ್ತಿ ಮತ್ತು ಆರೋಗ್ಯಗಳನ್ನು ಹಾಳುಮಾಡುವುದು. ಸಮಸ್ತ ದ್ರವ್ಯಗಳಿಂದಲೂ ರಚಿಸಲ್ಪಟ್ಟಿರುವ ಲಿಂಗವೂ ಮತ್ತು ಪಂಚಸೂತ್ರವೂ ಶ್ರೇಷ್ಠವೆನಿಸುತ್ತವೆ. ದೇವಿ! ಉದ್ಭವಲಿಂಗಗಳಿಗೆ ಈ ನಿಯಮಗಳೇನೂ ಇಲ್ಲ. ಇದು ಎಲ್ಲಾ ಚರಸ್ಥಿರಲಿಂಗಗಳಿ ಗಿಂತಲೂಶ್ರೇಷ್ಠವೆನಿಸುವುದು. ಅರತ್ನಿಪ್ರಮಾಣಕ್ಕಿಂತಲೂ (ಅಂದರೆ ಮುಚ್ಚಲ್ಪಟ್ಟ

ನ ಸ್ಥಾಪ್ಯಂ ತದ್ಗೃಹೇ ಗೌರಿ ಸ್ಥಾಪ್ಯಂ ತಚ್ಚ ಶಿವಾಲಯೇ ।
ಪ್ರತಿಮಾ ವಾ ಮಹೇಶಸ್ಯ ದೇವತಾನಾಂ ಮಹೇಶ್ವರಿ ॥೪೫॥

ವಿತಸ್ತಿಮಾತ್ರಾದೂರ್ಧ್ವಾ ಚೇನ್ನಾರ್ಚ್ಯಾ ಸಾ ವೈ ಗೃಹೇ ಸದಾ ।
ಮೃದಾ ತು ನಿರ್ಮಿತಾ ವಾಸ್ಯಾತ್ಪಾಷಾಣಪ್ರಭವಾಥವಾ ॥೪೬॥

ಪ್ರತಿಷ್ಠಾಪ್ಯಾರ್ಚಯೇತ್ಸಾ ತು ತದೂರ್ಧ್ವಾ ಸ್ಯಾಚ್ಛಿವಾಲಯೇ ।
ಮೂರ್ತಯೋಽಷ್ಟೌ ಮಹೇಶಸ್ಯ ಪಂಚವಿಂಶತ್ಪರೀಮಿತಾಃ ॥೪೭॥

ಸಮಾಕಾರಾಸ್ಯನೇತ್ರಾಸ್ತಾಃ ಪ್ರತಿಷ್ಠಾಪ್ಯ ಗಣೋಭವೇತ್ ।
ಗೃಹೇ ಶಿವಾಲಯೇ ವಾಪಿ ಮೂರ್ತಯೋಽಮೀ ಮಹೇಶಿತುಃ ॥೪೮॥

ಉಮಾಸಹಾಯೋ ನೃತ್ತೇಶೋ ದಕ್ಷಿಣಾಮೂರ್ತಿರೇವ ವಾ ।
ಕಂಕಾಲೋ ಲಿಂಗಭಾಗಸ್ಥಸ್ತಥಾ ಶೂಲಧರೋ ಹರಃ ॥೪೯॥

---

ಕಿರುಬೆರಳುಳ್ಳ ಹಿಡಿಯೊಂದಿಗೆ ಸೇರಿದ ಮೊಳಪ್ರಮಾಣಕ್ಕಿಂತಲೂ) ಹೆಚ್ಚು ಪ್ರಮಾಣದ ಸ್ಥಾವರಲಿಂಗವನ್ನು ಮನೆಯಲ್ಲಿ ಇರಿಸಬಾರದು, ಅದನ್ನು ಶಿವಾಲಯದಲ್ಲಿಯೇ ಪ್ರತಿಷ್ಠಿಸಬೇಕು. ॥೪೩-೪೪॥

ಎಲೌ ಮಹೇಶ್ವರಿಯೇ, ಮಹೇಶನ ಪ್ರತಿಮೆಯಾಗಲಿ ಇತರ ದೇವತಾಪ್ರತಿಮೆಗಳೇ ಆಗಲಿ, ಅದು ಹನ್ನೆರಡಂಗುಲಗಳಿಗಿಂತ ಮೇಲ್ಪಟ್ಟಿದ್ದ ಪಕ್ಷದಲ್ಲಿ ಅದು ಮನೆಯಲ್ಲಿ ಯಾವಾಗಲೂ ಪೂಜಾರ್ಹವಾಗುವುದಿಲ್ಲ. ಮಣ್ಣು ಅಥವಾ ಕಲ್ಲಿನಿಂದ ರಚಿತವಾಗಿದ್ದರೂ ಹನ್ನೆರಡಂಗುಲ ಪ್ರಮಾಣಕ್ಕಿಂತ ಹೆಚ್ಚಾಗಿದ್ದಲ್ಲಿ ಅದನ್ನು ದೇವಾಲಯಗಳಲ್ಲಿಯೇ ಪ್ರತಿಷ್ಠೆಮಾಡಿ ಪೂಜಿಸಬೇಕು. ॥೪೫-೪೬॥

ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನರೂಪವಾದ ಎಂಟುಮೂರ್ತಿಗಳುಳ್ಳ ಮಹೇಶ್ವರನಿಗೆ ಇಪ್ಪತ್ತೈದು ಮೂರ್ತಿಗಳು ಪರಿಮಿತವಾಗಿವೆ. ಸಮಾನವಾದ ಆಕೃತಿ, ಮುಖ ಮತ್ತು ನೇತ್ರಗಳುಳ್ಳ ಈ ಮೂರ್ತಿಗಳನ್ನು ಮನೆ, ದೇವಾಲಯ ಮುಂತಾದವುಗಳಲ್ಲಿ ಪ್ರತಿಷ್ಠೆ ಮಾಡಿದರೆ ಅವನು ಶಿವಗಣಸದೃಶನಾಗುವನು. ॥೪೭-೪೮॥

ದೇವಿ, ಉಮಾಸಹಾಯಕನಾದವನೂ, ನೃತ್ತೇಶ್ವರ, ದಕ್ಷಿಣಾಮೂರ್ತಿ, ಕಂಕಾಲ, ಲಿಂಗಭಾಗಸ್ಥೇಶ್ವರ, ಶೂಲಪಾಣಿ, ಹರ, ಚಂದ್ರಶೇಖರ, ವೃಷಭವಾಹನ,

ಚಂದ್ರಚೂಡೋ ವೃಷಾಗಸ್ಥಃ ಅರ್ಧನಾರೀಶ್ವರಃ ಶಿವೇ ।
ಕಪಾಲಪಾಣಿರ್ವರದೋ ವಿಷ್ಣವೇ ಬ್ರಹ್ಮಣೇ ಶಿವೇ ॥೫೦॥

ದಿಗಂಬರಃ ಕಾಲನಾಶೋ ಗಜಚರ್ಮಪರೀವೃತಃ ।
ಕೈಲಾಸವಾಸೋಽಘೋರಾತ್ಮಾ ಸದ್ಯೋಜಾತೋಽಥ ಪೂರುಷಃ ॥೫೧॥

ವಾಮದೇವಸ್ತಥೇಶಾನೋ ತ್ರಿಪುರಾಂತಕರೋ ಹರಃ ।
ಏತಾಶ್ಚಾನ್ಯಾ ಮೂರ್ತಯೋಽಥ ಪ್ರತಿಷ್ಠಾಪ್ಯಾರ್ಚಯೇಚ್ಛಿವೇ ॥೫೨॥

ಧಾತುಜಾನಾಂ ಚ ಲಿಂಗಾನಾಂ ಪ್ರತಿಮಾನಾಮಪೀಶ್ವರಿ ।
ಚರಾಣಾಂ ಚ ಸ್ಥಿರಾಣಾಂ ಚ ಶತವರ್ಷಾತ್ಪ್ರತಿಷ್ಠಿತಿಃ ॥೫೩॥

ವೈದಿಕೀ ಚಾಗಮೀ ಯಾ ಚ ಪ್ರತಿಷ್ಠಾ ದ್ವಿವಿಧಾ ಶಿವೇ ।
ಖಂಡಸ್ಫುಟಿತದಗ್ಧೇ ವಾ ಪಾಷಂಡಪತಿತಾಂತ್ಯಜೈಃ ॥೫೪॥

ಶೂದ್ರೈಃ ಪೃಷ್ಟೇ ಪ್ರತಿಷ್ಠಾ ಸ್ಯಾತ್ಪುನಃ ಸಂಸ್ಕಾರಮೇವ ವಾ ।
ಅತ್ಯಂತೋಽಪಹತಾನಾಂ ತು ಪರಿತ್ಯಾಗೋ ಜಲೇ ಭುವಿ ॥೫೫॥

---

ಪರ್ವತವಾಹನೇಶ್ವರ, ಅರ್ಧನಾರೀಶ್ವರ, ಕಪಾಲಪಾಣಿ, ಬ್ರಹ್ಮ ಮತ್ತು ವಿಷ್ಣುಗಳಿಗೆ ವರಪ್ರದಮೂರ್ತಿ, ದಿಗಂಬರ, ಮೃತ್ಯುಂಜಯ, ಗಜಚರ್ಮಧಾರಿ, ಕೈಲಾಸವಾಸ, ಅಘೋರರೂಪಿ, ಸದ್ಯೋಜಾತ, ತತ್ಪುರುಷ, ವಾಮದೇವ, ಈಶಾನ, ತ್ರಿಪುರಾಂತಕನೇ ಮುಂತಾದ ಶಿವಮೂರ್ತಿಗಳನ್ನಾಗಲಿ ಅಥವಾ ಇತರ ಪ್ರಸಿದ್ಧ ಆಕಾರದ ಮೂರ್ತಿಗಳನ್ನಾಗಲಿ ಪ್ರತಿಷ್ಠೆಮಾಡಿ ಯಾವಾಗಲೂ ಪೂಜಿಸಬೇಕು. ॥೪೯-೫೦-೫೧-೫೨॥

ಲೋಹದ ಲಿಂಗಗಳು ಅಥವಾ ಪ್ರತಿಮೆಗಳು ಚರ ಅಥವಾ ಸ್ಥಿರಗಳೇ ಆಗಿದ್ದರೂ, ಅವುಗಳ ಪ್ರತಿಷ್ಠೆಯು ನೂರುವರ್ಷಕಾಲ ಫಲಕಾರಿಯಾಗಿರುವುದು. ಪ್ರತಿಷ್ಠೆಯು ವೈದಿಕ ಮತ್ತು ಆಗಮಿಕವೆಂಬುದಾಗಿ ಎರಡು ಬಗೆಯಾಗಿದೆ. ಪಾಷಂಡರು, ಪತಿತರು, ಅಂತ್ಯಜರು ಮತ್ತು ಶೂದ್ರರಿಂದ ತುಂಡುಮಾಡಲ್ಪಟ್ಟು, ಸಿಡಿದು ಅಥವಾ ಸುಟ್ಟುಹೋಗಿರುವ ಮತ್ತು ಅಪವಿತ್ರಗೊಳಿಸಲ್ಪಟ್ಟ ಲಿಂಗಾದಿಗಳಿಗೆ ಪುನಃ ಪ್ರತಿಷ್ಠೆಯೋ ಅಥವಾ ಸಂಸ್ಕಾರಗಳೋ ನಡೆಯಬೇಕು. ವಿಶೇಷ ನಷ್ಟವಾಗಿರುವ ಪ್ರತಿಮಾದಿಗಳನ್ನು ನೀರಿನಲ್ಲಿ ಬಿಟ್ಟುಬಿಡಬೇಕು. ॥೫೩-೫೪-೫೫॥

ಚರಾಣಾಂ ಸ್ಥಾವರಾಣಾಂ ಚ ತಥಾ ಸ್ವಾಯಂಭುವೇಽಪಿ ವಾ ।
ಸ್ವಾಯಂಭುವೀಯಲಿಂಗಸ್ಯ ಶಕಲಂ ವೇದಿಕಾಸ್ವಪಿ ॥೫೬॥

ಅಷ್ಟಬಂಧಕದ್ರವ್ಯೇಣ ಯೋಜ್ಯ ಬದ್ಧ್ವಾ ಪ್ರತಿಷ್ಠಿತಿಃ ।
ಆಗಮೀ ಚಾಗಮೀಯಾನಾಂ ವೈದಿಕಾನಾಂ ತು ವೈದಿಕೀ ॥೫೭॥

ಯಸ್ತು ಪ್ರತಿಷ್ಠಯೇಲ್ಲಿಂಗಂ ಪ್ರತಿಮಾಂ ವಾ ಸ್ಥಿರಾಂಚರಾಂ ।
ಬ್ರಾಹ್ಮಣಃ ಕ್ಷತ್ರಿಯೋವೈಶ್ಯಃ ಶೂದ್ರೋವಾ ಮತ್ಪರಾಯಣಃ ॥೫೮॥

ತಸ್ಯಾಹಮರ್ಚಾಂ ಗೃಹ್ಣಾಮಿ ಮೌಲೌ ಚಂದ್ರವಿಭೂಷಿತೇ ।
ವಸಂತೋಽಥ ಋತುರ್ದೇವಿ ವಾರ್ಷಿಕಃ ಶಿಶಿರೋಽಥ ಚ ॥೫೯॥

ಗ್ರೀಷ್ಮೇ ವಾಪಿ ಭವೇದ್ದೇವಿ ಪ್ರತಿಷ್ಠಾಸು ಮಹಾಫಲಃ ।
ಉತ್ತರಾಯಣ ಏವೇಹ ಪ್ರತಿಷ್ಠಾಸು ವಿಧೀಯತೇ ॥೬೦॥

ಉತ್ತರಾಶಾಗತೇ ಭಾನೌ ಲಿಂಗಂ ಸ್ಥಾಪ್ಯಾರ್ಚಯೇಚ್ಛಿವೇ ।
ಮಾಘಫಾಲ್ಗುಣವೈಶಾಖಜ್ಯೇಷ್ಠಾಷಾಢೇ ಚ ಪಂಚಸು ॥೬೧॥

---

ಚರ ಅಥವಾ ಸ್ಥಿರಲಿಂಗಗಳಲ್ಲಿಯೂ ಹಾಗೆಯೇ ಉದ್ಭವಲಿಂಗಗಳಲ್ಲಿಯೂ ಏನಾದರೂ ಭಂಗವುಂಟಾದರೆ ಅವುಗಳನ್ನು ನೀರಿನಲ್ಲಿ ಹಾಕಬೇಕು. ಸ್ವಯಮುದ್ಭವ ಲಿಂಗಗಳ ವೇದಿಕೆಗಳಲ್ಲಿ ಏನಾದರೂ ಬಿರುಕುಗಳಿದ್ದರೆ ಅದನ್ನು ಅಷ್ಟಬಂಧನದ್ರವ್ಯ ದಿಂದಸೇರಿಸಿ ಪ್ರತಿಷ್ಠೆಮಾಡಬಹುದು. ಆಗಮಮಂತ್ರಯೋಗ್ಯಗಳಾದ ಲಿಂಗಗಳಿಗೆ ಆಗಮ ವಿಧಿಪೂರ್ವಕವಾಗಿಯೂ, ವೇದೋಕ್ತಮಂತ್ರಯೋಗ್ಯಗಳಾದವುಗಳಿಗೆ ವೈದಿಕಾಗಮಪೂರ್ವಕವಾಗಿಯೂ ಪ್ರತಿಷ್ಠೆಯಾಗಬೇಕು. ॥೫೬-೫೭॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರವರ್ಣಗಳಲ್ಲಿ ನನ್ನ ಭಕ್ತರಾದವರು ಯಾರಾದರೂ ಸರಿಯೇ, ನನ್ನ ಚರ ಅಥವಾ ಸ್ಥಿರವಾದ ಲಿಂಗ ಅಥವಾ ಪ್ರತಿಮೆ ಗಳನ್ನು ಪ್ರತಿಷ್ಠೆಮಾಡುವುದಾದರೆ ಆಗ ನಾನು ಅವರ ಪೂಜೆಯನ್ನು ಚಂದ್ರಭೂಷಿತ ವಾದ ಈ ತಲೆಯಲ್ಲಿ ಸ್ವೀಕರಿಸುತ್ತೇನೆ. ॥೫೮॥

ದೇವಿಯೇ! ವಸಂತ, ವರ್ಷ, ಶಿಶಿರ, ಅಥವಾ ಗ್ರೀಷ್ಮಋತುಗಳು ಲಿಂಗ ಪ್ರತಿಷ್ಠೆಯಲ್ಲಿ ವಿಶೇಷ ಫಲದಾಯಕವಾಗಿರುವುವು. ಈ ಪ್ರತಿಷ್ಠೆಗಳಿಗೆಲ್ಲಾ ಉತ್ತ ರಾಯಣವೇ ವಿಹಿತವಾಗಿದೆ. ಸೂರ್ಯನು ಉತ್ತರ ದಿಕ್ಕಿಗೆ ಸಂಚರಿಸಿದಾಗ ಅಂದರೆ

ಮಾಸೇಷು ಶುಕ್ಲಪಕ್ಷೇಷು ಲಿಂಗಸ್ಥಾಪನಮುತ್ತಮಂ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಪರ್ವಣೋರ್ವಾ ಮಹೇಶ್ವರಿ ॥೬೨॥

ಸೋಮವಾರೋಽಥವಾ ಭದ್ರೇ ರವಿರ್ಭೌಮಬುಧಾವಪಿ ।
ಸ್ಥಿರಪ್ರತಿಷ್ಠಾಸು ಭವೇ ಸ್ಥಿರರ್ಕ್ಷೇ ಚ ಚರೇ ಚರಂ ॥೬೩॥

ಶಾಂತೈರ್ದ್ವಿಜವರೈರ್ದೇವಿ ಶಿವಭಕ್ತೈರ್ಜಿತೇಂದ್ರಿಯೈಃ ।
ಶತಾವರಾ ಸ್ಥಾವರೇಷು ಋತ್ವಿಜಃ ಪರಿಕೀರ್ತಿತಾಃ ॥೬೪॥

ದಶತ್ರಯೋ ವಾ ವಿಪ್ರೇಂದ್ರಾಃ ಶಿವಭಕ್ತಾಃ ಸುವಾಸಸಃ ।
ಭಸ್ಮರುದ್ರಾಕ್ಷಸಂಪನ್ನಾಃ ತ್ರಿಪುಂಡ್ರಪರಿಮಂಡಿತಾಃ ॥೬೫॥

ಚರಲಿಂಗಪ್ರತಿಷ್ಠಾಯಾಂ ವರಣೀಯಾ ದ್ವಿಜೋತ್ತಮಾಃ ।
ಬ್ರಹ್ಮಾ ಸದಸ್ಯಶ್ಚಾಚಾರ್ಯೋ ಮಧುಪರ್ಕೇಣ ಪೂಜಿತಾಃ ॥೬೬॥

---

ಉತ್ತರಾಯಣದಲ್ಲಿ ಲಿಂಗವನ್ನು ಸ್ಥಾಪಿಸಿ ಪೂಜಿಸಬೇಕು. ಪಾರ್ವತಿಯೇ! ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠ, ಆಷಾಢ, ಈ ಐದು ತಿಂಗಳುಗಳಲ್ಲಿ ಶುಕ್ಲಪಕ್ಷಗಳಲ್ಲಿ ಲಿಂಗಪ್ರತಿಷ್ಠೆಯು ಉತ್ತಮವಾದುದು. ॥೫೯-೬೦-೬೧॥

ಮಹೇಶ್ವರಿಯೇ! ಅಷ್ಟಮಿ, ಚತುರ್ದಶಿ, ಪೂರ್ಣಿಮೆ, ಅಮಾವಾಸ್ಯೆ, ಸೂರ್ಯ ಚಂದ್ರಗ್ರಹಣಕಾಲಗಳೂ, ಸೋಮ, ಭಾನು, ಮಂಗಳ, ಬುಧವಾರಗಳೂ ಸ್ಥಿರನಕ್ಷತ್ರ ಗಳೂ ಸ್ಥಾವರಲಿಂಗಪ್ರತಿಷ್ಠೆಗಳಿಗೆ ಉತ್ತಮವಾದವುಗಳು. ಚರನಕ್ಷತ್ರಗಳು ಚರ ಲಿಂಗಪ್ರತಿಷ್ಠೆಗೆ ಶ್ರೇಷ್ಠವಾದವುಗಳು. ದೇವಿಯೇ! ಶಾಂತಸ್ವಭಾವವುಳ್ಳವರೂ, ಶಿವ ಭಕ್ತರೂ, ಜಿತೇಂದ್ರಿಯರೂ, ಆದ ನೂರಕ್ಕಿಂತ ಕಡಿಮೆಯಿಲ್ಲದ ಋತ್ವಿಕ್ಕುಗಳೂ ಸ್ಥಾವರಲಿಂಗಪ್ರತಿಷ್ಠೆಗೆ ಹೇಳಲ್ಪಟ್ಟಿರುವರು. ॥೬೨-೬೩-೬೪॥

ಎಲೌ ಪಾರ್ವತಿಯೇ! ಚರಲಿಂಗಪ್ರತಿಷ್ಠೆಗೆ ಶಿವಭಕ್ತರೂ, ಒಳ್ಳೆಯವಸ್ತ್ರಧಾರಿ ಗಳೂ, ಭಸ್ಮರುದ್ರಾಕ್ಷಸಂಪನ್ನರೂ, ಭಸ್ಮತ್ರಿಪುಂಡ್ರಾಲಂಕೃತರೂ ಆದ ಬ್ರಾಹ್ಮಣೋ ತ್ತಮರನ್ನು ಮೂವತ್ತಕ್ಕೆ ಕಡಿಮೆಯಿಲ್ಲದಂತೆ ವರಣಮಾಡಬೇಕು. ॥೬೫॥

ಬ್ರಹ್ಮ, ಸದಸ್ಯರು ಮತ್ತು ಆಚಾರ್ಯರನ್ನು ಮಧುಪರ್ಕದಿಂದ ಪೂಜಿಸಿ, ಅವರಿಗೆ ಹರಿಯದ ಬಟ್ಟೆಗಳು, ಗೋವುಗಳು, ವಸ್ತ್ರಾಲಂಕಾರಗಳು, ರತ್ನ, ಧನ,

ವಾಸೋಭಿರಹತೈಶ್ಚೈವ ಗೋಭಿಃ ಪೂಜ್ಯಾ ಯಥಾಬಲಂ ।
ವಸ್ತ್ರಾಲಂಕರಣೈರತ್ನೈರ್ಧನಧಾನ್ಯೈರ್ಗೃಹೈರಪಿ ॥೬೭॥

ಪೂಜನೀಯಾಃ ಪ್ರತಿಷ್ಠಾದೌ ಬ್ರಾಹ್ಮಣಾ ವೇದಪಾರಗಾಃ ।
ಧಾನ್ಯಾಧಿವಾಸಃ ಕರ್ತವ್ಯೋ ಜಲವಾಸಶ್ಚ ಶಂಕರಿ ॥೬೮॥

ಪ್ರತಿಮಾಯಾಶ್ಚ ಲಿಂಗಸ್ಯ ಕರ್ತವ್ಯೋಽಥ ವಿಜಾನತಾ ।
ದ್ರೋಣತ್ರಯಂ ಧಾನ್ಯಮಿತಿರ್ಜಲಕುಂಭಂ ಸಪಲ್ಲವಂ ॥೬೯॥

ನದೀನದಾಹೃತಂ ತೋಯಂ ತಟಾಕಂ ಕೂಪಜಂ ತಥಾ ।
ನವಧಾನ್ಯಾನಿ ವಾಸಾಂಸಿ ಸಮಾಹೃತ್ಯ ದ್ವಿಜೈಃ ಸಹ ॥೭೦॥

ತಥೈವೌಷಧಯಃ ಪುಣ್ಯಾ ವಿಷ್ಣುಕ್ರಾಂತಾಪಮಾರ್ಗಕಾಃ ।
ದರ್ಭಾಗ್ರಾಶ್ಚ ತಥಾ ದೂರ್ವಾ ಯವಾಗ್ರಾಣ್ಯಥ ಮುಂಡಿಕಾ ॥೭೧॥

ಪಲ್ಲವಾಃ ಸ್ಯುರುಮೇ ಪಂಚಕಲ್ಕಾನ್ಯಪಿ ಸುಮಧ್ಯಮೇ ।
ಸಮಾಹೃತ್ಯ ಶುಭೇ ದೇಶೇ ಗೋಮಯೇನೋಪಲೇಪಿತೇ ॥೭೨॥

---

ಧಾನ್ಯಾದಿಗಳಿಂದ ಶಕ್ತಿಗನುಗುಣವಾಗಿ ಸತ್ಕರಿಸಿ ಪ್ರತಿಷ್ಠೆಯ ಮೊದಲು ವೇದ ಪಾರಂಗತರಾದ ಬ್ರಾಹ್ಮಣೋತ್ತಮರನ್ನು ಪೂಜೆಮಾಡಬೇಕು. ॥೬೬-೬೭॥

ವಿಧಿಜ್ಞನಾದವನು ಪ್ರತಿಮೆ ಮತ್ತು ಲಿಂಗಪ್ರತಿಷ್ಠೆಗೆ ಮೊದಲು ಧಾನ್ಯಾಧಿವಾಸ ಮತ್ತು ಜಲಾಧಿವಾಸಗಳನ್ನು ಮಾಡಬೇಕು. ಧಾನ್ಯಾಧಿವಾಸಕ್ಕೆ ಮೂರು ದ್ರೋಣ (ಬಳ್ಳ) ಧಾನ್ಯವು ಪರಿಮಿತವಾಗಿದೆ. ಜಲಾಧಿವಾಸಕ್ಕೆ ಪೂರ್ಣಜಲ ಕುಂಭದ ನೀರು ಉಕ್ತವಾಗಿದೆ. ಆ ನೀರು ನದೀ, ನದ, ಕೆರೆ, ಅಥವಾ ಬಾವಿಗಳದ್ದಾಗಬಹುದು. ಪವಿತ್ರೋದಕದಿಂದ ಪೂರ್ಣವಾದ ಕುಂಭವು ಚಿಗುರುಗಳಿಂದ ಪೂರ್ಣವಾಗಿರಬೇಕು. ಬ್ರಾಹ್ಮಣರೊಡನೆ ಒಂಬತ್ತು ಬಗೆಯ ಧಾನ್ಯಗಳನ್ನೂ ವಸ್ತ್ರಗಳನ್ನೂ ಸಂಗ್ರಹಿಸಿಕೊಳ್ಳಬೇಕು. ಹಾಗೆಯೇ ಪುಣ್ಯಕರವಾದ ವಿಷ್ಣುಕ್ರಾಂತಿ, ಉತ್ತರಣೆ, ದರ್ಭಾಗ್ರಗಳು, ಗರಿಕೆ, ಬತ್ತದ (ಯವ) ತುದಿಗಳು ಮತ್ತು ಮುಂಡಿಕೆಗಳೆಂಬ ಐದು ಚಿಗುರುಗಳನ್ನೂ, ಕಲ್ಕಗಳನ್ನೂ ಸಂಗ್ರಹಿಸಿಟ್ಟುಕೊಳ್ಳಬೇಕು. ॥೬೮-೬೯-೭೦-೭೧॥

ಹೀಗೆ ಧಾನ್ಯಾದಿಗಳನ್ನು ಸಂಗ್ರಹಿಸಿಕೊಂಡು ಸಗಣಿಯಿಂದ ಸಾರಿಸಲ್ಪಟ್ಟ

ರಂಗವಲ್ಯಾದಿಶೋಭಾಢ್ಯೇ ಮಂಡಪೇ ಪುಷ್ಪಭೂಷಿತೇ ।
ಗಣೇಶಮಾದೌ ಸಂಪೂಜ್ಯ ನಾಂದೀಶ್ರಾದ್ಧಂ ವಿಧಾಯ ಚ ॥೭೩॥

ತತಃ ಪ್ರತಿಸರಂ ಕೃತ್ವಾ ಬ್ರಾಹ್ಮಣಾನನುಮಂತ್ರ್ಯ ಚ ।
ಪತ್ನ್ಯಾ ಸಹ ಸಮಾಸೀತ ಅರಜೇ ವಾಸಸೀ ದಧತ್ ॥೭೪॥

ಸಂಕಲ್ಪ್ಯ ವರಯೇದ್ವಿಪ್ರಾನಾಚಾರ್ಯಂ ಚ ಸದಸ್ಯಕಂ ।
ಬ್ರಹ್ಮಾಣಂ ಚ ಪ್ರತಿಷ್ಠಾಪ್ಯ ದಿನತ್ರಯಮಥೇಶ್ವರಿ ॥೭೫॥

ಬೋಧಾಯನೋಕ್ತವಿಧಿನಾ ಪ್ರತಿಷ್ಠಾಪ್ಯ ಮಹೇಶ್ವರಂ ।
ಹಾವಯೇತ್ಪಾಯಸೈರ್ವಿದ್ವಾನ್ ಚರುಣಾ ಸ ಘೃತೇನ ವಾ ॥೭೬॥

ಸ್ವಸ್ವಶಾಖೋಕ್ತಮಾರ್ಗೇಣ ಪ್ರತಿಷ್ಠಾಪ್ಯ ಹುತಾಶನಂ ।
ಕುಂಭಾಭಿಷೇಕಂ ಕೃತ್ವೈವ ಮೂಲೇನ ಪ್ರಣವೇನ ವಾ ॥೭೭॥

ನೇತ್ರೋನ್ಮೀಲನವರ್ಜ್ಯಂ ವೈ ಲಿಂಗೇ ವೈ ಪ್ರತಿಮಾಸ್ವಪಿ ।
ಕುರ್ಯಾನ್ನೇತ್ರೋನ್ಮೀಲನಾದಿ ಪ್ರತಿಮಾಸ್ವೇವ ಶಂಕರಂ ॥೭೮॥

---

ರುವ ಒಳ್ಳೆಯ ಜಾಗದಲ್ಲಿ ರಂಗವಲ್ಲಿಯೇ ಮುಂತಾದವುಗಳಿಂದ ಸಿಂಗರಿಸಲ್ಪಟ್ಟಿರುವ ಶೋಭಾಯಮಾನವಾದ ಮಂಡಪದಲ್ಲಿ ಗಣಪತಿಯನ್ನು ಮೊದಲು ಪೂಜಿಸಿ, ತರುವಾಯ ನಾಂದೀಶ್ರಾದ್ಧವನ್ನು ಮಾಡಿ, ಅನಂತರ ಪ್ರತಿಸರಬಂಧವನ್ನೆಸಗಬೇಕು. ಆಮೇಲೆ, ಬ್ರಾಹ್ಮಣರನ್ನು ಸಂಬೋಧಿಸಿ, ಹೆಂಡತಿಯೊಡನೆ ಶುದ್ಧವಸ್ತ್ರಗಳನ್ನು ಧರಿಸಿ ಕುಳಿತುಕೊಂಡು ಸಂಕಲ್ಪಮಾಡಿ, ಬ್ರಾಹ್ಮಣರನ್ನೂ, ಆಚಾರ್ಯ, ಸದಸ್ಯ ಮತ್ತು ಬ್ರಹ್ಮನನ್ನೂ ವರಣಮಾಡಬೇಕು. ಹೀಗೆ ಅವರನ್ನು ಆಯಾ ಸ್ಥಾನಗಳಲ್ಲಿ ಪ್ರತಿಷ್ಠಿಸಿದ ಮೇಲೆ ಮೂರುದಿನಗಳು ಬೋಧಾಯನಮಹರ್ಷಿಯು ಹೇಳಿರುವ ಮಾರ್ಗದಿಂದ ವಿಧಿಪೂರ್ವಕವಾಗಿ ಮಹೇಶ್ವರನನ್ನು ಪ್ರತಿಷ್ಠೆಮಾಡಿ ವಿಧಿಜ್ಞನೆನಿಸಿ ಪಾಯಸಗಳಿಂದಲೂ ಘೃತಮಿಶ್ರವಾದ ಚರುವಿನಿಂದಲೂ ಹೋಮಮಾಡಬೇಕು, ॥೭೨-೭೩-೭೪-೭೫-೭೬॥

ಆಯಾ ಶಾಖೆಗಳಲ್ಲಿ ಹೇಳಿದ ಅಗ್ನಿಮುಖಮಾರ್ಗದಿಂದ ಅಗ್ನಿಯನ್ನು ಸ್ಥಾಪಿಸಿ, ಹೋಮಮಾಡಬೇಕು. ಶಿವಪಂಚಾಕ್ಷರಮಂತ್ರದಿಂದಲಾಗಲೀ, ಓಂಕಾರದಿಂದಲಾಗಲೀ ಕುಂಭಾಭಿಷೇಕವನ್ನು ನಡೆಸಬೇಕು. ಲಿಂಗಗಳಿಗೆ ನೇತ್ರೋನ್ಮೀಲನ

ಮಹಾಭಿಷೇಕವಿಧಿನಾ ಪೂಜಯೇಲ್ಲಿಂಗಮೈಶ್ವರಂ ।
ಪಂಚಾಮೃತೈಃ ಪಂಚಗವ್ಯೈಸ್ತಥಾ ಫಲರಸೈರಪಿ ॥೭೯॥

ಶ್ರೀರುದ್ರೇಣಾಭಿಷೇಕೋऽತ್ರ ಕರ್ತವ್ಯಶ್ಚಮಕೈರಪಿ ।
ವಸ್ತ್ರೈರ್ಗಂಧೈಶ್ಚಧೂಪೈಶ್ಚ ದೀಪೈರ್ನೈವೇದ್ಯಕಲ್ಪನೈಃ ॥೮೦॥

ತಾಂಬೂಲನೀರಾಜನತಃ ಪೂಜಯೇಚ್ಛತ್ರಚಾಮರೈಃ ।
ಪ್ರದಕ್ಷಿಣನಮಸ್ಕಾರೈಃ ಸಂಸ್ತುವೀತ ಮಹೇಶ್ವರಂ ॥೮೧॥

ನಮಸ್ತೇ ದೇವದೇವಾಯ ಶಿವಾಯಾಕಾಶಮೂರ್ತಯೇ ।
ಭವಾಯ ಭವ್ಯರೂಪಾಯ ಹರಭೂಮ್ಯಾತ್ಮನೇ ನಮಃ ॥೮೨॥

ವ್ಯಕ್ತಾವ್ಯಕ್ತಾಯ ಸೋಮಾಯ ಜಲರೂಪಾಯ ತೇ ನಮಃ ।
ಉಗ್ರಾಯ ಭೀಮರೂಪಾಯ ವಾಯುಮೂರ್ತ್ಯಾತ್ಮನೇ ನಮಃ ॥೮೩॥

---

ವೊಂದನ್ನು ಬಿಟ್ಟು ಉಳಿದ ಎಲ್ಲಾ ಕರ್ಮಗಳನ್ನೂ ಮಾಡಬೇಕು. ಎಲೌ ಶಂಕರಿ, ಪ್ರತಿಮೆಗಳಲ್ಲಿ ಮಾತ್ರ ನೇತ್ರೋನ್ಮೀಲನವೇ ಮುಂತಾದ ಸಕಲ ಕರ್ಮಗಳನ್ನೂ ಮಾಡಬೇಕು. ||೭೭-೭೮||

ಈಶ್ವರನ ಲಿಂಗಕ್ಕೆ ಮಹಾಭಿಷೇಕವಿಧಿಗನುಸಾರವಾಗಿ ಪೂಜೆಮಾಡಬೇಕು. ಪಂಚಾಮೃತ, ಪಂಚಗವ್ಯ ಮತ್ತು ಹಣ್ಣಿನ ರಸಗಳಿಂದ ರುದ್ರ ಮತ್ತು ಚಮಕ ಮಂತ್ರಪೂರ್ವಕವಾಗಿ ಅಭಿಷೇಕಮಾಡಬೇಕು. ಅಭಿಷೇಕವಾದಮೇಲೆ, ವಸ್ತ್ರ, ಗಂಧ, ಧೂಪ, ದೀಪ ಮತ್ತು ನೈವೇದ್ಯಾದಿಗಳನ್ನು ಸಲ್ಲಿಸಿ, ತಾಂಬೂಲವನ್ನೂ ಅರ್ಪಿಸಿ, ಆರತಿಯನ್ನೆಸಗಿ ಅನಂತರ ಛತ್ರಿಚಾಮರಗಳಿಂದ ಪೂಜೆಮಾಡಬೇಕು. ಅನಂತರ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಮಹೇಶ್ವರನನ್ನು ಸ್ತುತಿಸಬೇಕು. ||೭೯-೮೦-೮೧||

" ದೇವದೇವನೇ, ಆಕಾಶಮೂರ್ತಿಯೂ, ದೇವಾದಿದೇವನೂ, ಯೋಗಿಹೃದಯವಾಸಿಯೂ ಆದ ನಿನಗೆ ನಮಸ್ಕಾರ. ಪೃಥಿವೀರೂಪನೂ, ಮಂಗಳಮೂರ್ತಿಯೂ ಭವಸಂಜ್ಞಕನೂ (ಜಗದುತ್ಪತ್ತಿಕಾರಣನೂ) ಆದ ನಿನಗೆ ಪ್ರಣಾಮವು; ಜಲರೂಪಿಯೂ, ಚರಾಚರಾತ್ಮಕವಾದ ಜಗದ್ರೂಪದಿಂದ ವ್ಯಕ್ತನೂ, ಇಂದ್ರಿಯಾದ್ಯಗೋಚರವಾದ ರೂಪವುಳ್ಳವನಾದ್ದರಿಂದ ಅವ್ಯಕ್ತನೂ, ಉಮಾರಮಣನೂ ಆದ

ವ್ಯೋಮಕೇಶಾಯ ನಿತ್ಯಾಯ ತೇಜೋಮೂರ್ತ್ಯಾತ್ಮನೇ ನಮಃ ।
ಏವಂ ಸಂಸ್ತುತ್ಯ ದೇವೇಶಿ ಕ್ಷಮಾಪ್ಯ ಪರಮೇಶ್ವರಂ ॥೮೪॥

ಜಾನತಾಽಜಾನತಾವಾಪಿ ಪ್ರತಿಷ್ಠಾ ಯಾ ಮಯಾಕೃತಾ ।
ತಾಂ ಕ್ಷಮಸ್ವ ಮಹಾದೇವ ಲಿಂಗೇಸ್ಮಿನ್ಸುಸ್ಥಿರೋ ಭವ ॥೮೫॥

ತತೋಽರ್ಚಯನ್ಗಂಧಪುಷ್ಪೈರ್ಧನೈರ್ಗೋಭಿಃ ಪ್ರಪೂಜಯೇತ್ ।
ಆಚಾರ್ಯಂ ಋತ್ವಿಜಶ್ಚೈವ ದೀನಾನಾಥಾನ್ದ್ವಿಜೋತ್ತಮಾನ್ ॥೮೬॥

ಭೋಜಯೇಚ್ಛಿವಭಕ್ತಾಂಶ್ಚ ದಕ್ಷಿಣಾಭಿಃ ಪ್ರತೋಷಯೇತ್ ।
ಸಹಸ್ರಂ ತ್ರಿಶತಂ ವಾಪಿ ಶತಂ ದ್ವಾದಶ ಏವ ವಾ ॥೮೭॥

ಹಂತ್ಯರ್ಥಹೀನಂ ಕರ್ತಾರಂ ಮಂತ್ರಹೀನಂ ತು ಋತ್ವಿಜಂ ।
ಸ್ತ್ರಿಯಂ ಲಕ್ಷಣಕಂ ಹೀನಂ ನ ಪ್ರತಿಷ್ಠಾಸಮೋ ರಿಪುಃ ॥೮೮॥

---

ನಿನಗೆ ಪ್ರಣಾಮವು ; ವಾಯುರೂಪನೂ, ಉಗ್ರಸಂಜ್ಞಕನೂ, ಶತ್ರುಭಯಂಕರ ರೂಪಿಯೂ ಆದ ನಿನಗೆ ವಂದನೆಯು. ಆಕಾಶರೂಪವಾದ ಕೇಶವುಳ್ಳವನೂ, ಜನನಮರಣ ರಹಿತನೂ, ತೇಜೋಮೂರ್ತಿಸ್ವರೂಪನೂ ಆದ ನಿನಗೆ ನಮಸ್ಕಾರವು." ಎಲೌ ಪಾರ್ವತಿಯೇ, ಹೀಗೆ ಸ್ತುತಿಸಿ, 'ಮಹಾದೇವ, ತಿಳಿದೊ ಅಥವಾ ತಿಳಿಯದೆಯೋ ಈ ಲಿಂಗಪ್ರತಿಷ್ಠೆಯು ಮಾಡಲ್ಪಟ್ಟಿತು. ಶಂಕರ, ಇದರಲ್ಲಿ ಉಂಟಾಗಿರುವ ಅಪರಾಧ ವನ್ನು ಕ್ಷಮಿಸಿ, ಈ ಲಿಂಗದಲ್ಲಿ ಶಾಶ್ವತವಾಗಿ ನೆಲಸು', ಎಂದು ಕ್ಷಮಾಪಣೆ ಬೇಡಬೇಕು. ॥೮೨-೮೩-೮೪-೮೫॥

ಅನಂತರ ಆಚಾರ್ಯ, ಋತ್ವಿಕ್ಕುಗಳು, ದೀನರೂ, ದಿಕ್ಕಿಲ್ಲದವರೂ ಆದ ಬ್ರಾಹ್ಮಣೋತ್ತಮರನ್ನೂ ಹಾಗೆಯೇ ಈಶ್ವರಭಕ್ತರನ್ನೂ ಗಂಧ, ಪುಷ್ಪ, ಧನ, ಗೋವುಗಳು ಮತ್ತು ದಕ್ಷಿಣೆಗಳಿಂದ ಪೂಜಿಸಬೇಕು. ಸಾವಿರ, ಮುನ್ನೂರು, ನೂರು ಅಥವಾ ಹನ್ನೆರಡುಮಂದಿಯನ್ನಾದರೂ ಈರೀತಿ ಸಂತೋಷಪಡಿಸಬೇಕು.॥೮೬-೮೭॥

ದ್ರವ್ಯಹೀನನಾದ ಯಜಮಾನನನ್ನೂ, ಮಂತ್ರಹೀನನಾದ ಋತ್ವಿಕ್ಕನ್ನೂ, ಲಕ್ಷಣಹೀನೆಯಾದ ಸ್ತ್ರೀಯನ್ನೂ ಈ ಪ್ರತಿಷ್ಠೆಯು ಕೊಲ್ಲುವುದು. ಈ ಪ್ರತಿಷ್ಠೆಗೆ ಸಮಾನವಾದ ಶತ್ರುವೇ ಬೇರೆ ಇಲ್ಲ. ಈ ಪ್ರತಿಷ್ಠಾಕಾರ್ಯದಲ್ಲಿ ದುಡ್ಡಿನ ಲೋಭ

ವಿತ್ತಶಾಠ್ಯಂ ನ ಕುರ್ವೀತ ಫಲಮಾಢ್ಯದರಿದ್ರಯೋಃ ।
ಏವಂ ಸಂಕ್ಷೇಪತಃ ಪ್ರೋಕ್ತಃ ಪ್ರತಿಷ್ಠಾವಿಧಿರುತ್ತಮಃ ॥೮೯॥

॥ ಸೂತ ಉವಾಚ ॥

ಪ್ರತಿಷ್ಠಾದಿನಿಷ್ಠಾಯದಿ ಸ್ಯಾದ್ವಿಶಿಷ್ಟಾ
ಮಹಾತುಂಗಲಿಂಗೇ ಗರಿಷ್ಠಾ ಸಹಿಷ್ಟಾ ।
ಮಹಾಕಷ್ಟಹಂತ್ರೀ ಧನಿಷ್ಠಾಸುಖಸ್ಥಾ
ಗರಿಷ್ಠಾ ಮಹಾಜ್ಯೇಷ್ಠಲಿಂಗೇ ವಿಶಿಷ್ಟಾ ॥೯೦॥

ಅಲಂ ಮಹೀಮಂಡಲದಾನಜಾಲೈ
ರಾಖಂಡಲಪ್ರೀಣನಯಜ್ಞಸಂಘೈಃ ।
ಅಖಂಡಕೃಚ್ಛ್ರಚರಣಾವೃತೇ ಯ
ಲ್ಲಿಂಗಸ್ಯ ತತ್ಕೋಟಿಗುಣಂ ಪ್ರತಿಷ್ಠಿತೇ ॥೯೧॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶಿವಲಿಂಗಪ್ರತಿಷ್ಠಾಪನ
ವಿಧಿನಿರೂಪಣಂ ನಾಮ ಪಂಚಮೋಽಧ್ಯಾಯಃ

---

ವನ್ನು ಮಾಡಬಾರದು. ಎಲೌ ದೇವಿ, ಈ ಫಲವು ಧನಿಕ, ದರಿದ್ರರಿಬ್ಬರಿಗೂ ಉಕ್ತವಾಗಿದೆ. ದೇವಿ, ಹೀಗೆ ಲಿಂಗಪ್ರತಿಷ್ಠೆಯ ಉತ್ತಮ ವಿಧಿಯನ್ನು ನಿನಗೆ ಹೇಳಿದೆನೆಂದು ಶಿವನು ಗಿರಿಜೆಗೆ ನುಡಿದನು. ॥೮೮-೮೯॥

ಮಾನವನ ಮನಸ್ಸು ಶಿವನ ಉನ್ನತವಾದ ಲಿಂಗಪ್ರತಿಷ್ಠಾಕಾರ್ಯದಲ್ಲಿ ವಿಶೇಷ ವಾಗಿತೊಡಗಿದರೆ ಅದೇ ಶ್ರೇಷ್ಠಕಾರ್ಯವು, ಮತ್ತು ಸಹನೀಯವು, ದೊಡ್ಡ ಕಷ್ಟಗಳನ್ನೂ ನಾಶಪಡಿಸುವುದು. ಧನಿಷ್ಠಾದಿ ನಕ್ಷತ್ರಗಳಲ್ಲಿ ಶಿವನ ದಿವ್ಯಲಿಂಗಪ್ರತಿಷ್ಠೆಯು ವಿಶೇಷ ಫಲದಾಯಕವು. ॥೯೦॥

ಭೂಮಂಡಲವೇ ಮೊದಲಾದ ಮಹಾದಾನಗಳು ಮತ್ತು ಇಂದ್ರಪ್ರೀತಿಕರವಾದ ಯಾಗ ಸಮೂಹಗಳಿಂದ ತಾನೆ ಪ್ರಯೋಜನವೇನು? ಸಂಪೂರ್ಣವಾಗಿ ಕೃಚ್ಛ್ರ ಚಾಂದ್ರಾಯಣಾದಿ ವ್ರತಾಚರಣೆಯಿಂದಲಾದರೂ ಏನೂ ಪ್ರಯೋಜನವಿರಲಾರದು ;

ಇವೆಲ್ಲಕ್ಕಿಂತಲೂ ಶಿವಲಿಂಗಪ್ರತಿಷ್ಠೆಯು ಕೋಟಿಪಾಲು ಫಲದಾಯಕವು ಎಂದು ಸೂತರು ಶೌನಕಾದಿಗಳಿಗೆ ಪರಮೇಶ್ವರನು ಪಾರ್ವತಿಗೆ ತಿಳಿಸಿದ ವಿಷಯವನ್ನು ಹೇಳಿದರು. ||೯೧||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಲಿಂಗಪ್ರತಿಷ್ಠಾಪನ ವಿಧಿನಿರೂಪಣೆಯೆಂಬ ಐದನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ಷಷ್ಠೋಽಧ್ಯಾಯಃ

॥ ದೇವ್ಯುವಾಚ ॥

ಪ್ರಾಸಾದಗೋಪುರಾಣಾಂ ಚ ಕರಣೇ ವಾ ಫಲಂ ಚ ಕಿಂ ।
ಪ್ರಾಕಾರಗೋಪುರದ್ವಾರವಾಹನಾನಾಂ ಪ್ರಕಲ್ಪನೇ ॥೧॥

ಮಂಟಪಾನಾಂ ಚ ಕರಣೇ ವಾಪೀಕೂಪೋದಪಾನತಃ ।
ಶಿವಾಗಾರೇ ವಿಶೇಷೇಣ ಶಿವಪುಷ್ಪವನಸ್ಯ ಚ ॥೨॥

ಕಿಂ ಫಲಂ ಸ್ಯಾನ್ಮಹಾದೇವ ತನ್ಮೇ ವದ ದಯಾನಿಧೇ ॥೩॥

---

## ಆರನೆಯ ಅಧ್ಯಾಯವು

ಮಹಾದೇವನೆ, ಶಿವಾಲಯಕ್ಕೆ ಉಪ್ಪರಿಗೆ, ಗೋಪುರಗಳನ್ನು ಮಾಡಿಸುವುದ ರಿಂದುಂಟಾಗುವ ಫಲವಾವುದು ? ದಯಾಳುವೆ, ಪ್ರಾಕಾರ, ಗೋಪುರದ್ವಾರ, ವಾಹನ ಗಳು, ಮಂಟಪ,ವಾಪಿ, ಕೂಪಗಳನ್ನು ಶಿವದೇವಾಲಯಗಳಲ್ಲಿ ತೋಡಿಸುವುದು ಮತ್ತು ಶಿವಪೂಜಾರ್ಥವಾಗಿ ಹೂತೋಟಗಳನ್ನು ರಚಿಸುವುದು, ಇವುಗಳಿಂದ ಯಾವ ಫಲವುಂಟಾಗುವುದು, ದಯವಿಟ್ಟು ಅದನ್ನು ನನಗೆ ಹೇಳೆಂದು ಪಾರ್ವತಿಯು ಮಹಾದೇವನನ್ನು ಪ್ರಾರ್ಥಿಸಿದಳು. ॥೧-೨-೩॥

॥ ಈಶ್ವರ ಉವಾಚ ॥

ಮೃದ್ದಾರ್ವಿಷ್ಟಕಪಾಷಾಣೈರ್ಯಃ ಕುರ್ಯಾದ್ವಾ ಶಿವಾಲಯಂ ।
ತ್ರಿಸಪ್ತಕುಲಸಂಯುಕ್ತಃ ಶಿವಲೋಕೇ ಮಹೀಯತೇ ॥೪॥

ಮೃನ್ಮಯಾತ್ಕೋಟಿಗುಣಿತಂ ಪುಣ್ಯಂ ಸ್ಯಾದ್ದಾರುಭಿಃ ಕೃತಂ ।
ತ್ರಿಗುಣಂ ಚೇಷ್ಟಕಾದಿಭ್ಯಃ ಸುಧಯಾ ಪರಿಕಲ್ಪಿತಂ ॥೫॥

ಶೈಲೈರನಂತಂ ದೇವೇಶಿ ಕಲ್ಪಿತಂ ಶಿಲ್ಪಿಭಿರ್ದೃಢಂ ।
ಕೋಟಿಕೋಟಿಗುಣಂ ಪುಣ್ಯಂ ಉತ್ತರತ್ರ ಮಹೇಶ್ವರಿ ॥೬॥

ಮೃಚ್ಛೈಲಯೋಃ ಸಮಂ ಜ್ಞೇಯಂ ಫಲಮಾಢ್ಯದರಿದ್ರಯೋಃ ।
ಯತ್ರ ಕ್ವಾಪಿ ಶಿವೇಭಕ್ತ್ಯಾ ಕುರ್ಯಾಚ್ಛೈಲೇಷ್ಟಕಾದಿಭಿಃ ॥೭॥

ನವಂ ಪುರಾಣರಹಿತಂ ಜೀರ್ಣಂ ಪತಿತಮೇವ ವಾ ।
ನವಾದಪಿ ಸದೋತ್ಕೃಷ್ಟಂ ಜೀರ್ಣೋದ್ಧಾರಂ ಮಹೇಶ್ವರಿ ॥೮॥

---

ಆಗ ಮಹಾದೇವನು ದೇವಿಗೆ ಇಂತೆಂದನು—ಮಣ್ಣು, ಮರ, ಇಟ್ಟಿಗೆ ಇವುಗಳಿಂದ ಶಿವದೇವಾಲಯಗಳನ್ನು ಮಾಡಿಸುವವನು ತನ್ನ ಇಪ್ಪತ್ತೊಂದು ಕುಲದೊಡನೆ ಶಿವಲೋಕದಲ್ಲಿ ಪೂಜಿಸಲ್ಪಡುವನು. ಮಣ್ಣಿಗಿಂತಲೂ ಮರಗಳಿಂದ ಮಾಡಿಸುವ ದೇವಾಲಯವು ಕೋಟಿಪಾಲು ಗುಣಕಾರಿಯು. ಇದಕ್ಕಿಂತಲೂ ಇಟ್ಟಿಗೆಯಿಂದ ರಚಿಸಿ ಸುಣ್ಣದಿಂದ ಲೇಪಿಸಲ್ಪಡುವುದು ಮೂರರಷ್ಟು ಹೆಚ್ಚು ಗುಣವುಳ್ಳದ್ದು. ದೇವೇಶ್ವರಿ, ಶಿಲ್ಪಿಗಳ ಮೂಲಕ ಬಿಗಿಯಾದ ಕಲ್ಲುಗಳಿಂದ ಕಟ್ಟಿಸಿದ ದೇವಾಲಯವು ಅನಂತ ಫಲದಾಯಕವು. ಇದಕ್ಕಿಂತ ಮುಂದೆ ಮುಂದೆ ಲೋಹಾದಿಗಳಿಂದ ರಚಿತವಾಗುವುದಾದರೆ ಕೋಟಿಪಾಲು ಹೆಚ್ಚು ಪುಣ್ಯಪ್ರದವು. ॥೪-೫-೬॥

ಮಣ್ಣು ಮತ್ತು ಕಲ್ಲುಗಳಿಂದ ಕಟ್ಟಿಸಲ್ಪಡುವ ಶಿವದೇವಾಲಯಗಳು ಬಡವ ಮತ್ತು ಹಣವಂತರಿಬ್ಬರಿಗೂ ಸಮಾನ ಫಲದಾಯಕಗಳು. ಶಿವನಲ್ಲಿ ಭಕ್ತಿಯಿಟ್ಟು ಎಲ್ಲಾದರೂ ಇಟ್ಟಿಗೆಗಳಿಂದ ಶಿವಾಲಯಗಳನ್ನು ಕಟ್ಟಿಸಬಹುದು. ಹಳೆಯದಲ್ಲದೇ ಹೊಸದಾಗಿ ಕಟ್ಟಿಸಬಹುದು. ಮಹೇಶ್ವರಿಯೇ, ಹೊಸದಾಗಿ ಕಟ್ಟಿಸುವುದಕ್ಕಿಂತಲೂ ಯಾವಾಗಲೂ ಜೀರ್ಣೋದ್ಧಾರ ಮಾಡುವುದೇ ಉತ್ಕೃಷ್ಟವಾದುದೆಂದು ತಿಳಿ. ॥೭-೮॥

ಅಷ್ಟೇಷ್ಟಕಾಭಿರ್ವಾ ಕುರ್ಯಾತ್ಕ್ರೀಡಮಾನಃ ಶಿವಾಲಯಂ ।
ಸೋಽಪಿ ರುದ್ರಗಣೋ ಭೂಯಾದ್ಭಕ್ತ್ಯಾ ವಿತ್ತಾನುಸಾರತಃ ॥೯॥

ಗರ್ಭಗೇಹಂ ಮಹೇಶಸ್ಯ ಯಃ ಕುರ್ಯಾದುಕ್ತಧಾತುಭಿಃ ।
ಪಟ್ಟಿಕಾವೇಷ್ಟಿತಂ ದೇವ ದೇವಕೋಷ್ಠೈಶ್ಚ ಶೋಭಿತಂ ॥೧೦॥

ರುದ್ರಾವತಾರಚರಿತ್ರೈರ್ವೃಷಕುಂಭವಿರಾಜಿತಂ ।
ಯಾವದ್ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ॥೧೧॥

ತತ್ಪಾಷಾಣಸುಧಾಲೇಪಕಣೈಃ ಸಾಹಸ್ರಸಂಖ್ಯಯಾ ।
ತಾವತ್ಕಾಲಂ ವಸೇತ್ಸ್ವರ್ಗೇ ಯಾವದಿಂದ್ರಾಶ್ಚತುರ್ದಶ ॥೧೨॥

ಮಂಡಪಂ ಚ ದಶಸ್ತಂಭೈರ್ಯುತಂ ಯಃ ಕಾರಯೇಚ್ಛಿವೇ ।
ಶತಸ್ತಂಭಂ ತತೋಽಪೀಶೇ ಸಹಸ್ರಸ್ತಂಭಮಂಡಿತಂ ॥೧೩॥

ಸುಪೀಠವೇದಿಕೋಪೇತಂ ವಲಭೀಕುಂಡಮಂಡಿತಂ ।
ಜಾಲಕಂ ತೋರಣೋಪೇತಂ ಚಿತ್ರವಿದ್ರುಮಪುತ್ರಕಂ ॥೧೪॥

---

ಆಟವಾಡುವುದಕ್ಕಾಗಿಯೇ ಎಂಟು ಇಟ್ಟಿಗೆಗಳಿಂದ ಶಿವದೇವಾಲಯವನ್ನು ರಚಿಸುವವನೂ ರುದ್ರಗಣವಾಗಿ ಮೆರೆಯುವನು. ಎಲೌ ಪಾರ್ವತಿ, ತನ್ನ ಐಶ್ವರ್ಯಕ್ಕೆ ಅನುಗುಣವಾಗಿ ಭಕ್ತಿಯಿಂದ ಹಿಂದೆ ಹೇಳಿದ ಧಾತುಗಳ ಮೂಲಕ ಗರ್ಭಗೇಹವನ್ನು ಮಾಡಿಸುವವನೂ ಶಿವಗಣಪದವಿಯನ್ನು ಹೊಂದುವನು. ದೇವತೆಗಳ ಗುಂಪಿನಿಂದ ಶೋಭಿಸುವ ಪಟ್ಟಿಗಳಿಂದ ಸುತ್ತುವರಿಯಲ್ಪಟ್ಟಿರುವ ಮತ್ತು; ॥೯-೧೦॥

ರುದ್ರನ ಅವತಾರಕಥೆಗಳಿಂದ ಚಿತ್ರಿಸಿ, ವೃಷಕುಂಭಗಳಿಂದ ವಿರಾಜಿಸುತ್ತಿರುವಂತೆ ರಚಿಸುವವನು ಸಾವಿರಯುಗಗಳ ವರೆಗೂ ರುದ್ರಲೋಕದಲ್ಲಿ ಪೂಜಿಸಲ್ಪಡುವನು. ಈ ಅವತಾರಚರಿತೆಗಳನ್ನೇ ಕಲ್ಲುಗಳಿಂದ ಕೆತ್ತಿಸಿ ಸುಣ್ಣವನ್ನು ಲೇಪಿಸುವುದರಿಂದ ಸಾವಿರಯುಗಗಳ ವರೆಗೆ ಸ್ವರ್ಗಲೋಕದಲ್ಲಿ ಹದಿನಾಲ್ಕುಮಂದಿ ಇಂದ್ರರಿರುವ ವರೆಗೆ ವಾಸಮಾಡುವನು. ॥೧೧-೧೨॥

ಹತ್ತು ಕಂಬಗಳುಳ್ಳ ಮಂಡಪವನ್ನು ಶಿವನಿಗೆ ಮಾಡಿಸುವವನು, ಆದಕ್ಕಿಂತಲೂ ಹೆಚ್ಚಾಗಿಯೂ ನೂರು ಅಥವಾ ಸಾವಿರ ಕಂಬಗಳಿಂದ ಶೋಭಿತವಾದ ಮಂಟಪವನ್ನು ರಚಿಸಿ, ಉತ್ತಮವಾದ ಪೀಠ, ವೇದಿಕೆಗಳಿಂದ ಯುಕ್ತವಾಗಿ ಮಾಡಿ,

ತಾವದ್ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ।
ತಾವತ್ಕಾಲಂ ವಸೇತ್ಸ್ವರ್ಗೇ ಯಾವದಿಂದ್ರಾಶ್ಚತುರ್ದಶ ॥೧೫॥

ತತ್ಪಾಷಾಣಸುಧಾಲೇಪಕಳಶೈಃ ಸಾಹಸ್ರಸಂಖ್ಯಯಾ ।
ಗೋಪುರೈಃ ಭೂಧರಾಕಾರೈಃ ಸಹಸ್ರದಲಮಂಡಿತೈಃ ॥೧೬॥

ಕಾರಯೇಚ್ಛಿಲ್ಪಶಾಸ್ತ್ರಜ್ಞೈಃ ರುದ್ರರೂಪವಿಚಿತ್ರಿತೈಃ ।
ದಶೈಕಾದಶಸಾಹಸ್ರಕಲ್ಶೈಃ ಶತಪರೀಮಿತೈಃ ॥೧೭॥

ಕುಂಭೈರ್ವೃಷೈಃ ರುದ್ರರೂಪೈರ್ಯೋಽಲಂಕುರ್ಯಾಚ್ಚ ರಂಗತಃ ।
ಯಾವಂತಿ ರುದ್ರರೂಪಾಣಿ ಸ್ವರೂಪಾಣ್ಯಪಿ ಲೇಖಯೇತ್ ॥೧೮॥

ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ।
ಶಿವಾಲಯಸ್ಯ ಪರಿತಶ್ಚತುರ್ದಿಕ್ಷು ವಿರಾಜಿತೈಃ ॥೧೯॥

---

ಮೇಲ್ಭಾವಣಿ, ಕುಂಡಗಳನ್ನಲಂಕರಿಸಿ, ಜಾಲಕ ತೋರಣಗಳನ್ನೂ ಮಾಡಿಸಿ ಚಿತ್ರವಿಚಿತ್ರವಾದ ಹವಳದ ಬೊಂಬೆಗಳನ್ನು ಮಾಡಿಸಿಕೊಡುವವನು, ಕಂಬಗಳ ಸಂಖ್ಯಾನುಗುಣವಾಗಿ ಸಾವಿರಯುಗಗಳ ವರೆಗೆ ರುದ್ರಲೋಕದಲ್ಲಿ ಪೂಜಿಸಲ್ಪಡುತ್ತಾನೆ. ||೧೩-೧೪||

ಅಷ್ಟುಕಾಲದ ವರೆಗೆ ಹದಿನಾಲ್ಕುಮಂದಿ ಇಂದ್ರರಿರುವ ತನಕ ಸ್ವರ್ಗಲೋಕದಲ್ಲಿ ವಾಸಿಸುತ್ತಾನೆ. ಅದೇ ದೇವಾಲಯಗಳನ್ನು ಕಲ್ಲುಗಳಿಂದ ಕಟ್ಟಿಸಿ ಪರ್ವತಸಮಾನಗಳಾದ ಗೋಪುರಗಳಿಂದಲಂಕರಿಸಿ, ಸುಣ್ಣವನ್ನು ಲೇಪನಮಾಡುವವನು, ಸಹಸ್ರಸಂಖ್ಯಾಕ ವರ್ಷಗಳ ತನಕ ಸ್ವರ್ಗಲೋಕದಲ್ಲಿರುವನು. ||೧೫-೧೬||

ರುದ್ರನ ರೂಪವನ್ನು ಚಿತ್ರಿಸಬಲ್ಲ ಶಿಲ್ಪಶಾಸ್ತ್ರಜ್ಞರಿಂದ ದೇವಾಲಯವನ್ನು ಮಾಡಿಸಬೇಕು. ಆ ದೇವಾಲಯದಲ್ಲಿ ಹತ್ತು, ಹನ್ನೊಂದು, ನೂರು, ಸಾವಿರ ಸಂಖ್ಯೆಗಳಲ್ಲಿ ಕಲಶಗಳನ್ನೂ, ವೃಷಭವಿಗ್ರಹಗಳನ್ನೂ, ಈಶ್ವರಲಿಂಗಗಳನ್ನೂ ಶಿಲ್ಪಶಾಸ್ತ್ರಾನುಗುಣವಾಗಿ ರಚನೆಮಾಡಿಸಬೇಕು. ಶಿವಲೀಲಾಬೋಧಕಗಳಾದ ವಿಗ್ರಹಗಳನ್ನೂ ನಿರ್ಮಾಣಮಾಡಿಸಬೇಕು. ||೧೭-೧೮||

ಎಲೌ ಪಾರ್ವತಿ, ಶಿವದೇವಾಲಯದ ಸುತ್ತಲೂ, ನಾಲ್ಕು ದಿಕ್ಕುಗಳಲ್ಲಿಯೂ, ಶೋಭಿಸುವಂತೆ ಪ್ರಾಕಾರವನ್ನು ಕಟ್ಟಿಸುವವನು, ಅದಕ್ಕೆ ಉಪಯೋಗಿಸಲ್ಪಡುವ

ಪ್ರಾಕಾರಂ ಕಾರಯೇದ್ಯಸ್ತು ಪ್ರಾಕಾರಸ್ಯ ಶಂಕರಿ ।
ಯಾವತ್ತಸ್ಮಿನ್ಸಿರಚಿತಾಃ ಪಾಷಾಣಾ ಇಷ್ಟಕಾಸ್ತಥಾ ॥೨೦॥

ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ।
ಖಂಡಸ್ಫಟಿತಸಂಕಾಶಂ ಯಃ ಕುರ್ವೀತ ಶಿವಾಲಯಂ ॥೨೧॥

ಪ್ರಾಕಾರಂ ಗೋಪುರಂ ವಾಪಿ ಮಂಡಪಂ ವಾ ಸಪೀಠಕಂ ।
ನೂತನಾದಪಿ ಚೋತ್ಕೃಷ್ಟಂ ಜೀರ್ಣೋದ್ಧಾರಂ ಪ್ರಶಸ್ಯತೇ ॥೨೨॥

ದೂರತಃ ಶಿಖರಂ ದೃಷ್ಟ್ವಾ ಗೋಪುರಸ್ಯ ಮಹೇಶಿತುಃ ।
ಸಪ್ತಜನ್ಮಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥೨೩॥

ಪಶ್ಚಾತ್ಪ್ರಾಙ್ಮುಖಲಿಂಗಸ್ಯ ಗರ್ಭಾಗಾರಂ ತು ಕಾರಯೇತ್ ।
ದೇವಾಲಯಂ ತತಃ ಕೃತ್ವಾ ದೇವೀಮೂರ್ತಿಕರಾನ್ವಿತಂ ॥೨೪॥

ಶಿವಲೋಕೇ ಗಣೋ ಭೂತ್ವಾ ಮೋದತೇ ಶಾಶ್ವತೀಃ ಸಮಾಃ ।
ಸ್ಕಂದಾಲಯಂ ಗಣೇಶಸ್ಯ ಭೈರವಸ್ಯ ಮಹಾತ್ಮನಃ ॥೨೫॥

---

ಕಲ್ಲು ಮತ್ತು ಇಟ್ಟಿಗೆಗಳಷ್ಟು ವರ್ಷಗಳಕಾಲ ಶಿವಲೋಕದಲ್ಲಿ ಪೂಜಿಸಲ್ಪಡುವನು. ॥೧೯-೨೦॥

ತುಂಡುಸ್ಫಟಿಕ ಸಮಾನವಾದ ಕಾಂತಿಯುಳ್ಳ, ಶಿವಾಲಯ, ಪ್ರಾಕಾರ, ಗೋಪುರ, ಮಂಡಪ ಅಥವಾ ಪೀಠವನ್ನಾದರೂ ಮಾಡಿಸುವವನೂ, ಶಿವಲೋಕದಲ್ಲಿ ಪೂಜಾರ್ಹನಾಗುತ್ತಾನೆ ದೇವಿ, ಹೊಸದಾಗಿ ದೇವಾಲಯಾದಿಗಳನ್ನು ಕಟ್ಟಿಸುವುದಕ್ಕಿಂತಲೂ ಜೀರ್ಣವಾದವುಗಳನ್ನು ಸರಿಪಡಿಸುವುದೇ ಉತ್ತಮವಾದುದು.॥೨೧-೨೨॥

ದೂರದಿಂದಲೇ ಮಹೇಶನ ದೇವಾಲಯ ಗೋಪುರದ ಶಿಖರವನ್ನು ನೋಡಿದ ಮಾತ್ರದಿಂದಲೇ ಏಳುಜನ್ಮಗಳಲ್ಲಿ ಮಾಡಿದ ಪಾಪವು ಆ ಕೂಡಲೇ ನಾಶವಾಗುವುದು. ದೇವಿಯೇ, ಪೂರ್ವಮುಖವಾದ ಶಿವಲಿಂಗಕ್ಕೆದುರಾಗಿ ದೇವಿಯ ಗರ್ಭಗೃಹವನ್ನು ರಚಿಸಬೇಕು. ಹೀಗೆ ದೇವಿಯ ಮೂರ್ತಿಗಳೊಡನೆ ದೇವಾಲಯವನ್ನು ಮಾಡಿಸಿದವನು ಶಿವಲೋಕದಲ್ಲಿ ಗಣರೂಪವನ್ನು ಹೊಂದಿ ಅನೇಕ ವರ್ಷಗಳು ಶಾಶ್ವತಸುಖವನ್ನನುಭವಿಸುವನು. ॥೨೩-೨೪॥

ಸ್ಕಂದಸ್ವಾಮಿಯ ದೇವಾಲಯ, ಗಣಪತಿಗುಡಿ, ಮಹಾತ್ಮನಾದ ಭೈರವಾ

ಚಂಡೀಶ್ವರಾಲಯಂ ಕೃತ್ವಾ ಸ ಲಭೇತ್ಪುಣ್ಯಮುತ್ತಮಂ ।
ವೃಷಾಲಯಂ ಪ್ರಕುರ್ವೀತ ತದಗ್ರೇ ಬಲಿಪೀಠಕಂ ॥೨೬॥

ತಸ್ಯಾಗ್ರತೋ ಧ್ವಜಸ್ತಂಭಂ ಕುರ್ಯಾದೂರ್ಧ್ವಂ ಸುವರ್ತುಲಂ ।
ಪಂಚವಿಂಶತಿಮೂರ್ತೀನಾಮಾಲಯಾನಿ ಸಮಂತತಃ ॥೨೭॥

ಶ್ಲಕ್ಷ್ಣಾನಿ ಸುಮನೋಜ್ಞಾನಿ ಸುಕುಟ್ಟಿಮಯುತಾನಿ ಚ ।
ಚಿತ್ರಧ್ವಜಪತಾಕಾಗ್ರಸ್ವರ್ಣಕುಂಭಯುತಾನಿ ಚ ॥೨೮॥

ಕೃತ್ವಾ ಯತ್ಫಲಮಾಪ್ನೋತಿ ತದೇಕಾಗ್ರಮನಾಃ ಶೃಣು ।
ಸ್ಕಂದೋಮಾಸಹಿತಂ ದೇವಮಾಸೀನಂ ಪರಮಾಸನೇ ॥೨೯॥

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಸರ್ವಾನ್ಕಾಮಾನವಾಪ್ನುಯಾತ್ ।
ಕೈಲಾಸೇ ಸಂವಸೇದೇವ ದಕ್ಷಿಣೇ ವಿಷ್ಣುಪಂಚಕಂ ॥೩೦॥

---

ಲಯ ಮತ್ತು ಚಂಡೀಶ್ವರಾಲಯಗಳನ್ನು ಮಾಡಿಸಿದವನು ಉತ್ತಮವಾದ ಪುಣ್ಯವನ್ನು ಪಡೆಯುವನು. ವೃಷಭಾಲಯವನ್ನೂ ಮಾಡಿಸಿ ಹಾಗೆಯೇ ಅದರ ಮುಂದೆ ಬಲಿಕಂಬವನ್ನೂ, ಅದರ ಮುಂದೆ ಮೇಲ್ಭಾಗದಲ್ಲಿ ದುಂಡಾಗಿರುವ ಧ್ವಜಸ್ತಂಬವನ್ನೂ ಮಾಡಿಸಬೇಕು. ॥೨೫-೨೬॥

ಸುತ್ತಲೂ ಶಿವನ ಇಪ್ಪತ್ತೈದು ಮೂರ್ತಿಗಳ ಆಲಯಗಳನ್ನೂ ಗಟ್ಟಿಯಾಗಿ, ಮನೋಹರವಾಗಿ ಒಳ್ಳೆಯ ಚಿತ್ರಕೆಲಸಮಾಡಿದ ಭೂಮಿಯೊಡನೆ ಮಾಡಿಸಿ, ಚಿತ್ರವರ್ಣಗಳಾದ ಧ್ವಜ, ಪತಾಕೆ ಇವುಗಳ ತುದಿಯಲ್ಲಿ ಚಿನ್ನದ ಕಲಶಯುಕ್ತಗಳಾಗುವಂತೆ ಮಾಡಿಸಿದವನು ಹೊಂದುವ ಫಲವನ್ನು ನೀನು ಏಕಾಗ್ರಮನಸ್ಸಿನಿಂದ ಕೇಳು ಎಂದು ಶಿವನು ಪಾರ್ವತಿಗಿಂತೆಂದನು. ॥೨೭-೨೮॥

ದೇವಿಯೇ, ಕುಮಾರಸ್ವಾಮಿ ಮತ್ತು ಉಮೆಯೊಡನೆ ಶ್ರೇಷ್ಠವಾದ ಆಸನದಲ್ಲಿ ಮಂಡಿಸಿರುವ ಮಹಾದೇವನನ್ನು ಭಕ್ತಿಪೂರ್ವಕವಾಗಿ ಪ್ರತಿಷ್ಠಿಸುವವನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು. ಇವನು ದಕ್ಷಿಣಕೈಲಾಸದಲ್ಲಿ ವಿಷ್ಣುಪಂಚಕಾವಧಿ ವಾಸಮಾಡುತ್ತಾನೆ. ಇವನು ವಾಸಮಾಡುವಷ್ಟುಕಾಲ ಸಕಲ ಭೋಗಗಳನ್ನೂ ಅನಂತವಾಗಿ ಅನುಭವಿಸುವನು. ॥೨೯-೩೦॥

ಯಾವತ್ಕಾಲೇನ ಸಂತಿಷ್ಠೇತ್ತಾವದ್ಯೋಗಭುಗವ್ಯಯಃ ।
ಏಕಪಾದಂ ಚತುರ್ಬಾಹುಂ ತ್ರಿನೇತ್ರಂ ಶೂಲಸಂಯುತಂ ॥೩೦॥

ದೃಷ್ಟ್ವಾ ಸ್ಥಿತಂ ಹರಿಂ ವಾಮೇ ದಕ್ಷಿಣೇ ವಿಧಿಮವ್ಯಯಂ ।
ಅಷ್ಟಾವಿಂಶತಿಕೋಟೀನಾಂ ರುದ್ರಾಣಾಂ ಸ್ವಾಂಗತೋಽಹರಃ ॥೩೧॥

ವಿನಿರ್ಮಾಯಾಥಮೂರ್ತೀನಾಂ ಪಂಚವಿಂಶತಿಕಂ ತಥಾ ।
ಪುರುಷಂ ಹೃದಯಾದ್ದೇವಿ ಸದ್ಯೋಜಾತಂ ತು ಪಾದತಃ ॥೩೨॥

ಅಘೋರಂ ವಕ್ತ್ರತಃ ಶಂಭುರ್ಹಸ್ತಾಭ್ಯಾಂ ವಾಮುಮೀಶ್ವರಂ ।
ಈಶಾನಂ ಮೂರ್ಧತಃ ಶಂಭುರ್ನಿರ್ಮಾಯಾಗ್ರೇ ಸಚಾಸೃಜತ್॥೩೪॥

ಪ್ರಕೃತಿಂ ವಾಮತಶ್ಚೈವ ಬುದ್ಧಿಂ ವೈ ಬುದ್ಧಿದೇಶತಃ ।
ಅಹಂಕಾರಾದಹಂಕಾರಂ ತನ್ಮಾತ್ರಾಣಿ ಚ ಮಾತ್ರಯಾ ॥೩೫॥

ಇಂದ್ರಿಯಾಣೀಂದ್ರಿಯಾದ್ದೇವಲೀಲಯಾ ಪರಮೇಶ್ವರಃ ।
ಪೃಥಿವೀಂ ಪಾದದೇಶಾತ್ಸಗುಹ್ಯದೇಶಾಜ್ಜಲಂ ತಥಾ ॥೩೬॥

---

ಒಂದು ಕಾಲು, ನಾಲ್ಕು ತೋಳ್ಗಳು, ಮೂರು ಕಣ್ಣುಗಳಿಂದ ಕೂಡಿ ಶೂಲಾಯುಧಸಂಪನ್ನನಾಗಿದ್ದು, ವಿಷ್ಣುವನ್ನೂ ಎಡಭಾಗದಲ್ಲಿಯೂ, ಬಲಗಡೆ ವ್ಯಯರಹಿತನಾದ ಬ್ರಹ್ಮನನ್ನೂ ನೋಡಿ ಶಿವನು ತನ್ನ ಅವಯುವಗಳಿಂದ ಇಪ್ಪತ್ತೆಂಟುಕೋಟಿ ರುದ್ರರನ್ನೂ, ಇಪ್ಪತ್ತೈದು ಮೂರ್ತಿಗಳನ್ನೂ ನಿರ್ಮಿಸಿದನು. ಹಾಗೆಯೇ ಹೃದಯದಿಂದ ಪುರುಷನನ್ನೂ, ಪಾದದಿಂದ ಸದ್ಯೋಜಾತನನ್ನೂ ಮುಖದಿಂದ ಅಘೋರನನ್ನೂ ಕೈಗಳಿಂದ ಈಶ್ವರನನ್ನೂ, ತಲೆಯಿಂದ ಈಶಾನನನ್ನೂ ನಿರ್ಮಿಸಿ ಮುಂದೆ ಸೃಷ್ಟಿಕ್ರಮವನ್ನು ಮುಂದುವರಿಸಿದನು. ॥೩೦-೩೧-೩೨-೩೪॥

ಎಡಭಾಗದಿಂದ ಪ್ರಕೃತಿಯನ್ನೂ, ಬುದ್ಧಿಪ್ರದೇಶದಿಂದ ಬುದ್ಧಿಯನ್ನೂ ಅಹಂಕಾರದಿಂದ ಅಹಂಕಾರತತ್ವವನ್ನೂ. ಆಯಾ ಮಾತ್ರೆಗಳಿಂದ ಪಂಚತನ್ಮಾತ್ರಗಳನ್ನೂ ಇಂದ್ರಿಯಗಳಿಂದ ಇಂದ್ರಿಯಗಳನ್ನೂ, ಪರಮೇಶ್ವರನು ಲೀಲೆಯಿಂದ ಸೃಜಿಸಿದನು. ಪಾದಭಾಗದಿಂದ ಭೂಮಿಯನ್ನು ಗುಹ್ಯದೇಶದಿಂದ ನೀರನ್ನೂ ನಾಭಿಪ್ರದೇಶದಿಂದ ಮಹಾಬೆಂಕಿಯನ್ನೂ ಹೃದಯದಿಂದ ಸೂರ್ಯನನ್ನೂ, ಕಿವಿಯಿಂದ ಚಂದ್ರನನ್ನೂ ಹುಬ್ಬುಗಳ ಮಧ್ಯದಿಂದ ತನ್ನನ್ನೂ (ಆತ್ಮನನ್ನೂ)

ನಾಭಿದೇಶಾನ್ಮಹಾವಹ್ನಿಂ ಹೃದಯಾದ್ಭಾಸ್ಕರಂ ತಥಾ ।
ಕರ್ಣಾತ್ಸೋಮಂ ತಥಾತ್ಮಾನಂ ಭ್ರೂಮಧ್ಯಾನ್ಮಸ್ತಕಾದ್ದಿವಂ ॥೩೭॥

ಪೃಷ್ಠೇವೈವ ಸಂಸ್ಥಿತಃ ಸಾಕ್ಷಾಜ್ಜಗತ್ಸರ್ವಂ ಚರಾಚರಂ ।
ಪಂಚವಿಂಶತಿಮೂರ್ತೀಶ್ಚ ಪ್ರಾವಿಶತ್ಸ್ವೇನ ತೇಜಸಾ ॥೩೮॥

ಏಕಾಂಶೇನ ಮಹಾದೇವ ಏಕಧಾ ಬಹುಧಾ ಶ್ರುತಃ ।
ವಾಮಾಂಗಸ್ಥಿತಲೋಕೇಶ ಹರಿಣಾ ಚೈವಸೇವಿತಃ ॥೩೯॥

ಸರ್ವಜ್ಞಂ ಸರ್ವಗಂ ದೇವಂ ಕೃತ್ವಾ ಭಕ್ತ್ಯಾವಿಧಾನತಃ ।
ಪ್ರತಿಷ್ಠಾಪ್ಯ ಯಥಾನ್ಯಾಯ್ಯಂ ಶಿವಸಾಯುಜ್ಯಮಾಪ್ನುಯಾತ್॥೪೦॥

ತ್ರಿಪಾದಂ ಸಪ್ತಹಸ್ತಂ ಚ ಚತುಃ ಶೃಂಗಂ ತ್ರಿಶೀರ್ಷಕಂ ।
ಕೃತ್ವಾ ಯಜ್ಞೇಶಮೀಶಾನಂ ಅಗ್ನಿಲೋಕೇ ಮಹೀಯತೇ ॥೪೧॥

ತತ್ರ ಭುಕ್ತ್ವಾ ಮಹಾಭೋಗಾನ್ಕಲ್ಪಲಕ್ಷಂ ಸುಖೀ ನರಃ ।
ಕ್ರಮಾದಾಗತ್ಯ ಲೋಕೇಽಸ್ಮಿನ್ಧರಾಧೀಶೋ ಭವೇನ್ನೃಪಃ ॥೪೨॥

---

ತಲೆಯ ಭಾಗದಿಂದ ಸ್ವರ್ಗವನ್ನೂ ನೋಡಿಕೊಂಡೇ ಚರಾಚರಾತ್ಮಕವಾದ ಈ ಸಕಲ ಪ್ರಪಂಚವನ್ನೂ ಸೃಷ್ಟಿಮಾಡಿದನು. ॥೩೫-೩೬-೩೭॥

ಆ ಮಹೇಶನು ತನ್ನ ಈ ಇಪ್ಪತ್ತೈದು ಮೂರ್ತಿಗಳನ್ನೂ ತನ್ನ ತೇಜಸ್ಸಿನಿಂದ ಪ್ರವೇಶಿಸಿದನು. ಎಡಭಾಗದಲ್ಲಿ ಜಗತ್ಪಾಲಕನಾದ ವಿಷ್ಣುವಿನಿಂದ ಸೇವಿಸಲ್ಪಡುತ್ತಿರುವ ಆ ಮಹೇಶನು ಒಂದೇ ಅಂಶದಿಂದ ಅನೇಕ ಭೇದಗಳುಳ್ಳವನಾಗಿ ಗೋಚರಿಸಲ್ಪಡುವನು. ಸರ್ವಜ್ಞನೂ, ಸರ್ವವ್ಯಾಪಿಯೂ ಆದ ಈ ಮಹಾದೇವನನ್ನು ವಿಧಿಪ್ರಕಾರ ಪ್ರತಿಷ್ಠಿಸಿ ನ್ಯಾಯಮಾರ್ಗದಿಂದ ಭಕ್ತಿಪೂರ್ವಕವಾಗಿ ಅರ್ಚಿಸುವನು ಶಿವನ ಸಾಯುಜ್ಯವನ್ನೈದುವನು. ॥೩೮-೩೯-೪೦॥

ಮೂರು ಕಾಲ್ಗಳು, ಏಳು ಕೈಗಳು, ನಾಲ್ಕು ಕೊಂಬು, ಮೂರು ತಲೆಗಳುಳ್ಳ ಯಜ್ಞೇಶ್ವರ ಮೂರ್ತಿಯನ್ನು ರಚಿಸಿದವನು ಅಗ್ನಿಲೋಕದಲ್ಲಿ ಪೂಜ್ಯನಾಗುತ್ತಾನೆ. ಅಲ್ಲಿ ಸಕಲ ಮಹಾಭೋಗಗಳನ್ನೂ ಅನುಭವಿಸಿ ಲಕ್ಷಕಲ್ಪಗಳ ವರೆಗೆ ಮಾನವನು ಸುಖವಾಗಿರುವನು. ಅನಂತರ ಪುನಃ ಕ್ರಮವಾಗಿ ಈ ಭೂಲೋಕಕ್ಕೆ ಬಂದು ಭೂಮಂಡಲಾಧಿಪತಿಯಾಗುವನು. ॥೪೧-೪೨॥

ವೃಷಾರೂಢಂ ತು ಯಃ ಕುರ್ಯಾತ್ಸೋಮಂ ಸೋಮಾರ್ಧಭೂಷಣಂ ।
ಹಯಮೇಧಾಯುತಂ ಪುಣ್ಯಂ ಕೃತ್ವಾ ಪ್ರಾಪ್ನೋತ್ಯೇಂದ್ರವಲ್ಲಭಃ ॥೪೩॥

ಕಾಂಚನೇನ ವಿಮಾನೇನ ಕಿಂಕಿಣೀಜಾಲಮಾಲಿನಾ ।
ಗತ್ವಾ ಶಿವಪುರಂ ದಿವ್ಯಂ ತತ್ರೈವ ಸ ವಿಮುಚ್ಯತೇ ॥೪೪॥

ನಂದಿನಾ ಸಹಿತಂ ದೇವಂ ಸಾಂಬಂ ಸಗಣಮವ್ಯಯಂ ।
ಕೃತ್ವಾ ಯತ್ಫಲಮಾಪ್ನೋತಿ ತತ್ತೇ ವಕ್ಷ್ಯಾಮ್ಯನುತ್ತಮಂ ॥೪೫॥

ಸೂರ್ಯಮಂಡಲಸಂಕಾಶೈರ್ವಿಮಾನೈರ್ವೃಷಸಂಯುತೈಃ ।
ಅಪ್ಸರೋಗಣಸಂಕೀರ್ಣೈರ್ದೇವದಾನವದುರ್ಲಭೈಃ ॥೪೬॥

ನೃತ್ಯದ್ಭಿರಪ್ಸರಃಸಂಘೈಃ ಪುಷ್ಪಗಂಧಮನೋಹರೈಃ ।
ಗತ್ವಾ ಶಿವಪುರಂ ದಿವ್ಯಂ ಗಾಣಾಪತ್ಯಮವಾಪ್ನುಯಾತ್ ॥೪೭॥

ನೃತ್ಯಂತಂ ದೇವದೇವೇಶಂ ಶೈಲಜಾಸಹಿತಂ ಪ್ರಭುಂ ।
ಸಹಸ್ರಬಾಹುಂ ದೇವೇಶಿ ಚತುರ್ಬಾಹುಮಥಾಪಿ ವಾ ॥೪೮॥

---

ವೃಷಭಾರೂಢನೂ, ಚಂದ್ರಾರ್ಧಭೂಷಣನೂ ಆದ ಉಮಾರಮಣನನ್ನು ಪ್ರತಿಷ್ಠಿಸುವವನು ಹತ್ತುಸಾವಿರ ಅಶ್ವಮೇಧಯಾಗಗಳ ಪುಣ್ಯಪಡೆದು . ಇಂದ್ರನ ಪ್ರೀತಿಪಾತ್ರನಾಗಿ, ಗಂಟೆಗಳ ಸಮೂಹದಿಂದ ಶೋಭಿಸುವ ಚಿನ್ನದ ವಿಮಾನದಲ್ಲಿ ಕುಳಿತು, ದಿವ್ಯವಾದ ಶಿವಲೋಕವನ್ನೈದಿ ಅಲ್ಲಿಯೇ ಅವನು ಮುಕ್ತನಾಗುವನು. ||೪೩-೪೪||

ನಂದೀಸಮೇತನೂ, ಅಂಬಾಸಹಚಾರಿಯೂ, ಅಚ್ಯುತನೂ ಆದ ಮಹಾದೇವನನ್ನು ಗಣಗಳೊಡನೆ ಪ್ರತಿಷ್ಠಿಸಿದರೆ ಉಂಟಾಗುವ ಉತ್ತಮೋತ್ತಮಫಲಗಳನ್ನು ನಿನಗೆ ಹೇಳುವೆನು, ಕೇಳು ; ಅಪ್ಸರಸ್ತ್ರೀಯರ ಗಣಗಳಿಂದಯುಕ್ತಗಳಾಗಿ ದೇವ ರಾಕ್ಷಸರಿಗೂ ದುರ್ಲಭವಾಗಿ, ಸುಗಂಧಭರಿತವಾದ ದಿವ್ಯಪರಿಮಳದ್ರವ್ಯಗಳಿಂದ ಮನೋಹರಗಳಾಗಿರುವ ಅಪ್ಸರೋಗಣಗಳ ನರ್ತನಗಳಿಂದ ಶೋಭಿಸುತ್ತಿರುವ, ಸೂರ್ಯಮಂಡಲಕ್ಕೆ ಸಮಾನವಾಗಿ ಹೊಳೆಯುತ್ತಿರುವ ವೃಷಯುಕ್ತಗಳಾದ ವಿಮಾನಗಳಲ್ಲಿ ಕುಳಿತು ಶಿವಲೋಕವನ್ನೈದಿ ದಿವ್ಯವಾದ ಗಣಾಧಿಪತಿಪದವಿಯನ್ನೈದುವನು. ||೪೫-೪೬-೪೭||

ನಂದ್ಯಾದ್ಯೈರ್ಭೂತಸಂಘೈಶ್ಚ ಸಂವೃತಂ ಪರಮೇಶ್ವರಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ರುದ್ರಲೋಕೇ ಮಹೀಯತೇ ॥೪೯॥

ಶೈಲಜಾಸಹಿತಂ ಸಾಕ್ಷಾದ್ವೃಷಭಧ್ವಜಮೀಶ್ವರಂ ।
ಬ್ರಹ್ಮೇಂದ್ರವಿಷ್ಣುಸೋಮಾದ್ಯೈಃ ಕೃತಾಂಜಲಿಪುಟೈರ್ಗಣೈಃ ॥೫೦॥

ಮಾತೃಭಿರ್ಮುನಿಭಿಶ್ಚೈವ ಸಂವೃತಂ ಪರಮೇಶ್ವರಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಯತ್ಫಲಂ ತದ್ವದಾಮ್ಯಹಂ ॥೫೧॥

ಸರ್ವಯಜ್ಞತಪೋದಾನತೀರ್ಥವೇದೇಷು ಯತ್ಫಲಂ ।
ತತ್ಫಲಂ ಕೋಟಿಗುಣಿತಂ ಲಬ್ಧ್ವಾ ಯಾತಿ ಶಿವಂ ಪದಂ ॥೫೨॥

ತತ್ರ ಭುಕ್ತ್ವಾ ಮಹಾಭೋಗಾನ್ಯಾವದಾಭೂತಸಂಪ್ಲವಂ ।
ಸೃಷ್ಟ್ಯಂತರೇ ತತಃ ಪ್ರಾಪ್ತೇ ಮಾನವಂ ಪದಮಾಪ್ನುಯಾತ್ ॥೫೩॥

---

ದೇವೇಶ್ವರಿಯೇ ! ನಾಟ್ಯಮಾಡುತ್ತಿರುವ, ಗಿರಿಜಾಸಮೇತನೂ ಪ್ರಭುವೂ ಸಹಸ್ರ ತೋಳ್ಗಳುಳ್ಳವನೂ ಆದ ಶಿವನನ್ನು ಅಥವಾ ನಾಲ್ಕುತೋಳ್ಗಳಿಂದ ಯುಕ್ತನಾಗಿ ನಂದಿಯೇಮೊದಲಾದ ಭೂತಗಣಗಳಿಂದ ಪರಿವೃತನಾದ ಪರಮೇಶನನ್ನು ಪ್ರತಿಷ್ಠೆ ಮಾಡಿ ಭಕ್ತಿಯಿಂದ ಅರ್ಚಿಸುವವನು ಶಿವಲೋಕದಲ್ಲಿ ಪೂಜ್ಯನಾಗುತ್ತಾನೆ.॥೪೮-೪೯॥

ದೇವಿ! ಬ್ರಹ್ಮ, ಇಂದ್ರ, ವಿಷ್ಣು, ಚಂದ್ರ ಮುಂತಾದ ದೇವತೆಗಳು ಕೈಮುಗಿದುಕೊಂಡು ನಿಂತಿರುವ ಮತ್ತು ದೇವಗಣಗಳಿಂದಲೂ, ಮಾತೃದೇವತೆಗಳು, ಮತ್ತು ಮುನಿಗಳಿಂದಲೂ ಪರಿವೃತನಾಗಿರುವ ಸಾಕ್ಷಾದ್ವೃಷಭಧ್ವಜನಾದ ಪರಮೇಶ್ವರನನ್ನು ಪಾರ್ವತಿಯೊಡನೆ ಭಕ್ತಿಯಿಂದ ಪ್ರತಿಷ್ಠೆಮಾಡಿದರೆ ಬರುವ ಫಲವನ್ನು ನಿನಗೆ ನಾನು ಹೇಳುವೆನು ಕೇಳು : ॥೫೦-೫೧॥

ಸಕಲ ಯಾಗಗಳು, ತಪಸ್ಸು, ದಾನ, ತೀರ್ಥ ಮತ್ತು ವೇದಗಳಲ್ಲಿ ಎಷ್ಟು ಫಲವುಂಟೋ ಅದಕ್ಕೆ ಕೋಟಿಪಾಲು ಹೆಚ್ಚುಫಲವನ್ನು ಪಡೆದು ಕೊನೆಗೆ ಶಿವಸಾಯುಜ್ಯವನ್ನೈದುವನು. ಅಲ್ಲಿ ಚರಾಚರಾತ್ಮಕಪ್ರಪಂಚದ ಪ್ರಳಯಕಾಲದ ವರೆಗೂ ಮಹಾಭೋಗಗಳನ್ನನುಭವಿಸಿ, ಸೃಷ್ಟಿಯ ಮಧ್ಯಕಾಲವು ಪ್ರಾಪ್ತವಾದಾಗ ಪುನಃ ಮಾನವಪದವಿಯನ್ನೈದುತ್ತಾನೆ. ॥೫೨-೫೩॥

ನಂದಿಂ ಚತುರ್ಭುಜಂ ಶ್ವೇತಂ ತ್ರಿನೇತ್ರಂ ಸರ್ಪಮೇಖಲಂ।
ಕಪಾಲಹಸ್ತಂ ದೇವೇಶಂ ಕೃಷ್ಣಕುಂಚಿತಮೂರ್ಧಜಂ ॥೫೪॥

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಸಾಯುಜ್ಯಮಾಪ್ನುಯಾತ್ ।
ಇಹೇಂದ್ರದಾರಕಂ ದೇವಂ ಸಾಂಬಂ ಸಿದ್ಧಾಕೃತಿಂ ಪ್ರಭುಂ ॥೫೫॥

ಸುಧೂಮ್ರವರ್ಣಂ ರಕ್ತಾಕ್ಷಂ ತ್ರಿನೇತ್ರಂ ಚಂದ್ರಶೇಖರಂ।
ಬಕಪಕ್ಷಧರಂ ಮೂರ್ಧ್ನಾ ನಾಗಟಂಕಧರಂ ಹರಂ ॥೫೬॥

ಸಿಂಹಾಜಿನೋತ್ತರೀಯಂ ಚ ಮೃಗಚರ್ಮಾಂಬರಪ್ರಿಯಂ।
ತೀಕ್ಷ್ಣದಂಷ್ಟ್ರಂ ಗದಾಹಸ್ತಂ ಕಪಾಲೋದ್ಧೃತಪಾಣಿನಂ ॥೫೭॥

ಹುಂ ಫಟ್ಕಾರಮಹಾಶಬ್ದಂ ಶಬ್ದತಾಖಿಲದಿಙ್ಮುಖಂ ।
ಪುಂಡರೀಕಾಂಬರಂ ದೋರ್ಭ್ಯಾಂ ಬಿಭ್ರದ್ವೈಕಂಕತಂ ಯಥಾ ॥೫೮॥

ಹಸಂತಂ ಚ ನದಂತಂ ಚ ಪಿಬಂತಂ ಸಪ್ತಸಾಗರಂ।
ನೃತ್ಯಂತಂ ಭೂತಸಂಘೈಶ್ಚ ಸಂವೃತಂ ಸಗಣಂ ಪ್ರಭುಂ ॥೫೯॥

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಯಥಾವಿಭವವಿಸ್ತರಂ।
ಯಸ್ಮಾದ್ವಿಘ್ನಾನ್ವಿನಿರ್ಜಿತ್ಯ ಶಿವಲೋಕೇ ಮಹೀಯತೇ ॥೬೦॥

---

ನಾಲ್ಕುತೋಳ್ಗಳು, ಬಿಳಿಯಬಣ್ಣ, ಮೂರುಕಣ್ಣುಗಳು, ಸರ್ಪದ ಉಡಿದಾರ, ಕೈಯಲ್ಲಿ ಕಪಾಲ, ಕಪ್ಪಾಗಿ ಗುಂಗುರುಗುಂಗುರಾಗಿರುವ ಕೇಶಪಾಶಗಳೊಡಗೂಡಿದ ದೇವೇಶ್ವರನಾದ ನಂದಿಕೇಶನನ್ನು ಭಕ್ತಿಯಿಂದ ಪ್ರತಿಷ್ಠೆಮಾಡಿಸಿದವನು ಶಿವಸಾಯುಜ್ಯವನ್ನು ಪಡೆಯುವನು. ॥೫೪॥

ಈ ಲೋಕದಲ್ಲಿ ಇಂದ್ರನಿಗ್ರಹಮಾಡಿದವನೂ, ಅಂಬಿಕಾರಮಣನೂ, ಸಿದ್ಧರೂಪಿಯೂ, ಪ್ರಭುವೂ, ಒಳ್ಳೆಯಸ್ಥೂಸರಬಣ್ಣವುಳ್ಳವನೂ, ಕೆಂಪುಕಣ್ಣುಳುಳ್ಳವನೂ, ಮುಕ್ಕಣ್ಣನೂ, ಚಂದ್ರಶಿರೋಭೂಷಣನೂ, ಬಕಪಕ್ಷಿಗಳಗರಿಯನ್ನು ಧರಿಸಿರುವವನೂ, ತಲೆಯಲ್ಲಿ ಸರ್ಪಕಿರೀಟವುಳ್ಳವನೂ, ಪಾಪನಾಶಕನೂ, ಸಿಂಹಚರ್ಮವನ್ನು ಹೊದ್ದಿರುವವನೂ, ಜಿಂಕೆಯಚರ್ಮವನ್ನು ಧರಿಸುವುದರಲ್ಲಿ ಪ್ರೀತಿಯುಳ್ಳವನೂ, ಗದಾಪಾಣಿಯೂ, ಕಪಾಲವನ್ನುಕೈಯಲ್ಲಿಹಿಡಿದಿರುವವನೂ ಹುಂ, ಫಟ್ ಎಂಬ ಮಹಾಶಬ್ದವುಳ್ಳವನೂ, ಎಲ್ಲಾದಿಕ್ಕುಗಳಲ್ಲಿಯೂ ಶಬ್ದಾಯಮಾನನಾಗಿರುವವನೂ,

ತತ್ರ ಭುಕ್ತ್ವಾ ಮಹಾಭೋಗಾನ್ಯಾವದಾಚಂದ್ರತಾರಕಂ ।
ಜ್ಞಾನಂ ವಿಚಾರತೋ ಲಬ್ಧ್ವಾ ರುದ್ರೇಭ್ಯಸ್ತತ್ರ ಮುಚ್ಯತೇ ॥೬೧॥

ಅರ್ಧನಾರೀಶ್ವರಂ ದೇವಂ ಚತುರ್ಭುಜಮನಾಮಯಂ ।
ವರದಾಭಯಹಸ್ತಂ ಚ ಶೂಲಪದ್ಮಧರಂ ಶಿವಂ ॥೬೨॥

ಭಾವೇನ ಸಂಸ್ಥಿತಂ ಸರ್ವಂ ಸರ್ವಾಭರಣಭೂಷಿತಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಲೋಕೇ ಮಹೀಯತೇ ॥೬೩॥

ತತ್ರ ಭುಕ್ತ್ವಾ ಮಹಾಭೋಗಾನಣಿಮಾದಿಗಣೈರ್ವೃತಃ ।
ಆಚಂದ್ರತಾರಕಂ ಜ್ಞಾನಂ ತತೋ ಲಬ್ಧ್ವಾ ವಿಮುಚ್ಯತೇ ॥೬೪॥

ಯಃ ಕುರ್ಯಾದ್ದೇವದೇವೇಶಂ ಸರ್ವಜ್ಞಂ ಲಕುಟೇಶ್ವರಂ ।
ವೃತಂ ಶಿಷ್ಯೈಃ ಪ್ರಶಿಷ್ಯೈಶ್ಚ ವ್ಯಾಖ್ಯಾನೋದ್ಧೃತಪಾಣಿನಂ ॥೬೫॥

---

ಎರಡುಕೈಗಳಲ್ಲಿ ಕಮಲ, ಮತ್ತು ವಸ್ತ್ರಗಳುಳ್ಳವನೂ, ಹುಳಿಬೇಲವನ್ನು ಹಿಡಿದಿರುವವನೂ, ನಗುತ್ತಲೂ, ಧ್ವನಿಮಾಡುತ್ತಲೂ, ಏಳುಸಾಗರಗಳನ್ನು ಪಾನಮಾಡುತ್ತಲೂ ಇರುವವನೂ, ಭೂತಗಳೊಡನೆಪರಿವೃತನಾಗಿ ನಾಟ್ಯವಾಡುತ್ತಿರುವನೂ, ಸರ್ವಸಮರ್ಥನೂ ಆದ ಮಹಾದೇವನನ್ನು ಭಕ್ತಿಯಿಂದ ತನ್ನ ಐಶ್ವರ್ಯಾದಿಗಳಿಗೆ ಅನುಗುಣವಾಗಿ ಪ್ರತಿಷ್ಠಿಸುವವನು ಸಕಲ ವಿಘ್ನಗಳನ್ನೂ ಜಯಿಸಿ ಶಿವಲೋಕದಲ್ಲಿ ಪೂಜಿಸಲ್ಪಡುತ್ತಾನೆ. ॥೫೫-೫೬-೫೭-೫೮-೫೯-೬೦॥

ಆ ಶಿವಲೋಕದಲ್ಲಿ ಸೂರ್ಯಚಂದ್ರರಿರುವವರೆಗೂ ಮಹಾಭೋಗಗಳನ್ನನುಭವಿಸಿ ಏಕಾದಶರುದ್ರರದೆಸೆಯಿಂದ ವಿಚಾರಪೂರ್ವಕವಾಗಿ ಜ್ಞಾನವನ್ನರಿತು ಅನಂತರ ಮುಕ್ತನಾಗುತ್ತಾನೆ. ನಾಲ್ಕುತೋಳ್ಗಳುಳ್ಳವನೂ, ನೀರೋಗನೂ, ವರದ ಮತ್ತು ಅಭಯಹಸ್ತಗಳುಳ್ಳವನೂ, ಶೂಲ ಮತ್ತು ಕಮಲಗಳನ್ನು ಹಿಡಿದಿರುವನೂ ಆದ ಅರ್ಧನಾರೀಶ್ವರದೇವನನ್ನು ಸಕಲ ಆಭರಣಗಳಿಂದ ಅಲಂಕರಿಸಿ, ಭಕ್ತಿಪೂರ್ವಕವಾಗಿ ಪ್ರತಿಷ್ಠೆಮಾಡುವವನು ಶಿವಲೋಕದಲ್ಲಿ ಮೆರೆಯುತ್ತಾನೆ. ॥೬೧-೬೨-೬೩॥

ಅಲ್ಲಿ ಮಹಾಭೋಗಗಳನ್ನು ಅನುಭವಿಸಿ ಅಣಿಮಾದಿಗಣಗಳಿಂದ ಪರಿವೃತನಾಗಿ ಜ್ಞಾನವನ್ನು ಪಡೆದು ಚಂದ್ರಸೂರ್ಯನಕ್ಷತ್ರಗಳಿರುವವರೆಗೂ ಇದ್ದು, ಅನಂತರ ಮುಕ್ತನಾಗುತ್ತಾನೆ. ದೇವಾದಿದೇವನೂ, ಸರ್ವಜ್ಞನೂ ಶಿಷ್ಯರೂ ಮತ್ತು ಪ್ರಶಿಷ್ಯರೊಡನೆ ಕೂಡಿ ಜ್ಞಾನಮುದ್ರೆಯಿಂದ ವ್ಯಾಖ್ಯಾನಮಾಡಲು ಎತ್ತಿದಕೈಯುಳ್ಳವನೂ

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಲೋಕಂ ಸ ಗಚ್ಛತಿ ।
ಭುಕ್ತ್ವಾತು ವಿಪುಲಾಂಸ್ತತ್ರ ಭೋಗಾನುಗ್ರತರಂ ನರಃ ॥೬೬॥

ಜ್ಞಾನಯೋಗಂ ಸಮಾಸಾದ್ಯ ತತ್ರೈವ ಸ ವಿಮುಚ್ಯತೇ ।
ಪೂರ್ವದೇವಾಮರಾಣಾಂ ಚ ತದಾ ಸ್ವಾಂಶಕಲ್ಪೈಃ ಸ್ಥಿತೈಃ ॥೬೭॥

ಕೃತಮುದ್ರಸ್ಯ ರುದ್ರಸ್ಯ ಚಿತಾಭಸ್ಮಾನುಲೇಪನಃ ।
ತ್ರಿಪುಂಡ್ರಧಾರಿಣಸ್ತೇಷಾಂ ಶಿರೋಮಾಲಾಧರಸ್ಯ ಚ ॥೬೮॥

ಬ್ರಹ್ಮಣಃ ಕೇಶಜಂ ನೈಕಮುಪವೀತಂಚ ಬಿಭ್ರತಃ ।
ಬಿಭ್ರತೋ ವಾಮಹಸ್ತೇನ ಕಪಾಲಂ ಬ್ರಹ್ಮಣೋವಪುಃ ॥೬೯॥

ವಿಷ್ಣೋಃ ಕಲೇಬರಂ ಚೈವ ಬಿಭ್ರತಃ ಪರಮೇಷ್ಠಿನಃ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ವಿಷ್ಣುಲೋಕೇ ಮಹೀಯತೇ ॥೭೦॥

ಕಾಲಕೂಟಂ ಕರಾಬ್ಜಾಂತೇ ನಿಧಾಯಾಸೀನಮಾಸನೇ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಮುಚ್ಯತೇ ಭವಬಂಧನಾತ್ ॥೭೧॥

---

ಆದ ಲಕುಟೇಶ್ವರನನ್ನು ಭಕ್ತಿಯಿಂದ ಪ್ರತಿಷ್ಠೆಮಾಡುವವನು ಶಿವಲೋಕವನ್ನೈದುವನು. ॥೬೪-೬೫॥

ಆ ಶಿವಲೋಕದಲ್ಲಿ ಅತ್ಯುಗ್ರವೂ ವಿಪುಲವೂ ಆದ ಭೋಗಗಳನ್ನನುಭವಿಸಿ, ಅನಂತರ ಜ್ಞಾನಯೋಗವನ್ನು ಪಡೆದು ಮಾನವನು ಅಲ್ಲಿಯೇ ಮುಕ್ತಿಪಡೆಯುವನು. ॥೬೬॥

ಆಗ ದೇವದಾನವರ ಅಂಶಗಳಿಂದ ಕೂಡಿ, ರುದ್ರಮುದ್ರಾಂಕಿತವೂ, ಚಿತಾಭಸ್ಮವನ್ನು ಲೇಪನಮಾಡಿಕೊಂಡಿರುವುದೂ, ತ್ರಿಪುಂಡ್ರಧಾರಿಯೂ, ಶಿರೋಮಾಲೆಯನ್ನು ಧರಿಸಿರುವುದೂ, ಬ್ರಹ್ಮನ ಶಿರಃಕೇಶದಿಂದ ಮಾಡಿದ ಜೊತೆ ಉಪವೀತಗಳನ್ನು ಧರಿಸಿರುವುದೂ, ಎಡಗೈನಲ್ಲಿ ಕಪಾಲ, ಬ್ರಹ್ಮಶಿರಸ್ಸು, ವಿಷ್ಣುದೇಹಗಳನ್ನು ಧರಿಸಿರುವ ಪರಮೇಶ್ವರನನ್ನು ಭಕ್ತಿಪೂರ್ವಕವಾಗಿ ಪ್ರತಿಷ್ಠೆಮಾಡಿದವನು ವಿಷ್ಣುಲೋಕದಲ್ಲಿ ಪೂಜಾರ್ಹನಾಗುತ್ತಾನೆ. ॥೬೭-೬೮-೬೯-೭೦॥

ಪಾಣಿಕಮಲದ ತುದಿಯಲ್ಲಿ ಕಾಲಕೂಟವಿಷವನ್ನು ಹಿಡಿದುಕೊಂಡು ಆಸನದಲ್ಲಿ ಕುಳಿತಿರುವ ಶಿವಮೂರ್ತಿಯನ್ನು ಭಕ್ತಿಯಿಂದ ಪ್ರತಿಷ್ಠೆಮಾಡಿದವನು

ಓಂ ನಮೋ ನೀಲಕಂಠಾಯ ಇತಿ ಪುಣ್ಯಾಕ್ಷರಾಷ್ಟಕಂ ।
ಮಂತ್ರಮೂಹ ಸಕೃದ್ವಾ ಯಃ ಪಾತಕೈಃ ಸ ಪ್ರಮುಚ್ಯತೇ ॥೭೨॥

ಮಂತ್ರೇಣಾನೇನ ಗಂಧಾದ್ಯೈರ್ಭಕ್ತ್ಯಾ ವಿತ್ತಾನುಸಾರತಃ ।
ಸಂಪೂಜ್ಯ ದೇವದೇವೇಶಂ ಶಿವಲೋಕೇ ಮಹೀಯತೇ ॥೭೩॥

ಜಲಂಧರಾಂತಕಂ ದೇವಂ ಸುದರ್ಶನಕರಂ ಪ್ರಭುಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ವಿಷ್ಣುಲೋಕೇ ಮಹೀಯತೇ ॥೭೪॥

ತಿಷ್ಠತೋಽಥ ನಿಕುಂಭಸ್ಯ ಪ್ರಯತಶ್ಚರಣಾಂಬುಜಂ ।
ವಾಮೇತರಂ ಪ್ರವಿನ್ಯಸ್ಯ ವಾಮಮಾಲಿಂಗ್ಯ ಚಾದ್ರಿಜಾಂ ॥೭೫॥

ಶೂಲಾಗ್ರೇ ಖರ್ಪರಂ ಸ್ಥಾಪ್ಯ ಕಂಕಣೀಕೃತಪನ್ನಗಂ ।
ಸಂಪ್ರೇಕ್ಷ್ಯ ಚಾಂತಕಂ ಪಾರ್ಶ್ವೇ ಕೃತಾಂಜಲಿಪುಟಂ ಸ್ಥಿತಂ ॥೭೬॥

---

ಸಂಸಾರಬಂಧನದಿಂದ ಮುಕ್ತನಾಗುತ್ತಾನೆ. ದೇವಿ! "ಓಂ ನಮೋ ನೀಲ ಕಂಠಾಯ" ಎಂಬ ಪುಣ್ಯಕರವಾದ ಅಷ್ಟಾಕ್ಷರಮಂತ್ರವನ್ನು ಒಂದುಬಾರಿ ಉಚ್ಚರಿಸುವವನು ಪಾಪಮುಕ್ತನಾಗುವನು. ॥೭೧-೭೨॥

ಇದೇ ಅಷ್ಟಾಕ್ಷರಮಂತ್ರ ಪೂರ್ವಕವಾಗಿ ತನ್ನ ಐಶ್ವರ್ಯಾನುಸಾರ ಭಕ್ತಿಯಿಂದ ಗಂಧಾದಿಸಾಧನಗಳಿಂದ ದೇವಾದಿದೇವನನ್ನು ಪೂಜಿಸಿದವನು ಶಿವಲೋಕದಲ್ಲಿ ಪೂಜ್ಯನಾಗುತ್ತಾನೆ. ಸುದರ್ಶನ ಚಕ್ರವನ್ನು ಹಿಡಿದು ಜಲಂಧರನನ್ನು ಸಂಹರಿಸಿದ ಪ್ರಭುವನ್ನು ಭಕ್ತಿಯಿಂದ ಪ್ರತಿಷ್ಠಿಸುವನೂ ವಿಷ್ಣುಲೋಕದಲ್ಲಿ ಪೂಜಿಸಲ್ಪಡುವನು. ॥೭೩-೭೪॥

ನಿಕುಂಭನೆಂಬ ರಾಕ್ಷಸನನ್ನು ಕೊಂದು ಅವನ ಶರೀರದ ಮೇಲೆ ಒಂದು ಕಾಲನ್ನಿಟ್ಟು ಮತ್ತೊಂದು ಕಾಲಿನಿಂದ ನಾಟ್ಯವನ್ನು ಸೂಚಿಸುತ್ತಾ, ಎಡಭಾಗದಲ್ಲಿ ಪಾರ್ವತಿಯನ್ನು ಆಲಿಂಗಿಸಿಕೊಂಡು, ತ್ರಿಶೂಲದ ತುದಿಯಲ್ಲಿ ಕಪಾಲವನ್ನಿಟ್ಟು, ಸರ್ಪವನ್ನೇ ಕೈಬಳೆಯನ್ನಾಗಿ ಮಾಡಿ, ಕೈಮುಗಿದು ವಿನಯಶಾಲಿಯಾಗಿ ಪಾರ್ಶ್ವದಲ್ಲಿ ನಿಂತಿರುವ ಯಮನನ್ನೇ ದೃಷ್ಟಿಸಿ ನೋಡುವಂತೆ, ನಿಕುಂಭನಾಶಕನಾದ ಶಿವ ಮೂರ್ತಿಯನ್ನು ನಿರ್ಮಾಣಮಾಡಿಸಿ, ವಿಧಿವತ್ತಾಗಿ ಅದನ್ನು ಪ್ರತಿಷ್ಠಿಸುವವನು, ಅನಾಯಾಸವಾಗಿ ಶಿವಲೋಕವನ್ನೈದುವನು. ಇದರಲ್ಲಿ ಸಂಶಯವಿಲ್ಲ. ॥೭೫-೭೬॥

ರೂಪಂ ಕೃತ್ವಾ ಯಥಾನ್ಯಾಯ್ಯಂ ಶಿವಸಾಯುಜ್ಯಮಾಪ್ನುಯಾತ್ ।
ಯಃ ಕುರ್ಯಾದ್ದೇವದೇವೇಶಂ ತ್ರಿಪುರಾಂತಕಮೀಶ್ವರಂ ॥೭೭॥

ಧನುರ್ಬಾಣಸಮಾಯುಕ್ತಂ ಸೋಮಂ ಸೋಮಾರ್ಧಭೂಷಣಂ ।
ರಥೇತು ಸಂಸ್ಥಿತಂ ದೇವಂ ಚತುರಾನನಸಾರಥಿಂ ॥೭೮॥

ತದಾಕಾರತಯಾ ಸೋಽಪಿ ಗತ್ವಾ ಶಿವಪುರಂ ಸುಖೀ ।
ಕ್ರೀಡತೇ ನಾತ್ರ ಸಂದೇಹೋ ದ್ವಿತೀಯ ಇವ ಶಂಕರಃ ॥೭೯॥

ತತ್ರ ಭುಕ್ತ್ವಾ ಮಹಾಭೋಗಾನ್ಯಾವದಿಚ್ಛೇದ್ದ್ವಿಜೋತ್ತಮಾಃ ।
ಜ್ಞಾನಂ ವಿಚಾರಿತಂ ಲಬ್ಧ್ವಾ ತತ್ರೈವ ಸ ವಿಮುಚ್ಯತೇ ॥೮೦॥

ಗಂಗಾಧರಂ ಸುಖಾಸೀನಂ ಚಂದ್ರಶೇಖರಮೇವ ಚ ।
ಉಮಯಾಸಹಿತಂ ದೇವಂ ವಾಮೋತ್ಸಂಗಾಂಬಿಕಾಯುತಂ ॥೮೧॥

ವಿನಾಯಕಂ ತಥಾ ಸ್ಕಂದಂ ಜ್ಯೇಷ್ಠಂ ದುರ್ಗಾಂ ಸುಶೋಭಿನೀಂ ।
ಭಾಸ್ಕರಂ ಚ ತಥಾ ಸೋಮಂ ಬ್ರಹ್ಮಾಣೀಂ ಚ ಮಹೇಶ್ವರೀಂ॥೮೨॥

ಕೌಮಾರೀಂ ವೈಷ್ಣವೀಂ ದೇವೀಂ ವಾರಾಹೀಂ ವರದಾಂ ತಥಾ ।
ಇಂದ್ರಾಣೀಂ ಚೈವ ಚಾಮುಂಡಾಂ ವೀರಭದ್ರಸಮನ್ವಿತಾಂ ॥೮೩॥

---

ದೇವಾದಿದೇವನೂ, ತ್ರಿಪುರಶತ್ರುವೂ, ಉಮಾಸಮೇತನೂ ಆದ ಈಶ್ವರನನ್ನು ಬಿಲ್ಲು ಬಾಣಗಳೊಡನೆ, ಅರ್ಧಚಂದ್ರಾಲಂಕೃತನಾಗಿ ರಥದಲ್ಲಿ ಬ್ರಹ್ಮನ ಸಾರಥ್ಯ ವಿರುವಂತೆ ನಿರ್ಮಿಸಿ ಪ್ರತಿಷ್ಠೆಮಾಡುವವನು ಅದೇ ಆಕಾರದಿಂದ ಶಿವಲೋಕವನ್ನೈದಿ, ಎರಡನೆಯ ಶಿವನಂತೆಯೇ ಸುಖವಾಗಿ ವಿಹರಿಸುವನೆಂಬುದರಲ್ಲಿ ಸಂದೇಹವಿಲ್ಲ. ಓ ಬ್ರಾಹ್ಮಣೋತ್ತಮರೆ! ಅಲ್ಲಿಯೂ ಮಹಾಭೋಗಗಳನ್ನು ಸ್ವೇಚ್ಛೆಯಿಂದ ಅನುಭವಿಸಿ ಜ್ಞಾನಸಂಪಾದನೆಮಾಡಿ ಮುಕ್ತನಾಗುತ್ತಾನೆ. ॥೭೭-೭೮-೭೯-೮೦॥

ಸುಖಾಸನ ಮಂಡಿತನಾಗಿ ಗಂಗಾಧರನಂತೆಯೂ, ಚಂದ್ರಶೇಖರನಂತೆಯೂ, ಉಮೆಯೊಡಗೂಡಿದ ದೇವನನ್ನೂ, ರಚಿಸಿ ಎಡದೊಡೆಯಲ್ಲಿ ಅಂಬಿಕೆಯನ್ನು ಕೂರಿಸಿಕೊಂಡಿರುವನೂ, ವಿನಾಯಕ, ಕುಮಾರಸ್ವಾಮಿ, ಕಾಂತಿಯುಕ್ತಳಾದ ದುರ್ಗಾದೇವಿಯರನ್ನೂ, ಸೂರ್ಯ, ಚಂದ್ರ,ಬ್ರಹ್ಮಾಣಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ,

ವಿಘ್ನೇಶೇನ ಚ ಯೋವಾವಮಾಂಭಿವಸಾಯುಜ್ಯಮಾಪ್ನುಯಾತ್ ।
ಲಿಂಗಮೂರ್ತಿಂ ಮಹಾಜ್ವಾಲಾಮಾಲಾಸಂವೃತಮವ್ಯಯಂ ॥೮೪॥

ಲಿಂಗಸ್ಯ ಮಧ್ಯೇ ವ್ಯೈ ಕೃತ್ವಾ ಚಂದ್ರಶೇಖರವತ್ತನುಂ ।
ವ್ಯೋಮ್ನಿ ಕುರ್ಯಾತ್ತಥಾ ಲಿಂಗಂ ಬ್ರಹ್ಮಾಣಂ ಹಂಸರೂಪಿಣಂ ॥೮೫॥

ವಿಷ್ಣುಂ ವರಾಹರೂಪೇಣ ಲಿಂಗಸ್ಯಾಧಸ್ತ್ವಧೋಮುಖಂ ।
ಬ್ರಹ್ಮಾಣಂ ದಕ್ಷಿಣೇ ತಸ್ಯ ಕೃತಾಂಜಲಿಪುಟಸ್ಥಿತಂ ॥೮೬॥

ವಾಮೇ ವಿಷ್ಣುಂ ಮಹಾಬಾಹುಂ ಕೃತಾಂಜಲಿಪುಟಂ ತಥಾ ।
ಮಧ್ಯೇ ಲಿಂಗಂ ಮಹಾಘೋರಂ ಮಹಾಂಭಸಿ ಸುಸಂಸ್ಥಿತಂ ॥೮೭॥

ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಶಿವಸಾಯುಜ್ಯಮಾಪ್ನುಯಾತ್ ।
ಕ್ಷೇತ್ರಸಂರಕ್ಷಕಂ ದೇವಂ ಕ್ಷೇತ್ರಪಾಲಕನಾಮಕಂ ॥೮೮॥

ಕೃತ್ವಾ ತಥಾ ಯಥಾನ್ಯಾಯಂ ಶಿವಲೋಕೇ ಮಹೀಯತೇ ॥೮೯॥

---

ವರದೆ, ಇಂದ್ರಾಣಿ, ಚಾಮುಂಡಾ, ಈ ದೇವತೆಗಳನ್ನು ವೀರಭದ್ರನೊಡನೆಯೂ, ವಿಘ್ನೇಶ್ವರನೊಡನೆಯೂ ಕೂಡಿರುವಂತೆ ರಚಿಸುವವನು ಶಿವಸಾಯುಜ್ಯವನ್ನೈದುವನು. ॥೮೧-೮೨-೮೩॥

ದೊಡ್ಡ ಜ್ವಾಲೆಗಳ ಸಮೂಹದಿಂದ ಸುತ್ತುವರಿಯಲ್ಪಟ್ಟಿರುವ ನಾಶರಹಿತವಾದ ಶಿವಲಿಂಗಮೂರ್ತಿಯನ್ನು ರಚಿಸಿ, ಲಿಂಗಮಧ್ಯದಲ್ಲಿ ಚಂದ್ರಶೇಖರನಂತೆ ದೇಹವನ್ನು ಕೆತ್ತಿಸಿ, ಬೃಹತ್ತಾದ ಲಿಂಗವನ್ನು ಮಾಡಿಸಬೇಕು. ಅದರಮೇಲೆ ಬ್ರಹ್ಮನನ್ನು ಊರ್ಧ್ವಮುಖವಾಗಿ ಹಂಸವಾಹನನನ್ನಾಗಿಯೂ, ಕೆಳಭಾಗದಲ್ಲಿ ವಿಷ್ಣುವನ್ನು ವರಾಹರೂಪ (ಹಂದಿಯ) ದಿಂದಲೂ ಮಾಡಿಸಬೇಕು. ವಿಷ್ಣುವಿನ ಕೆಳಮುಖವಾಗಿರುವಂತೆ ರಚಿಸಬೇಕು. ॥೮೪-೮೫-೮೬-೮೭॥

ಕ್ಷೇತ್ರಗಳನ್ನು ರಕ್ಷಿಸುವ ಕ್ಷೇತ್ರಪಾಲನೆಂಬ ಹೆಸರಿನ ದೇವನನ್ನು ನ್ಯಾಯರೀತಿಯಿಂದ ಮಾಡಿಸಿ ಪ್ರತಿಷ್ಠಿಸಬೇಕು. ಅದರ ಬಲಭಾಗದಲ್ಲಿ ಬ್ರಹ್ಮನೂ, ಎಡಭಾಗದಲ್ಲಿ ವಿಷ್ಣುವೂ ಕೈಜೋಡಿಸಿನಿಂತಿರಬೇಕು. ಮಧ್ಯೆ ಇರುವ ಶಿವಲಿಂಗವು ನೀರಿನಲ್ಲಿ ನಿಂತಿರಬೇಕು. ಈ ಕ್ಷೇತ್ರಪಾಲಕಲಿಂಗದ ಪ್ರತಿಷ್ಠೆಯಿಂದ ಶಿವಲೋಕವು ಪ್ರಾಪ್ತವಾಗುವುದು. ॥೮೮-೮೯॥

ಯೋ ಪಂಚವಿಂಶತ್ಪರಮೇಶಮೂರ್ತೀಃ
ಕೃತ್ವಾಲಯಾಭ್ಯಂತರಪೀಠಸಂಸ್ಥಾಃ ।
ಸುರೂಪವರ್ಣಾಭರಣಾ ಮನೋಜ್ಞಾಃ
ಶಿವೇ ಪ್ರತಿಷ್ಠಾಪ್ಯ ಸುಪುಣ್ಯಭಾಗ್ಭವೇತ್ ॥೯೦॥

ಭೂಯಾದ್ಗಣೇಭ್ಯೋ ರಜತಾದ್ರಿಮೌಲೌ
ಯೋ ಗೋಪುರಂ ರಮ್ಯಕವಾಟಜಾಲಂ ।
ವೃಷಾಗ್ರಕುಂಭೈಃ ಸುಪತಾಕಜಾಲೈಃ
ಸನ್ಮಂಟಪಾಲೀವಲಭೀಪ್ರತೋಲಿಕಾ ॥೯೧॥

ಸುಪಾಲಿಕಾಪುತ್ತಲಿಕಾವಿಚಿತ್ರಂ
ಸತ್ಯಂ ಚ ವರ್ಣೋತ್ತಮಗರ್ಭಗೇಹಂ ।
ಕೃತ್ವಾ ಸುಧಾಚಿತ್ರಿತಮೀಶತುಲ್ಯೋ
ಲಿಂಗಂ ಪ್ರತಿಷ್ಠಾಪ್ಯ ಸುಪುಣ್ಯಭಾಗ್ಭವೇತ್ ॥೯೨॥

---

ಪರಮೇಶನ ಇಪ್ಪತ್ತೈದು ಮೂರ್ತಿಗಳನ್ನೂ ದೇವಾಲಯದಲ್ಲಿ ಪೀಠಗಳ ಮಧ್ಯದಲ್ಲಿ ಪ್ರತಿಷ್ಠೆಮಾಡಿ ಒಳ್ಳೆಯರೂಪ, ಬಣ್ಣ, ಒಡವೆಗಳಿಂದ ಮನೋಹರವಾಗಿ ಅಲಂಕರಿಸುವವರು ವಿಶೇಷ ಪುಣ್ಯಭಾಗಿಗಳಾಗುತ್ತಾರೆ. ॥೯೦॥

ರಜತಾಚಲಶಿಖರದಲ್ಲಿ ರುದ್ರಗಣಗಳಿಗೋಸ್ಕರ ಮನೋಹರವಾದ ಬಾಗಿಲ ಸಮೂಹದಿಂದ ರಂಜಿಸುವ ಗೋಪುರವನ್ನು ಕಟ್ಟಿಸಿ, ವೃಷಭಗಳ ಅಗ್ರಕುಂಭಗಳಿಂದಲೂ, ಶುಭ್ರವಾದ ಪತಾಕೆಗಳ ಸಮೂಹದಿಂದಲೂ, ಉತ್ತಮವಾದ ಮಂಟಪ ಸಮೂಹಗಳಿಂದಲೂ ಮೇಲ್ಛಾವಣಿಗಳನ್ನು ರಚಿಸುವವರು ದಿವ್ಯವಾದ ಶಿವ ಸಾಯುಜ್ಯವನ್ನು ಪಡೆಯುವರು. ॥೯೧॥

ಶಿವ ದ್ವಾರಪಾಲಕರ ಪ್ರತಿಮೆಗಳಿಂದ ವಿಚಿತ್ರವಾಗಿ, ಉತ್ತಮ ಬಣ್ಣಗಳಿಂದ ರಚಿತವಾಗಿರುವ ಗರ್ಭಗುಡಿಗಳನ್ನು ಸುಣ್ಣದಿಂದ ತೊಡೆಸಿ; ಅಲ್ಲಿ ಲಿಂಗವನ್ನು ಪ್ರತಿಷ್ಠೆಮಾಡಿಸುವ ಮಾನವನು ಈಶ್ವರಸಮಾನನೇ ಆಗಿ ಉತ್ತಮವಾದ ಪುಣ್ಯಭಾಗಿಯಾಗುವನು. ॥೯೨॥

ದೇವೀಂ ಗಣಸ್ಕಂದವೃಷೇಶಚಂಡಂ ಯಾವದ್ಬ್ರಹ್ಮಶತಂ
ಮುಕುಂದಸದನೇ ಸ್ಥಿತ್ವಾ ಚಿರಂ ಭೋಗಭಾಗ್ಭೂಯಾತ್
ಸಾನ್ವಯಕೋಟಿಭಿರ್ಮನು ಶಿವೇ ನಾರಾಯಣೇನಾರ್ಚಿತಃ ।
ಪಶ್ಚಾನ್ಮೇ ಗಣಮುಖ್ಯತಾಮುಪಗತಃ ಸರ್ವೋಽಪ್ಯಖರ್ವೋಽಜನಃ
ಸರ್ವಸ್ಮಾದಧಿಕಂ ಫಲಂ ಸ ಲಭತೇ ಪುಣ್ಯಸ್ಯ ಶೈಲೇಂದ್ರಜೇ ॥೯೩॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶಿವಾಲಯಗೋಪುರಾದಿ ಪಂಚವಿಂಶತಿ
ಮೂರ್ತಿಪ್ರತಿಷ್ಠಾಮಹಿಮಾವರ್ಣನಂ ನಾಮ ಷಷ್ಠೋಽಧ್ಯಾಯಃ

---

ಎಲೌ ಪಾರ್ವತಿಯೇ! ಈ ರೀತಿಯಲ್ಲಿ ಶಿವಮೂರ್ತಿಗಳನ್ನು ಭಕ್ತಿಯಿಂದ ಪ್ರತಿಷ್ಠೆಮಾಡಿಸುವವನು, ನೂರು ಬ್ರಹ್ಮ ಪಟ್ಟಕಾಲ ವಿಷ್ಣುಲೋಕದಲ್ಲಿ ಭೋಗಗಳನ್ನನುಭವಿಸುತ್ತಾ ಅವನ ಕೋಟಿವಂಶದವರೊಡನೆ ನಾರಾಯಣನಿಂದ ಪೂಜಿಸಲ್ಪಟ್ಟು ಅನಂತರ ನನ್ನ ಗಣಗಳಲ್ಲಿ ಉತ್ತಮತ್ವವನ್ನು ಪಡೆದು ಎಲ್ಲಕ್ಕಿಂತಲೂ ಮಿಗಿಲಾದ ಪುಣ್ಯಫಲವನ್ನೈದುತ್ತಾನೆಂದು ಶಿವನು ದೇವಿಗೆ ಹೇಳಿದನೆಂದು ಜೈಗೀಷವ್ಯಾದಿಗಳಿಗೆ ಸ್ಕಂದನು ನುಡಿದನು. ॥೯೩॥

ಇಂತು ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವದೇವಾಲಯ,
ಗೋಪುರ ಮತ್ತು ಇಪ್ಪತ್ತೈದು ಶಿವಮೂರ್ತಿ ಪ್ರತಿಷ್ಠಾಮಹಿಮಾವರ್ಣನೆಯೆಂಬ
ಆರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ಸಪ್ತಮೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

ಕೈಲಾಸಾಚಲಸಂಕಾಶಂ ಗೋಪುರಾವಲಿಭಾಸುರಂ ।
ಪ್ರಾಕಾರವರಶೋಭಾಢ್ಯಂ ಮಹಾಮಂಟಪಸುಂದರಂ ॥೧॥

ಪರ್ಯಂತರಾಜದ್ವೃಷಭಂ ಚಿತ್ರವಿದ್ರುಮವೇದಿಕಂ ।
ಗವಾಕ್ಷತೋರಣಯುತಂ ವಲಭೀಕುಲಭೂಷಿತಂ ॥೨॥

ನಾನಾದ್ರುಮಲತೋಪೇತಂ ವಾಪೀಕೂಪನದಾವೃತಂ ।
ಸರೋಭಿಃ ಫುಲ್ಲಕಲ್ಹಾರಕಮಲೋತ್ಪಲಮಂಡಿತೈಃ ॥೩॥

---

## ಏಳನೆಯ ಅಧ್ಯಾಯ

ಕೈಲಾಸಪರ್ವತಸದೃಶವಾಗಿಯೂ, ಗೋಪುರಸಮೂಹಗಳಿಂದ ಶೋಭಿತವಾಗಿಯೂ, ಉತ್ತಮಪ್ರಾಕಾರಗಳ ಕಾಂತಿಯಿಂದ ಯುಕ್ತವಾಗಿಯೂ, ಇರುವ ಸುಂದರವಾದ ಒಂದು ದೊಡ್ಡ ಮಂಟಪವನ್ನು ರಚಿಸಬೇಕು. ತುದಿಯ ಸುತ್ತಲೂ ಆ ಮಂಟಪವು ವೃಷಭಗಳಿಂದ ವಿರಾಜಿಸುತ್ತ ಚಿತ್ರವರ್ಣದ ಹವಳಗಳ ಜಗಲಿಗಳುಳ್ಳದಾಗಿರಬೇಕು. ಗವಾಕ್ಷ ಮತ್ತು ತೋರಣಗಳಿಂದ ಯುಕ್ತವಾಗಿ ಮೇಲ್ಛಾವಣಿಗಳ ಸಮೂಹಗಳಿಂದ ಅಲಂಕೃತವಾಗಿರಬೇಕು. ಈ ಮಂಟಪದ ಸುತ್ತಲೂ ಅನೇಕ ಮರಗಿಡ ಬಳ್ಳಿಗಳಿರುತ್ತಾ, ಬಾವಿ, ಕೊಳ ಮತ್ತು ನದಗಳಿಂದಾವರಿಸಲ್ಪಟ್ಟಿರಬೇಕು. ಅರಳಿದ ಕಲ್ಹಾರ, ತಾವರೆ, ನೈದಿಲೆಗಳಿಂದಲಂಕೃತಗಳಾದ ಸರೋವರಗಳೂ, ಅನೇಕ

ನಾನಾವಿಹಗಶೋಭಾಢ್ಯಂ ಮೃಗೀನೃತ್ತಮಯೂರಕಂ ।
ಕೃತ್ವಾ ನಗೋರ್ಧ್ವಶಿಖರಜಾಲಜಾಲಕಿತಾಂಬರಂ ॥೪॥

ರಮ್ಯನಿರ್ಝರಕಂ ರೀತಿರಂಗವಲ್ಯಾದಿಶೋಭಿತಂ ।
ತನ್ಮಧ್ಯೇ ಮಮ ದೇವೇಶಿ ಕುರ್ಯಾತ್ಪ್ರಾಸಾದಮುತ್ತಮಂ ॥೫॥

ಶತಂ ಸಹಸ್ರಮಯುತಸ್ತಂಭಕುಂಭವಿರಾಜಿತಂ ।
ವೇದಿಕಾಪಟ್ಟಿಕೋಪೇತಂ ಚಿತ್ರವಿದ್ರುಮಪುತ್ರಿಕಂ ॥೬॥

ಪ್ರತೋಲೀವಲಭೀನಿರ್ಯದ್ಧಾರಾಸಾರಗೃಹಾಂತರಂ ।
ಪುಷ್ಪಮಾಲಾಪರಿಕ್ಷಿಪ್ತಂ ಧೂಪದೀಪವಿರಾಜಿತಂ ॥೭॥

ಮಧ್ಯಸಿಂಹಾಸನಯುತಂ ಡೋಲಾಸ್ತರಣಶೋಭಿತಂ ।
ವಿತಾನಶೋಭಿತೋರ್ಧ್ವಾಂತಂ ಸೋಪಧಾನಶತಾಸ್ತೃತಂ ॥೮॥

ತಸ್ಮಿನ್ನಾಸನಪರ್ಯಂಕೇ ಮೂರ್ತಿಂ ಸೋಮಂ ಮಹೇಶ್ವರಿ ।
ತ್ರಿನೇತ್ರಾಂ ಚಾರುಚಂದ್ರಾರ್ಧಾಂ ತ್ವತ್ಸಹಾಯಾಂ ಸುಶೋಭನಾಂ ॥೯॥

---

ಪಕ್ಷಿಗಳ ಶೋಭೆಯಿಂದ ಯುಕ್ತವಾದ ಜಿಂಕೆಗಳ ಮತ್ತು ನವಿಲುಗಳ ನಾಟ್ಯಗಳೂ ಕಂಗೊಳಿಸುತ್ತಿರುವಂತೆ, ಪರ್ವತದ ಮೇಲುಭಾಗದ ಶಿಖರವು ಬಲೆ ಬಲೆಯ ವಸ್ತ್ರ ಯುಕ್ತವಾಗಿ, ಮನೋಹರವಾದ ಪ್ರವಾಹಭರಿತವಾಗಿ, ರಂಗವಲ್ಯಾದಿಗಳಿಂದ ಶೋಭಿತವಾಗಿರಬೇಕು. ದೇವೇಶಿ! ಅದರ ಮಧ್ಯದಲ್ಲಿ ನನ್ನ ಉತ್ತಮವಾದ ಉಪ್ಪರಿಗೆಯನ್ನು ಮಾಡಿಸಬೇಕು. ||೧-೨-೩-೪-೫||

ಆ ಉಪ್ಪರಿಗೆಯು, ನೂರು, ಸಾವಿರ, ಅಥವಾ ಹತ್ತು ಸಾವಿರ ಕಂಬ ಮತ್ತು ಕುಂಭಗಳಿಂದ ವಿರಾಜಿಸುತ್ತಿರಬೇಕು. ವೇದಿಕೆಯ ಪಟ್ಟಿಯಿಂದ ಯುಕ್ತವಾಗಿ, ಚಿತ್ರ ವರ್ಣದ ಹವಳದ ಬೊಂಬೆಗಳನ್ನು ಹೊಂದಿರಬೇಕು. ಮಧ್ಯ ರಸ್ತೆಗಳಲ್ಲಿ ಮೇಲ್ಗಡೆ ಹೊದಿಸಿರುವ ವಲಭಿಗಳಿಂದ ಹೊರಟು, ಜಲಧಾರೆಗಳನ್ನು ಸುರಿಸುವ ಮನೆಯ ಒಳಭಾಗವುಳ್ಳಂತೆ ಮಾಡಿಸಬೇಕು. ಹೂಮಾಲೆಗಳಿಂದ ಅಲಂಕೃತವಾಗಿ ಧೂಪ ದೀಪಗಳಿಂದ ವಿರಾಜಿಸುತ್ತಿರಬೇಕು. ಪ್ರಾಸಾದದ ಮಧ್ಯದಲ್ಲಿ ಸಿಂಹಾಸನ ವಿರಬೇಕು. ಮೇನೆಗಳು ಹೊದಿಕೆಗಳಿಂದ ಆವೃತವಾಗಿರಬೇಕು. ಮೇಲ್ಭಾಗವು

ಸ್ಕಂದಾನ್ವಿತಾಂ ನೀಲಕಂಠಾಂ ತ್ರಿಪುಂಡ್ರಪರಿಶೋಭಿತಾಂ ।
ಪ್ರತಿಷ್ಠಾಪ್ಯ ಚ ಕೈಲಾಸಪ್ರಾಸಾದೇ ಪರಮೇಶ್ವರಿ ॥೧೦॥

ಸ ಯತ್ಫಲಮವಾಪ್ನೋತಿ ತದೇಕಾಗ್ರಮನಾಃ ಶೃಣು ।
ಸೂರ್ಯಕೋಟಿಪ್ರತೀಕಾಶೈರ್ಯಾನೈಃ ಕೈಲಾಸಸಪ್ರಭೈಃ ॥೧೧॥

ಔಗ್ರಂ ಕೌಮಾರಮೈಶಾನಂ ವೈಷ್ಣವಂ ಬ್ರಾಹ್ಮಮೇವ ಚ ।
ಪ್ರಾಜಾಪತ್ಯಂ ಮಹಾತೇಜಾ ಜನೋ ಲೋಕಂ ಮಹತ್ತಥಾ ॥೧೨॥

ಐಂದ್ರಮಾಸಾದ್ಯ ಚೈಂದ್ರತ್ವಂ ಕೃತ್ವಾ ಕಲ್ಪಾಯುತಂ ದಿವಿ ।
ಮನ್ವಂತರಂ ಪರಿವೃತಂ ಯಾವದಿಂದ್ರಶತಂ ಶಿವೇ ॥೧೩॥

ಭುಕ್ತ್ವಾ ಚೈವ ಭುವರ್ಲೋಕೇ ಭೋಗಾನ್ದೇವೇಷು ದುರ್ಲಭಾನ್ ।
ಯಾವದಾಯುರ್ಬ್ರಹ್ಮಣೋಽಥ ವಸೇತ್ಕೈಲಾಸಪರ್ವತೇ ॥೧೪॥

---

ಕೈಚಪ್ಪರಗಳಿಂದ ಶೋಭಿಸುತ್ತಾ ನೂರಾರು ದಿಂಬುಗಳಿಂದ ಯುಕ್ತವಾಗಿರಬೇಕು. ಅಂತಹ ಆಸನರೂಪವಾದ ಮಂಚದಲ್ಲಿ ಉಮಾರಮಣನಾದ ಶಿವಮೂರ್ತಿಯನ್ನು ಮೂರುಕಣ್ಣು, ಸುಂದರವಾದ ಅರ್ಧಚಂದ್ರ, ಪಾರ್ಶ್ವದಲ್ಲಿ ಸುಂದರಳಾದ ಪಾರ್ವತಿ ಸ್ಕಂದ ಇವರೊಡನೆ, ಕಪ್ಪುಕಂಠ, ಭಸ್ಮತ್ರಿಪುಂಡ್ರಗಳಿಂದ ಶೋಭಿಸುತ್ತಿರುವಂತೆ ನಿರ್ಮಿಸಿ ಪ್ರತಿಷ್ಠೆಮಾಡಿಸಿದರೆ, ಕೈಲಾಸದಲ್ಲಿ ಅವನು ಅನುಭವಿಸುವ ಫಲವನ್ನು ಹೇಳುವೆನು. ಎಲೌ ಪಾರ್ವತಿ! ಏಕಮನಸ್ಸಿನಿಂದ ಲಾಲಿಸು ; ॥೬-೭-೮-೯-೧೦॥

ಕೋಟಿಸೂರ್ಯ ಸಮಾನ ಕಾಂತಿಯುಕ್ತವಾಗಿ, ಕೈಲಾಸಪರ್ವತ ಸಮಾನವಾಗಿರುವ ವಿಮಾನಗಳಲ್ಲಿ ಕುಳಿತು, ಉಗ್ರಲೋಕ, ಕುಮಾರಲೋಕ, ಈಶಾನ ಲೋಕ, ವಿಷ್ಣುಲೋಕ, ಬ್ರಹ್ಮಲೋಕ, ಪ್ರಜಾಪತಿಲೋಕಗಳನ್ನು ಸೇರಿ ಮಹಾ ತೇಜಸ್ವಿಯಾಗಿ ಜನಲೋಕ, ಮಹರ್ಲೋಕ, ಇಂದ್ರಲೋಕಗಳನ್ನು ಕ್ರಮವಾಗಿ ಹೊಂದಿ, ಹತ್ತುಸಾವಿರ ಕಲ್ಪಗಳವರೆಗೆ ಇಂದ್ರಪದವಿಯನ್ನು ಅನುಭವಿಸಿ ನೂರು ಇಂದ್ರರಿರುವ ಮನ್ವಂತರಕಾಲದವರೆಗೆ ಸಕಲ ದೇವಭೋಗಗಳನ್ನು ಪಡೆದು ಅನಂತರ ಬ್ರಹ್ಮನ ಆಯುಸ್ಸಿನ ಪರಮಾವಧಿ ಕೈಲಾಸಪರ್ವತದಲ್ಲಿ ವಾಸಮಾಡುತ್ತಾನೆ. ॥-೧೧-೧೨-೧೩-೧೪॥

ಮೇರುಮಾಸಾದ್ಯ ದೇವಾನಾಂ ಭವನೇಷು ಪ್ರಮೋದತೇ ।
ಕಾಪೂರುಷಾಪ್ಸರೋಲೋಕೇ ನಾಗವಿದ್ಯಾಧರಾಲಯೇ ॥೧೫॥

ಭುಕ್ತ್ವಾ ಭೋಗಾನ್ಸುವಿಪುಲಾನ್ಯದಿ ಸ್ಯಾದ್ವೈಚ್ಛಿಕೋ ಭುವಿ ।
ಅಖಂಡಲಾಧಿಕೋ ಭೂಯಾನ್ಮಹೀಮಂಡಲಮಂಡನಂ ॥೧೬॥

ಏಕಛತ್ರಾಧಿಪೋ ರಾಜಾ ಭವೇದ್ವೀಜಿತಚಾಮರಃ ।
ಜಾತಿಸ್ಮರೋ ಭವೇದ್ಭೂಮ್ಯಾಂ ಕೃತ್ವಾ ಧರ್ಮಂ ಶಿವಸ್ಯ ತು ॥೧೭॥

ಪುನರ್ಮೇ ಗಣಪೋ ಭೂಯಾನ್ನಾಸ್ತ್ಯಾಂತೋ ಧರ್ಮವರ್ತ್ಮನಃ ।
ಮಂದರಾದ್ರಿಂ ಪ್ರಕುರ್ವೀತ ಮಮ ಪ್ರಾಸಾದಮುತ್ತಮಂ ॥೧೮॥

ಶಿಖರಾಯುತಸಂಯುಕ್ತಂ ಪ್ರಾಸಾದಂ ದಿವ್ಯವೇದಿಕಂ ।
ರುದ್ರಾವತಾರಕ್ರೀಡಾಭಿರಪ್ಸರೋಗಣಚಿತ್ರಿತಂ ॥೧೯॥

ದೇವದಾನವಗಂಧರ್ವಪ್ರತಿಮಾಪರಿಶೋಭಿತಂ ।
ಸಂತಾನಪಾರಿಜಾತಾದಿಮಂದಾರಾದ್ಯೈರಲಂಕೃತಂ ॥೨೦॥

---

ಅನಂತರ ಮೇರುಪರ್ವತವನ್ನು ಹೊಂದಿ ದೇವಲೋಕದಲ್ಲಿ ಆನಂದಿಸುವನು. ಹಾಗೆಯೇ ಕಿಂಪುರುಷ, ಅಪ್ಸರ, ನಾಗ, ಮತ್ತು ವಿದ್ಯಾಧರಲೋಕಗಳಲ್ಲಿ ವಿಪುಲವಾದ ಭೋಗಗಳನ್ನನುಭವಿಸಿ, ಇಚ್ಛೆಪಟ್ಟ ಪಕ್ಷದಲ್ಲಿ ಈ ಭೂಮಿಯಲ್ಲಿ ಇಂದ್ರನಿಗಿಂತಲೂ ಹೆಚ್ಚಾಗಿ ಭೂಮಂಡಲವನ್ನಲಂಕರಿಸಿ ರಾಜಶ್ರೇಷ್ಠನೆನಿಸುವನು. ॥೧೫-೧೬॥

ಅಲ್ಲದೆ ಏಕಚ್ಛತ್ರಾಧಿಪನಾದ ರಾಜನೆನಿಸಿ, ಚಾಮರಗಳಿಂದ ಸೇವೆಗೊಳ್ಳುತ್ತಾ, ಪೂರ್ವಜನ್ಮದ ಸ್ಮರಣೆಯುಳ್ಳವನಾಗಿ, ಭೂಮಿಯಲ್ಲಿ ಶಿವಧರ್ಮವನ್ನು ಪ್ರಚಾರ ಪಡಿಸುತ್ತಾ, ಪುನಃ ನನ್ನ ಗಣಾಧಿಪತಿ ಪದವಿಯನ್ನೈದುವನು. ಎಲೌ ಪಾರ್ವತಿ! ಈ ಧರ್ಮಮಾರ್ಗಕ್ಕೆ ಕೊನೆಯೇ ಇಲ್ಲವೆಂದು ತಿಳಿ. ದೇವಿ! ನನ್ನ ಉತ್ತಮವಾದ ಪ್ರಾಸಾದವನ್ನು ಮಂದರಪರ್ವತವನ್ನಾಗಿ ರಚಿಸಬೇಕು. ॥೧೭-೧೮॥

ಹತ್ತುಸಾವಿರ ಶಿಖರಸಮೇತವಾದ ಈ ಪ್ರಾಸಾದವು ದಿವ್ಯವೇದಿಕೆಯಿಂದ ಯುಕ್ತವಾಗಿರಬೇಕು. ಇದರಲ್ಲಿ ರುದ್ರನ ಅವತಾರ ಲೀಲೆಗಳನ್ನು ಚಿತ್ರಿಸಬೇಕು. ಅಪ್ಸರೆಯರ ಗುಣವನ್ನೂ ಚಿತ್ರಿಸಬೇಕು. ದೇವತೆಗಳು, ದಾನವರು, ಗಂಧರ್ವರು,

ದೇವೋದ್ಯಾನೋದ್ಭವೈರ್ವೃಕ್ಷೈಃ ಸಮಂತಾದುಪಶೋಭಿತಂ ।
ಸುಧಾವಿಚಿತ್ರಿತಾಃ ಸರ್ವಾಃ ಕಾರಯೇತ್ಪ್ರತಿಮಾಃ ಶುಭಾಃ ॥೨೦॥

ರಂಗಿತಾಃ ಪಂಚವರ್ಣೈಶ್ಚ ತತ್ಪ್ರಾಸಾದೇ ವಿಶೇಷತಃ ।
ಮಮ ದೇವ್ಯಾ ಗಣೇಶಸ್ಯ ಸ್ಕಂದಭೈರವನಂದಿನಃ ॥೨೨॥

ವೃಷಾಗ್ರೈಶ್ಚಾರುಶೃಂಗೈಶ್ಚ ಶೋಭಿತಂ ಕಾರಯೇನ್ನರಃ ।
ತತ್ಪ್ರಾಸಾದೇ ಮಹಾಪೀಠೇ ಪುಷ್ಪಮಾಲಾವಿರಾಜಿತೇ ॥೨೩॥

ಗಂಧಧೂಪಾದಿವಿತತೇ ದೀಪಮಾಲಾವೃತಾಂತರೇ ।
ನೃತ್ತಮಾನಂ ತ್ರಯೀನೇತ್ರಂ ಸೋಮಂ ಸೋಮಾರ್ಧಶೇಖರಂ॥೨೪॥

ಮತ್ಪಾರ್ಶ್ವೇ ತ್ವಾಂ ಮಹಾದೇವಿ ಪಶ್ಯಂತೀಂ ಮತ್ಪದಾಂಬುಜಂ ।
ಕೃತ್ವಾ ಭಕ್ತ್ಯಾ ಪ್ರತಿಷ್ಠಾಪ್ಯ ಸ ಮೇ ಪ್ರಿಯತರೋ ಗಣಃ ॥೨೫॥

---

ಇವರ ಪ್ರತಿಮೆಗಳಿಂದ ಅಲಂಕರಿಸಬೇಕು. ಕಲ್ಪವೃಕ್ಷ, ಪಾರಿಜಾತ ಮುಂತಾದ ವೃಕ್ಷಗಳಿಂದಲೂ, ಮಂದಾರವೇ ಮೊದಲಾದ ಮರಗಳಿಂದಲೂ ಆ ಪ್ರಾಸಾದವನ್ನು ಅಲಂಕರಿಸಬೇಕು. ದೇವತೆಗಳ ಉದ್ಯಾನಗಳಲ್ಲಿ ಹುಟ್ಟುವ ವೃಕ್ಷಗಳನ್ನೂ ಸುತ್ತಲೂ ಶೋಭಾಯಮಾನವಾಗಿ ಹಾಕಬೇಕು. ಪ್ರತಿಯೊಂದು ಪ್ರತಿಮೆಯೂ ಸುಣ್ಣದಿಂದ ಚಿತ್ರಿಸಲ್ಪಟ್ಟಿರಬೇಕು. ॥೧೯-೨೦-೨೧॥

ನನ್ನ ಪ್ರಾಸಾದದಲ್ಲಿ ವಿಶೇಷವಾಗಿ ಐದುಬಣ್ಣಗಳಿಂದಲೂ ಲೇಪಿತವಾಗಿರುವ ನನ್ನ ಮತ್ತು ದೇವಿ, ಗಣೇಶ, ಸ್ಕಂದ, ಭೈರವ, ನಂದಿ, ಇವರ ಮೂರ್ತಿಗಳನ್ನು ವೃಷಭಾಗ್ರಗಳಲ್ಲಿ ಮನೋಹರವಾದ ಕೊಂಬುಗಳಿಂದ ಶೋಭಿಸಲ್ಪಟ್ಟಿರುವಂತೆ ಮೂರ್ತಿಗಳನ್ನು ಮಾಡಿಸಬೇಕು. ಆ ಉಪ್ಪರಿಗೆಯಲ್ಲಿ ಹೂಮಾಲೆಯಿಂದ ವಿರಾಜಿಸಲ್ಪಟ್ಟಿರುವಗಂಧ ಧೂಪಾದಿಗಳಿಂದ ವಿಸ್ತೃತವಾಗಿ, ದೀಪಮಾಲೆಗಳಿಂದ ಆವರಿಸಲ್ಪಟ್ಟಿರುವ ಮಧ್ಯಭಾಗವುಳ್ಳ ಮಹಾಪೀಠದಲ್ಲಿ, ನಾಟ್ಯವಾಡುತ್ತಿರುವ ಮುಕ್ಕಣ್ಣನೂ, ಉಮಾಸಹಿತನೂ, ಚಂದ್ರಾರ್ಧಕೃತಶೇಖರನೂ, ಆದ ನನ್ನನ್ನೂ, ನನ್ನ ಪಕ್ಕದಲ್ಲಿ ನನ್ನ ಅಡಿದಾವರೆಯನ್ನು ನೋಡುತ್ತಿರುವ ನಿನ್ನನ್ನೂ, ಭಕ್ತಿಯಿಂದ ಪ್ರತಿಷ್ಠೆಮಾಡುವವನು ನನಗೆ ಅತಿಪ್ರಿಯಕರನಾದ ಗಣನೆನಿಸುವನು. ॥೨೨-೨೩-೨೪-೨೫॥

ಮಂದಲಾದ್ರಿಪ್ರತೀಕಾಶೈರ್ವಿಮಾನೈರ್ವಿಶ್ವತೋಮುಖೈಃ ।
ಹಾವಭಾವಸಮಾಯುಕ್ತೈರುದ್ರಾಣೀನೃತ್ತನಿರ್ಭರೈಃ ॥೨೬॥

ಗತ್ವಾ ಶಿವಪುರಂ ದಿವ್ಯಂ ಭುಕ್ತ್ವಾ ಭೋಗಾನನುತ್ತಮಾನ್ ।
ಜ್ಞಾನಯೋಗಂ ಸಮಾಸಾದ್ಯ ಗಾಣಾಪತ್ಯಂ ಲಭೇನ್ನರಃ ॥೨೭॥

ಯಃ ಕುರ್ಯಾನ್ಮೇರುನಾಮಾನಂ ಪ್ರಾಸಾದಂ ಮೇ ಮಹೇಶ್ವರಿ ।
ಸಹಸ್ರಶೃಂಗಸಂಯುಕ್ತಂ ಸ್ತಂಭಸಾಹಸ್ರಸಂಯುತಂ ॥೨೮

ವೇದಿಕಾತೋರಣೋಪೇತಂ ವಲಭೀಜಲಕಾನ್ವಿತಂ ।
ದಿಕ್ಪಾಲೈರ್ದೇವಸಂಘೈಶ್ಚ ತತ್ತದ್ವರ್ಣಾಯುಧಾನ್ವಿತೈಃ ॥೨೯॥

ಕಲ್ಪಿತಂ ಶಿಲ್ಪಿವರ್ಯೈಶ್ಚ ತತ್ಪ್ರಾಸಾದಾಂತರಪೀಠಕೇ ।
ದೀಪಧೂಪಸಮಾನೋದಪ್ರಸಾರಿತದಿಗಂತರೇ ॥೩೦॥

ವಾಮದಕ್ಷಿಣಪಾರ್ಶ್ವಸ್ಥವಿಷ್ಣುಬ್ರಹ್ಮಾದಿಸೇವಿತಂ ।
ಉಮಾನ್ವಿತಾಂ ಮನ್ಮೈವೇಶಿ ಮೂರ್ತಿಂ ಸ್ಥಾಪ್ಯ ಪ್ರಪೂಜಯೇತ್ ॥೩೧॥

---

ಅವನು ಮಂದರಪರ್ವತ ಸಮಾನವಾದ ವಿಮಾನಗಳಲ್ಲಿ ಸರ್ವತ್ರ ಸಂಚರಿಸುತ್ತಾ ಎಲ್ಲ ಕಡೆಯಲ್ಲಿಯೂ ಮುಖಗಳುಳ್ಳ ಆ ವಿಮಾನಗಳಲ್ಲಿ ಹಾವಭಾವಗಳೊಳಗೂಡಿದ ರುದ್ರಾಣಿಯರ ನಾಟ್ಯಲೀಲೆಗಳಿಂದ ಸಂತೋಷಪಡುತ್ತಾ, ದಿವ್ಯವಾದ ಶಿವಪುರವನ್ನೈದಿ ಅಲ್ಲಿ ಅತ್ಯುತ್ತಮಭೋಗಗಳನ್ನು ಅನುಭವಿಸಿ, ಕೊನೆಗೆ ಜ್ಞಾನಯೋಗವನ್ನು ಹೊಂದಿ ಗಣಾಧಿಪಸದವಿಯನ್ನೈದುತ್ತಾನೆ. ॥೨೬-೨೭॥

ಎಲೌ ಮಹೇಶ್ವರಿಯೇ ! ಸಾವಿರ ಶಿಖರಗಳಿಂದ ಯುಕ್ತವಾಗಿ ಸಹಸ್ರ ಕಂಬಗಳುಳ್ಳ ವೇದಿಕೆ, ತೋರಣ, ವಲಭೀ ಜಲಗಳಿಂದ ಕೂಡಿರುವ ಮೇರುವೆಂಬ ಹೆಸರಿನ ನನ್ನ ಉಪ್ಪರಿಗೆಯನ್ನು ಮಾಡಿಸಿ, ಆಯಾ ಬಣ್ಣ ಮತ್ತು ಆಯುಧ ಸಮೇತರಾದ ದಿಕ್ಪಾಲಕರನ್ನೂ ದೇವಸಮೂಹವನ್ನೂ ಆ ಪ್ರಾಸಾದ ಮಧ್ಯದ ಪೀಠದಲ್ಲಿ ಶಿಲ್ಪಿ ಶ್ರೇಷ್ಠರಿಂದ ನಿರ್ಮಿಸಿ, ಧೂಪ, ದೀಪಾದಿಗಳಿಂದ ದಿಗಂತಕ್ಕೆ ವ್ಯಾಪಿಸಿರುವಂತೆ ಎಡ ಬಲ ಭಾಗಗಳಲ್ಲಿ ವಿಷ್ಣು ಬ್ರಹ್ಮಾದಿಗಳಿಂದ ಸೇವಿಸಲ್ಪಡುತ್ತಿರುವ ನನ್ನ ಮೂರ್ತಿಯನ್ನೇ ನಿನ್ನೊಡನೆ ಆ ಪೀಠದಲ್ಲಿ ಸ್ಥಾಪಿಸಿ ಪೂಜೆ ಮಾಡಬೇಕು. ॥೨೮-೨೯-೩೦-೩೧॥

ಸ ಯತ್ಫಲಮವಾಪ್ನೋತಿ ಸ ತತ್ಸರ್ವಂ ಮಹಾಮುಖೈಃ ।
ಸರ್ವಯಜ್ಞತಪೋದಾನಂ ಸರ್ವತೀರ್ಥೇಷು ಯತ್ಫಲಂ ॥೩೨॥

ಲಬ್ಧ್ವಾ ವಿಮಾನವರ್ಯೇಣ ಜಿತಸೂರ್ಯೇಣ ಯಾತಿ ಮಾಂ ।
ನಿಷಧಂ ನಾಮತಃ ಕುರ್ಯಾತ್ಪ್ರಾಸಾದಂ ಭಕ್ತಿಮಾನ್ನರಃ ॥೩೩॥

ಸಹಸ್ರಶಿಖರೋಪೇತಂ ಸ್ತಂಭಕುಂಭಸಮನ್ವಿತಂ ।
ವಲಭೀಕುಲಸಂಛನ್ನಂ ತೋರಣಾರುಣಮಂಡಿತಂ ॥೩೪॥

ವೇದಿಕಾಪಟ್ಟಕೋಪೇತಂ ಮುನಿವರ್ಯೈಶ್ಚ ಶೋಭಿತಂ ।
ವೈಖಾನಸೈರ್ವಾಲಖಿಲ್ಯೈರ್ದೇವಗಂಧರ್ವಶೋಭಿತಂ ॥೩೫॥

ಆದ್ಯೈಗ್ವಿಧಸುಧಾಕ್ಲುಪ್ತಮೂರ್ತಿಭಿಃ ಪರಿಶೋಭಿತಂ ।
ತತ್ರಾಸನೇ ಸುಖಾಸೀನಂ ಚಂದ್ರಖಂಡಜಟಾಲಕಂ ॥೩೬॥

---

ಹೀಗೆ ಮಾಡಿಸುವವನು ಪಡೆಯುವ ಫಲವನ್ನು ಸಮಸ್ತ ದೊಡ್ಡ ಯಾಗಗಳು, ಯಜ್ಞ, ತಪಸ್ಸು, ದಾನ ಇವುಗಳಾವುದರಿಂದಲೂ ಪಡೆಯಲಾಗುವುದಿಲ್ಲ. ಸಕಲ ತೀರ್ಥಸ್ನಾನಗಳಲ್ಲಿ ಯಾವ ಫಲವುಂಟಾಗುವುದೋ ಆ ಫಲವನ್ನು ಹೊಂದುವನು. ಹೀಗೆ ಫಲಪಡೆದು, ಸೂರ್ಯನನ್ನು ಜಯಿಸಿರುವ ಉತ್ತಮ ವಿಮಾನದಲ್ಲಿ ಕುಳಿತು ನನ್ನನ್ನು ಸೇರುವನು. ॥೩೨॥

ದೇವಿಯೇ! ಭಕ್ತಿಭರಿತನಾದ ಮಾನವನು ನಿಷಧವೆಂಬ ಹೆಸರಿನ ಪ್ರಾಸಾದವನ್ನು ಮಾಡಿಸಬೇಕು. ಅದು ಸಾವಿರ ಶಿಖರ, ಕಂಬ, ಮತ್ತು ಕುಂಭಗಳಿಂದ ಕೂಡಿರಬೇಕು. ವಲಭಿಗಳ ಸಮೂಹದಿಂದ ಆಚ್ಛಾದಿತವಾಗಿ ಕೆಂಪು ತೋರಣಗಳಿಂದ ಅಲಂಕೃತವಾಗಿರಬೇಕು. ವೇದಿಕೆಯ ಪಟ್ಟಿಯಿಂದ ಯುಕ್ತವಾಗಿ ಮುನಿಶ್ರೇಷ್ಠರಿಂದ ಶೋಭಿಸಲ್ಪಟ್ಟಿರಬೇಕು. ವೈಖಾನಸ, ವಾಲಖಿಲ್ಯರಿಂದಲೂ, ದೇವಗಂದರ್ವರಿಂದಲೂ ಶೋಭಿಸಲ್ಪಟ್ಟಿರಬೇಕು. ಅದೇರೀತಿಯ (ಹಿಂದೆ ಹೇಳಿದ) ಸುಣ್ಣದಿಂದ ರಚಿತವಾದ ಮೂರ್ತಿಗಳಿಂದ ಅಲಂಕೃತವಾಗಿರಬೇಕು. ॥೩೩-೩೪-೩೫॥

ದೇವಿಯೇ ! ಆ ಪ್ರಾಸಾದದಲ್ಲಿ ಆಸನದಲ್ಲಿ ಸುಖವಾಗಿ ಕುಳಿತು, ಚಂದ್ರಖಂಡವನ್ನೂ ಜಟೆಗಳನ್ನೂ ಅಲಂಕರಿಸಿ, ಭಸ್ಮತ್ರಿಪುಂಡ್ರಗಳನ್ನು ಹಣೆಯಲ್ಲಿ ಧರಿಸಿ, ಯೋಗ ಪಟ್ಟಾಸನದಿಂದ, ಉಜ್ಜ್ವಲವಾಗಿರುತ್ತಾ ನನ್ನಲ್ಲಿ ಭಕ್ತಿಭಾವ ಸಂಪೂರ್ಣ .

ತ್ರಿಪುಂಡ್ರಫಾಲಂ ಮಾಂ ದೇವಿ ಯೋಗಪಟ್ಟಾಸನೋಜ್ಜ್ವಲಂ ।
ಚಿನ್ಮುದ್ರಾದ್ರಾವಿತಾಜ್ಞಾನಂ ಮುನೀನಾಂ ಭಾವಿತಾತ್ಮನಾಂ ॥೩೭॥

ಸಂವೃತಂ ಮುನಿಭಿಸ್ತತ್ರ ನತಪ್ರಾಂಜಲಿಭಿಃ ಶಿವೇ ।
ಕೃತ್ವಾ ಮೇ ದಕ್ಷಿಣಾಂ ಮೂರ್ತಿಂ ವಟಮೂಲೇ ಪ್ರತಿಷ್ಠಿತಾಂ ॥೩೮॥

ದೇವಲೋಕಂ ಯಾನವರ್ಯೈಃ ಹಂಸಯುಕ್ತೈರ್ವಿರಾಜಿತಃ ।
ವಿಮಾನೈಶ್ಚಂದ್ರಗೌರೈಶ್ಚ ವೃತಮಪ್ಸರಸಾಂ ಗಣೈಃ ॥೩೯॥

ಭುಕ್ತ್ವಾಥ ಸುಚಿರಂ ಕಾಲಂ ದೇವಭೋಗಾನನುತ್ತಮಾನ್ ।
ಆಭೂತಸಂಪ್ಲವಂ ದೇವಿ ಪಶ್ಚಾನ್ಮೇ ಜ್ಞಾನಮೈಶ್ವರಂ ॥೪೦॥

ಲಬ್ಧ್ವಾ ಮಯ್ಯೇವ ಲೀಯೇತ ಭಕ್ತಿಯುಕ್ತಃ ಪ್ರಮುಚ್ಯತೇ ।
ಕುರ್ಯಾದ್ವಾ ಯಃ ಶಿವೇ ಭಕ್ತ್ಯಾ ಹಿಮಶೈಲಾಖ್ಯಮುತ್ತಮಂ ॥೪೧॥

ಪ್ರಾಸಾದಂ ಪರಯಾ ಭಕ್ತ್ಯಾ ದಿವ್ಯಸ್ತಂಭಶತೈರ್ಯುತಂ ।
ಜಾಲಿಕಾಮಾಲಿಕಾ ಮಧ್ಯಸ್ತಂಭಕುಂಭಶತಾವೃತಂ ॥೪೨॥

---

ರಾದ ಮುನಿಗಳ ಅಜ್ಞಾನವನ್ನು ಚಿನ್ಮುದ್ರೆಯಿಂದ ಹೋಗಲಾಡಿಸಿ, ವಿನಯದಿಂದ ಕೈಮುಗಿದುಕೊಂಡು ನಿಂತಿರುವ ಮುನಿಗಳಿಂದ ಸುತ್ತುವರಿಯಲ್ಪಟ್ಟಿರುವ, ಆಲದ ಬುಡದಲ್ಲಿ ಪ್ರತಿಷ್ಠಿತವಾಗಿರುವ ನನ್ನ ದಕ್ಷಿಣಾಮೂರ್ತಿಯನ್ನು ರಚಿಸಬೇಕು. ||೩೬-೩೭-೩೮||

ಹೀಗೆ ನಿಷಧರೂಪವಾದ ಪ್ರಾಸಾದವನ್ನು ನಿರ್ಮಿಸಿದವನು ಹಂಸಸಮೇತಗಳಾದ ಚಂದ್ರನಂತೆ ಶುಭ್ರಗಳಾದ ಶ್ರೇಷ್ಠವಿಮಾನಗಳಲ್ಲಿ ಅಪ್ಸರಸೆಯರ ಗಣಗಳೊಡನೆ ದೇವಲೋಕವನ್ನು ಸೇರಿ ಬಹಳ ಹೊತ್ತು ಅತ್ಯುತ್ತಮಗಳಾದ ದೇವಭೋಗಗಳನ್ನು ಅನುಭವಿಸಿ, ಅನಂತರ ಶಾಶ್ವತವಾದ ನನ್ನ ದಿವ್ಯಜ್ಞಾನವನ್ನು ಪಡೆದು ಕೊನೆಗೆ ಭಕ್ತಿಯುಕ್ತನಾಗಿ ನನ್ನಲ್ಲೇ ಐಕ್ಯವಾಗಿ ಮುಕ್ತನಾಗುತ್ತಾನೆ. ||೩೯-೪೦||

ದೇವಿ, ಭಕ್ತಿಯಿಂದ ಉತ್ತಮವಾದ ಹಿಮಶೈಲಸಂಜ್ಞಕವಾದ ಪ್ರಾಸಾದವನ್ನು ಕಟ್ಟಿಸಬೇಕು. ಇದು ನೂರು ಕಂಬಗಳಿಂದ ಕೂಡಿ ಜಾಲಿಕಾಮಾಲೆಯ ಮಧ್ಯದಲ್ಲಿ ದಿವ್ಯವಾದ ನೂರು ಕಂಬಗಳೂ ಇರಬೇಕು. ವೇದಿಕೆ, ತೋರಣಗಳಿಂದ ಯುಕ್ತವಾಗಿ ಮನೋಹರವಾದ ದಿವ್ಯಪೀಠವಿರಬೇಕು. ಧೂಪದೀಪಗಳಿಂದ ಆವರಿಸ

ವೇದಿಕಾತೋರಣೋಪೇತಂ ದಿವ್ಯಪೀಠಂ ಮನೋಹರಂ ।
ಧೂಪದೀಪಾವೃತಂ ಪುಷ್ಪಮಾಲಾಮುದ್ರಿತಮೇದುರಂ ॥೪೩॥

ಸೋಷ್ಣೀಷಂ ಸೋಮಮುಕುಟಂ ಪುಷ್ಪಪೀಡಮುಮಾನ್ವಿತಂ ।
ನಂದಿಭೃಂಗಿಮಹಾಕಾಲಮೂರ್ತಿಭಿಃ ಪರಿಶೋಭಿತಂ ॥೪೪॥

ತಿಷ್ಠಂತಂ ಮಾಂ ತತ್ರ ಮೂರ್ತಿಂ ಕೃತ್ವಾ ವೃಷಮುಖೇಕರಂ ।
ಪ್ರತಿಷ್ಠಾಪ್ಯ ಲಭೇದ್ಗೌರೀ ವಿಮಾನಂ ಸಾರ್ವಗಾಮಿಕಂ ॥೪೫॥

ಹಿಮಶೈಲೋಪಮೈರ್ಯಾನೈರ್ಭುಕ್ತ್ವಾ ದೇವಪುರೇ ಸುಖಂ ।
ನಂದನಾದಿವನೇ ದೇವಿ ಪೀತ್ವಾಮೃತಮನುತ್ತಮಂ ॥೪೬॥

ಸ್ರಗ್ಗಂಧವಾಸೋಬಿಭ್ರಾಜದಪ್ಸರೋಭಿಃ ಪ್ರಮೋದತೇ ।
ಯಾವದಿಂದ್ರಾಯುತಂ ದೇವಿಪಶ್ಚಾನ್ಮೇ ಗಣಪೋ ಭವೇತ್ ॥೪೭॥

ನೀಲಾದ್ರಿಶಿಖರಾಖ್ಯಂ ವಾ ಪ್ರಾಸಾದಂ ತೋರಣಾನ್ವಿತಂ ।
ವೇದಿಕಾಪಟ್ಟಿಕೋಪೇತಂ ಗೋಪಾನಸಿವಿರಾಜಿತಂ ॥೪೮॥

---

ಲ್ಪಟ್ಟು ಹೂಮಾಲೆಗಳಿಂದ ಸಾಂದ್ರವಾಗಿರಬೇಕು. ಕವಚ, ಚಂದ್ರಕಿರೀಟ, ಪುಷ್ಪ ಮಾಲೆಗಳಿಂದ ಯುಕ್ತವಾಗಿ ಉಮಾಸಮೇತನಾಗಿರುವ ನನ್ನನ್ನು ನಂದಿ, ಭೃಂಗಿ, ಮಹಾಕಾಲನೇ ಮೊದಲಾದ ಮೂರ್ತಿಗಳಿಂದ ಶೋಭಿಸುತ್ತಿರುವಂತೆ ವೃಷಭದ ಬಾಯಲ್ಲಿ ಕೈಯಿಟ್ಟುಕೊಂಡು ನಿಂತಿರುವಂತೆ ಮೂರ್ತಿಯಲ್ಲಿ ಮಾಡಿಸಿ, ಪ್ರತಿಷ್ಠೆ ಮಾಡಿದರೆ ಎಲ್ಲಾಕಡೆಗಳಲ್ಲಿಯೂ ಸಂಚರಿಸುವ ವಿಮಾನವನ್ನು ಪಡೆಯುವನು. ಹಿಮಾಲಯಪರ್ವತಗಳಿಗೆ ಸಮಾನಗಳಾದ ಆ ವಿಮಾನಗಳಲ್ಲಿ ಕುಳಿತು, ದೇವ ಲೋಕದಲ್ಲಿ ಸುಖವನ್ನು ಅನುಭವಿಸಿ, ನಂದನವೇ ಮೊದಲಾದ ದೇವ ವನಗಳಲ್ಲಿ ಉತ್ತಮವಾದ ಅಮೃತವನ್ನು ಪಾನಮಾಡುತ್ತಾ, ॥೪೧-೪೨-೪೩-೪೪-೪೫-೪೬॥

ಹೂಮಾಲೆ, ಗಂಧ, ವಸ್ತ್ರಗಳಿಂದ ಶೋಭಿಸುವ ಅಪ್ಸರೆಯರೊಡನೆ ಹತ್ತು ಸಾವಿರ ಇಂದ್ರಕಲ್ಪಗಳವರೆಗೆ ಆನಂದಿಸಿ ಅನಂತರ ನನ್ನ ಗಣಾಧಿಪತಿ ಪದವಿಯನ್ನೈದುವನು. ॥೪೭॥

ತೋರಣ, ವೇದಿಕೆ, ಪಟ್ಟಿಕೆಗಳಿಂದ ಕೂಡಿ, ವಲಭಿಯಿಂದ ವಿರಾಜಿಸುತ್ತಿರುವಂತಹ ಐವತ್ತು ಕಂಬಗಳಿಂದ ವಿಸ್ತಾರವಾಗಿ ಚಿತ್ರವಾಗಿರುವ ಹವಳದ ಬೊಂಬೆ

ಪಂಚಾಶತ್ತ್ಸಂಭವಿತತಚಿತ್ರವಿದ್ರುಮಪುತ್ರಿಕಂ ।
ವಿರಾಜಿತವೃಷಾಗ್ರಂ ಚ ಧೂಯಮಾನಪತಾಕಕಂ ॥೪೯॥

ವೇಣುವೀಣಾರವಾನೇಕಂ ಸುಮಧೂಪಾದಿದೀಪಿತಂ ।
ಪೀಠೇ ದೇವಿ ಪ್ರತಿಷ್ಠಾಪ್ಯ ಗಜಘ್ನೀಂ ಮೂರ್ತಿಮವ್ಯಯಾಂ ॥೫೦॥

ತ್ರಿನೇತ್ರಾಂ ಚಾರುಚಂದ್ರಾಂಶಾಂ ಗಜಮಸ್ತಲಸಾಂಘ್ರಿಕಾಂ ।
ದೇದೀಪಿತಮಹಾಶೂಲಕರಾಂ ದಂಷ್ಟ್ರಾಂಕುರಾಸ್ಯಕಾಂ ॥೫೧॥

ಯಾನೈರ್ವೃಷಯುತೈರ್ದೇವಿ ತಿಷ್ಠೇತ್ಸಪರಮೇಷ್ಠಿನಃ ।
ಲೋಕೇ ಭೋಗಯುತೋ ಧೀಮಾನಧೀತಜ್ಞಾನಮುತ್ತಮಂ ॥೫೨॥

ಪಶ್ಚಾತ್ತೇನೈವ ಮಾಂ ಪ್ರಾಪ್ಯ ಬ್ರಹ್ಮಣಾ ಪರಿಮುಚ್ಯತೇ ।
ವೃಷಭಾಖ್ಯಂ ತು ಯಃ ಕುರ್ಯಾತ್ಪ್ರಾಸಾದಂ ಪರಮೇಶ್ವರಿ ॥೫೩॥

---

ಗಳುಳ್ಳದ್ದಾಗಿರಬೇಕು. ವೃಷಭದ ಅಗ್ರಭಾಗದಿಂದ ವಿರಾಜಿಸುತ್ತಾ ಹಾರಾಡುತ್ತಿರುವ ಪತಾಕೆಗಳಿಂದ ಶೋಭಿಸುತ್ತಿರಬೇಕು. ಕೊಳಲು, ವೀಣೆ ಮುಂತಾದ ಅನೇಕ ವಾದ್ಯಗಳ ಧ್ವನಿಯಿಂದ ತುಂಬಿ, ಹೂವು, ಧೂಪ, ಮೊದಲಾದವುಗಳಿಂದ ಅಲಂಕೃತವಾಗಿರಬೇಕು. ದೇವಿ! ಈ ರೀತಿಯಾದ ಪ್ರಾಸಾದದಲ್ಲಿ ಗಜಾಸುರ ಹಂತೃವೂ, ಅಚ್ಯುತನೂ, ಮೂರುಕಣ್ಣುಗಳು, ಚಂದ್ರಶಿರೋಭೂಷಣನೂ, ಗಜಾಸುರನ ತಲೆಯಿಂದ ಶೋಭಿಸುವ ಪಾದವುಳ್ಳವನೂ, ದೊಡ್ಡ ಶೂಲದಿಂದ ಶೋಭಿಸುತ್ತಿರುವ ಕೈಯುಳ್ಳವನೂ, ಕೋರೆದಾಡೆಯ ಅಂಕುರದಿಂದ ಶೋಭಿಸುವ ಮುಖವುಳ್ಳವನೂ, ಆದ ನನ್ನ ಮೂರ್ತಿಯನ್ನು ಪ್ರತಿಷ್ಠೆಮಾಡಬೇಕು. ಇದರಿಂದ ವೃಷಭಯುಕ್ತವಾದ ವಿಮಾನಗಳಲ್ಲಿ ಕುಳಿತು ಬ್ರಹ್ಮಲೋಕವನ್ನು ಹೊಂದಿ ಅಲ್ಲಿ ಭೋಗವನ್ನು ಅನುಭವಿಸಿ, ಉತ್ತಮವಾದ ಜ್ಞಾನವನ್ನು ಪಡೆದು ಬುದ್ಧಿವಂತನಾಗಿ ಅನಂತರ ಆ ಬ್ರಹ್ಮನಿಂದಲೇ ನನ್ನನ್ನೈದಿ ಮುಕ್ತನಾಗುತ್ತಾನೆ. ||೪೮-೪೯-೫೦-೫೧-೫೨||

ಪರಮೇಶ್ವರಿ ! ವೃಷಭನಾಮಕವಾದ ಪ್ರಾಸಾದವನ್ನೋ, ಅಥವಾ ಚೆನ್ನಾಗಿ ರಚಿಸಲ್ಪಟ್ಟಿರುವ ಮಂಟಪವನ್ನೋ ಮಾಡಿಸಬೇಕು. ಅದು ನೂರು ಕಂಭ ಮತ್ತು ಕುಂಭಗಳಿಂದ ಆವೃತವಾಗಿ ವೃಷಭಾಗ್ರದಲ್ಲಿ ಶೋಭಿಸುತ್ತಿರುವ ಕಲಶಗಳಿಂದ ಯುಕ್ತವಾಗಿ ಹೂಮಾಲೆಗಳಿಂದ ಶೋಭಿಸುತ್ತಿರಬೇಕು. ಆ ಪೀಠದಲ್ಲಿ ಯಮಾಂತಕ

7

ಮಂಟಪಂ ವಾ ಸುವಿಹಿತಂ ಸ್ತಂಭಕುಂಭಶತಾನ್ವಿತಂ ।
ರಾಜದ್ವೃಷಾಗ್ರಕಲಶಂ ಪುಷ್ಪಮಾಲಾಪರಿಷ್ಕೃತಂ ॥೫೪॥

ತತ್ರ ಪೀಠೇ ಕಾಲಹರಂ ಮಾಂ ಪ್ರತಿಷ್ಠಾಪ್ಯ ಶಂಕರಿ ।
ಕಾಲಾಸ್ಯಮುಕುಟೇ ಪಾದಹಸ್ತಶೂಲೇನ ತಾಡಿತಂ ॥೫೫॥

ಕಾಲಂ ಚ ಪತಿತಂ ಚಾಗ್ರೇ ಉಗ್ರಂ ಮಾಂ ಚಂದ್ರಶೇಖರಂ ।
ದಂಷ್ಟ್ರಾಕರಾಲವದನಂ ಕೃತ್ವಾ ಬೇರಂ ಲಭೇನ್ನರಃ ॥೫೬॥

ಗಾಣಾಪತ್ಯಂ ಪ್ರಿಯಂ ಮೇ ಸ್ಯಾದ್ವಿಮಾನೇನಾರ್ಕಭಾಸ್ವತಾ ।
ಗತ್ವಾ ಶಿವಪುರಂ ದೇವಿ ಜ್ಞಾನಂ ಲಬ್ಧ್ವಾ ವಿಮುಚ್ಯತೇ ॥೫೭॥

ಮಹೇಂದ್ರಾಖ್ಯಂ ತು ಯಃ ಕುರ್ಯಾತ್ಪ್ರಾಸಾದಂ ಪರಮೇಶಿತುಃ ।
ನಾನಾಲಂಕಾರಶೋಭಾಢ್ಯಂ ಸ್ತಂಭಕುಂಭಶತಾನ್ವಿತಂ ॥೫೮॥

ಗವಾಕ್ಷಪಂಕ್ತಿಮಧ್ಯಸ್ಥಶಿಖರಪ್ರಕರಾನ್ವಿತಂ ।
ವೇದಿಕಾದ್ವಾರವಿಹಿತಂ ದೃಷದ್ಭಿಃ ಪಿಹಿತಂ ದೃಢೈಃ ॥೫೯॥

---

ನಾದ ನನ್ನ ಮೂರ್ತಿಯನ್ನು ಪ್ರತಿಷ್ಠಿಸಬೇಕು. ಆ ಮೂರ್ತಿಯು ಯಮನ ಕಿರೀಟವನ್ನು ಕಾಲು ಮತ್ತು ಕೈಲಿರುವ ಶೂಲದಿಂದ ಹೊಡೆಯಲ್ಪಟ್ಟಿರಬೇಕು. ಮುಂದುಗಡೆ ಯಮನು ಬಿದ್ದಿರಬೇಕು. ಹಾಗೆ ಭಯಂಕರವಾದ ನನ್ನ ದೇಹವು ಚಂದ್ರಶಿರೋಭೂಷಣವಾಗಿರುವಂತೆ ಮಾಡಿದ ಮಾನವನು ಗಣಾಧಿಪತಿಪದವನ್ನೈದಿ ನನಗೆ ಪ್ರಿಯಕರನಾಗಿ ಸೂರ್ಯನಂತೆ ಪ್ರಕಾಶಮಾನವಾದ ವಿಮಾನದಲ್ಲಿ ಶಿವಲೋಕವನ್ನೈದಿ ಅಲ್ಲಿ ಜ್ಞಾನವನ್ನು ಪಡೆದು ಕೊನೆಗೆ ಮುಕ್ತನಾಗುವನು. ॥೫೩-೫೪-೫೫-೫೬-೫೭॥

ಅನೇಕ ಅಲಂಕಾರಗಳ ಶೋಭೆಯಿಂದ ಯುಕ್ತವಾಗಿ ನೂರು ಕಂಭ ಮತ್ತು ಕುಂಭಗಳಿಂದ ರಚಿಸಲ್ಪಟ್ಟು, ಗವಾಕ್ಷಗಳ ಸಮೂಹ, ಮಧ್ಯದಲ್ಲಿರುವ ಶಿಖರಗಳ ಗುಂಪುಗಳಿಂದಲಂಕೃತವಾಗಿ, ವೇದಿಕೆ, ಬಾಗಿಲುಗಳುಳ್ಳದ್ದಾಗಿ ದೃಢವಾದ ಕಲ್ಲುಗಳಿಂದ ರಚಿಸಲ್ಪಟ್ಟಿರುವ ಮಹೇಂದ್ರಸಂಜ್ಞಕವಾದ ಪ್ರಾಸಾದವನ್ನು ಮಹೇಶನಿಗೆ ಮಾಡಿಸಬೇಕು. ಆ ಪ್ರಾಸಾದದಲ್ಲಿರುವ ಉತ್ತಮವಾದ ಆಸನದಲ್ಲಿ, ತಾಮ್ರ, ಬೆಳ್ಳಿ, ಚಿನ್ನ, ಇವುಗಳಿಂದ ರಚಿತವಾದ ಪ್ರತಿಮೆಯಲ್ಲಿ, ನಿನ್ನೊಡನೆ, ಚಂದ್ರಶಿರೋಭೂಷಣ, ಮೂರುಕಣ್ಣು, ಮುಗುಳುನಗೆ ಇವುಗಳಿಂದ ಮನೋಹರವಾಗಿರುವಂತೆ ಕೆತ್ತಿಸಿ ಎಡ

ತಸ್ಮಿನ್ನಾಸನವರ್ಯೇ ಮಾಂ ಪ್ರತಿಷ್ಠಾಪ್ಯ ತ್ವಯಾ ಸಹ ।
ಮೂರ್ತಿಂ ಕೃತ್ವಾ ತಾಮ್ರಮಯೀಂ ರಾಜತೀಂ ಸ್ವರ್ಣನಿರ್ಮಿತಾಂ ॥೬೦॥

ಚಂದ್ರಾಪೀಡಾಂ ತ್ರಿನಯನಾಂ ಮಂದಸ್ಮಿತ ಮನೋಹರಾಂ ।
ವಾಮದಕ್ಷಿಣಭಾಗೇ ಮೇ ಗಣೇಶಗುಹಸಂಯುತಾಂ ॥೬೧॥

ಸಫಲಂ ಲಭತೇ ಮರ್ತ್ಯೋ ಭುವಿ ಭಾಗ್ಯಸಮನ್ವಿತಃ ।
ಪುತ್ರಪೌತ್ರಯುತೋ ದಾರೈರ್ವಂಶಲಕ್ಷಸಮನ್ವಿತಃ ॥೬೨॥

ರವಿಸಂಶೋಭಿಯಾನೇನ ಪುಷ್ಪಮಾಲಾವಿರಾಜಿತಾಂ ।
ಕೈಲಾಸಂ ದಕ್ಷಿಣಂ ಪ್ರಾಪ್ಯ ಯಕ್ಷೇಂದ್ರಾರ್ಚಿತಭೋಗಭಾಕ್ ॥೬೩॥

ಪ್ರಾಸಾದಂ ಹೇಮಕೂಟಾಖ್ಯಂ ಕೃತ್ವಾ ಸ್ತಂಭಾಯುತಾನ್ವಿತಂ ।
ಗವಾಕ್ಷಲಕ್ಷೈರ್ವಿತತಂ ತ್ರ್ಯಕ್ಷಪ್ರೀತಿಕರಂ ಶಿವೇ ॥೬೪॥

ಸಂರಾಜದ್ವೇದಿಕಾಕುಂಭಪತಾಕಾವಲಿಶೋಭಿತಂ ।
ತತ್ರ ಸಿಂಹಾಸನಾಸೀನಮರ್ಧನಾರೀಶ್ವರಂ ಹಿ ಮಾಂ ॥೬೫॥

ಪ್ರತಿಷ್ಠಾಪ್ಯ ಲಭೇನ್ಮುಕ್ತಿಂ ಭುಕ್ತ್ವಾ ಭೋಗಾನನುತ್ತಮಾನ್ ।
ವಿಷಯಾನ್ವಿಷವತ್ತ್ಯಕ್ತ್ವಾ ನಿಃಶೇಷಂ ಮಾಮವಾಪ್ನುಯಾತ್ ॥೬೬॥

---

ಬಲಭಾಗಗಳಲ್ಲಿ ಗಣೇಶ ಮತ್ತು ಸ್ಕಂದಸ್ವಾಮಿಗಳಿಂದ ಯುಕ್ತವಾಗಿರುವ ರೀತಿಯಲ್ಲಿ ಮಾಡಿಸುವ ಮಾನವನು ಭೂಲೋಕದಲ್ಲಿ ಸಮಸ್ತ ಭಾಗ್ಯ ಸಂಪನ್ನನಾಗಿ ಮಕ್ಕಳು, ಮೊಮ್ಮಕ್ಕಳು, ಪತ್ನಿಯರು ಇವರ ಲಕ್ಷವಂಶಗಳೊಡನೆ ಸೂರ್ಯನಂತೆ ಶೋಭಿಸುವ ಹೂಮಾಲೆಯಿಂದಲಂಕೃತವಾದ ವಿಮಾನದಲ್ಲಿ ದಕ್ಷಿಣಕೈಲಾಸವನ್ನು ಹೊಂದಿ ಅಲ್ಲಿ ಕುಬೇರನಿಂದ ಪೂಜಿಸಲ್ಪಟ್ಟು ಭಾಗ್ಯಶಾಲಿಯಾಗುವನು. ॥೫೮-೫೯-೬೦-೬೧-೬೨-೬೩॥

ಹತ್ತುಸಾವಿರ ಕಂಬಗಳಿಂದಲೂ, ಲಕ್ಷ ಗವಾಕ್ಷಗಳಿಂದ ವಿಸ್ತಾರವಾಗಿರುವ ಹೇಮಕೂಟವೆಂಬ ಪ್ರಾಸಾದವನ್ನೂ ಮಹೇಶ್ವರನ ಪ್ರೀತಿಕರವಾಗಿ ಕಟ್ಟಿಸಬೇಕು. ದೇವಿ! ಆಪ್ರಾಸಾದವು ವೇದಿಕೆ, ಕುಂಭ, ಪತಾಕೆ, ಇವುಗಳ ಸಮೂಹದಿಂದ ಶೋಭಿಸುತ್ತಿರಬೇಕು. ಆ ಪ್ರಾಸಾದದಲ್ಲಿ ಸಿಂಹಾಸನದ ಮಧ್ಯದಲ್ಲಿ ಮಂಡಿಸಿರುವ ಅರ್ಧನಾರೀಶ್ವರನಾದ ನನ್ನನ್ನು ಪ್ರತಿಷ್ಠೆಮಾಡಿದ ಮಾನವನು ಉತ್ತಮ ಭೋಗಗಳನ್ನನುಭವಿಸಿ,

ಹೇಮ್ನಾ ವಾ ರಾಜತೇನಾಪಿ ತಾಮ್ರಕಾಂಸ್ಯಸುಪಿತ್ತಲೈಃ ।
ಮಣಿಭಿಃ ಸ್ಫಟಿಕೈರ್ವಾಽಪಿ ವಿದ್ರುಮೈರ್ವಾ ಮಹೇಶ್ವರಿ ॥೬೭॥

ಆಢ್ಯೋ ವಾ ದ್ರವ್ಯರಹಿತೋ ಭಕ್ತ್ಯಾ ಕುರ್ಯಾಚ್ಛಿವಾಲಯಂ ।
ಮೃನ್ಮಯಾತ್ಕೋಟಿಗುಣಿತಂ ಪುಣ್ಯಂ ಸ್ಯಾದ್ದಾರುಭಿಃ ಕೃತಂ ॥೬೮॥

ಕೋಟಿಕೋಟಿಗುಣಂ ಪುಣ್ಯಂ ಮೃತ್ಕಾಷ್ಠಾದಿಷ್ಟಕಾಮಯೇ ।
ತ್ರಿಗುಣಂ ಚೇಷ್ಟಕಾದಿಭ್ಯೋ ಶೈಲೈರ್ದೇವಿ ಶಿವಾಲಯಂ ॥೬೯॥

ದೃಷದ್ಭಿಃ ಕೃಷ್ಣವರ್ಣೈಶ್ಚ ತತಃ ಕೋಟಿಗುಣಂ ಭವೇತ್ ।
ಮೃಚ್ಛೈಲಯೋಃ ಸಮಂ ಜ್ಞೇಯಂ ಫಲಮಾಢ್ಯದರಿದ್ರಯೋಃ॥೭೦॥

ವನೇ ವಾಪಿ ನದೀತೀರೇ ಪುಣ್ಯಪರ್ವತಮೂರ್ಧಸು ।
ತೀರೇ ನದೀಪತೇರ್ದೇವಿ ಭಕ್ತ್ಯಾ ಕುರ್ಯಾಚ್ಛಿವಾಲಯಂ ॥೭೧॥

---

ಸ್ರಕ್ಚಂದನಾದಿವಿಷಯಗಳನ್ನು ವಿಷದಂತೆ ತೊರೆದು ಪೂರ್ಣವಾಗಿ ನನ್ನನ್ನು ಸೇರಿ ಮುಕ್ತನಾಗುವನು. ॥೬೪-೬೫-೬೬॥

ಮಹೇಶ್ವರಿಯೇ! ಮಹೇಶನ ಮೂರ್ತಿಯನ್ನು, ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ, ರತ್ನ, ಸ್ಫಟಿಕ, ಹವಳ ಇವುಗಳಲ್ಲಿ ಯಾವುದರಿಂದಲಾದರೂ ಮಾಡಿಸಬಹುದು. ಧನಿಕ ಅಥವಾ ಬಡವ ಯಾರಾದರೂ ಭಕ್ತಿಯಿಂದ ಶಿವ ದೇವಾಲಯವನ್ನು ಮಾಡಿಸಬಹುದು. ಮಣ್ಣಿಗಿಂತಲೂ ಮರದಲ್ಲಿಮಾಡಿಸುವುದು ಕೋಟಿಪಾಲು ಅಧಿಕಪುಣ್ಯಫಲವುಳ್ಳದ್ದು. ಮಣ್ಣುಮರಗಳೆರಡಕ್ಕಿಂತಲೂ ಇಟ್ಟಿಗೆ ಯಿಂದ ದೇವಾಲಯವನ್ನು ಕಟ್ಟಿಸುವುದು ಮತ್ತೂ ಕೋಟಿಪಾಲು ಪುಣ್ಯಕರವು. ಕಲ್ಲುಗಳಿಂದಮಾಡಿಸುವುದು ಇಟ್ಟಿಗೆಗಿಂತಲೂ ಮೂರುಪಾಲು ಹೆಚ್ಚುಪುಣ್ಯಕರವು. ದೇವಿಯೆ! ಕಪ್ಪುಬಣ್ಣದಕಲ್ಲುಗಳಿಂದ ಶಿವದೇವಾಲಯನಿರ್ಮಾಣವು ಅದಕ್ಕಿಂತಲೂ ಕೋಟಿಪಾಲು ಹೆಚ್ಚುಪುಣ್ಯಕಾರಿಯು. ಮಹೇಶ್ವರಿಯೆ! ಐಶ್ವರ್ಯವಂತನು ಕಲ್ಲು ಗಳಿಂದ ಶಿವದೇವಾಲಯನಿರ್ಮಾಣಮಾಡಿಸುವುದು, ಬಡವನು ಮಣ್ಣಿನಿಂದ ಕಟ್ಟಿಸುವ ದೇವಾಲಯಕ್ಕೆ ಸಮಾನವಾದಪುಣ್ಯಕರವಾಗಿರುವುದು. ॥೬೭-೬೮-೬೯-೭೦॥

ಶಂಕರಿಯೆ! ಕಾಡು, ನದಿಯದಡ, ಪುಣ್ಯಪರ್ವತಗಳ ಶಿಖರಗಳು, ಸಮುದ್ರದ ದಡ ಇವುಗಳಲ್ಲಿ ಭಕ್ತಿಯಿಂದ ಶಿವದೇವಾಲಯಗಳನ್ನು ಮಾಡಿಸಬೇಕು. ಒಂದು

ಸ್ಥಾವರಂ ಶಿವಲಿಂಗಸ್ಯ ಗೃಹೇ ವಾ ಪುರುಷಾಧಿಕೇ ।
ನ ಕಾರ್ಯಮಾಲಯಂ ದೇವಿ ಚರಲಿಂಗಸ್ಯ ಶಂಕರಿ ॥೭೨॥

ಯತ್ರ ಕ್ವಾಪಿ ಶಿವೇ ಭಕ್ತ್ಯಾ ಕುರ್ಯಾಚ್ಛೈಲೈಃ ಶಿವಾಲಯಂ ।
ಜೀರ್ಣಂ ವಾ ಪತಿತಂ ವಾಪಿ ಖಂಡಿತಂ ಸ್ಫುಟಿತಂ ತಥಾ ॥೭೩॥

ಪೂರ್ವವತ್ಕಾರಯೇದ್ಯಸ್ತು ಸರ್ವಸ್ಮಾಲ್ಲಭತೇ ಫಲಂ ।
ನವಾದಪಿ ಮಹಾದೇವಿ ಜೀರ್ಣೋದ್ಧಾರಂ ಪ್ರಶಸ್ಯತೇ ॥೭೪॥

ಪ್ರಾಸಾದಂ ಗೋಪುರಂ ವಾಪಿ ಪ್ರಾಕಾರಂ ಮಂಟಪಂ ತು ವಾ ।
ಕರ್ತುರಭ್ಯಧಿಕಂ ಪುಣ್ಯಂ ಲಭತೇ ನಾತ್ರ ಸಂಶಯಃ ॥೭೫॥

ಭಕ್ತ್ಯಾ ವಿತ್ತಾನುಸಾರೇಣ ಕುರ್ಯಾತ್ಪ್ರಾಸಾದಮಕ್ಷಯಂ ।
ಅಲ್ಪೇ ಮಹತಿ ವಾ ಪುಣ್ಯಂ ಸಮಮಾಢ್ಯದರಿದ್ರಯೋಃ ॥೭೬॥

ವಿತ್ತಶಾಠ್ಯೇನ ಯಃ ಕುರ್ಯಾತ್ಪುಣ್ಯಮಾಢ್ಯೋಽಪಿ ಮಾನವಃ ।
ನ ಸತ್ಫಲಮವಾಪ್ನೋತಿ ಪ್ರಲೋಭಾಕ್ರಾಂತಮಾನಸಃ ॥೭೭॥

---

ಪುರುಷಪ್ರಮಾಣಕ್ಕಿಂತಲೂ ಹೆಚ್ಚಿಗೆ ಇರುವ ಸ್ಥಾವರವಾದಶಿವಲಿಂಗಕ್ಕೆ ಮನೆಯಲ್ಲಿ ಸ್ಥಾನವನ್ನು ಕಲ್ಪಿಸಬಾರದು. ಚರಲಿಂಗಕ್ಕಾದರೋ ; ॥೭೧-೭೨॥

ಎಲ್ಲಿಬೇಕಾದರೂ ಭಕ್ತಿಪೂರ್ವಕವಾಗಿ ಕಲ್ಲುಗಳಿಂದ ಶಿವದೇವಾಲಯವನ್ನು ಮಾಡಿಸಬಹುದು. ಜೀರ್ಣವಾಗಿರುವುದು, ಬಿದ್ದುಹೋಗಿರುವುದು, ತುಂಡಾಗಿರುವುದು, ಸಿಡಿದಿರುವುದು ಇವುಗಳನ್ನು ಹಿಂದಿನಂತೆ ಸರಿಮಾಡಿಸುವವನು ಎಲ್ಲಕ್ಕಿಂತಲೂ ಹೆಚ್ಚಿನ ಫಲವನ್ನು ಪಡೆಯುವನು. ಮಹಾದೇವಿಯೇ! ಹೊಸದಾಗಿ ಕಟ್ಟಿಸುವುದಕ್ಕಿಂತಲೂ ಹಳೇ ಶಿವದೇವಾಲಯಗಳ ಜೀರ್ಣೋದ್ಧಾರವು ಹೆಚ್ಚು ಶ್ರೇಷ್ಠವೆನಿಸುವುದು. ॥೭೩-೭೪॥

ಪ್ರಾಸಾದ, ಗೋಪುರ, ಪ್ರಾಕಾರ ಅಥವಾ ಮಂಟಪಗಳನ್ನು ಮಾಡಿಸುವವನು ದೇವಾಲಯಕರ್ತೃವಿಗಿಂತಲೂ ಹೆಚ್ಚು ಪುಣ್ಯವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಭಕ್ತಿಪೂರ್ವಕವಾಗಿ ತನ್ನ ಹಣಕ್ಕೆ ಅನುಸಾರವಾಗಿ ಶಿವಪ್ರಸಾದವು ನಾಶವಾಗದಂತೆ ಕಟ್ಟಿಸಬೇಕು. ಬಡವನು ಅಲ್ಪವಾಗಿಯೂ ಧನಿಕನು ಅಪಾರವಾಗಿಯೂ ಹಣ ವ್ಯಯಮಾಡಿದ ಕಾರ್ಯವು ಅವರಿಗೆ ಸಮಾನಫಲಕಾರಿಯಾಗಿರುವುದು. ಧನಿಕನಾದರೂ

ತಸ್ಮಾನ್ಮದಾಲಯಂ ದೇವಿ ಕುರ್ಯಾದ್ವಿತ್ತಮವಂಚಯನ್ ।
ಅಷ್ಟೇಷ್ಟಕಾಭಿರಪಿ ವಾ ಕುರ್ಯಾದ್ದೇವ ಶಿವಾಲಯಂ ॥೭೮॥

ಪ್ರಸಾದಾರ್ಥಂ ಮಹೇಶಸ್ಯ ಪ್ರಾಸಾದಂ ಪರಮೇಶ್ವರಿ ।
ತಥೈವಾನ್ಯಸ್ಯ ಕರಣೇ ಸಾಹಾಯ್ಯಮಪಿ ವಾ ಸ್ವಯಂ ॥೭೯॥

ವಾಚಾ ಧನೇನ ವಾ ದೇವಿ ಸ್ವಸ್ಯ ಶಕ್ತ್ಯಾ ಸದಾಶಿವೇ ।
ಕುರ್ಯಾದ್ವಿಘ್ನಕರೋ ಯಸ್ತು ನರಕೇ ಪಚ್ಯತೇ ಚಿರಂ ॥೮೦॥

ಯಾವದ್ಬ್ರಹ್ಮಶತಂ ಗೌರಿ ಯಃ ಶಿವಾಲಯಭಂಗಕೃತ್ ।
ಕಿಂ ಪುನರ್ಬಹುನೋಕ್ತೇನ ಭಕ್ತ್ಯಾ ವಿತ್ತಾನುಸಾರತಃ ॥೮೧॥

ಕುರ್ಯಾದ್ದೇವಿ ಶಿವಕ್ಷೇತ್ರಂ ಜನ್ಮ ಪ್ರಾಪ್ಯೇಹ ಮಾನವಃ ।
ವಾಪೀಕೂಪಕರಾ ಯೇಸ್ಯುಸ್ತಟಾಕಂ ವಾ ಶಿವಾಲಯೇ ॥೮೨॥

---

ಜಿಪುಣತನದಿಂದ ದೇವಾಲಯ ಕೆಲಸ ಮಾಡಿಸುವುದಾದರೆ ಅವನ ಲೋಭಿತನದಿಂದ ಒಳ್ಳೆಯ ಫಲವನ್ನು ಹೊಂದುವುದಿಲ್ಲ. ॥೭೫-೭೬-೭೭॥

ದೇವಿಯೇ, ಆದ್ದರಿಂದ ಹಣದಲ್ಲಿ ಲೋಭಮಾಡದೆ ನನ್ನ ದೇವಾಲಯವನ್ನು ಮಾಡಿಸಬೇಕು. ಎಂಟು ಇಟ್ಟಿಗೆಗಳಿಂದಲಾದರೂ ನನ್ನ ಶಿವಾಲಯವನ್ನು ಮಾಡಬಹುದು. ಮಹೇಶ್ವರನ ಪ್ರಾಸಾದವನ್ನು ಕಟ್ಟಿಸುವುದಕ್ಕೋಸ್ಕರವಾಗಲೀ, ಪ್ರಾಸಾದ ಕಟ್ಟಿಸಿಕೊಡುವುದಾಗಲಿ ಅಥವಾ ಇನ್ನ್ಯಾವ ಶಿವಸೇವಾಕಾರ್ಯಗಳಿಗೆ ಸಹಾಯ ಮಾಡುವುದಾಗಲಿ ಒದಗಿದರೆ ಅವುಗಳಿಗೆ ವಾಕ್ಕು, ಧನ ಮುಂತಾದವುಗಳಿಂದ ಶಕ್ತಿಗನುಗುಣವಾಗಿ ಸಹಾಯಮಾಡಲೇಬೇಕು. ಈ ಕೆಲಸಗಳಿಗೆ ವಿಘ್ನವನ್ನುಂಟುಮಾಡುವವನು ಬಹುಕಾಲ ನರಕದಲ್ಲಿ ಯಾತನೆಯನ್ನನುಭವಿಸುವನು. ॥೭೮-೭೯-೮೦॥

ಗೌರಿಯೇ, ಶಿವದೇವಾಲಯಗಳನ್ನು ಒಡೆಯುವವರು ನೂರು ಬ್ರಹ್ಮಕಲ್ಪಗಳವರೆಗೆ ನರಕದಲ್ಲಿ ಬೀಳುವರು. ದೇವಿ, ಹೆಚ್ಚು ಮಾತಿನಿಂದೇನುಪ್ರಯೋಜನ? ಒಟ್ಟಿನಲ್ಲಿ ಶಕ್ತಿಯನ್ನು ಮೀರದೆ ಭಕ್ತಿಯಿಂದ ಮನುಷ್ಯತ್ವವನ್ನು ಇಹದಲ್ಲಿ ಪಡೆದ ಮಾನವನು ಶಿವಕ್ಷೇತ್ರದಲ್ಲಿ ಶಿವಸೇವೆಯನ್ನು ಮಾಡಿಸಬೇಕು. ॥೮೧॥

ಶಿವದೇವಾಲಯದಲ್ಲಿ ಕೊಳ, ಬಾವಿ, ಕೆರೆ ಮುಂತಾದವುಗಳನ್ನು ಮಾಡಿಸುವವರು, ಆ ಜಲಾಶಯದ ನೀರಿನ ಬಿಂದುಗಳ ಸಂಖ್ಯೆಯ ಸಾವಿರಪಾಲು

ಯಾವತ್ತದ್ಬಿಂದುತೋಯಾನಾಂ ಸಹಸ್ರಪರಿವತ್ಸರಂ ।
ಸುಧಾಸಾಗರಮಧ್ಯಸ್ಥೋ ನಿವಸೇತ್ಸಪಿತಾಮಹೈಃ ॥೮೩॥

ವನವಾಟೀಕರೋ ಯಸ್ತು ಪುಷ್ಪಾರ್ಥಾರ್ಥಂ ಮಹೇಶ್ವರೇ ।
ಏಕಂ ಬಿಲ್ವತರುಂ ವಾಪಿ ರೋಪಯೇದ್ಯಃ ಶಿವಾಲಯೇ ॥೮೪॥

ಯಾವತ್ತತ್ಪತ್ರಕುಸುಮಬೀಜಮೂಲಫಲಾನಿ ಚ ।
ತಾವದ್ವರ್ಷಸಹಸ್ರಾಣಿ ಮಮ ಲೋಕೇ ಮಹೀಯತೇ ॥೮೫॥

ಉತ್ಸವಾರ್ಥಂ ಮಹೇಶಸ್ಯ ವಾಹನಾನಿ ಚ ಕಾರಯೇತ್ ।
ಗಜಮಶ್ವಂ ಭೂತಗಣಂ ವೃಷಂ ಚಾಪಿ ಮಹೇಶಿತುಃ ॥೮೬॥

ದೇವೀಸ್ಕಂದಗಣೇಶಾನಾಮಾಖುಕೇಕಿಹರೀನ್ಮಮ ।
ಸೌವರ್ಣಂ ರಾಜತಂ ವಾಪಿ ದಾರುಣಾರಂಗಚಿತ್ರಿತಂ ॥೮೭॥

ಕೃತ್ವಾ ಭವೇದ್ಗಣೇಂದ್ರೋಽಸೌ ಮಮ ಕೈಲಾಸಮೌಲಿಷು ।
ರಥಂ ಚ ಮಮ ದೇವೇಶಿ ಧ್ವಜಕುಂಭಪರಿಷ್ಕೃತಂ ॥೮೮॥

---

ವರ್ಷಗಳ ಕಾಲ ಕ್ಷೀರಸಾಗರಮಧ್ಯದಲ್ಲಿ ಪಿತಾಮಹರೊಡನೆ ವಾಸಮಾಡುವರು. ॥೮೨-೮೩॥

ಮಹೇಶ್ವರನ ಪುಷ್ಪಪೂಜೆಗೋಸ್ಕರ ಹೂದೋಟಗಳನ್ನು ನಿರ್ಮಾಣ ಮಾಡಿದವನು ಅನಂತಪುಣ್ಯಫಲವನ್ನು ಹೊಂದುವನು. ಶಿವದೇವಾಲಯದಲ್ಲಿ ಒಂದು ಬಿಲ್ವವೃಕ್ಷವನ್ನಾದರೂ ಯಾರು ನೆಡಿಸುವರೋ ಅವರು ಆ ಮರದ ಎಲೆ, ಕುಸುಮ, ಬೀಜ, ಬುಡ, ಹಣ್ಣುಗಳಿರುವಷ್ಟು ಸಾವಿರ ವರ್ಷಗಳ ಕಾಲ ನನ್ನ ಲೋಕದಲ್ಲಿ ಪೂಜ್ಯರಾಗುತ್ತಾರೆ. ॥೮೪-೮೫॥

ಮಹೇಶ್ವರನ ಉತ್ಸವಕ್ಕೋಸ್ಕರ ಆನೆ, ಕುದುರೆ, ಭೂತಗಣ, ವೃಷಭ ಮುಂತಾದ ಶಿವವಾಹನಗಳನ್ನು ಮಾಡಿಸಬೇಕು. ದೇವೀ, ಸ್ಕಂದ, ಗಣೇಶ ಇವರಿಗೆ ಸಿಂಹ, ನವಿಲು, ಇಲಿ ಈ ವಾಹನಗಳನ್ನು ಚಿನ್ನ, ಬೆಳ್ಳಿ ಅಥವಾ ಮರದಲ್ಲಿ ಬಣ್ಣಗಳಿಂದ ಚಿತ್ರಿತವಾಗಿರುವಂತೆ ಮಾಡಿಸುವವನು ಕೈಲಾಸಪರ್ವತದ ಶಿಖರಗಳಲ್ಲಿ ಗಣಾಧಿಪತಿಯಾಗಿ ಮೆರೆಯುವನು. ॥೮೬-೮೭॥

ದೇವೇಶಿಯೆ, ಧ್ವಜ, ಕುಂಭಗಳಿಂದ ಯುಕ್ತವಾಗಿ ಸಾವಿರ, ನೂರು ಅಥವಾ

ಸಹಸ್ರಶತಚಕ್ರಂ ವಾ ದಶಚಕ್ರಂ ಮನೋಹರಂ ।
ಉತ್ತಮಂ ಶತಚಕ್ರಂ ಸ್ಯಾದ್ದಶಚಕ್ರಂ ತು ಮಧ್ಯಮಂ ॥೮೯॥

ಅಧಮಂ ಷಟ್ಚತುಶ್ಚಕ್ರಂ ರಥಂ ಶಿಲ್ಪವಿದೋ ವಿದುಃ ।
ತಾದೃಕ್ತಲ್ಪೈಃ ಪರಿವೃತಂ ಪುಷ್ಪಮಾಲಾಪರೀವೃತಂ ॥೯೦॥

ಕರ್ಷದ್ಭಿರ್ವೇದಗಂಧರ್ವೈರ್ಬ್ರಹ್ಮಸಾರಥಿಮುನ್ನತಂ ।
ಕೃತ್ವಾ ಮಲ್ಲೋಕಮಾಪ್ನೋತಿ ಪುನರಾವೃತ್ತಿವರ್ಜಿತಂ ॥೯೧॥

ಗೃಹೋತ್ಸವಾರ್ಥಂ ಕುರ್ವೀತ ಪುರುಷೋರ್ಧ್ವರಥಂ ಶಿವೇ ॥೯೨॥

॥ ಈಶ್ವರ ಉವಾಚ ॥

ಮಹೇಶಿ ಭಕ್ತ್ಯಾ ಪರಮೇಶ್ವರಸ್ಯ
ಕೃತ್ವಾಷ್ಟಲೋಷ್ಟೈರಪಿ ರುದ್ರಲೋಕೇ ।
ಪ್ರಯಾತಿ ದಿವ್ಯೇನ ವಿಮಾನವರ್ಯೈಃ
ಸುರೇಂದ್ರಪದ್ಮೋದ್ಭವವಿಷ್ಣುವಂದ್ಯಃ ॥೯೩॥

---

ಹತ್ತು ಚಕ್ರಗಳುಳ್ಳ ಮನೋಹರವಾದ ರಥವನ್ನು ನನಗೆ ಮಾಡಿಸಬೇಕು. ನೂರು ಚಕ್ರಗಳುಳ್ಳ ರಥವು ಉತ್ತಮವಾದುದು. ಹತ್ತು ಚಕ್ರಗಳಿಂದ ಕೂಡಿದುದು ಮಧ್ಯಮವು. ಆರು ಅಥವಾ ನಾಲ್ಕು ಚಕ್ರಗಳುಳ್ಳ ರಥವನ್ನು ಶಿಲ್ಪಶಾಸ್ತ್ರಜ್ಞರು ಅಧಮವೆಂದು ಹೇಳುವರು. ॥೮೮-೮೯॥

ಅದೇ ರೀತಿಯ ದಲಗಳಿಂದ ಸುತ್ತುವರಿಯಲ್ಪಟ್ಟು ಹೂಮಾಲೆಗಳಿಂದ ಪರಿವೃತವಾಗಿ ವೇದಗಳೆಂಬ ಕುದುರೆಗಳಿಂದಲೂ, ಬ್ರಹ್ಮನೆಂಬ ಸಾರಥಿಯಿಂದಲೂ ಯುಕ್ತವಾಗಿ ಎತ್ತರವಾಗಿರುವಂತೆ ನನ್ನ ರಥವನ್ನು ಮಾಡಿಸುವವನು ಪುನರ್ಜನ್ಮವಿಲ್ಲದ ನನ್ನ ಲೋಕವನ್ನೈದುವನು. ಮನೆಯಲ್ಲಿ ಉತ್ಸವ ನಡೆಸುವುದಕ್ಕೋಸ್ಕರ ಒಂದು ಪುರುಷ ಪ್ರಮಾಣದಲ್ಲಿ ರಥವನ್ನು ಮಾಡಿಸಬಹುದು. ॥೯೦-೯೧-೯೨॥

ಒಟ್ಟಿನಲ್ಲಿ, ಭಕ್ತಿಯಿಂದ ಎಂಟು ಮಣ್ಣುಹೆಂಟೆಗಳಿಂದಲಾದರೂ ಪರಮೇಶ್ವರನಿಗೆ ದೇವಾಲಯವನ್ನು ಕಟ್ಟಿಸುವವನು ಉತ್ತಮವಾದ ವಿಮಾನದಲ್ಲಿ ಕುಳಿತು ದೇವೇಂದ್ರ, ಬ್ರಹ್ಮ, ವಿಷ್ಣು ಮುಂತಾದವರಿಂದ ನಮಸ್ಕರಿಸಲ್ಪಡುತ್ತಾ ರುದ್ರಲೋಕವನ್ನು ಹೊಂದುವನು. ॥೯೩॥

ಬಾಲ್ಯೇನ ಲೋಷ್ಟೇನ ಶಿವಂ ಚ ಕೃತ್ವಾ
ಮೃದಾಪಿ ವಾ ಪಾಂಸುಭಿರೀಶಲಿಂಗಂ ।
ಸಂಪೂಜ್ಯ ಪುಣ್ಯೈರ್ಲಭತೇ ಗಣೇಂದ್ರತಾಂ
ಭಕ್ತ್ಯಾ ಕೃತಾನಾಮಗಣೇಯಪುಣ್ಯಂ ॥೯೪॥

ಪ್ರಾಸಾದಪ್ರಕರಂ ಮಹೇಶಸದನೇ ಕೃತ್ವಾ ಪ್ರಸಾದಂ ಲಭೇತ್-
ಶಂಭೋರ್ಮುಖ್ಯಗಣೇಂದ್ರತಾಮುಪಗತೋ ಮಂದಾರಬೃಂದಾರ್ಚಿತೈಃ ।
ತಸ್ಮಿನ್ನೀಶ್ವರಮೂರ್ತಯಃ ಸುವಿಹಿತಾಃ ಸಂಸ್ಥಾಪ್ಯ ಮೇಧಾಯುತಂ
ಪುಣ್ಯಂಪ್ರಾಪ್ಯ ಸ ಮೋದತೇ ಗಿರಿಸುತೇ ಪಾಪಾದಿಶಂಕೋಜ್ಝಿತಃ ॥೯೫॥

ಯೋ ವಾಹನಾನಿ ರುಚಿರಾಣಿ ಗಜಾಶ್ವಭೂತ-
ಕೈಲಾಸವರ್ಯಮಗಜೇ ಪ್ರಕರೋತಿ ಭಕ್ತ್ಯಾ ।
ದಿವ್ಯಂ ಸುಧಾಂಶುವರದೀಧಿತಿಸನ್ನಿಭಾಂಗಂ
ಕೃತ್ವಾವೃಷಂ ಮಮ ಮಹೋತ್ಸವಕೃತ್ಸಮುಕ್ತಃ ॥೯೬॥

---

ಬಾಲ್ಯದಲ್ಲಿ ಮಣ್ಣುಹೆಂಟೆ, ಮೃತ್ತಿಕೆ, ಮರಳುಗಳಿಂದ ಈಶ್ವರನ ಲಿಂಗವನ್ನು ಮಾಡಿ ಭಕ್ತಿಯಿಂದ ಪೂಜಿಸುವವನು ಪುಣ್ಯಭಾಗಿಯಾಗಿ ಗಣಾಧಿಪಪದವಿಯನ್ನು ಹೊಂದುವನು. ಭಕ್ತಿಭಾವದಿಂದ ಹೀಗೆ ಮಾಡುವವರ ಪುಣ್ಯವು ಅಗಣನೀಯವಾದುದು. ॥೯೪॥

ಮಹೇಶ್ವರನ ಆಲಯಕ್ಕೆ ಉತ್ತಮಪ್ರಾಸಾದವನ್ನು ಮಾಡಿಸಿದವನು ಈಶ್ವರನ ಅನುಗ್ರಹವನ್ನು ಪಡೆಯುವನು. ಮತ್ತು ದೇವಸಮೂಹಗಳಿಂದ ಪೂಜಿಸಲ್ಪಟ್ಟು ವರುಣನೇ ಮೊದಲಾದ ಗಣಾಧಿಪತಿತನವನ್ನು ಪಡೆಯುವನು. ಎಲೌ ಗಿರಿಜೆಯೇ, ಅಲ್ಲಿಯೂ ಈಶ್ವರನ ಮೂರ್ತಿಗಳನ್ನು ಚೆನ್ನಾಗಿ ಸ್ಥಾಪಿಸಿ, ಪಾಪಶಂಕೆಯಿಲ್ಲದೆ ಬುದ್ಧಿವಂತನಾಗಿ ಅಪರಿಮಿತ ಪುಣ್ಯವನ್ನು ಹೊಂದಿ ಸಂತೋಷಪಡುವನು. ॥೯೫॥

ಮನೋಹರವಾದ ಗಜ, ಅಶ್ವ, ಭೂತ, ಕೈಲಾಸ ಮುಂತಾದ ಉತ್ತಮ ಶಿವವಾಹನಗಳನ್ನು ಅತಿಭಕ್ತಿಯಿಂದ ಮಾಡಿಸುವವನೂ, ಚಂದ್ರನ ಶ್ರೇಷ್ಠವಾದ ಕಿರಣದಂತೆ ದೇಹವುಳ್ಳ, ವೃಷಭವನ್ನು ವಾಹನವನ್ನಾಗಿ ಮಾಡಿಸಿ ದೊಡ್ಡ ಉತ್ಸವ ನಡೆಸುವವನೂ ಮುಕ್ತನಾಗುತ್ತಾನೆ. ॥೯೬॥

ಕೃತ್ವಾ ರಥಾಧಿಪತಯೇ ವರಚಾರುಚಕ್ರ-
ಪ್ರೋದ್ಯತ್ಪತಾಕಕನಕೋತ್ತಮಕುಂಭಮೌಲಿಂ ।
ವೇದಾಶ್ವಸಾರಥಿವಿಧಿಂ ರಥಮೀಶಮೂರ್ತಿಂ
ಸಂಸ್ಥಾಪ್ಯ ಕರ್ಷತಿ ಮಹೋತ್ಸವಕೃತ್ಸಮುಕ್ತಃ ॥೯೭॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶಿವಾಲಯಪ್ರಾಸಾದರಥವಾಹನಾದಿ
ಪ್ರಕರಣಮಹಿಮಾವರ್ಣನಂ ನಾಮ ಸಪ್ತಮೋಽಧ್ಯಾಯಃ

---

ನೋಡುವುದಕ್ಕೆ ಸುಂದರವಾಗಿರುವ ಚಕ್ರಗಳಿಂದ ಯುಕ್ತವಾಗಿ ಹಾರಾಡುತ್ತಿರುವ ಪತಾಕೆಗಳಿಂದಲೂ, ಚಿನ್ನದ ಉತ್ತಮವಾದ ಕುಂಭಗಳಿಂದಲೂ ಶೋಭಿಸುವ ಕಿರೀಟ, ವೇದಗಳೆಂಬ ಕುದುರೆಗಳು, ಬ್ರಹ್ಮನೆಂಬ ಸಾರಥಿಯಿಂದಲೂ ರಥವನ್ನು ಮಾಡಿಸಿ ಅದರಲ್ಲಿ ಈಶ್ವರಮೂರ್ತಿಯನ್ನಿರಿಸಿ ಮಹೋತ್ಸವರೂಪದಿಂದ ಎಳೆಯುವವನು ಮುಕ್ತನಾಗುತ್ತಾನೆಂದು ಶಿವನು ದೇವಿಗೆ ಹೇಳಿದನು. ॥೯೭॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವದೇವಾಲಯ, ಪ್ರಾಸಾದ,
ರಥ, ವಾಹನಾದಿಗಳನ್ನು ಮಾಡಿಸುವವರ ಮಹಿಮಾವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಅಷ್ಟಮೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ದೇವಿಪ್ರವಕ್ಷ್ಯಾಮಿ ಸೂಕ್ಷ್ಮಂ ಧರ್ಮಂ ಮಮೈನ ಹಿ ।
ಪ್ರಸಾದಜನಕಂ ಸಾಕ್ಷಾದಲ್ಪಾಯಾಸಂ ಮಹತ್ಫಲಂ ॥೧॥

ಗೋಪ್ಯಮೇತತ್ಪ್ರಯತ್ನೇನ ನಾಭಕ್ತೇಷು ಪ್ರಕಾಶಯೇತ್ ।
ರಹಸ್ಯಂ ನೋಕ್ತಪೂರ್ವಂ ಮೇ ತಸ್ಮಾದ್ಯತ್ನೇನ ಧಾರಯ ॥೨॥

ದರಿದ್ರೋಽಪಿ ಶಿವೇ ಕರ್ತುಂ ಪ್ರಾಸಾದಂ ವಾ ಶಿವಾಲಯಂ ।
ಸಂಮಾರ್ಜನಾದಿಭಿರ್ವಾಪಿ ಪ್ರಸಾದಂ ಶಾಂಭವಂ ಲಭೇತ್ ॥೩॥

---

## ಎಂಟನೆಯ ಅಧ್ಯಾಯ

ಪುನಃ ಪರಶಿವನು ಶಿವಧರ್ಮವನ್ನು ಮುಂದುವರಿಸುತ್ತಾ ಹೀಗೆಂದನು :— ದೇವಿ, ಅಲ್ಪಾಯಾಸಕರವೂ, ವಿಶೇಷ ಫಲಪ್ರದವೂ, ನನ್ನ ಅನುಗ್ರಹವನ್ನುಂಟು ಮಾಡುವುದೂ ಆದ ನನ್ನ ಸೂಕ್ಷ್ಮಧರ್ಮವನ್ನು ಹೇಳುವೆನು ಕೇಳು ; ಪಾರ್ವತಿಯೇ, ನಿಯಮದಿಂದ ಇದನ್ನು ಗೋಪ್ಯವಾಗಿಡಬೇಕು. ಶಿವಭಕ್ತರಲ್ಲದವರಲ್ಲಿ ಇದನ್ನು ಪ್ರಕಾಶಪಡಿಸಬಾರದು. ಈ ರಹಸ್ಯವನ್ನು ಹಿಂದೆ ಯಾವಾಗಲೂ ಹೇಳಿಲ್ಲವಾದ್ದರಿಂದ ನಿಯಮದಿಂದ ಆಲಿಸುವಳಾಗೆಂದು ಶಿವನು ಇಂತೆಂದನು. ॥೧-೨॥

ಪಾರ್ವತಿಯೆ, ಪ್ರಾಸಾದ ಅಥವಾ ಶಿವಾಲಯಗಳನ್ನು ಕಟ್ಟಿಸಲು ಅಶಕ್ತನಾದರೂ, ಆ ದೇವಾಲಯಗಳ ಗುಡಿಸುವಿಕೆಯೇ ಮುಂತಾದವುಗಳಿಂದ ಶಂಭುವಿನ

ವೃತ್ತ್ಯರ್ಥಂ ವಾ ಮಹಾದೇವಿ ಶಿವಕ್ಷೇತ್ರೇ ಚ ಕರ್ಮಕೃತ್ ।
ಸಂಮಾರ್ಜನಂ ತು ಯಃ ಕುರ್ಯಾನ್ಮಾರ್ಜನ್ಯಾ ಮೃದುಸೂಕ್ಷ್ಮಯಾ ॥೪॥

ಚಾಂದ್ರಾಯಣಾಯುತಸ್ಯೇಶಿ ಫಲಂಮಾಸಾಚ್ಛಿವಾಲಯೇ ।
ನಾಹಾರವಶಜೀರ್ಣಾ ಯಾ ವಂಧ್ಯಾ ಯಾ ಕ್ಷೀಣವತ್ಸಕಾ ॥೫॥

ರೋಗಾರ್ತಾ ಯಾ ಗೋಮಯಂ ತು ನಾಗ್ರಾಹ್ಯಮುಪಲೇಪನೇ ।
ಅನ್ಯಾಭ್ಯೋ ಗೋಮಯಂ ಗ್ರಾಹ್ಯಂ ಸ್ಥಾನೇ ವಾಪತಿತಂ ಶುಭೇ ॥೬॥

ಉಪರ್ಯಧಶ್ಚ ಸಂತ್ಯಜ್ಯ ಗೃಹ್ಣೀಯಾನ್ಮಧ್ಯಮಂ ಶುಭಂ ।
ವಸ್ತ್ರಪೂತೇನ ತೋಯೇನ ಯಃ ಕುರ್ಯಾದುಪಲೇಪನಂ ॥೭॥

ಶಿವಾಲಯೇಽತಿರಾತ್ರಸ್ಯ ಯಜ್ಞಸ್ಯ ಫಲಮಾಪ್ನುಯಾತ್ ।
ವ್ರೀಹಿಪಿಷ್ಟೈಃ ಪ್ರಕುರ್ಯಾದ್ಯೋ ರಂಗವಲ್ಲೀಂ ಮಮಾಲಯೇ ॥೮॥

---

ಅನುಗ್ರಹವನ್ನು ಪಡೆಯಬಹುದು. ಮಹಾದೇವಿಯೆ, ಶಿವಕ್ಷೇತ್ರದಲ್ಲಿ ಜೀವಿಕೆ ಗೋಸ್ಕರ ಕೆಲಸಮಾಡುವವನೂ ಶಿವಾನುಗ್ರಹಕ್ಕೆ ಪಾತ್ರನಾಗುವನು. ಮೃದುವೂ ಸೂಕ್ಷ್ಮವೂ ಆದ ಕಸಬರಿಕೆಯಿಂದ ಶಿವಾಲಯವನ್ನು ಗುಡಿಸುವವನು ಒಂದು ತಿಂಗಳಲ್ಲಿ ಹತ್ತುಸಾವಿರ ಚಾಂದ್ರಾಯಣವ್ರತಗಳ ಫಲವನ್ನು ಹೊಂದುವನು. ॥೩-೪॥

ಆಹಾರವನ್ನು ತಿಂದು ಅರಗಿಸಿಕೊಳ್ಳದೆ ಇರುವ, ಬಂಜೆಯಾಗಿ, ಕರುವಿಲ್ಲದೆ ರೋಗಪೀಡಿತವಾದ ಹಸುವಿನ ಸಗಣಿಯನ್ನು ಸಾರಿಸುವುದಕ್ಕೆ ಉಪಯೋಗಿಸ ಬಾರದು. ಈ ಗುಣಗಳಿಲ್ಲದ ಇತರ ಹಸುಗಳಿಂದ ಸಗಣಿಯನ್ನು ತೆಗೆದುಕೊಳ್ಳಬೇಕು. ಒಳ್ಳೆಯ ಸ್ಥಾನದಲ್ಲಿ ಬಿದ್ದಿರುವ ಸಗಣಿಯನ್ನಾದರೂ ತೆಗೆದುಕೊಳ್ಳಬಹುದು. ಆ ಸಗಣಿಯಲ್ಲಿ ಮೇಲೆ ಮತ್ತು ಕೆಳಭಾಗದಲ್ಲಿ ಬಿಟ್ಟು ಮಧ್ಯದ ಒಳ್ಳೆಯ ಸಗಣಿಯನ್ನು ತೆಗೆದುಕೊಳ್ಳಬೇಕು. ಬಟ್ಟೆಯಿಂದ ಶೋಧಿಸಿದ ನೀರಿನಿಂದ ಶಿವಾಲಯವನ್ನು ಸಾರಿಸುವವನು ಅತಿರಾತ್ರಯಜ್ಞದ ಫಲವನ್ನೈದುವನು. ॥೫-೬-೭॥

ಈಶ್ವರಿಯೆ ! ನನ್ನ ದೇವಾಲಯದಲ್ಲಿ ಅಕ್ಕಿಯ ಹಿಟ್ಟುಗಳಿಂದ ರಂಗವಲ್ಲಿಯ ನ್ನಿಡುವವನು ಅಗ್ನಿಷ್ಟೋಮದ ಫಲವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಐದುಬಣ್ಣದ ಹಿಟ್ಟುಗಳಿಂದ ಪದ್ಮ, ಶಂಖ ಇವುಗಳಿಗೆ ಸಮಾನವಾದ ಆಕೃತಿಗಳನ್ನು

ಅಗ್ನಿಷ್ಟೋಮಸ್ಯ ಸಫಲಂ ಪ್ರಾಪ್ನೋತೀಶೇ ನ ಸಂಶಯಃ ।
ಪಂಚವರ್ಣಕಪಿಷ್ಟೈಶ್ಚ ಪದ್ಮಶಂಖಸಮಾಕೃತಿ ॥೯॥

ರಂಗವಲ್ಲೀಂ ಶಿವಸ್ಯಾಗ್ರೇ ಸ್ವಸ್ತಿಕಾದ್ಯೈರಲಂಕೃತಾಂ ।
ವಾಜಪೇಯಸ್ಯ ಸಫಲಂ ನರಃ ಸ್ತ್ರೀವಾಸಮಾಪ್ನುಯಾತ್ ॥೧೦॥

ಕದಲೀಸ್ತಂಭವಿತತಂ ತೋರಣಾದ್ಯೈರಲಂಕೃತಂ ।
ಶಿವಾಲಯಂ ಪ್ರಕುರ್ಯಾದ್ಯಃ ಸ ಚೋಕ್ಥ್ಯಫಲಮಾಪ್ನುಯಾತ್ ॥೧೧॥

ಪಾತ್ರಾಣಿ ಶಿವಪೂಜಾರ್ಥಮಾಹರೇಚ್ಚ ಯಥಾಬಲಂ ।
ಮೃದಶ್ಮದಾರುಜಾನೀಶೇ ಧಾತುಜಾನ್ಯುತ್ತರೋತ್ತರಂ ॥೧೨॥

ಅಶ್ಮಪಾತ್ರಾದ್ದಾರುಮಯಂ ಬಿಲ್ವೋದುಂಬರಪರ್ಣಜಂ ।
ಸ್ನಾನಾರ್ಘ್ಯದಾನವಿಧಿಷು ಪ್ರಶಸ್ತಂ ಶಿವಪೂಜನೇ ॥೧೩॥

ದಾರವೇಣಾರ್ಘ್ಯಪಾತ್ರೇಣ ಯದ್ದತ್ವಾ ಲಭತೇ ಫಲಂ ।
ತಸ್ಮಾಚ್ಚತುರ್ಗುಣಂ ಪುಣ್ಯಂ ಶಿವೇ ಮೃತ್ಪಾತ್ರದಾನತಃ ॥೧೪॥

---

ರಂಗವಲ್ಲಿಯಲ್ಲಿಡುವುದು, ಶಿವನ ಮುಂದೆ ಸ್ವಸ್ತಿಕವೇ ಮೊದಲಾದವುಗಳಿಂದಲಂಕರಿಸುವುದೂ, ಇವುಗಳನ್ನು ಮಾಡುವ ಗಂಡಸಾಗಲಿ, ಹೆಂಗಸಾಗಲಿ ವಾಜಪೇಯ ಯಾಗದ ಫಲವನ್ನೈದುವರು. ॥೮-೯-೧೦॥

ಬಾಳೆಯ ಕಂಬಗಳಿಂದ ಯುಕ್ತವಾಗಿ ತೋರಣವೇ ಮೊದಲಾದವುಗಳಿಂದ ಅಲಂಕೃತವಾಗಿರುವಂತೆ ಶಿವದೇವಾಲಯಗಳನ್ನು ಮಾಡಿಸುವವನು ಉಕ್ಥ್ಯಯಾಗದ ಫಲವನ್ನು ಹೊಂದುವನು. ಶಿವನ ಪೂಜೆಗೋಸ್ಕರ ಶಕ್ತ್ಯನುಸಾರ ಪಾತ್ರೆಗಳನ್ನು ಸಂಪಾದಿಸಬೇಕು. ಈಶ್ವರಿಯೇ, ಮಣ್ಣು, ಕಲ್ಲು, ಮರ, ಲೋಹ ಇವುಗಳಿಂದ ಮಾಡಿದ ಪಾತ್ರೆಗಳು ಉತ್ತರೋತ್ತರ ಫಲದಾಯಕಗಳು. ಕಲ್ಲಿನ ಪಾತ್ರೆಗಿಂತಲೂ ಮರದ್ದೂ, ಬಿಲ್ವ, ಅತ್ತಿ ಎಲೆಗಳಿಂದ ಮಾಡಿದ ಪಾತ್ರೆಗಳೂ, ಸ್ನಾನ, ಅರ್ಘ್ಯ ಇವನ್ನು ಕೊಟ್ಟು ವಿಧಿವತ್ತಾಗಿ ಶಿವಪೂಜೆ ನಡೆಸಲು ಪ್ರಶಸ್ತವಾಗಿರುವುವು. ॥೧೧-೧೨-೧೩॥

ಮರದ ಅರ್ಘ್ಯಪಾತ್ರೆಯಿಂದ ಅರ್ಘ್ಯ ಕೊಟ್ಟರೆ ಬರುವ ಪುಣ್ಯಕ್ಕಿಂತಲೂ ಮಣ್ಣಿನ ಪಾತ್ರೆಯನ್ನು ದಾನಮಾಡುವುದರಿಂದ ನಾಲ್ಕರಷ್ಟು ಹೆಚ್ಚು ಫಲವುಂಟಾಗುವುದು. ಕಂಚು ಮತ್ತು ಹಿತ್ತಾಳೆಯ ಪಾತ್ರೆಗಳು ತಾಮ್ರಪಾತ್ರೆಗಿಂತಲೂ ಶ್ರೇಷ್ಠ

ತಾಮ್ರಪಾತ್ರಾದಪಿ ಶ್ರೇಷ್ಠಂ ಕಾಂಸ್ಯಪೈತ್ತಲಸಂಭವಂ ।
ತಾಮ್ರಪಾತ್ರಾಭಿಷೇಕೇಣ ಫಲಂ ಶತಗುಣಂ ಭವೇತ್ ॥೧೫॥

ಪಲಾಶಪದ್ಮಪತ್ರಾಭ್ಯಾಮರ್ಘ್ಯಂ ತಾಮ್ರಸಮಂ ಭವೇತ್ ।
ರೌಪ್ಯಪಾತ್ರೇಣ ವಿಜ್ಞೇಯಂ ತಸ್ಮಾಲ್ಲಕ್ಷಗುಣಾಧಿಕಂ ॥೧೬॥

ಸುವರ್ಣಪಾತ್ರಂ ಚ ತತೋ ದೇವಿ ಕೋಟಿಗುಣೋತ್ತಮಂ ।
ಏವಂ ಸ್ನಾನಾರ್ಘ್ಯನೈವೇದ್ಯ ಬಲಿಧೂಪಾದಿಭಿಃ ಕ್ರಮಾತ್ ॥೧೭॥

ಪಾತ್ರೋತ್ತರವಿಶೇಷೇಣ ಫಲಂಸ್ಯಾತ್ಪರಮೇಶ್ವರೇ ।
ಮೃತ್ಕುಂಭಾತ್ತಾಮ್ರಕುಂಭೇನ ಸ್ನಾನಂ ಶತಗುಣೋತ್ತರಂ ॥೧೮॥

ರೌಪ್ಯಂ ಲಕ್ಷಾಧಿಕಂ ಪುಣ್ಯಂ ಹೈಮಂ ಕೋಟ್ಯಧಿಕಂ ಭವೇತ್ ।
ಅರ್ಘ್ಯಂ ಪುಷ್ಪಜಲೋಪೇತಂ ಯಃ ಶಿವಾಯ ನಿವೇದಯೇತ್ ॥೧೯॥

---

ವಾದವುಗಳು. ತಾಮ್ರಪಾತ್ರೆಯಿಂದ ಅಭಿಷೇಕಮಾಡುವುದರಿಂದ ನೂರರಷ್ಟು ಹೆಚ್ಚು ಫಲವುಂಟಾಗುವುದು. ||೧೪-೧೫||

ಮುತ್ತುಗ ಮತ್ತು ತಾವರೆಲೆಗಳ ದೊನ್ನೆಗಳಿಂದ ಕೊಡುವ ಅರ್ಘ್ಯನು ತಾಮ್ರ ಪಾತ್ರೆಗೆ ಸಮಾನವಾಗುವುದು. ಬೆಳ್ಳಿಯ ಪಾತ್ರೆಯಿಂದ ಕೊಡುವ ಅರ್ಘ್ಯವು ಅದಕ್ಕಿಂತಲೂ ಲಕ್ಷಪಾಲು ಅಧಿಕಗುಣವುಳ್ಳದ್ದು. ದೇವಿಯೆ, ಚಿನ್ನದ ಪಾತ್ರೆಯು ಅದಕ್ಕಿಂತಲೂ ಕೋಟಿಗುಣ ಮಿಗಿಲಾದುದು. ಹೀಗೆಯೆ ಸ್ನಾನ, ಅರ್ಘ್ಯ, ನೈವೇದ್ಯ, ಬಲಿ, ಧೂಪ ಮುಂತಾದವುಗಳಲ್ಲಿ ಕ್ರಮವಾಗಿ ಫಲವುಂಟಾಗುವುದು. ||೧೬-೧೭||

ಉತ್ತರೋತ್ತರವಾಗಿ ವಿಶೇಷವಾದ ಪಾತ್ರೆಯನ್ನುಪಯೋಗಿಸುವುದರಿಂದ ಫಲವಿಶೇಷವುಂಟಾಗುವುದು. ಮಣ್ಣಿನ ಗಡಿಗೆಗಿಂತಲೂ ತಾಮ್ರದ ಬಿಂದಿಗೆಯಿಂದ ಸ್ನಾನಮಾಡಿಸುವುದು ನೂರುಪಾಲು ಹೆಚ್ಚುಗುಣಕಾರಿಯು ; ಬೆಳ್ಳಿಯದು ಲಕ್ಷಪಾಲು ಅಧಿಕಪುಣ್ಯಕರವು. ಚಿನ್ನದ್ದು ಕೋಟಿಪಾಲು ಅಧಿಕಫಲಕಾರಿಯು. ದೇವಿಯೆ ! ಹೂವು ನೀರುಗಳಿಂದ ಯುಕ್ತವಾದ ಅರ್ಘ್ಯವನ್ನು ಶಿವನಿಗೆ ನಿವೇದನಮಾಡುವವನು ಸಮಸ್ತ ಲೋಕಗಳಲ್ಲಿಯೂ ಪೂಜಾರ್ಹನಾಗಿ ಶಿವನಂತೆ ಆತ್ಮಾನಂದಪಡುತ್ತಾನೆ. ||೧೮-೧೯||

ಸ ಪೂಜ್ಯಃ ಸರ್ವಲೋಕೇಷು ಶಿವವನ್ಮೋದತೇ ಭೃಶಂ ।
ಗಂಧತೋಯೇನ ಸಂಮಿಶ್ರಂ ಪುಷ್ಪಾರ್ಘ್ಯಾದುತ್ತರೋತ್ತರಂ ॥೨೦॥

ಪಂಚಗವ್ಯಸಮಾಯುಕ್ತಮರ್ಘ್ಯಂ ಶತಗುಣೋತ್ತರಂ ।
ಆಪಃ ಕ್ಷೀರಕುಶಾಗ್ರಾಣಿ ಘೃತಂ ದಧಿ ಚ ತಂಡುಲಾಃ ॥೨೧॥

ತಿಲಾಸ್ಸಿದ್ಧಾರ್ಥಕಾಶ್ಚೈವಮರ್ಘ್ಯಮಷ್ಟಾಂಗಮುಚ್ಯತೇ ।
ಘೃತಂ ವಿನಾಕ್ಷತಂ ಗ್ರಾಹ್ಯಮಿತಿ ಕೇಚಿತ್ಪ್ರಚಕ್ಷತೇ ॥೨೨॥

ಯವತಂಡುಲಗೋಧೂಮಮಾಷೈರಕ್ಷತಮಾದಿಶೇತ್ ।
ಅರ್ಘ್ಯಮಷ್ಟಾಂಗಮಾಪೂರ್ಯ ಲಿಂಗಮೂರ್ಧ್ನಿ ವಿಶೋಧಯೇತ್ ॥೨೩॥

ದಶವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ।
ದೇವಾಗ್ನಿಕಾರ್ಯಮುದ್ದಿಶ್ಯ ದೇಹಶುದ್ಧ್ಯರ್ಥಮೇವ ಚ ॥೨೪॥

ಅನ್ಯವರ್ಣಗವಾಂ ಕ್ಷೀರಸ್ನಾನೇನಾಪಿ ಮಹೇಶ್ವರಿ ॥೨೫॥

---

ಗಂಧೋದಕದಿಂದ ಮಿಶ್ರವಾದ ಅರ್ಘ್ಯವು ಹೂವಿನನೀರಿನಿಂದ ಮಿಶ್ರವಾದ ಅರ್ಘ್ಯಕ್ಕಿಂತಲೂ ಉತ್ತರೋತ್ತರಫಲಕಾರಿಯು. ಅದಕ್ಕಿಂತಲೂ ಪಂಚಗವ್ಯಯುಕ್ತವಾದ ಅರ್ಘ್ಯವು ನೂರುಪಾಲು ಗುಣಾಧಿಕವು. ನೀರು, ಹಾಲು, ದರ್ಭಾಗ್ರ, ತುಪ್ಪ, ಮೊಸರು, ಅಕ್ಕಿ, ಎಳ್ಳು, ಬಿಳಿಸಾಸುವೆ, ಇವುಗಳುಳ್ಳ ಅರ್ಘ್ಯವು ಅಷ್ಟಾಂಗಾರ್ಘ್ಯವೆನಿಸುವುದು. ತುಪ್ಪವಿಲ್ಲದ ಅಕ್ಷತೆಯನ್ನೇ ಸ್ವೀಕರಿಸಬೇಕೆಂದು ಕೆಲವರು ಹೇಳುತ್ತಾರೆ. ॥೨೦-೨೧-೨೨॥

ಯವ, ಅಕ್ಕಿ, ಗೋಧಿ, ಉದ್ದುಗಳಿಂದ ಅಕ್ಷತೆಯನ್ನು ಮಾಡಬೇಕು. ಹಿಂದೆ ಹೇಳಿದ ಅಷ್ಟಾಂಗಾರ್ಘ್ಯವನ್ನು ತುಂಬಿಕೊಂಡು ಲಿಂಗದ ತಲೆಯಮೇಲೆ ಅರ್ಪಿಸಬೇಕು. ಹೀಗೆ ಮಾಡುವುದರಿಂದ ಹತ್ತುಸಾವಿರವರ್ಷಗಳಕಾಲ ಶಿವಲೋಕದಲ್ಲಿ ಪೂಜಿಸಲ್ಪಡುತ್ತಾನೆ. ದೇವಕಾರ್ಯ, ಅಗ್ನಿಕಾರ್ಯಗಳಉದ್ದೇಶವಾಗಿಯೂ, ಶರೀರ ಶುದ್ಧಿಗೋಸ್ಕರವೂ, ವಿದ್ವಾಂಸನಾದವನು ಮುನಿ, ದೇವತೆ, ಮುಂತಾದವರಿಂದಲೂ ನಮಸ್ಕರಿಸಲ್ಪಟ್ಟಿರುವ ಕಪಿಲಾಗೋವನ್ನು ತರಬೇಕು. ॥೨೩-೨೪॥

ಮಹೇಶ್ವರಿ! ಇತರ ಬಣ್ಣಗಳ ಹಸುಗಳ ಹಾಲಿನ ಅಭಿಷೇಕದಿಂದ ಬರುವ ಫಲಕ್ಕಿಂತಲೂ ಕಪಿಲವರ್ಣದ ಗೋವಿನ ತುಪ್ಪ, ಹಾಲುಗಳೊಡಗೂಡಿದ ಅಭಿಷೇ

ಕಪಿಲಾಪಂಚಗವ್ಯೇನ ಘೃತಕ್ಷೀರಯುತೇನ ಚ ।
ಸ್ನಾನಂ ದಶಗುಣಂ ಜ್ಞೇಯಂ ಇತರಸ್ಮಾನ್ನಸಂಶಯಃ ॥೨೬॥

ಸ್ನಾನಂ ಫಲಶತಂ ಜ್ಞೇಯಮಭ್ಯಂಗಃ ಪಂಚವಿಂಶತಿಃ ।
ಫಲಾನಾಂ ದ್ವೇಸಹಸ್ರೇ ತು ಮಹಾಸ್ನಾನಂ ವಿದುಃ ಶಿವೇ ॥೨೭॥

ಪಯೋದಧಿಘೃತಕ್ಷೌದ್ರಶರ್ಕರಾದ್ಯೈರನುಕ್ರಮಾತ್ ।
ಈಶಾದಿಮಂತ್ರೈಃ ಸಂಸ್ನಾಪ್ಯ ಶಿವಲೋಕಮವಾಪ್ನುಯಾತ್ ॥೨೮॥

ಯೋ ಮಾಂ ತಿಲೋತ್ಥತೈಲೇನ ಕರಯಂತ್ರೋದ್ಭವೇನ ಚ ।
ಶಿವಾಭಿಷೇಕಂ ಕುರುತೇ ಸ ಮೇ ಪ್ರಿಯತಮೋ ಭವೇತ್ ॥೨೯॥

ಅಭಿಷೇಕೋ ದಶಪಲಃ ಸ್ನಾನಾರ್ಥಂ ಶತಮೀಶ್ವರಿ ।
ಮಹಾಸ್ನಾನೇಪ್ಯಶಕ್ತಸ್ಯ ಕುಂಭದ್ರೋಣತ್ರಯಂ ಶಿವೇ ॥೩೦॥

ಪಂಚವಿಂಶತ್ಪಲೇನೈವ ಲಿಂಗೇಽಭ್ಯಂಗಂತು ಕಾರಯೇತ್ ।
ಘೃತೇನ ವಾಥ ತೈಲೇನ ಗಂಧಯುಕ್ತೇನ ವಾ ಶಿವೇ ॥೩೧॥

---

ಕವೂ ಕಪಿಲಾಗೋವಿನ ಪಂಚಗವ್ಯಸ್ನಾನವೂ ಬೇರೆಯದಕ್ಕಿಂತಲೂ ಹತ್ತುಪಾಲು ಗುಣಾಧಿಕವು. ಇದರಲ್ಲಿ ಸಂಶಯವಿಲ್ಲ. ॥೨೫-೨೬॥

ಸಾಮಾನ್ಯ ಸ್ನಾನವು ನೂರು ಫಲಗಳುಳ್ಳದು, ಅಭ್ಯಂಗವು ಇಪ್ಪತ್ತೈದರಷ್ಟು ಫಲಗಳುಳ್ಳದ್ದು. ಪಾರ್ವತಿಯೇ, ಮಹಾಸ್ನಾನವು ಎರಡು ಸಾವಿರ ಫಲಯುಕ್ತಗಳೆಂದು ತಿಳಿಯುತ್ತಾರೆ. ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ಇವುಗಳೇ ಮುಂತಾದವುಗಳಿಂದ ಕ್ರಮವಾಗಿ ಈಶಾನಾದಿಮಂತ್ರಗಳಿಂದ ಸ್ನಾನಮಾಡಿಸಿದ ಮಾನವನು ಶಿವಲೋಕವನ್ನೈದುವನು. ॥೨೭-೨೮॥

ಕೈಯೆಂಬ ಯಂತ್ರದಿಂದ ಎಳ್ಳಿನ ಎಣ್ಣೆಯನ್ನು ತೆಗೆದು ನನಗೆ ಅಭಿಷೇಕ ಮಾಡುವವನು ನನ್ನ ಅತ್ಯಂತ ಪ್ರೀತಿಪಾತ್ರನಾದ ಭಕ್ತನೆನಿಸುವನು. ಅಭಿಷೇಕವು ಹತ್ತು ಪಲವುಳ್ಳದ್ದು. ಸ್ನಾನವು ಐವತ್ತು ಪಲಗಳುಳ್ಳದ್ದು. ಮಹಾಭಿಷೇಕ ಮಾಡಿಸುವುದರಲ್ಲಿ ಅಶಕ್ತನಾದವನು ಶಿವನಿಗೆ ಮೂರು ಕುಂಭದ್ರೋಣತೈಲಗಳನ್ನು ಬಳಸಬೇಕು. ॥೨೯-೩೦॥

ಲಿಂಗಕ್ಕೆ ಇಪ್ಪತ್ತೈದು ಪಲತೈಲಗಳಿಂದ ಅಭ್ಯಂಗವನ್ನು ಮಾಡಿಸಬೇಕು. ಈ

ಶಿವಸ್ಯ ಸರ್ಪಿಷಾಸ್ನಾನಂ ಪ್ರೋಕ್ತಂ ಪಲಶತೇನ ವೈ ।
ಪಲಾನಾಂ ದ್ವಿಸಹಸ್ರೇಣ ಮಹಾಸ್ನಾನಂ ವಿಧೀಯತೇ ॥೩೨॥

ತಸ್ಯಾರ್ಧಂ ಮಧುನಾ ದೇವಿ ದಧ್ನಾ ತತ್ಸಮಮೀಶ್ವರಿ ।
ತತ್ಪಾದತಃ ಶರ್ಕರಯಾ ಸ್ನಾನಮೇತಚ್ಛಿವೇ ಮಮ ॥೩೩॥

ಕ್ಷೀರಸ್ನಾನಾಯುತಂ ದೇವಿ ದಧ್ನಾ ಘೃತಭವಂ ತತಃ ।
ಮಧುನಾ ಸಿತಯಾ ದೇವಿ ಪುಣ್ಯಂ ಸ್ಯಾತ್ತಚ್ಛತಾಧಿಕಂ ॥೩೪॥

ಪಾದಸ್ನಾನಂ ಮಹಾದೇವಿ ಕುಂಭತ್ರಯಮಿತೀರಿತಂ ।
ಕ್ಷೀರಸ್ನಾನಂ ಮಹೇಶಸ್ಯ ಕಪಿಲೇನೇತರೇಣ ವಾ ॥೩೫॥

ಕುರ್ಯಾತ್ತಸ್ಯಾಪರಾಧಾನಿ ಕ್ಷಮತೇ ಶಂಕರಃ ಶತಂ ।
ಖಂಡದಧ್ನಾ ಯೋಽಭಿಷಿಂಚೇತ್ಸಹಸ್ರಂ ಕ್ಷಮತೇ ಶಿವಃ ॥೩೬॥

---

ಅಭ್ಯಂಗವನ್ನು ತುಪ್ಪ, ಎಣ್ಣೆ ಅಥವಾ ಗಂಧಮಿಶ್ರವಾದ ನೀರಿನಿಂದ ಮಾಡಬೇಕು. ನೂರು ಪಲಗಳಿಂದ ಶಿವನಿಗೆ ಘೃತಸ್ನಾನವು ಉಕ್ತವಾಗಿದೆ. ಎರಡು ಸಾವಿರ ಪಲಪ್ರಮಾಣದಿಂದ ಘೃತಸ್ನಾನ ಮಾಡಿಸುವುದು ಮಹಾಸ್ನಾನವೆಂದು ಹೇಳಲ್ಪಟ್ಟಿದೆ. ॥೩೧-೩೨॥

ಜೇನುತುಪ್ಪದಿಂದ ಹಿಂದೆ ಹೇಳಿದ ಅರ್ಧಪ್ರಮಾಣದಲ್ಲಿ ಅಭಿಷೇಕ ಮಾಡಬೇಕು. ಮೊಸರಿನಿಂದ ಅದಕ್ಕೆ ಸಮವಾಗಿಯೇ ಅಭಿಷೇಕ ಮಾಡಬೇಕು. ತುಪ್ಪದ ಪ್ರಮಾಣದಲ್ಲಿ ಕಾಲುಭಾಗ ಸಕ್ಕರೆಯಿಂದ ಸ್ನಾನಮಾಡಿಸಬೇಕು. ಕ್ಷೀರಾಭಿಷೇಕದಿಂದ ಹತ್ತುಸಾವಿರ ಫಲವುಂಟಾಗುವುದು. ಮೊಸರು, ತುಪ್ಪ, ಜೇನು, ಸಕ್ಕರೆಗಳಿಂದ ಕ್ರಮವಾಗಿ ನಡೆಸುವ ಅಭಿಷೇಕವು ಒಂದಕ್ಕಿಂತ ಇನ್ನೊಂದು ನೂರುಪಾಲು ಅಧಿಕ ಪುಣ್ಯಕಾರಿಯಾಗಿರುವುದು. ॥೩೩-೩೪॥

ಮೂರು ಕುಂಭ ಪ್ರಮಾಣದ ಅಭಿಷೇಕವು ಪಾದಸ್ನಾನವೆನಿಸುವುದು. ಮಹೇಶನಿಗೆ ಕಪಿಲ ಅಥವಾ ಇತರ ಗೋವುಗಳ ಕ್ಷೀರಸ್ನಾನವು ಪುಣ್ಯಫಲಕಾರಿಯು. ಶಂಕರನಿಗೆ ಈ ಸ್ನಾನ ಮಾಡಿಸಿದರೆ ಅವನ ನೂರು ಅಪರಾಧಗಳನ್ನು ಕ್ಷಮಿಸುವನು. ಗಟ್ಟಿ ಮೊಸರಿನಿಂದ ಅಭಿಷೇಕಮಾಡುವವನ ಸಾವಿರ ತಪ್ಪುಗಳನ್ನು ಶಿವನು ಕ್ಷಮಿಸುತ್ತಾನೆ. ಲಿಂಗಕ್ಕೆ ಘೃತಾಭಿಷೇಕಮಾಡುವುದರಿಂದ ಕೋಟಿ ಸಾವಿರ ವರ್ಷ

ವರ್ಷಕೋಟಿಸಹಸ್ರೈಸ್ತು ಯತ್ಪಾಪಂ ಸಮುಪಾರ್ಜಿತಂ ।
ಘೃತಾಭಿಷೇಕೋ ಲಿಂಗಸ್ಯ ದಹೇತ್ಸರ್ವಂ ನ ಸಂಶಯಃ ॥೩೭॥

ಲಿಂಗಸ್ಯ ದರ್ಶನಂ ಪುಣ್ಯಂ ದರ್ಶನಾತ್ಸ್ಪರ್ಶನಂ ವರಂ ।
ಸ್ಪರ್ಶನಾದರ್ಚನಂ ಶ್ರೇಷ್ಠಂ ಘೃತಸ್ನಾನಮತಃ ಪರಂ ॥೩೮॥

ಮಧುಸ್ನಾನೇನ ದೇವೇಶಿ ಅಶ್ವಮೇಧಫಲಂ ಲಭೇತ್ ।
ಮಧೂನಾಂ ಚ ತ್ರಯಂ ದೇವಿ ಗಿರಿದ್ರೋಣಿಭವಂ ವರಂ ॥೩೯॥

ಮಧ್ಯಮಂ ಪುಷ್ಪರಸಜಂ ವಲ್ಮೀಕಂ ಕೃಷ್ಣಮಾಧಮಂ ।
ಸಿತಯಾ ಸ್ನಾಪ್ಯ ಮಾಂ ದೇವಿ ಸರ್ವಜೀವವಧೋದ್ಭವೈಃ ॥೪೦॥

ಪಾಪೈರ್ನಲಿಪ್ಯತೇ ಗೌರಿ ಪುಣ್ಯಂ ಮಹದವಾಪ್ನುಯಾತ್ ।
ಕೃಷ್ಣಾಷ್ಟಮ್ಯಾಂ ಸೋಮವಾರೇ ಪ್ರದೋಷೇ ವಾ ಮಹೇಶ್ವರಿ ॥೪೧॥

ಘೃತಸ್ನಾನಕರೋ ಯಃ ಸ್ಯಾತ್ಸ ಫಲಂ ಲಭತೇ ಶಿವೇ ।
ಕುಲೈಕವಿಂಶಮುತ್ತಾರ್ಯ ಶಿವಲೋಕೇ ಮಹೀಯತೇ ॥೪೨॥

---

ಗಳಿಂದ ಸಂಪಾದಿಸಿದ ಸಕಲ ಪಾಪಗಳನ್ನೂ ಸುಟ್ಟು ಭಸ್ಮಮಾಡಬಹುದು. ಇದರಲ್ಲಿ ಸಂಶಯವಿಲ್ಲ. ॥೩೫-೩೬-೩೭॥

ಲಿಂಗದರ್ಶನವು ಪುಣ್ಯಕರವು ; ದರ್ಶನಕ್ಕಿಂತಲೂ ಸ್ಪರ್ಶವೂ ಪೂಜೆಯೂ ಶ್ರೇಷ್ಠವಾದುದು. ಘೃತಸ್ನಾನವು ಆದಕ್ಕಿಂತಲೂ ಉತ್ತಮವಾದುದು. ದೇವೇಶಿ, ಮಧುವಿನ ಸ್ನಾನದಿಂದ ಅಶ್ವಮೇಧಯಾಗಫಲವನ್ನೈದುತ್ತಾನೆ. ಬೆಟ್ಟ, ಕಣಿವೆ ಮತ್ತು ಗುಹೆಗಳಲ್ಲುಂಟಾಗುವ ಮಧುವು ಉತ್ತಮವಾದುದು. ಹೂರಸಗಳಿಂದುಂಟಾದುದು ಮಧ್ಯಮದರ್ಜೆಯದು. ಹುತ್ತದಲ್ಲಿ ದೊರೆತದ್ದು ಮತ್ತು ಕಪ್ಪುಜೇನು ಅಧಮವೆನಿಸುವುದು. ॥೩೮-೩೯॥

ಎಲೌ ಗೌರಿಯೇ, ಸಕ್ಕರೆಯಿಂದ ನನ್ನನ್ನು ಅಭಿಷೇಕಮಾಡಿದರೆ ಸಕಲ ಪ್ರಾಣಿವಧೆಗಳನ್ನು ಮಾಡಿದ ಪಾಪಗಳಿಂದ ಲಿಪ್ತನಾಗುವುದಿಲ್ಲವಲ್ಲದೆ ವಿಶೇಷ ಪುಣ್ಯವನ್ನೂ ಹೊಂದುವನು. ಕೃಷ್ಣಾಷ್ಟಮಿ, ಸೋಮವಾರ, ಪ್ರದೋಷ ಇಂತಹ ಕಾಲಗಳಲ್ಲಿ ತುಪ್ಪದಿಂದ ಅಭಿಷೇಕಮಾಡುವವನು ತನ್ನ ಇಪ್ಪತ್ತೊಂದುವಂಶವನ್ನು ಉದ್ಧಾರಮಾಡಿಕೊಂಡು ಉತ್ತಮ ಫಲವನ್ನು ಪಡೆದು ತಾನು ಶಿವಲೋಕದಲ್ಲಿ ಪೂಜಾರ್ಹನಾಗುತ್ತಾನೆ. ॥೪೦-೪೧-೪೨॥

ಕ್ಷೀರಸ್ನಾನಾತ್ಕ್ಷರತ್ಯಂಹೋ ದೇವಿ ಜನ್ಮಶತಾರ್ಜಿತಂ ।
ಕ್ಷೀರೇಣ ದಧ್ನಾಜ್ಯೇನಾಪಿ ಸಿತಯಾ ಮಧುನಾ ಫಲಂ ॥೪೩॥

ಅಭಿಷಿಚ್ಯ ಮುದಾ ಲಿಂಗೇ ಲಭೇತ್ಪರ್ವಣಿ ವಾ ಶಿವೇ ।
ಸಂಕ್ರಾಂತಾವಯನೇ ಪ್ರಾತೇ ಗ್ರಹಣೇ ಸೋಮಸೂರ್ಯಯೋಃ ॥೪೪॥

ಅಯುತಂ ಯೋ ಗವಾಂ ದದ್ಯಾದ್ದೋಗ್ಧ್ರೀಣಾಂ ಶಾಂಭವೇಷು ಚ ।
ವಸ್ತ್ರಹೇಮಸವತ್ಸಾನಾಂ ದ್ವಿಜವರ್ಯೇಷು ತಲ್ಲಭೇತ್ ॥೪೫॥

ನಾರಿಕೇಲೋದಕೇನಾಪಿ ಯೋಽಭಿಷಿಂಚೇನ್ಮಹೇಶ್ವರಿ ।
ಚರಂ ವಾ ಸ್ಥಿರಲಿಂಗಂ ವಾ ಸ್ನಾನಮಾತ್ರೇಣ ಪುಣ್ಯಭಾಕ್ ॥೪೬॥

ಗವಾಮಯನಯಜ್ಞಸ್ಯ ಕದಲೀಫಲಮಾನತಃ ।
ಫಲಾನಾಂ ಚ ಸಹಸ್ರಾಣಿ ಸ್ನಾನಂ ರಂಭಾಫಲೇ ವಿದುಃ ॥೪೭॥

ಶತಂ ವಾ ದಶಕಂ ವಾಪಿ ಮಧ್ಯಮಾಧಮಮುಚ್ಯತೇ ।
ಸ್ನಾಪ್ಯ ರಂಭಾಫಲೈರ್ಲಿಂಗಂ ಉರ್ವರಾದಾನಜಂ ಲಭೇತ್ ॥೪೮॥

---

ಶಿವಲಿಂಗದ ಕ್ಷೀರಸ್ನಾನದಿಂದ ನೂರುಜನ್ಮದಲ್ಲಿಸಂಪಾದಿಸಿದ ಪಾಪವೂ ನಾಶವಾಗುವುದು. ಪರ್ವಕಾಲ, ಸಂಕ್ರಮಣ, ದಕ್ಷಿಣೋತ್ತರಾಯಣಗಳು, ಪ್ರಾತಃಕಾಲ, ಚಂದ್ರಸೂರ್ಯಗ್ರಹಣ, ಈ ಕಾಲಗಳಲ್ಲಿ ಶಿವಲಿಂಗಕ್ಕೆ ಹಾಲು, ಮೊಸರು, ತುಪ್ಪ, ಸಕ್ಕರೆ, ಮತ್ತು ಜೇನುಗಳಿಂದ ಅಭಿಷೇಕಮಾಡುವುದರಿಂದ ಅಪರಿಮಿತಪುಣ್ಯವನ್ನು ಹೊಂದುವನು. ಇಂತಹ ಪುಣ್ಯಕಾಲಗಳಲ್ಲಿ ಕರೆಯುವ ಹತ್ತುಸಾವಿರ ಹಸುಗಳನ್ನು ವಸ್ತ್ರ, ಸುವರ್ಣಸಮೇತವಾಗಿ ಶಂಭುಭಕ್ತರಾದ ಬ್ರಾಹ್ಮಣೋತ್ತಮರಿಗೆ ದಾನಮಾಡುವುದರಿಂದ ಅಗಣನೀಯ ಫಲವುಂಟಾಗುವುದು. ॥೪೩-೪೪-೪೫॥

ಹಾಗೆಯೇ ಎಳನೀರಿನಿಂದ ಮಹಾದೇವನ ಚರ ಅಥವಾ ಸ್ಥಿರಲಿಂಗಗಳಿಗೆ ಅಭಿಷೇಕಮಾಡುವವನು ಅಶ್ವಮೇಧಯಜ್ಞ ಪುಣ್ಯಭಾಗಿಯಾಗುವನು. ಸಾವಿರ ಬಾಳೆಯಹಣ್ಣುಗಳ ಪ್ರಮಾಣದಿಂದ ಸ್ನಾನಮಾಡಿಸಬೇಕು. ಸಾವಿರಹಣ್ಣುಗಳ ಪ್ರಮಾಣವೇ ಕದಳೀಸ್ನಾನಕ್ಕೆ ಹೇಳಲ್ಪಟ್ಟ ವಿಧಿಯಾಗಿರುವುದು. ॥೪೬-೪೭॥

ನೂರುಬಾಳೆಯಹಣ್ಣುಗಳಸ್ನಾನವು ಮಧ್ಯಮವು. ಹತ್ತುಹಣ್ಣುಗಳ ಅಭಿಷೇಕವು ಅಧಮವೆಂದು ಹೇಳಲ್ಪಡುವುದು. ಬಾಳೆಯಹಣ್ಣುಗಳಿಂದ ಲಿಂಗಕ್ಕೆಅಭಿಷೇಕಮಾಡಿಸಿ

ಕೋಶೈರ್ಯಃ ಪನಸಾನಾಂ ತು ಅಭಿಷೇಕೇ ಶತಂ ಶಿವೇ ।
ಸಹಸ್ರಂ ಪರಮಂ ದೇವಿ ಶತಂ ಮಧ್ಯಮಮುಚ್ಯತೇ ॥೪೯॥

ಏಷಾಮೇಕೈಕಮಂ ಸ್ನಾನಂ ಗೋದಾನದಶಕಂ ಫಲಂ ।
ಸ್ನಾನಮಿಕ್ಷುರಸೇನಾಪಿ ಯೋ ಲಿಂಗೇ ಸಕೃದಾಚರೇತ್ ॥೫೦॥

ಲಭೇಚ್ಛ್ರೇಯಂ ವಂಶಶತೈರ್ಮಮ ಲೋಕೇ ಮಹೀಯತೇ ।
ಪಕ್ವಾಮ್ರಸುರಸೈರ್ದೇವಿ ಅಭಿಷಿಚ್ಯ ಮಹೇಶ್ವರಂ ॥೫೧॥

ಜಂಬೀರಸಾರೈರ್ಯೋ ಲಿಂಗಂ ಸ್ನಾಪಯೇದ್ಭಕ್ತಿಸಂಯುತಃ ।
ವಿಧೂಯ ಪಾಪಕಲಲಂ ಸೋಮವದ್ರಾಜತೇ ಶಿವೇ ॥೫೨॥

ಕುಶತೋಯೇನ ಯೋ ಲಿಂಗಂ ಸ್ನಾಪ್ಯ ಭಕ್ತ್ಯಾ ಸಕೃನ್ನರಃ ।
ಕಾಂಚನೇನ ವಿಮಾನೇನ ಬ್ರಹ್ಮಲೋಕೇ ಮಹೀಯತೇ ॥೫೩॥

ಗಂಧಚಂದನತೋಯೇನ ಯೋ ಲಿಂಗಂ ಸ್ನಾಪಯೇಚ್ಛಿವೇ ।
ಗಂಧರ್ವಲೋಕಮಾಪ್ನೋತಿ ದಿವಿ ಗಂಧರ್ವಪೂಜಿತಃ ॥೫೪॥

---

ದವನು ಭೂದಾನಮಾಡಿದ ಫಲವನ್ನೈದುವನು. ನೂರು ಹಲಸಿನತೊಳೆಗಳಿಂದ ಶಿವನಿಗೆ ಅಭಿಷೇಕಮಾಡುವುದು, ಮಧ್ಯಮವೆನಿಸುವುದು. ಸಾವಿರಹಲಸಿನತೊಳೆಗಳ ಸ್ನಾನವು ಉತ್ತಮವೆಂದು ಹೇಳಲ್ಪಟ್ಟಿದೆ. ಈಗ ಹೇಳಿದ ಸ್ನಾನಗಳಲ್ಲಿ ಪ್ರತಿ ಒಂದು ಸ್ನಾನವೂ ಹತ್ತುಗೋದಾನಗಳ ಫಲವನ್ನುಂಟುಮಾಡುವುದು. ॥೪೮-೪೯-೫೦॥

ಕಬ್ಬಿನಹಾಲಿನಿಂದಲಾದರೂ ಶಿವಲಿಂಗಕ್ಕೆ ಒಂದುಬಾರಿ ಅಭಿಷೇಕಮಾಡುವವನು ತನ್ನ ನೂರುವಂಶೀಕರೊಡನೆ ಶ್ರೇಯಸ್ಸನ್ನು ಪಡೆಯುವನು. ಅನಂತರ ನನ್ನ ಲೋಕದಲ್ಲಿ ಸರ್ವಪೂಜ್ಯನಾಗಿ ಮೆರೆಯುವನು. ಮಾಗಿದ ರಸಭರಿತವಾದ ಮಾವಿನಹಣ್ಣುಗಳಿಂದ ಭಕ್ತಿಪೂರ್ವಕವಾಗಿ ಶಿವಲಿಂಗಕ್ಕೆ ಅಭಿಷೇಕಮಾಡುವವನೂ, ನಿಂಬೆಹಣ್ಣಿನ ರಸಗಳಿಂದ ಭಕ್ತಿಪೂರ್ವಕವಾಗಿ ಲಿಂಗಕ್ಕೆ ಅಭಿಷೇಕಮಾಡುವವನೂ ಪಾಪದಮೊಳಕೆಯನ್ನೇ ಹೋಗಲಾಡಿಸಿಕೊಂಡು ಚಂದ್ರನಂತೆ ಪ್ರಕಾಶಿಸುತ್ತಾನೆ. ॥೫೦-೫೧-೫೨॥

ದರ್ಭೆಯ ನೀರಿನಿಂದ ಭಕ್ತಿಪೂರ್ವಕವಾಗಿ ಒಂದುಸಲ ಲಿಂಗಕ್ಕೆ ಅಭಿಷೇಕಮಾಡುವ ಮಾನವನು ಚಿನ್ನದ ವಿಮಾನದಲ್ಲಿ ಕುಳಿತು ಬ್ರಹ್ಮಲೋಕವನ್ನೈದಿ

ಪುಷ್ಪೋದಕೇನ ಸಾವಿತ್ರಂ ಕೌಬೇರಂ ಹೇಮವಾರಿಣಾ ।
ರತ್ನೋದಕೇನ ಚಾಸ್ಯೈಂದ್ರಂ ಲೋಕಂ ಸಂಪ್ರಾಪ್ಯ ಮೋದತೇ॥೫೫॥

ದ್ರೋಣತ್ರಯಾಂಭಸಾಂ ರಾಶಿಂ ದ್ರೋಣಪುಷ್ಪನಿಭಾಂ ಶಿವೇ ।
ದತ್ವಾ ಲಿಂಗಸ್ಯ ಮೌಲೌ ಮೇ ಸಿಕ್ಥೇ ಸಿಕ್ಥೇಽಶ್ವಮೇಧಜಂ ॥೫೬॥

ಪುಣ್ಯಂ ಸ ಲಭತೇ ಗೌರಿ ಶಿವರಾತ್ರೌ ಶತಾಧಿಕಂ ।
ಸಿತೇನ ಭಸ್ಮನಾ ಸ್ನಾಪ್ಯ ಗಂಧಿನಾ ಶೋಧಿತೇನ ಚ ॥೫೭॥

ದ್ರೋಣಪಂಚಕಮಾನೇನ ಸೋಮಧಾಮ್ನಿ ಪ್ರಮೋದತೇ ।
ಕೂಪೋದಕಾಚ್ಚ ತಾಡಾಕಂ ತಟಾಕಾದ್ವಾಪ್ಯಮುತ್ತಮಂ ॥೫೮॥

ನದೀನಾಂ ಚೈವ ಸರ್ವಾಸಾಂ ಪುಣ್ಯಾನಾಂ ಚಾಬ್ಧಿಸಂಗಜಂ ।
ವರಂ ಗಾಂಗಂ ಮಹಾದೇವಿ ಸ್ನಾನೇ ಪರ್ಯುಷಿತಂ ನ ಮೇ ॥೫೯॥

ವಸ್ತ್ರಪೂತೇನ ತೋಯೇನ ಯೋ ಲಿಂಗಂ ಸ್ನಾಪಯೇತ್ಸಕೃತ್ ।
ಸರ್ವಕಾಮಸಮೃದ್ಧಾತ್ಮಾ ವಾರುಣಂ ಲೋಕಮಾಪ್ನುಯಾತ್ ॥೬೦॥

---

ಪೂಜಿಸಲ್ಪಡುತ್ತಾನೆ. ಗಂಧ ಮತ್ತು ಚಂದನದ ನೀರಿನಿಂದ ಶಿವಲಿಂಗಾಭಿಷೇಕ ಮಾಡುವ ಮರ್ತ್ಯನು ಸ್ವರ್ಗದಲ್ಲಿ ಗಂಧರ್ವರಿಂದ ಪೂಜಿಸಲ್ಪಟ್ಟು ಗಂಧರ್ವ ಲೋಕವನ್ನು ಸೇರುವನು. ॥೫೩-೫೪॥

ಶಿವಲಿಂಗಕ್ಕೆ ಪುಷ್ಪೋದಕದಿಂದ ಅಭಿಷೇಕ ಮಾಡುವವನು ಸೂರ್ಯಲೋಕವನ್ನೂ, ಸುವರ್ಣಜಲದಿಂದ ಕುಬೇರಪುರವನ್ನೂ, ರತ್ನೋದಕದಿಂದ ಇಂದ್ರಲೋಕವನ್ನೂ ಹೊಂದಿ ಆನಂದಪಡುವನು. ತುಂಬೆಹೂವಿನಬಣ್ಣದ ಮೂರುಕೊಳಗ ಅನ್ನದ ರಾಶಿಯನ್ನು ನನ್ನಲಿಂಗದ ತಲೆಯಮೇಲೆ ಇಡುವವನು ಅಗಳು ಅಗಳಿಗೂ ಅಶ್ವಮೇಧ ಯಾಗದ ಫಲವನ್ನು ಹೊಂದುವನು. ಶಿವರಾತ್ರಿಯ ವೇಳೆಯಲ್ಲಿ ಇದಕ್ಕೆ ನೂರರಷ್ಟು ಹೆಚ್ಚು ಪುಣ್ಯವನ್ನು ಪಡೆಯುವನು. ಶುಭ್ರವಾಗಿ ಶೋಧಿಸಲ್ಪಟ್ಟು ಸುಗಂಧ ಭರಿತವಾಗಿರುವ ಒಂದುಬಳ್ಳ ವಿಭೂತಿಯಿಂದ ಶಿವಲಿಂಗಕ್ಕೆ ಅಭಿಷೇಕಮಾಡಿಸುವನು ಶಿವಲೋಕದಲ್ಲಿ ಆನಂದಿಸುವನು. ॥೫೫-೫೬-೫೭॥

ಸೇದುವ ಬಾವಿಯ ನೀರಿಗಿಂತಲೂ ಕೆರೆಯ ನೀರೂ, ಅದಕ್ಕಿಂತಲೂ ಇಳಿಯುವ ಬಾವಿಯ ಜಲವೂ ಅಭಿಷೇಕಕ್ಕೆ ಉತ್ತಮವಾದುದು. ಪುಣ್ಯಕರಗಳಾದ

ಪಾಟಲೋತ್ಪಲಪದ್ಮಾನಿ ಕರವೀರಾಣಿ ಚಂಪಕಂ ।
ಸ್ನಾನಕಾಲೇಽಂಬುಯೋಜ್ಯಾನಿ ಕಲ್ಪಾನಿ ಸುರಭೀಣಿ ಚ ॥೬೧॥

ತೇನಾಭಿಷಿಚ್ಯ ಲಿಂಗೇ ಮೇ ರಾಜಸೂಯಫಲಂ ಲಭೇತ್ ।
ಕರ್ಪೂರಾಗರುತೋಯೇನ ಯೋ ಲಿಂಗಂ ಸ್ನಾಪಯೇತ್ಸಕೃತ್ ॥೬೨॥

ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಶಿವಮಂದಿರಂ ।
ಪಿತೄನುದ್ದಿಶ್ಯ ಯೋ ಲಿಂಗಂ ಸ್ನಾಪಯೇಚ್ಛೀತವಾರಿಣಾ ॥೬೩॥

ತೃಪ್ತಾಃ ಸ್ವರ್ಗಂ ಪ್ರಯಾಸ್ಯಂತಿ ಪಿತರೋ ನರಕಾದಪಿ ।
ಲಿಂಗಂ ಸ್ನಾಪ್ಯ ಮಹಾದೇವಿ ಜಲಾವಿಚ್ಛಿನ್ನಧಾರಯಾ ॥೬೪॥

ಗ್ರೀಷ್ಮೇ ಗಲಂತಿಕಾಭಿರ್ವಾ ನೈರಂತರ್ಯಂ ದಿವಾನಿಶಂ ।
ಸ ಮೇ ಗಣೇಶತುಲ್ಯಃ ಸ್ಯಾದಶ್ವಮೇಧಾಯುತಂ ಲಭೇತ್ ॥೬೫॥

---

ಸಕಲ ನದೀಜಲಗಳೂ, ಸಮುದ್ರ ಸಂಗಮ ಜಲವೂ ಶ್ರೇಷ್ಠವಾದವು. ಮಹಾದೇವಿ, ಗಂಗಾನದಿಯ ನೀರು ನನ್ನ ಸ್ನಾನಕ್ಕೆ ಅತ್ಯುತ್ಕೃಷ್ಟವಾದುದು. ಬಟ್ಟೆಯಲ್ಲಿ ಶೋಧಿಸಿದ ಗಂಗಾನೀರಿನಿಂದ ಒಂದುಬಾರಿಯಾದರೂ ಯಾವನು ಶಿವಲಿಂಗಕ್ಕೆ ಸ್ನಾನಮಾಡಿಸುವನೋ ಅವನು ಸಕಲ ಇಷ್ಟಾರ್ಥಸಂಪನ್ನನಾಗಿ ವರುಣಲೋಕವನ್ನೈದುವನು. ಗಂಗಾಜಲಕ್ಕೆ ಹಳೆಯದೆಂಬ ದೋಷವಿಲ್ಲ. ॥೫೮-೫೯-೬೦॥

ಪಾದರಿ, ನೈದಿಲೆ, ತಾವರೆ, ಕಣಿಗಲೆ, ಸಂಪಿಗೆ ಈ ಹೂಗಳನ್ನೂ ಸುಗಂಧವಾದ ಮರುಗ ಮುಂತಾದ ಕುಸುಮಗಳನ್ನೂ ನೀರಿಗೆ ಸೇರಿಸಿ, ಶಿವಾಭಿಷೇಕ ಕಾಲದಲ್ಲಿ ಉಪಯೋಗಿಸುವವನು ರಾಜಸೂಯಯಾಗಫಲವನ್ನೈದುವನು. ಕರ್ಪೂರ, ಅಗರು ಇವುಗಳ ನೀರಿನಿಂದ ಒಂದುಬಾರಿ ಲಿಂಗಕ್ಕೆ ಅಭಿಷೇಕಮಾಡುವವನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶಿವಲೋಕವನ್ನೈದುವನು. ॥೬೧-೬೨॥

ತಂಪಾದನೀರಿನಿಂದ ಪಿತೃಗಳನ್ನುದ್ದೇಶಿಸಿ ಯಾರು ಶಿವಲಿಂಗಕ್ಕೆ ಅಭಿಷೇಕ ಮಾಡುವರೋ ಅವನ ಪಿತೃಗಳು ನರಕದಲ್ಲಿದ್ದರೂ ಸ್ವರ್ಗವನ್ನು ಸೇರುವರು. ಎಲೌ ಮಹೇಶ್ವರಿಯೆ! ತುಂಡಾಗದ ಜಲಧಾರೆಗಳಿಂದಲೂ, ಅಥವಾ ಸೋಮಸೂತ್ರವೇ ಮೊದಲಾದವುಗಳಿಂದಲಾದರೂ ಗ್ರೀಷ್ಮಕಾಲದಲ್ಲಿ ಹಗಲಿರುಳೂ ಎಡಬಿಡದೆ ಅಭಿಷೇಕಮಾಡುವವನು ನನ್ನ ಗಣಾಧಿಪಸದೃಶನಾಗಿ ಹತ್ತುಸಾವಿರ ಅಶ್ವಮೇಧ ಯಾಗದ ಫಲವನ್ನೈದುವನು. ॥೬೩-೬೪-೬೫॥

ಶ್ರೀಖಂಡದ್ರವಸಾರೇಣ ಯೋ ವಿಲಿಂಪೇದುಮಾಸಖಂ ।
ಗ್ರೀಷ್ಮರ್ತೌ ಸಕಲರ್ತೌ ವಾ ಪೌಂಡರೀಕಫಲಂ ಲಭೇತ್ ॥೬೬॥

ಕೃಷ್ಣಾಗರುಂ ದೇವದಾರುಂ ಪ್ರಭವಂ ಶ್ರೀತರೋರಪಿ ।
ಗಂಧಂ ದತ್ವಾ ಚಂದ್ರಮೌಲೌ ದ್ವಾದಶಾಹಫಲಂ ಲಭೇತ್ ॥೬೭॥

ತ್ರಿಫಲಂ ಚಂದನಂ ಪ್ರೋಕ್ತಂ ಕುಂಕುಮಂ ತತ್ಸಮಂ ಸ್ಮೃತಂ ।
ಕರ್ಪೂರಂ ತು ತದರ್ಧಂ ಸ್ಯಾದ್ಘನಸಾರಶ್ಚ ತತ್ಸಮಃ ॥೬೮॥

ಫಲಮೇಕಂ ತು ಕಸ್ತೂರ್ಯಾಮೇಲನಾದ್ಯಕ್ಷಕರ್ದಮಃ ।
ಯಕ್ಷಕರ್ದಮಪಂಕೇನ ಯೋ ವಿಲಿಂಪ್ಯ ಮಹೇಶ್ವರಂ ।
ಸಾಗ್ನಿಚಿತ್ಯಾಯುತಮಖಫಲಮಾಪ್ನೋತಿ ಮಾನವಃ ॥೬೯॥

ಲಿಂಗಮೂರ್ತೇರ್ಮಹೇಶಸ್ಯ ಶಿವಸ್ಯ ಪರಮಾತ್ಮನಃ ।
ಸ್ನಾನಕಾಲೇ ಪ್ರಕುರ್ವೀತ ತೌರ್ಯತ್ರಿಕರವಂ ಶಿವೇ ॥೭೦॥

ಭೇರೀಮರ್ದಲಶಂಖಾನಾಂ ಕಾಹಲಂ ವರದುಂದುಭಿಃ ।
ವೀಣಾವೇಣುಮಹಾಢಕ್ಕಾಪಟಹಾನಕಡಂಬರಾಃ ॥೭೧॥

---

ಶ್ರೀಖಂಡಗಂಧದಿಂದ ಶಿವನಿಗೆ ಗ್ರೀಷ್ಮ ಅಥವಾ ಎಲ್ಲ ಋತುಗಳಲ್ಲಿಯೂ ಲೇಪನಮಾಡುವವನು ಪುಂಡರೀಕಯಾಗಫಲವನ್ನೈದುವವನು. ಕಪ್ಪುಅಗಿಲು, ದೇವದಾರು, ಶ್ರೀಗಂದವೃಕ್ಷಗಳಗಂಧವನ್ನು ಚಂದ್ರಶೇಖರನಿಗೆ ಲೇಪನಮಾಡುವವನು ದ್ವಾದಶಾಹಕ್ರತುವಿನ ಫಲವನ್ನು ಹೊಂದುವನು. ॥೬೬-೬೭॥

ಚಂದನವು ಮೂರರಷ್ಟು ಫಲವುಳ್ಳದ್ದು. ಕುಂಕುಮವೂ ಅದಕ್ಕೆ ಸಮಾನವಾದ ಫಲಕಾರಿಯು. ಕರ್ಪೂರವು ಅದರರ್ಧಫಲವುಳ್ಳದ್ದು. ಹಾಲುಮಡ್ಡಿಯು ಅದರ ಸಮಫಲಕವು. ಕಸ್ತೂರಿಯಿಂದ ಬೆರೆತ ಯಕ್ಷಕರ್ದಮವು (ಧೂಪವಿಶೇಷ) ಒಂದು ವಿಶೇಷವಾದಫಲವುಳ್ಳದು. ಮಹೇಶ್ವರನಿಗೆ ಈ ಯಕ್ಷಕರ್ದಮಗಂಧದಿಂದ ಲೇಪನಮಾಡುವವನು ಅಗ್ನಿಚಿದ್ಯಾಗಗಳ ಫಲವನ್ನೈದುವನು. ॥೬೮-೬೯॥

ಪಾರ್ವತಿಯೇ! ಲಿಂಗಾಕೃತಿಯಿಂದಿರುವ ಶಿವಪರಮಾತ್ಮನ ಅಭಿಷೇಕಕಾಲದಲ್ಲಿ ವಾದ್ಯಧ್ವನಿಯನ್ನು ಮಾಡಬೇಕು. ನಗಾರಿ, ಮದ್ದಲೆ, ಶಂಖ, ಕಹಳೆ, ದುಂದುಭಿ,

ಕಾಂಸ್ಯಝಲ್ಲರವಾದ್ಯೇಭ್ಯೋ ಚರ್ಮವಾದ್ಯಂ ವಿಶಿಷ್ಯತೇ ।
ತತೋ ಮುಖೇನ ಚಾಧ್ಮಾತಂ ತತಸ್ತಂತ್ರೀ ಭವಂತಿ ತೇ ॥೭೨॥

ಏವಂ ವಾದಿತ್ರಘೋಷಂ ಯೋ ಪ್ರಕುರ್ಯಾತ್ಸ್ನಾನಕರ್ಮಣಿ ।
ವಂಶಲಕ್ಷಯುತೋ ಧೀಮಾನ್ಮಮ ಲೋಕೇ ಮಹೀಯತೇ ॥೭೩॥

ನಾಟ್ಯಾರ್ಥಮಂಗನಾಜಾಲಂ ಲಯಶಿಕ್ಷಾಸಮನ್ವಿತಂ ।
ತರುಣಂ ರೂಪಸಂಪನ್ನಂ ಗೇಯವಾದಿತ್ರಕೋವಿದಂ ॥೭೪॥

ಕೃತ್ವಾ ಲಿಂಗಾಲಯೇ ಭದ್ರೇ ಸರ್ವಾಮೃದ್ಧಿಮವಾಪ್ನುಯಾತ್ ।
ಘೃತಾಭ್ಯಂಗೇ ಘೃತಸ್ನಾನೇ ಲಿಂಗಂ ಸ್ಯಾದ್ಯದ್ವಿದೂಷಿತಂ ॥೭೫॥

ಯವಗೋಧೂಮಜೈಶ್ಚೂರ್ಣೈಃ ಕಷಾಯೈರ್ಗಂಧಯೋಜಿತೈಃ ।
ಕವೋಷ್ಣೇನಾಂಬುನಾ ದೇವಿ ಸ್ನಾಪಯೇತ್ತದನಂತರಂ ॥೭೬॥

ಘರ್ಷಯೇದ್ಬಿಲ್ವಪತ್ರೈಶ್ಚ ಲಿಂಗಪೀಠಂ ಸುಶೋಧಯೇತ್ ।
ದಶಧೇನುಸಹಸ್ರಾಣಿ ದದತಃ ಫಲಮಾಪ್ನುಯಾತ್ ॥೭೭॥

---

ವೀಣೆ, ಕೊಳಲು, ಡಕ್ಕಾ, ತಮಟೆ, ನಗಾರಿ ಮುಂತಾದ ವಾದ್ಯಗಳ ಧ್ವನಿಯನ್ನು ಮಾಡಿಸಬೇಕು. ತಾಳ, ಝಲ್ಲರಿ ಈ ವಾದ್ಯಗಳಿಗಿಂತಲೂ ಚರ್ಮವಾದ್ಯವು ಶ್ರೇಷ್ಠ ವೆನಿಸುವುದು. ॥೭೦-೭೧॥

ಚರ್ಮವಾದ್ಯಕ್ಕಿಂತಲೂ, ಬಾಯಿಂದ ಬಾರಿಸುವ, ಓಲಗವೇ ಮುಂತಾದ ವಾದ್ಯಗಳೂ, ಅದಕ್ಕಿಂತ ತಂತಿಯ ವೀಣೆ, ಪಿಟೀಲು ಮುಂತಾದ ವಾದ್ಯಗಳೂ ಉತ್ತಮವಾದವು. ಹೀಗೆ ವಾದ್ಯಘೋಷವನ್ನು ಶಿವನ ಸ್ನಾನಕಾಲದಲ್ಲಿ ಮಾಡಿಸುವ ಭಕ್ತಿವಂತನು ತನ್ನ ಲಕ್ಷಮಂದಿವಂಶೀಕರೊಡನೆ ನನ್ನ ಲೋಕದಲ್ಲಿ ಪೂಜ್ಯನಾಗು ತ್ತಾನೆ. ಲಯವೇ ಮೊದಲಾದ ಶಿಕ್ಷೆಗಳನ್ನು ಪಡೆದಿರುವ ಯುವತಿಯರೂ, ಸುಂದ ರಿಯರೂ, ಗಾನ ವಾದ್ಯನಿಪುಣರೂ ಆದ ಸ್ತ್ರೀಸಮೂಹವನ್ನು ಶಿವಾಲಯದಲ್ಲಿ ನಾಟ್ಯ ಕ್ಕೋಸ್ಕರ ಏರ್ಪಡಿಸುವವನು ಸಕಲಸಮೃದ್ಧಿಯನ್ನೂ ಪಡೆಯುವನು.॥೭೨-೭೩-೭೪॥

ತುಪ್ಪದ ಅಭ್ಯಂಗ ಮತ್ತು ಅಭಿಷೇಕಗಳಲ್ಲಿ ಶಿವಲಿಂಗವೇನಾದರೂ ಜಿಡ್ಡಿನಿಂದ ಮಂಕಾದರೆ ಅಕ್ಕಿ, ಗೋಧಿ ಇವುಗಳ ಹಿಟ್ಟಿನಿಂದಲೂ, ಗಂಧಯುಕ್ತವಾದ ಕಷಾಯ ಗಳಿಂದಲೂ ಉಜ್ಜಿ ಸ್ವಲ್ಪಬಿಸಿಯಾದ ನೀರಿನಿಂದ ಅನಂತರ ಸ್ನಾನಮಾಡಿಸಬೇಕು.

|| ಈಶ್ವರ ಉವಾಚ ||

ಕಪಿಲಾಪಂಚಗವ್ಯೇನ ಕುಶವಾರಿಯುತೇನ ಚ ।
ಸ್ನಾಪಯೇನ್ಮಂತ್ರಪೂತೇನ ಬ್ರಹ್ಮಸ್ನಾನಮಘಾಪಹಂ ॥೭೮॥

ಶಂಖಾನಾಂ ಚ ಸಹಸ್ರಕೈಶ್ಚ ಶತಕೈರ್ಧಾರಾಸಹಸ್ರೈರ್ಘಟೈಃ
ಕುಂಭೈಶ್ಛಿದ್ರಶತಾಷ್ಟಕೈರ್ವರಗವಾಂ ಶೃಂಗಾಗ್ರಧಾರಾದಿಭಿಃ ।
ಸ್ನಾಪ್ಯಾಂಬುಪ್ರಭವೈರ್ಮಹೇಶಜನಿಮು ಶ್ರೀರುದ್ರಮಂತ್ರೈಃ ಶಿವೇ
ಕ್ಷೀರಾಜ್ಯಾದಿದಧೀಮಧುಪ್ರಭವಜಾಸಾರೋರುಧಾರಾಯುತಂ ॥೭೯॥

ಪುಣ್ಯಂ ಪ್ರಾಪ್ಯ ಸ ಮೋದತೇ ಗಿರಿಸುತೇ ಕೈಲಾಸಮೌಲೌ ಗಣಃ ॥೮೦॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಿವಲಿಂಗಸ್ನಾನಪ್ರಕಾರವರ್ಣನೇ
ಅಷ್ಟಮೋಽಧ್ಯಾಯಃ

---

ಲಿಂಗಪೀಠವನ್ನು ಬಿಲ್ವದಳಗಳಿಂದಲೂ ಉಜ್ಜಿ ಶುದ್ಧಿಮಾಡಬೇಕು. ಹೀಗೆ ಮಾಡು ವುದರಿಂದ ಹತ್ತುಸಾವಿರ ಗೋದಾನಮಾಡಿದ ಫಲವನ್ನು ಪಡೆಯುವನು.||೭೫-೭೬-೭೭||

ಕಪಿಲವರ್ಣದಗೋವಿನ ಪಂಚಗವ್ಯಕ್ಕೆ ಕುಶೋದಕವನ್ನು ಬೆರಸಿ ಮಂತ್ರ ಪೂತವಾದ ಅದರಿಂದ ಶಿವಲಿಂಗಕ್ಕೆ ನಡೆಸುವ ಬ್ರಹ್ಮಸ್ನಾನವು ಪಾಪನಾಶಕವು.||೭೮||

ಸಾವಿರ ಅಥವಾ ನೂರು ಶಂಖಗಳಿಂದಲೂ, ಸಾವಿರ ಧಾರೆಗಳುಳ್ಳ ಗಡಿಗೆ ಗಳಿಂದಲೂ ನೂರೆಂಟು ರಂಧ್ರಗಳುಳ್ಳ ಕುಂಭಗಳಿಂದಲೂ, ಶ್ರೇಷ್ಠವಾದ ಹಸುವಿನ ಕೊಂಬಿನ ತುದಿಗಳಿಂದ ಬರುವ ಧಾರೆಗಳೇ ಮೊದಲಾದವುಗಳಿಂದ ಬೀಳುವ ಜಲಧಾರೆಗಳಿಂದಲೂ, ಶ್ರೀರುದ್ರಮಂತ್ರ ಪುರಶ್ಚರಣಪೂರ್ವಕವಾಗಿ, ಹಾಲು, ಮೊಸರು, ತುಪ್ಪ ಮುಂತಾದವುಗಳಿಂದಲೂ ಅಭಿಷೇಕಮಾಡುವುದರಿಂದ ಅನಂತಪುಣ್ಯವನ್ನು ಪಡೆದು ಶಿವಗಣವಾಗಿ ಕೈಲಾಸಪರ್ವತದಲ್ಲಿ ಆನಂದಪಡುವನು, ಎಂದು ಈಶ್ವರನು ಪಾರ್ವತಿಗೆ ಹೇಳಿದನು. ||೭೯-೮೦||

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಹನ್ನೊಂದನೆಯ ಅಂಶದಲ್ಲಿ ಶಿವಲಿಂಗಸ್ನಾನ ಪ್ರಕಾರವರ್ಣನೆಯೆಂಬ ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ನವಮೋಽಧ್ಯಾಯಃ

|| ಶ್ರೀಪಾರ್ವತ್ಯುವಾಚ ||

ಪುಷ್ಪೈಃ ಕತಿವಿಧೈಃ ಪೂಜಾ ಕರ್ತವ್ಯಾ ಕಥಯಸ್ವಮೇ ।
ದೇವದೇವ ಮಹಾದೇವ ಕೃಪಯಾ ಭಕ್ತವತ್ಸಲ ॥೧॥

|| ಈಶ್ವರ ಉವಾಚ ||

ಪುಷ್ಪೈರರಣ್ಯಸಂಭೂತೈಃ ಪತ್ರೈರ್ವಾ ಗಿರಿಸಂಭವೈಃ ।
ಅಪರ್ಯುಷಿತನಿಶ್ಛಿದ್ರೈಃ ಪ್ರೋಕ್ಷಿತೈರ್ಜಂತುವರ್ಜಿತೈಃ ॥೨॥

ಆತ್ಮಾರಾಮೋದ್ಭವೈರ್ವಾಪಿ ಪುಷ್ಪೈಃ ಸಂಪೂಜಯೇಚ್ಛಿವಂ ।
ಪುಷ್ಪಜಾತಿವಿಶೇಷೇಣ ಭವೇತ್ಪುಣ್ಯಂ ತತೋಽಧಿಕಂ ॥೩॥

---

## ಒಂಬತ್ತನೆಯ ಅಧ್ಯಾಯವು

ಭಕ್ತವತ್ಸಲನೂ, ದೇವಾದಿದೇವನೂ ಆದ ಮಹೇಶನೇ ! ನಿನ್ನನ್ನು ಎಷು ಬಗೆಯ ಪುಷ್ಪಗಳಿಂದ ಪೂಜಿಸಬೇಕು ? ಆ ಪುಷ್ಪಭೇದಗಳನ್ನು ನನಗೆ ತಿಳಿಯ ಹೇಳೆಂದು ಪಾರ್ವತಿಯು ಈಶ್ವರನನ್ನು ಪ್ರಶ್ನಿಸಿದಳು. ಆಗ ಈಶ್ವರನು ದೇವಿಗೆ ಈ ರೀತಿ ಉಪದೇಶಿಸಿದನು. ದೇವಿಯೇ, ನನ್ನನ್ನು ವನಗಳಲ್ಲಿ ಬೆಳೆದ ಹೂಗಳಿಂದಲೂ, ಬೆಟ್ಟಗುಡ್ಡಗಳಲ್ಲಿ ಬೆಳೆದ ಪತ್ರೆಗಳಿಂದಲೂ ಪೂಜೆಮಾಡಬಹುದು. ಆದರೆ ಅವು ಕೊಳಕಾಗದೆ, ತುಂಡಾಗದೆ, ನೀರಿನಿಂದ ತೊಳೆಯದೆ ಕ್ರಿಮಿಗಳಿಲ್ಲದೆ ಇರಬೇಕು. ತಮ್ಮ ಉದ್ಯಾನಗಳಲ್ಲಿ ತಾವೇ ಬೆಳೆದ ಹೂಗಳಿಂದಲೇ ನನ್ನನ್ನು ಪೂಜಿಸ

ತಪಃಶೀಲಗುಣೋಪೇತೇ ಪಾತ್ರೇ ವೇದಸ್ಯ ಪಾರಗೇ ।
ದತ್ವಾ ಸುವರ್ಣಮಯುತಂ ತತ್ಫಲಂ ಕುಸುಮೇ ಶುಭೇ ॥೪॥

ದಶದತ್ವಾ ಸುವರ್ಣಾನಿ ಯತ್ಫಲಂ ತದವಾಪ್ನುಯಾತ್ ।
ಅರ್ಕಪುಷ್ಪೇಪಿ ವೈ ಕಸ್ಮಿಂಛಿವಾಯ ವಿನಿವೇದಯೇತ್ ॥೫॥

ಏವಂ ಪುಷ್ಪವಿಶೇಷೇಣ ಫಲಂತಸ್ಯ ತತೋಽಧಿಕಂ ।
ಪುಷ್ಪಜಾತಿವಿಶೇಷೇಣ ಯಥಾಸ್ಯಾತ್ತನ್ನಿಬೋಧತ ॥೬॥

ಅರ್ಕಪುಷ್ಪಸಹಸ್ರೇಭ್ಯೋ ಬಕಪುಷ್ಪಂ ವಿಶಿಷ್ಯತೇ ।
ಬಕಪುಷ್ಪಸಹಸ್ರೇಭ್ಯೋ ಏಕಂ ದುರ್ಧುರಕಂ ವರಂ ॥೭॥

ಧುರ್ಧುರಕಾಸಹಸ್ರೇಭ್ಯೋ ಬೃಹತ್ಪುಷ್ಪಂ ವಿಶಿಷ್ಯತೇ ।
ಬೃಹತ್ಪುಷ್ಪಸಹಸ್ರೇಭ್ಯಃ ಕರವೀರಂ ವಿಶಿಷ್ಯತೇ ॥೮॥

---

ಬೇಕು. ಹೂವಿನ ಜಾತಿಯಲ್ಲಿ ಶ್ರೇಷ್ಠವಾದವುಗಳ ಅರ್ಚನೆಯಿಂದ ಅಧಿಕಪುಣ್ಯ ವುಂಟಾಗುವುದು. ॥೧-೨-೩॥

ತಪಸ್ಸು, ಶೀಲ, ಈ ಗುಣಗಳಿಂದ ಯುಕ್ತನಾಗಿ ವೇದಪಾರಂಗತನಾದ ಸತ್ಪಾತ್ರನಿಗೆ ಹತ್ತುಸಾವಿರ ಸುವರ್ಣಗಳನ್ನು ದಾನಮಾಡುವುದರಿಂದ ಬರುವ ಪುಣ್ಯಫಲವನ್ನು ಶುಭಕರವಾದ ಹತ್ತು ಹೂವುಗಳನ್ನು ಶಿವಲಿಂಗಕ್ಕೆ ಅರ್ಪಣೆಮಾಡುವುದರಿಂದಲೇ ಮಾನವನು ಪಡೆಯುವನು. ಒಂದು ಸಾಮಾನ್ಯವಾದ ಎಕ್ಕದ ಹೂವನ್ನು ಶಿವನಿಗೆ ಸಮರ್ಪಿಸುವುದರಿಂದಲೇ ಅಷ್ಟು ಪುಣ್ಯಫಲವುಂಟಾಗುವುದು. ॥೪-೫॥

ಹೀಗೆ ಪುಷ್ಪವಿಶೇಷದಿಂದ ಅದಕ್ಕೆ ಫಲವೂ ಅಧಿಕವಾಗಿಯೇ ಇರುವುದು. ಪುಷ್ಪವು ಜಾತಿವಿಶೇಷದಿಂದ ಅಧಿಕಫಲಕಾರಕವು ಹೇಗಾಗುತ್ತದೆಂಬುದನ್ನು ತಿಳಿಸುವೆನು. ಪುಷ್ಪಗಳ ತಾರತಮ್ಯವನ್ನೂ ಗಮನಿಸುವವಳಾಗು. ಸಾವಿರ ಎಕ್ಕದಹೂಗಳಿಗಿಂತಲೂ ಒಂದು ಬಕಪುಷ್ಪವು ಶ್ರೇಷ್ಠವೆನಿಸುವುದು. ಸಾವಿರ ಬಕಪುಷ್ಪಗಳಿಗಿಂತಲೂ ಒಂದು ಧುರ್ಧುರ (ದತ್ತೂರಿಹೂವು) ಪುಷ್ಪವು ಪೂಜೆಗೆ ಶ್ರೇಷ್ಠವೆನಿಸುವುದು. ॥೬-೭॥

ಒಂದುಸಾವಿರ ಧುರ್ಧುರಕಾಪುಷ್ಪಗಳಿಗಿಂತಲೂ ಒಂದು ಬೃಹತೀಪುಷ್ಪವು ಮಿಗಿಲಾಗಿರುವುದು. ಸಾವಿರ ಬೃಹತೀಪುಷ್ಪಗಳಿಗಿಂತಲೂ ಕಣಿಗಲು ಹೂವು ಶ್ರೇಷ್ಠ

ಕರವೀರಸಹಸ್ರೇಭ್ಯೋ ಬಿಲ್ವಪತ್ರಂ ವಿಶಿಷ್ಯತೇ ।
ಬಿಲ್ವಪತ್ರಸಹಸ್ರೇಭ್ಯಃ ಪದ್ಮಮೇಕಂ ವಿಶಿಷ್ಯತೇ ॥೯॥

ಪದ್ಮಪುಷ್ಪಸಹಸ್ರೇಭ್ಯೋ ದ್ರೋಣಪುಷ್ಪಂ ವಿಶಿಷ್ಯತೇ ।
ದ್ರೋಣಪುಷ್ಪಸಹಸ್ರೇಭ್ಯಃ ಕುಶಪುಷ್ಪಂ ವಿಶಿಷ್ಯತೇ ॥೧೦॥

ಕುಶಪುಷ್ಪಸಹಸ್ರೇಭ್ಯಃ ಶಮೀಪುಷ್ಪಂ ವಿಶಿಷ್ಯತೇ ।
ಶಮೀಪುಷ್ಪಸಹಸ್ರೇಭ್ಯಃ ಶ್ರೀಮನ್ನೀಲೋತ್ಪಲಂ ವರಂ ॥೧೧॥

ಸರ್ವೇಷಾಮೇವ ಪುಷ್ಪಾಣಾಂ ಪ್ರಬಲಂ ನೀಲಮುತ್ಪಲಂ ।
ನೀಲೋತ್ಪಲಸಹಸ್ರೇಣ ಯೋ ಮಾಲಾಂ ಸಂಪ್ರಯಚ್ಛತಿ ॥೧೨॥

ಅಲಾಭೇ ತು ಸಹಸ್ರಾಣಾಂ ತದರ್ಧಾರ್ಧೇನ ಮಾಲಿಕಾ ।
ಶಿವಾಯ ವಿಧಿವದ್ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥೧೩॥

---

ವೆನಿಸುವುದು. ಇಂತಹ ಸಾವಿರ ಕರವೀರ ಪುಷ್ಪಗಳಿಗಿಂತಲೂ ಒಂದು ಬಿಲ್ವ ಪತ್ರೆಯು ಶ್ರೇಷ್ಠವೆನಿಸುತ್ತದೆ. ಸಾವಿರ ಬಿಲ್ವಪತ್ರೆಗಳಿಗಿಂತಲೂ ಒಂದು ತಾವರೆಯು ಉತ್ತಮವೆನಿಸುವುದು. ಸಾವಿರ ಪದ್ಮಪುಷ್ಪಗಳಿಗಿಂತಲೂ ದ್ರೋಣ (ತುಂಬೆಹೂವು) ಪುಷ್ಪವು ಪೂಜೆಗೆ ಶ್ರೇಷ್ಠವೆನಿಸುತ್ತದೆ. ಸಹಸ್ರದ್ರೋಣ ಪುಷ್ಪಗಳಿಗಿಂತಲೂ ಕುಶ ಪುಷ್ಪವು ಶಿವಾರ್ಚನೆಗೆ ಮತ್ತೂ ಮಿಗಿಲಾದುದು. ॥೮-೯-೧೦॥

ಸಹಸ್ರ ಕುಶಪುಷ್ಪಗಳಿಗಿಂತಲೂ ಬನ್ನಿಮರದ ಹೂವು ಪವಿತ್ರವೆನಿಸುವುದು. ಸಾವಿರ ಶಮೀಪುಷ್ಪಗಳಿಗಿಂತಲೂ ಒಂದು ಸುಂದರವಾದ ಕನ್ನೈದಲೆಹೂ ಶ್ರೇಷ್ಠ ವಾದುದು. ಒಟ್ಟಿನಲ್ಲಿ ಸಮಸ್ತ ಪುಷ್ಪಗಳಿಗಿಂತಲೂ ನೀಲೋತ್ಪಲಪುಷ್ಪವೇ ಶಿವಪ್ರೀತಿಕರವಾದುದು. ಸಾವಿರ ಕನ್ನೈದಿಲೆ ಹೂಗಳಿಂದ ಮಾಲೆಮಾಡಿ, ಅಥವಾ ದೊರೆಯದಿದ್ದರೆ ಅದರರ್ಧವಾದ ಐನೂರು ಅಥವಾ ಅಷ್ಟೂ ಸಿಗದಿದ್ದರೆ ಇನ್ನೂರೈವತ್ತು ಹೂಗಳಿಂದಲಾದರೂ ಹಾರಮಾಡಿ ವಿಧಿಪ್ರಕಾರ ಭಕ್ತಿಯಿಂದ ಶಿವನಿಗೆ ಸಮರ್ಪಿಸುವವನು ಹೊಂದುವ ವಿಶೇಷ ಪುಣ್ಯಫಲವನ್ನು ಹೇಳುವೆನು ಕೇಳು. ॥೧೧-೧೨-೧೩॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟ್ಯಯುತಾನಿ ಚ ।
ವಸೇಚ್ಛಿವಪುರೇ ಶ್ರೀಮಾಂಛಿವತುಲ್ಯಪರಾಕ್ರಮಃ ॥೧೪॥

ಶೇಷಾಣಾಂ ಪುಷ್ಪಜಾತೀನಾಂ ಯತ್ಫಲಂ ಪರಿಕೀರ್ತಿತಂ ।
ತತ್ಫಲಸ್ಯಾನುಸಾರೇಣ ಶಿವಲೋಕೇ ಮಹೀಯತೇ ॥೧೫॥

ಶಮ್ಯಾಶ್ಚೈವ ಬೃಹತ್ಯಾಶ್ಚ ತುಲ್ಯಂ ಕುಸುಮಮುಚ್ಯತೇ ।
ಕರವೀರಸಮಾ ಜ್ಞೇಯಾ ಜಾತೀವಿಜಯಪಾಟಲಾಃ ॥೧೬॥

ಶ್ವೇತಮಂದಾರಕುಸುಮಂ ಸಿತಪದ್ಮಸಮಂ ಭವೇತ್ ।
ನಾಗಚಂಪಕಪುನ್ನಾಗಮುಧೂರಕಸಮಾಶ್ರಿತಃ ॥೧೭॥

ಕೇತಕೀಮಾಗಧೀ ಚೈವ ಹೃದಿಕಾ ಚ ಮದಂತಿಕಾ ।
ಶಿರೀಷಸರ್ಜಬಂಧೂಕಾ ಕುಸುಮಾನಿ ವಿವರ್ಜಯೇತ್ ॥೧೮॥

ಅಂಕೋಲಕೂರ್ಮಪತ್ರಂ ಚ ಕರಜೇಂದುತರೂದ್ಭವಂ ।
ವೈಭೀತಕಾನಿ ಪತ್ರಾಣಿ ತತ್ಪುಷ್ಪಾಣಿ ಚ ವರ್ಜಯೇತ್ ॥೧೯॥

---

ಹಾಗೆ ನೀಲೋತ್ಪಲಮಾಲೆಯನ್ನು ಶಿವನಿಗೆ ಅರ್ಪಿಸಿದವರು ಕೋಟಿಸಾವಿರ ಕಲ್ಪಗಳ ವರೆಗೂ ಮತ್ತು ಹತ್ತುಸಾವಿರ ಕಲ್ಪಕೋಟಿಗಳ ವರೆಗೂ ಸಂಪದ್ಯುಕ್ತರಾಗಿ ಶಿವಸದೃಶವಾದ ಪರಾಕ್ರಮವನ್ನು ಹೊಂದಿ ಶಿವಲೋಕದಲ್ಲಿ ವಾಸಮಾಡುವರು. ಇತರ ಹೂಮಾಲೆಗಳನ್ನು ಶಿವನಿಗೆ ಸಮರ್ಪಿಸುವವರು ಆಯಾ ಹೂಜಾತಿಗನುಗುಣವಾದ ಫಲಕ್ಕೆ ತಕ್ಕಂತೆ ಶಿವಲೋಕದಲ್ಲಿ ಪೂಜ್ಯರಾಗುತ್ತಾರೆ. ॥೧೪-೧೫॥

ಬನ್ನೀ ಮತ್ತು ಬೃಹತೀಪುಷ್ಪಗಳ ಮಾಲೆಗಳು ಸಮಾನಫಲಕಗಳು. ಅಂದರೆ ಒಂದೇ ರೀತಿಯ ವಿಶೇಷ ಶುಭಫಲವನ್ನು ಕೊಡತಕ್ಕವುಗಳು. ಜಾಜಿ, ವಿಜಯ ಮತ್ತು ಪಾದರಿಹೂಗಳು ಕರವೀರಪುಷ್ಪಕ್ಕೆ ಸಮಾನವಾದವುಗಳು. ಬಿಳಿಯ ಪಾರಿಜಾತಪುಷ್ಪವು ಬಿಳಿದಾವರೆಗೆ ಸಮಾನವಾದುದು. ನಾಗಸಂಪಿಗೆ, ಪುನ್ನಾಗ, ದತ್ತೂರಿ ಈ ಪುಷ್ಪಗಳನ್ನು ಶಿವಪೂಜೆಯಲ್ಲಿ ಮಾಲಾರೂಪದಿಂದ ಬಳಸಬಹುದು. ಕೇದಗೆ (ತಾಳೆ), ಮಾಗಧೀ, ಹೃದಿಕಾ, ನಿರಂಟಿಗೆ, ಬಾಗೆ, ಸರ್ಜ, ಹೊನ್ನೆಹೂ ಈ ಹೂಗಳಿಂದ ಮಾತ್ರ ಪೂಜಿಸಬಾರದು ॥೧೬-೧೭-೧೮॥

ಅಂಕೋಲೆ, ಕೂರ್ಮ, ಹೊಂಗೆ, ಚಂದ್ರವೃಕ್ಷ, ಭೂತಾಳೆ ಈ ಮರಗಳ

ನಿರ್ಗಂಧಾನ್ಯುಗ್ರಗಂಧಾನಿ ಯಾನಿ ತಾನಿ ವಿವರ್ಜಯೇತ್ ।
ಗಂಧವಂತ್ಯಪವಿತ್ರಾಣಿ ಯಾನಿತಾನಿ ವಿವರ್ಜಯೇತ್ ॥೨೦॥

ಗಂಧಹೀನಮಪಿಗ್ರಾಹ್ಯಂ ಪವಿತ್ರಂ ಯತ್ಕುಶಾದಿಕಂ ।
ಸಾತ್ವಿಕಂ ತದ್ಧಿ ಕುಸುಮಮಪವಿತ್ರಂ ತು ತಾಮಸಂ ॥೨೧॥

ಕನಕಾನಿ ಕದಂಬಾನಿ ರಾತ್ರೌ ದೇಯಾನಿ ಶಂಕರೇ ।
ದಿವಾಶೇಷಾಣಿ ಪುಷ್ಪಾಣಿ ದಿವಾರಾತ್ರೌ ಚ ಮಲ್ಲಿಕಾ ॥೨೨॥

ರಾತ್ರೌ ಸ್ವರ್ಣಕದಂಬಾನಿ ಅರ್ಧರಾತ್ರೌ ಚ ಮಲ್ಲಿಕಾ ।
ಪ್ರಹರಂ ತಿಷ್ಠತೇ ಜಾತೀಕರವೀರಮಹರ್ನಿಶಂ ॥೨೩॥

ಕೀಟಕೇಶಾಪವಿದ್ಧಾನಿ ಶೀರ್ಣಪರ್ಯುಷಿತಾನಿ ಚ ।
ಸ್ವಯಂ ಪತಿತಪುಷ್ಪಾಣಿ ತ್ಯಜೇದುಪಹತಾನಿ ಚ ॥೨೪॥

---

ಪತ್ರೆಗಳನ್ನೂ ಹೂವುಗಳನ್ನೂ ಈಶ್ವರನಿಗೆ ಅರ್ಪಿಸಬಾರದು. ಸ್ವಲ್ಪವೂ ಗಂಧವಿಲ್ಲದವೂ, ಅತಿಗಂಧವುಳ್ಳವೂ ಆದ ಹೂಗಳನ್ನು ಬಿಡಬೇಕು. ಸುಗಂಧಭರಿತವಾಗಿದ್ದರೂ ಅಪರಿಶುದ್ಧವಾಗಿರುವ ಹೂಗಳನ್ನು ಪೂಜೆಮಾಡಬಾರದು. ದರ್ಭೆಯ ಪುಷ್ಪವೇ ಮೊದಲಾದುವುಗಳು, ಗಂಧವಿಲ್ಲದಿದ್ದರೂ ಪವಿತ್ರಗಳಾಗಿರುವುದರಿಂದ ಅವನ್ನು ಪೂಜೆಮಾಡಬಹುದು. ಮೇಲೆ ಹೇಳಿದ ಪವಿತ್ರವಾದ ಕುಸುಮಗಳು ಸಾತ್ವಿಕಪುಷ್ಪಗಳೆನಿಸುವುವು. ಅಪವಿತ್ರವಾದ ಮತ್ತು ಅನುಕ್ತವಾದ ಪುಷ್ಪವಾದರೋ ತಾಮಸ ಕುಸುಮವೆಂದು ಹೇಳಲ್ಪಡುವುದು. ॥೧೯-೨೦-೨೧॥

ಕನಕಪುಷ್ಪಗಳನ್ನೂ, ನೀಪಪುಷ್ಪಗಳನ್ನೂ ರಾತ್ರಿವೇಳೆಯಲ್ಲಿ ಶಂಕರನಿಗೆ ಅರ್ಪಿಸಬೇಕು. ಹಗಲು ಸಮಸ್ತ ಹೂಗಳನ್ನೂ ಪೂಜೆಮಾಡಬಹುದು. ಮಲ್ಲಿಗೆಯ ಹೂಗಳನ್ನು ಹಗಲು ಮತ್ತು ರಾತ್ರಿ ಎರಡು ವೇಳೆಯಲ್ಲೂ ಪೂಜಿಸಬಹುದು. ಜಾಜಿಯಹೂ ಒಂದು ಜಾವಕಾಲ ಮಾತ್ರ ನಿಲ್ಲುವುದು. ಕರವೀರಪುಷ್ಪವು ಹಗಲಿರುಳೂ ಇರುವುದು. ಒಟ್ಟಿನಲ್ಲಿ ಕ್ರಿಮಿರಾಶಿಯಿಂತಲೂ ಕೂದಲುಗಳಿಂದಲೂ ದೂಷಿತಗಳಾಗಿ ಚೂರಾಗಿ, ಧೂಸರವಾಗಿರುವ, ತಾನಾಗಿಯೇ ಮರಗಳಿಂದ ಉದುರಿರುವ ಮತ್ತು ಭ್ರಷ್ಟವಾಗಿರುವ ಹೂಗಳನ್ನು ಬಿಟ್ಟುಬಿಡಬೇಕು. ಪೂಜೆಮಾಡಬಾರದು. ॥೨೨-೨೩-೨೪॥

ಮುಕುಲೈರ್ನಾರ್ಚಯೇದ್ದೇವಮಪಕ್ವಂ ನ ನಿವೇದಯೇತ್ ।
ಫಲಂ ಕ್ವಥಿತವಿತ್ತೇ ಚ ಯತ್ನಾತ್ಪಕ್ವಮಪಿ ತ್ಯಜೇತ್ ॥೨೫॥

ಅಲಾಭೇ ಸತಿ ಪುಷ್ಪಾಣಾಂ ತತ್ಪತ್ರಾಣಿ ನಿವೇದಯೇತ್ ।
ಪತ್ರಾಣಾಮಪ್ಯಲಾಭೇತು ಫಲಾನ್ಯಪಿ ನಿವೇದಯೇತ್ ॥೨೬॥

ಫಲಾನಾಮಪ್ಯಭಾವೇ ತು ತೃಣಗುಲ್ಮೌಷಧೀರಪಿ ।
ಔಷಧೀನಾಮಪ್ಯಭಾವೇ ತು ಮಾನಸಂ ಪ್ರವರಂ ಶುಭಂ ॥೨೭॥

ಪ್ರತ್ಯೇಕಮುಕ್ತಪುಷ್ಪೇಷು ದಶಸೌವರ್ಣಕಂ ಫಲಂ ।
ಸ್ರಕ್‌ನಿಬಂಧೇಷು ತೇಷ್ವೇವ ದ್ವಿಗುಣಂ ಫಲಮಿಷ್ಯತೇ ॥೨೮॥

ಯಃ ಸುಗಂಧೈರ್ಯುಕ್ತಪುಷ್ಪೈರ್ಲಿಂಗಂ ಸಮ್ಯಕ್ಪ್ರಪೂಜಯೇತ್ ।
ಮಾಲಾಭಿರ್ವಾ ಸುಗಂಧಾಭಿಃ ಸೋಽನಂತಫಲಮಾಪ್ನುಯಾತ್ ॥೨೯॥

---

ಮಹಾದೇವನನ್ನು ಯಾವಾಗಲೂ ಮೊಗ್ಗುಗಳಿಂದ ಪೂಜೆಮಾಡಬಾರದು. ಪರಶಿವನಿಗೆ ಮಾಗದ ಹಣ್ಣುಗಳನ್ನು ನಿವೇದನ ಮಾಡಬಾರದು, ಹಣ್ಣು ಪಕ್ವವಾಗಿದ್ದರೂ ಕೊಳೆತು ಅಥವಾ ಹುಳುಗಳಿಂದ ಕೊರೆಯಲ್ಪಟ್ಟಿದ್ದರೆ ವಿಶೇಷವಾಗಿ ಕಳಿತಿದ್ದರೆ, ಅವುಗಳನ್ನೂ ತ್ಯಜಿಸಬೇಕು. ಹೂಗಳು ದೊರೆಯದಿದ್ದರೆ ಆ ಮರಗಳ ಪತ್ರೆಗಳನ್ನೇ ನಿವೇದಿಸಬಹುದು. ಪತ್ರೆಗಳೂ ದೊರೆಯದಿದ್ದಲ್ಲಿ ಹಣ್ಣುಗಳನ್ನಾದರೂ ಸಮರ್ಪಿಸಬಹುದು. ಹಣ್ಣುಗಳೂ ಸಿಗದಿದ್ದರೆ ಹುಲ್ಲು, ಬೇರು ಮತ್ತು ಇತರ ಮೂಲಿಕೆಗಳನ್ನಾದರೂ ಸಮರ್ಪಿಸಬಹುದು. ಅವೂ ದೊರೆಯದಿದ್ದರೆ ಮಾನಸಿಕವಾದ ಸಮರ್ಪಣೆಯೇ ಅತಿ ಶ್ರೇಷ್ಠವೆನಿಸುವುದು. ||೨೫-೨೬-೨೭||

ಪರಶಿವನಿಗಾಗಿಯೇ ಪ್ರತ್ಯೇಕವಾಗಿ ಹೇಳಿರುವ ಹೂಗಳನ್ನು ಬಿಡಿಬಿಡಿಯಾಗಿ ಪೂಜಿಸುವುದರಿಂದ ಹತ್ತು ಸುವರ್ಣ ನಾಣ್ಯಗಳ ದಾನಫಲವುಂಟಾಗುವುದು. ಅದೇ ಹೂಗಳನ್ನು ಹಾರಮಾಡಿ ಹಾಕುವುದರಿಂದ ಅದರ ಎರಡರಷ್ಟು ಫಲವುಂಟಾಗುವುದು. ಸುಗಂಧಭರಿತಗಳಾದ ಪುಷ್ಪಗಳಿಂದ ಶಿವಲಿಂಗವನ್ನು ಚೆನ್ನಾಗಿ ಪೂಜಿಸುವವನೂ, ಸುವಾಸನೆಯುಳ್ಳ ಹೂಮಾಲೆಗಳನ್ನು ಶಿವಲಿಂಗಕ್ಕೆ ಅಲಂಕಾರಮಾಡುವವನೂ ಅಪರಿಮಿತವಾದ ಫಲಗಳನ್ನು ಹೊಂದುತ್ತಾನೆ. ||೨೮-೨೯||

ಬಿಲ್ವಪತ್ರೈರಖಂಡೈರ್ಯಸ್ಸಕೃಲ್ಲಿಂಗಂ ಪ್ರಪೂಜಯೇತ್ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥೩೦॥

ಧತ್ತೂರಕೈಶ್ಚ ಯೋ ಲಿಂಗಂ ಸಕೃತ್ಪೂಜಯತೇ ನರಃ ।
ಸ ಗೋಲಕ್ಷಫಲಂ ಪ್ರಾಪ್ಯ ಶಿವಲೋಕೇ ಮಹೀಯತೇ ॥೩೧॥

ಬೃಹತೀಕುಸುಮೈರ್ಭಕ್ತ್ಯಾ ಯೋ ಲಿಂಗಂ ಸಕೃದರ್ಚಯೇತ್ ।
ಗವಾಮಯುತದಾನಸ್ಯ ಫಲಂಪ್ರಾಪ್ಯ ಶಿವಂ ವ್ರಜೇತ್ ॥೩೨॥

ಮಲ್ಲಿಕೋತ್ಪಲಪದ್ಮಾನಿ ಜಾತೀಪುಂನಾಗಚಂಪಕೈಃ ।
ಅಶೋಕಶ್ವೇತಮಂದಾರಕರ್ಣಿಕಾರಸುಮಾನಿ ಚ ॥೩೩॥

ಕರವೀರಾರ್ಕಮಂದಾರಶಮೀಪಾಟಲಕೇಸರಂ ।
ಕುಶಾಪಾಮಾರ್ಗಕುಮುದಕದಂಬದ್ರೋಣಕಾನಿ ಚ ॥೩೪॥

ಸೌಗಂಧಿಕಾಸಮಾನಾಗಸಿಂಧುಶೇಫಾಲಿಕಾರ್ಜುನೈಃ ।
ತುಲಸೀ ಕುರವಾಂಕೋಲನಾಗಚಂಪಕ ಸಂಭವೈಃ ॥೩೫॥

---

ಹರಿದು ಮುರಿದುಹೋಗದಿರುವ ಬಿಲ್ವದಳಗಳಿಂದ ಒಂದು ಸಾರಿ ಶಿವಲಿಂಗವನ್ನು ಪೂಜಿಸುವವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಶಿವಲೋಕದಲ್ಲಿ ಆನಂದವನ್ನು ಪಡೆಯುವನು. ಧತ್ತೂರೀಪುಷ್ಪಗಳಿಂದ ಒಂದುಬಾರಿ ಶಿವಲಿಂಗವನ್ನರ್ಚಿಸುವವನೂ ಲಕ್ಷಗೋದಾನಗಳ ಫಲದಿಂದ ಶಿವಲೋಕದಲ್ಲಿ ಪೂಜ್ಯನಾಗುತ್ತಾನೆ. ಬೃಹತೀಕುಸುಮಗಳಿಂದ ಒಂದು ಸಲ ಶಿವಲಿಂಗವನ್ನು ಪೂಜೆಮಾಡುವವನು ಹತ್ತು ಸಾವಿರ ಗೋದಾನಗಳ ಫಲವನ್ನು ಹೊಂದಿ ಕೊನೆಗೆ ಶಿವಸಾಯುಜ್ಯವನ್ನು ಪಡೆಯುವನು. ॥೩೦-೩೧-೩೨॥

ಮಲ್ಲಿಗೆ, ನೈದಿಲೆ, ತಾವರೆ, ಜಾಜಿ, ಪುನ್ನಾಗ, ಸಂಪಿಗೆ, ಅಶೋಕ, ಬಿಳಿ ಪಾರಿಜಾತ, ಕಣಿಗಲೆ, ಕರವೀರ, ಎಕ್ಕ, ಮಂದಾರ, ಬನ್ನಿ, ಪಾದರಿ, ಕುಶ, ಉತ್ತರಣೆ, ಕುಮುದ, (ಬೆಟ್ಟದಾವರೆ) ಕದಂಬ, (ಈಚಲು) ಕಂಚುವಾಳ, ಸೌಗಂಧಿಕಾ, ನಾಗ, ಸಿಂಧು, ಕರ್ರೀಲಕ್ಕೀಹೂ, ಮತ್ತೀ, ತುಳಸೀ, ಬೋರೆಹೂ, ಅಂಕೋಲೆ, ನಾಗಸಂಪಗೆ, ನಂದಿಬಟ್ಟಲು, ಶಮ್ಯಾಕ, ತಿಲಕ, ನವಮಾಲಿಕಾ, ಸುರಗೀ, ಪುನ್ನಾಗ, ದಂತೀ,

ನಂದ್ಯಾವರ್ತಾರ್ಕಶ್ಚ ಶವ್ಯಾಕತಿಲಕಂ ನವಮಾಲಿಕಾ ।
ತರುಪುನ್ನಾಗದಂತೀ ಚ ಮಾಲತೀ ಕೂಟಜಾತಯಃ ॥೩೬॥

ಪುಷ್ಪೈರೇತೈರ್ಯಥಾಲಾಭಂ ಯೋ ನರಃ ಪೂಜಯೇಚ್ಛಿವಂ ।
ಸ ಚ ಯತ್ಫಲಮಾಪ್ನೋತಿ ತದೇಕಾಗ್ರಮನಾಃ ಶೃಣು ॥೩೭॥

ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।
ಪುಷ್ಪಮಾಲಾಪರಿಕ್ಷಿಪ್ತೈರ್ಗೀತವಾದಿತ್ರನಿಃಸ್ವನೈಃ ॥೩೮॥

ತಂತ್ರೀದುರ್ಧುರವಾದ್ಯೈಶ್ಚ ಸ್ವಚ್ಛಂದಗಮನಾಲಸೈಃ ।
ರುದ್ರಕನ್ಯಾಸಮಾಕೀರ್ಣೈರ್ದೇವದಾನವಕಿಂನರೈಃ ॥೩೯॥

ಚಾಮರೈರ್ವೀಜ್ಯಮಾನೈಶ್ಚ ಸ್ತೂಯಮಾನಃ ಸುರಾಸುರೈಃ ।
ಗಚ್ಛೇಚ್ಛಿವಪದಂ ದಿವ್ಯಂ ಯತ್ರ ವಾ ರುಚಿರಂ ಭವೇತ್ ॥೪೦॥

ಯೈಸ್ತೈರ್ವಾಪೀಹ ಕುಸುಮೈರ್ಜಲಸ್ಥಲರುಹೈಃ ಶಿವಂ ।
ಸಂಪೂಜ್ಯ ಪ್ರೋಕ್ಷಿತೈರ್ಭಕ್ತ್ಯಾ ಶಿವಲೋಕೇ ಮಹೀಯತೇ ॥೪೧॥

---

ಮಾಲತೀ, ಗಿಡಮಲ್ಲಿಗೆ ಮುಂತಾದ ಹೂವುಗಳೂ ಪತ್ರೆಗಳೂ, ಇವುಗಳಲ್ಲಿ ಸಿಕ್ಕಿದವ್ಪರಿಂದ ಶಿವನಿಗೆ ಪೂಜೆ ಮಾಡುವ ಮಾನವನು ಪಡೆಯುವ ಫಲವನ್ನು ಸಾವಧಾನಮನಸ್ಸಿನಿಂದ ಈಗ ಹೇಳುವೆನು ಕೇಳು. ॥೩೩-೩೪-೩೫-೩೬-೩೭॥

ಕೋಟಿಸೂರ್ಯಸಮಾನಗಳಾಗಿ, ಸಕಲ ಇಷ್ಟಾರ್ಥಗಳನ್ನೂ ಕೊಡುತ್ತಾ ಹೂಮಾಲೆಗಳಿಂದಲಂಕೃತವಾಗಿ ಸಂಗೀತ, ವಾದ್ಯಾದಿ ಧ್ವನಿಗಳಿಂದಲೂ, ಮಧುರವಾದ ಧ್ವನಿಗೊಡುವ ವೀಣೆಯೇ ಮುಂತಾದ ತಂತೀ ವಾದ್ಯಗಳಿಂದಲೂ ಯುಕ್ತವಾಗಿ, ಸ್ವಚ್ಛಂದವಾಗಿ ಸಂಚರಿಸುವ ಸ್ವಭಾವವುಳ್ಳ ದಿವ್ಯವಿಮಾನಗಳಲ್ಲಿ ಕುಳಿತು ರುದ್ರಕನ್ಯೆಯರಿಂದಲೂ, ದೇವದೈತ್ಯರೆಂಬ ಸೇವಕರಿಂದಲೂ, ಚಾಮರಗಳ ಸೇವೆಯನ್ನು ಸ್ವೀಕರಿಸುತ್ತಾ, ದೇವದಾನವರಿಂದ ಸ್ತುತಿಸಲ್ಪಡುವವನಾಗಿ ದಿವ್ಯವಾದ ಶಿವಲೋಕದಲ್ಲಿ ತನಗೆ ಬೇಕಾದ ಬಳಿಗೆ ಹೋಗುತ್ತಾ ನಿರ್ಮಲಾನಂದಭರಿತನಾಗಿರುವನು. ॥೩೮-೩೯-೪೦॥

ಒಟ್ಟಿನಲ್ಲಿ ಈ ಲೋಕದಲ್ಲಿ ನೀರಿನಲ್ಲಿ ಅಥವಾ ನೆಲದಮೇಲೆ ಬೆಳೆದು ಪವಿತ್ರ ನೀರಿನಿಂದ ಪ್ರೋಕ್ಷಿಸಲ್ಪಟ್ಟ ಹೂಗಳಿಂದ ಭಕ್ತಿಪೂರ್ವಕವಾಗಿ ಶಿವನಿಗೆ ಪೂಜೆ

ಶಿವಸ್ಯೋಪರಿ ಯಃ ಕುರ್ಯಾತ್ಸುಖಸಂಪುಷ್ಪಮಂಡಪಂ ।
ಶೋಭಿತಂ ಪುಷ್ಪಮಾಲಾಭಿರಾಪೀಠಂ ತತ್ಪ್ರಲಾಬಿತಂ ॥೪೨॥

ಅತ್ಯಾಶ್ಚರ್ಯಮಹಾಯತ್ನೈರ್ದಿವ್ಯಪುಷ್ಪೋಪಶೋಭಿತೈಃ ।
ಸರ್ವೋಪರಿ ಚರಶ್ರೀಮಾನ್ಗಚ್ಛೇಚ್ಛಿವಪುರಂ ಸುಖೀ ॥೪೩॥

ಅನೇಕಾಕಾರವಿನ್ಯಸ್ತೈಃ ಸುಗಂಧಕುಸುಮೈರ್ಗೃಹಂ ।
ಯಃ ಕುರ್ಯಾತ್ಸರ್ವಲೋಕೇಷು ವಿಚಿತ್ರಕುಸುಮೋಜ್ಜ್ವಲಂ ॥೪೪॥

ಸುಪುಷ್ಪಕವಿಮಾನಾನಾಂ ಸಹಸ್ರೈಃ ಪರಿವಾರಿತಃ ।
ದಿವ್ಯಸ್ತ್ರೀಸುಖಸಂಭೋಗಕ್ರೀಡಾರತಿಸಮನ್ವಿತಃ ॥೪೫॥

ಅಕ್ಷಯಂ ಮೋದತೇ ಕಾಲಂ ಮತಿರಂಶೇತಶಾಸನಃ ।
ಶಿವಾದಿಸರ್ವಲೋಕೇಷು ಯತ್ರೇಷ್ಟಂ ತತ್ರ ಯಾತಿ ಸಃ ॥೪೬॥

---

ಮಾಡುವವನು ಶಿವಲೋಕದಲ್ಲಿ ಪೂಜಿತನಾಗುತ್ತಾನೆ. ಪಾರ್ವತಿಯೇ, ಶಿವನಮೇಲೆ ಸುಖಕರವಾದ ದಿವ್ಯ ಪುಷ್ಪಮಂಟಪವನ್ನು ಮಾಡಿಸಿ ಪೀಠದವರೆಗೂ ಜೋಲಾಡುತ್ತಿರುವ ಹೂಮಾಲೆಗಳಿಂದಲಂಕರಿಸಿ, ಅತ್ಯಾಶ್ಚರ್ಯಕರಗಳಾಗಿ ಮಹಾಯತ್ನಗಳಿಂದ ಲಬ್ಧವಾದ ಹೂಗಳನ್ನು ಅಲಂಕಾರಮಾಡಿದವನು ಎಲ್ಲಕ್ಕಿಂತಲೂ ಮೇಲ್ಭಾಗದಲ್ಲಿರುವ ಸಂಪದ್ಭರಿತವಾದ ಶಿವಲೋಕಕ್ಕೆ ಸುಖವಾಗಿ ಪ್ರಯಾಣಮಾಡುವನು. ॥೪೧-೪೨-೪೩॥

ತನಗೆತೋರಿದೆಡೆಗಳಲ್ಲಿ ಅನೇಕಬಗೆಯ ಆಕಾರವಿನ್ಯಾಸಗಳಿಂದ ದೇವಗೃಹವನ್ನು ಸುಗಂಧಪುಷ್ಪಗಳಿಂದಲೂ ಧೂಪದೀಪಗಳಿಂದಲೂ ಪ್ರಜ್ವಲಿಸುವಂತೆ ಮಾಡುವವನು ಉತ್ತಮ ಸಹಸ್ರಪುಷ್ಪಕವಿಮಾನಗಳಿಂದ ಪರಿವೃತನಾಗಿ ದಿವ್ಯ ಸುಕುಮಾರಿಯರ ಸುಖಕರವಾದ ಸಂಭೋಗ, ರತಿಕ್ರಿಡಾದಿಗಳಿಂದ ಯುಕ್ತನಾಗಿ ಅನೇಕಕಾಲಪರ್ಯಂತ ನಿತ್ಯಸುಖದಲ್ಲಿ ಆನಂದಿಸುತ್ತಾನೆ. ಅವನು ಯಮನ ಭೀತಿಯನ್ನೇಪಡೆಯದೆ ತನಗೆ ಇಷ್ಟಬಂದ ಬಳಿಗೆ ಹೋಗಿಬರುವ ಸಾಮರ್ಥ್ಯವನ್ನು ಪಡೆಯುವನು. ॥೪೪-೪೫-೪೬॥

ಪೂಜಾಸು ಭಕ್ತಿವಿನ್ಯಾಸವೇದನಾದಿಷು ಸರ್ವದಾ ।
ಫಲಮೇವಂ ಸಮಾಸೇನ ದಾತುರ್ವಿತ್ತಾನುಸಾರತಃ ॥೪೭॥

ಫಲಮಿಷ್ಟಂ ಸಮಾಪ್ನೋತಿ ಲಿಂಗಂ ಸಂಪೂಜಯನ್ನರಃ ।
ಶಿವವತ್ಸುಪುತ್ರಾದ್ಯೈಃ ಸ್ಕಂದವನ್ಮೋದತೇ ಚಿರಂ ॥೪೮॥

ಲಿಂಗವೇದೀ ಭವೇದ್ದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ ।
ತಯೋಃ ಸಂಪೂಜನಂ ಭಕ್ತ್ಯಾ ದೇವೀ ದೇವಶ್ಚ ಪೂಜಿತೌ ॥೪೯॥

ಸ್ವಯಮುತ್ಪಾಟ್ಯ ಪುಷ್ಪಾಣಿ ಯಃ ಶಿವಂ ಪೂಜಯೇತ್ಸದಾ ।
ತಾನಿ ಸಾಕ್ಷಾತ್ಪ್ರಗೃಹ್ಣಾತಿ ತದ್ಭಕ್ತಃ ಸತತಂ ಶಿವಃ ॥೫೦॥

ಯಃ ಕುರ್ಯಾತ್ತು ಶಿವಾರಾಮಮಾಮ್ರಬಿಲ್ವಾದಿಶೋಭಿತಂ ।
ಜಾತೀವಿಜಯರಾಜಾಬ್ಜಕರವೀರಾರ್ಕಕುಬ್ಜಕೈಃ ॥೫೧॥

---

ಶಿವಪೂಜೆಗಳಲ್ಲಿ ಯಾವಾಗಲೂ ಭಕ್ತಿವಿನ್ಯಾಸ, ಇಷ್ಟವಸ್ತು ನಿವೇದನ ಮುಂತಾದವುಗಳಲ್ಲಿ ಯಜಮಾನನು ತನ್ನ ಐಶ್ವರ್ಯಾನುಸಾರವಾಗಿ ನಡೆದುಕೊಳ್ಳಬೇಕು. ಇಲ್ಲಿ ಹೇಳಿರುವ ಫಲವು ಸಂಕ್ಷೇಪವಾಗಿ ನಿರೂಪಿತವಾಗಿದೆ. ಒಟ್ಟಿನಲ್ಲಿ ಶಿವಲಿಂಗವನ್ನು ಪೂಜೆಮಾಡುವವನು ತನಗೆ ಇಷ್ಟವಾದ ಫಲವನ್ನು ಪಡೆದು ಶಿವನಂತೆ ಸುಪುತ್ರನೇಮೊದಲಾದ ಫಲಗಳನ್ನು ಹೊಂದಿ ಬಹುಕಾಲ ಕುಮಾರಸ್ವಾಮಿಯಂತೆ ಸದಾ ಆನಂದದಿಂದಿರುತ್ತಾನೆ. ॥೪೭-೪೮॥

ಲಿಂಗದ ವೇದಿಕೆಯು ಅಂದರೆ ಪಾಣಿಬಟ್ಟಲೇ ಸಾಕ್ಷಾದ್ದೇವಿಯಾಗಿರುವಳು. ಮಹೇಶ್ವರನೇ ಸಾಕ್ಷಾಲ್ಲಿಂಗರೂಪದಲ್ಲಿರುವವನು, ಅಂದಮೇಲೆ ಅವೆರಡರ ಭಕ್ತಿಪೂರ್ವಕವಾದ ಪೂಜೆಯಿಂದ ಮಹಾದೇವ ಮತ್ತುಪಾರ್ವತಿಯರು ಪೂಜಿಸಲ್ಪಟ್ಟಂತೆಯೇ ಆಗುವುದು. ಹೂಗಳನ್ನು ತಾನೇ ಕೊಯ್ದು ಭಯಭಕ್ತಿಯಿಂದ ಶಿವನಿಗೆ ಪೂಜೆ ಮಾಡುವವನ ಪುಷ್ಪಾದಿಗಳನ್ನು ಭಕ್ತರಕ್ಷಕನಾದ ಪರಶಿವನು ತಾನೇ ಸಾಕ್ಷಾತ್ತಾಗಿ ಬಂದು ಸ್ವೀಕರಿಸುವನು. ॥೪೯-೫೦॥

ಮಾವು, ಬಿಲ್ವ ಮುಂತಾದ ವೃಕ್ಷಗಳಿಂದ ಶೋಭಿಸುತ್ತಾ ಜಾಜಿ, ವಿಜಯ, ರಾಜಕಮಲ, ಕರವೀರ, ಎಕ್ಕ, ಕುಜ್ಜ, ಪುನ್ನಾಗ, ವಕುಳ, ಅಶೋಕ, ನೈದಿಲೆ, ಸಂಪಿಗೆ, ಬಾಳೆ, ಸೇವಂತಿಗೆ, ಕನಕ ಮುಂತಾದ ಹೂಗಿಡಗಳಿಂದ ಯುಕ್ತವಾಗಿರುವ

ಪುನ್ನಾಗಬಕುಲೈಶ್ಚೈವ ಅಶೋಕೋತ್ಪಲಚಂಪಕೈಃ ।
ಕದಲೀಯೂಥಹೇಮಾದ್ಯೈಸ್ತಸ್ಯ ಪುಣ್ಯಫಲಂ ಶೃಣು ॥೫೨॥

ಯಾವತ್ತತ್ಪತ್ರಕುಸುಮಬೀಜಮೂಲಫಲಾನಿ ಚ ।
ತಾವದ್ವರ್ಷಸಹಸ್ರೇಣ ರುದ್ರಲೋಕೇ ಮಹೀಯತೇ ॥೫೩॥

ನ ಪರ್ಯುಷಿತದೋಷೋಽಸ್ತಿ ಬಿಲ್ವಪತ್ರಸ್ಯ ಶಂಕರಿ ।
ಬಿಲ್ವಾನಾಂ ಚೂರ್ಣಮಪಿ ವಾ ಪಾತಯೇಲ್ಲಿಂಗಮೂರ್ಧನಿ ॥೫೪॥

ನಾಬಿಲ್ವಂ ಪೂಜಯೇಲ್ಲಿಂಗಮನ್ಯತ್ತನ್ನಾಮ ಯೋಜಯೇತ್ ।
ಅಪಾಮಾರ್ಗೈರ್ದರ್ಭಪತ್ರೈಃ ಪೂಜಯೇತ್ತದಸಂಭವೈಃ ॥೫೫॥

ಅಹರ್ನಿಶಂ ಕೃತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ।
ಪತ್ರೇಷು ಬಿಲ್ವಪತ್ರಂ ಸ್ಯಾತ್ಪುಷ್ಪೇ ನೀಲೋತ್ಪಲಂ ಪ್ರಿಯಂ ॥೫೬॥

---

ಉದ್ಯಾನಗಳನ್ನು ಶಿವನಿಗೋಸ್ಕರ ಸ್ಥಾಪಿಸುವವನ ಪುಣ್ಯಫಲವನ್ನು ಹೇಳುವೆನು ಕೇಳು; ದೇವಿ! ಅವನು ಸ್ಥಾಪಿಸಿರುವ ಹೂದೋಟದಲ್ಲಿರುವ ವೃಕ್ಷಾದಿಗಳ ಹೂವು, ಬೀಜ, ಬೇರು ಮತ್ತು ಹಣ್ಣು ಇವುಗಳ ಸಾವಿರದಷ್ಟುವರ್ಷಗಳು ರುದ್ರಲೋಕದಲ್ಲಿ ಪೂಜಿತನಾಗುತ್ತಾನೆ. ॥೫೧-೫೨-೫೩॥

ಬಿಲ್ವದಳಗಳಿಗೆ ಮಾತ್ರ ತುಂಡಾಗಿರುವುದು, ಕಲುಷಿತವಾಗಿರುವುದು ಮುಂತಾದ ಯಾವ ದೋಷಗಳೂ ಸಲ್ಲಲಾರವು. ಶಿವಲಿಂಗದ ತಲೆಯಮೇಲೆ ಬಿಲ್ವದಳಗಳ ಚೂರನ್ನಾದರೂ ಹಾಕಿ ಪೂಜಿಸಬಹುದು. ಬಿಲ್ವದಳವಿಲ್ಲದೆ ಶಿವಲಿಂಗ ವನ್ನು ಪೂಜಿಸಲೇಬಾರದು. ಒಂದುವೇಳೆ ಪೂಜೆಮಾಡುವುದಾದರೆ ಯಾವುದನ್ನು ಉಪಯೋಗಿಸಿದರೂ ಅದಕ್ಕೆ ಆ ಬಿಲ್ವದಹೆಸರನ್ನೇ ಹೇಳಬೇಕು. ಬಿಲ್ವದಳಗಳು ದೊರೆಯದಿದ್ದರೆ ಉತ್ತರಣೆ, ಅಥವಾ ದರ್ಭೆಯ ಚೂರುಗಳಿಂದಾದರೂ ಪೂಜೆ ಮಾಡಬೇಕು. ಈ ಪೂಜೆಯಿಂದ ಮಾನವನು ಹಗಲಿರುಳೂ ಮಾಡಿದ ಸಕಲ ಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂಶಯವೇ ಇಲ್ಲ. ॥೫೪-೫೫॥

ಎಲೌ ಪರಮೇಶ್ವರಿಯೆ! ನನಗೆ ಪತ್ರೆಗಳಲ್ಲೆಲ್ಲಾ ಬಿಲ್ವಪತ್ರೆಯೂ ಹೂಗಳ ಲ್ಲೆಲ್ಲಾ ಕನ್ನೈದಿಲೆಯೂ ಪ್ರಿಯಕರಗಳು. ಅಲ್ಲದೆ ಆಯಾ ಕಾಲದಲ್ಲಿ ಲಭಿಸುವ ಇತರ ಎಲ್ಲ ಹೂಗಳೂ ಪ್ರಿಯಕರಗಳೆ. ಜಾಜಿಹೂವು ಒಂದು ಜಾವ ಕಾಲಮಾತ್ರ

ತತ್ತತ್ಕಾಲಭವಂ ಜಾನ್ಯತ್ಪ್ರಿಯಂ ನೇ ಪರಮೇಶ್ವರಿ ।
ಪ್ರಹರಂ ತಿಷ್ಠತೇ ಜಾಜೀ ಕರವೀರಮಹರ್ನಿಶಂ ॥೫೭॥

ತುಲಸ್ಯಾಂ ಬಿಲ್ವಪತ್ರೇಷು ಸರ್ವೇಷು ಜಲಜೇಷು ಚ ।
ನ ಪರ್ಯುಷಿತದೋಷೋಽಸ್ತಿ ಬಿಲ್ವಸ್ಯಾವರ್ಷಮೀಶ್ವರಿ ॥೫೮॥

ಪದ್ಮಂ ಪಂಚದಿನಾತ್ತ್ಯಾಜ್ಯಂ ಶೇಷಂ ಪರ್ಯುಷಿತಂ ದಿನಾತ್ ।
ಏಭಿರ್ಯಃ ಪುಷ್ಪಲಕ್ಷೈರ್ಮಾಂ ಸಮಭ್ಯರ್ಚ್ಯೈವ ಮುಕ್ತಿಭಾಕ್ ॥೫೯॥

ತಸ್ಯಾಹಂ ಮುಕ್ತಿದಂ ಜ್ಞಾನಂ ಪ್ರಯಚ್ಛಾಮ್ಯೇವಮೀಶ್ವರಿ ॥೬೦॥

ಬಿಲ್ವಾಪಾಮಾರ್ಗ ಜಾಜೀತುಲಸೀಶಮೀಬೃಹತ್ಯೇತಕೀಭೃಂಗದೂರ್ವಾ
ಮಂದಾಂಭೋಜಾಹಿ ದರ್ಭಾಮುನಿತಿಲತಗರಬ್ರಹ್ಮಕಲ್ಹಾರಮಲ್ಲೀ ।
ಪಂಚಾಪಸ್ಯಾರಾತಿಕುಂಭೀದಮನಮರುವಕಾಬಿಲ್ವತೋ ಹಾನಿಶಸ್ತಾ
ಏತತ್ಪರ್ಯುಷಿತಂ ನ ಚೈವ ಕಲಿತಂ ವೃತ್ತೈರ್ವಿಹೀನಂ ಶಿವೇ ॥೬೧॥

---

ನಿಲ್ಲುವುದು. ಕರವೀರಪುಷ್ಪವು ಹಗಲಿರುಳೂ ಅಂದರೆ ಒಂದುದಿನ ಪೂರ್ತಿ ನಿಲ್ಲುವುದು. ತುಲಸಿ, ಬಿಲ್ವದಳ, ಮತ್ತು ನೀರಿನಲ್ಲಿ ಹುಟ್ಟುವ ಕಮಲಾದಿಗಳಿಗೆ ಪರ್ಯುಷಿತ (ಹಳೆಯದೆಂಬ) ದೋಷವಿಲ್ಲ. ಬಿಲ್ವಪತ್ರೆಗೆ ಮಾತ್ರ ಪರ್ಯುಷಿತ ದೋಷವು ಒಂದು ವರ್ಷಕಾಲ ಇರುವುದಿಲ್ಲ. ಕಮಲವು ಐದುದಿನಗಳನಂತರ ತ್ಯಜಿಸಲು ಯೋಗ್ಯವಾಗುವುದು. ಉಳಿದ ಹೂಗಳೆಲ್ಲಾ ಪ್ರತಿದಿನವೂ ಪರ್ಯುಷಿತದೋಷಕ್ಕೊಳಗಾಗುವುವು. ಹಿಂದೆ ಹೇಳಿದ ಲಕ್ಷ ಸಂಖ್ಯೆಯ ಹೂಗಳಿಂದ ನನ್ನನ್ನು ಪೂಜೆಮಾಡಿದವನು ನಿತ್ಯಮುಕ್ತನಾಗುತ್ತಾನೆ. ನಾನು ಅವನಿಗೆ ಕೊನೆಗಾಲದಲ್ಲಿ ಮೋಕ್ಷಪ್ರದವಾದ ದಿವ್ಯಜ್ಞಾನವನ್ನುಪದೇಶಮಾಡುತ್ತೇನೆ. ॥೫೬-೫೭-೫೮-೫೯-೬೦॥

ಬಿಲ್ವ, ಅಪಾಮಾರ್ಗ, ಜಾಜಿ, ತುಲಸಿ, ಬನ್ನೀ, ಬೃಹತಿ, ತಾಳೆ, ಗರುಗದ ಹೂವು, ಗರಿಕೆ, ಮಂದಾರ, ಕಮಲ, ದರ್ಭೆ, ಎಳ್ಳುಹೂವು, ತಗರ, ಕಲ್ಹಾರ, ಮಲ್ಲಿಗೆ, ಈ ಹೆಸರಿನ ಎಲ್ಲ ಹೂವುಗಳೂ ನನಗೆ ಪ್ರಿಯಕರಗಳೇ ಆಗಿವೆ. ಆದರೆ ಗರುಗ, ಕುಂಭೀ, ದವನ, ಮರುಗ, ಬಿಲ್ವ ಈ ಐದು ಪತ್ರೆಗಳು ನನಗೆ ಬಹಳ ಪ್ರಿಯವಾದವುಗಳು. ಅವುಗಳಲ್ಲಿಯೂ ಬಿಲ್ವವು ಹೆಚ್ಚು ಪ್ರಿಯತಮವಾದುದು. ಈ ಐದು ಪತ್ರೆಗಳು ಒಣಗಿದರೂ, ಹಳೆಯದಾಗಿದ್ದರೂ ಶಿವಪೂಜೆಗೆ ಶ್ರೇಷ್ಠವಾದವು

ದುರ್ಗಂಧಾದ್ಯುಪಹಂತಿ ಕೇತಕಮಹಾಪದ್ಮಾದಿನಾರ್ಚ್ಯೇ ಶಿವೇ
ಛಿತ್ವಾ ನೈವ ನಿಪಾತಯೇತ್ಸುಮಮುಮೇ ಸಂಪೂರ್ಣಮೇವಾರ್ಚಯೇತ್ ।
ಸೌವರ್ಣೇಷು ಚ ರತ್ನಗರ್ಭಕಲಿತೈರ್ನೋಪರ್ಯುಷಿತತ್ವೇ ವಿಧಿಃ
ಸ್ವಾರಾಮೋದ್ಭವಮೇವ ಪುಷ್ಪಮಗಜೇ ಮತ್ಪೂಜನಾರ್ಹಂ ಭವೇತ್ ॥೬೨॥

ನೋ ಶೂದ್ರಕ್ರಯಲಬ್ಧಮಾಹೃತಮಥೋ ಯಾತ್ಯೇವ ತತ್ಪೂಜನಾ-
ದ್ಭೂಮೌ ವಾ ಪತಿತೈರಪಿ ಸ್ಪೃಶತಿ ಚೇತ್ಸ್ನಾನಾದ್ವಿಹೀನೋ ನರಃ ।
ಪುಷ್ಪೇಷ್ವೇಷಮಯಂ ವಿಧಿರ್ಭವತಿ ಮೇ ನೋ ಬಿಲ್ವಪತ್ರೋತ್ತಮೇ ।೬೩॥

ಶುಕಾಖ್ಯಪತ್ರಂ ಚ ಕಪಿತ್ಥಪತ್ರಂ
ನಿರ್ಗುಂಡಿಕಾವಾರಣಬಿಲ್ವಪತ್ರಂ ।

---

ಗಳೇ. ಇವುಗಳ ಮೊಗ್ಗುಗಳು ಮಾತ್ರ ಪೂಜಾಯೋಗ್ಯಗಳಲ್ಲ. ಅರಳಿದ ಹೂವು ಗಳನ್ನು ಪೂಜಿಸಬಹುದು. ॥೬೧॥

ತಾಳೆ, ದೊಡ್ಡತಾವರೆ ಮುಂತಾದ ಹೂಗಳಿಂದ ಶಿವನನ್ನು ಪೂಜಿಸುವುದಾದರೆ ಇತರ ವಸ್ತುಗಳ ದುರ್ವಾಸನೆಯನ್ನು ಶಿವನ ಸಮೀಪದಲ್ಲಿ ಹೋಗಲಾಡಿಸಬಹುದು. ಆದರೆ ಹೂವಿನ ದಳಗಳನ್ನು ಬಿಡಿಸಿ ಬರೀ ಎಸಳುಗಳನ್ನೇ ಪೂಜಿಸಲಾಗದು. ಪೂರ್ಣವಾಗಿಯೇ ಆ ಪುಷ್ಪವನ್ನು ಶಿವನಿಗೆ ಅರ್ಪಿಸಬೇಕು. ರತ್ನಗರ್ಭಗಳುಳ್ಳ ಸುವರ್ಣಪುಷ್ಪಗಳಲ್ಲಿ ಹಳೆಯದೆಂಬ ದೋಷವಿರುವುದಿಲ್ಲ. ಎಲೌ ಗಿರಿರಾಜಪುತ್ರಿಯೇ, ಯಾವಾಗಲೂ ತನ್ನ ಸ್ವಂತ ಹೂದೋಟದಲ್ಲಿ ಬೆಳೆದ ಪುಷ್ಪವೇ ನನ್ನ ಪೂಜೆಗೆ ಅರ್ಹವಾಗುತ್ತದೆಂದು ತಿಳಿ. ॥೬೨॥

ಶೂದ್ರನಿಂದ ಕ್ರಯಕ್ಕೆ ತೆಗೆದುಕೊಂಡದ್ದು ಅಥವಾ ಕದ್ದುತಂದ ಹೂಗಳನ್ನು ನನ್ನ ಪೂಜೆಗೆ ಉಪಯೋಗಿಸುವುದರಿಂದ ಅವನು ನರಕವನ್ನೈದುವನು. ಸ್ನಾನ ಮಾಡದೆ ಇರುವ ಮಾನವನು ನೆಲದಮೇಲೆ ಬಿದ್ದಿರುವ ಹೂಗಳನ್ನು ಪೂಜಿಸಿದರೆ ಪತಿತನಾಗುವನು. ಪಾರ್ವತಿಯೇ, ಹೂಗಳಲ್ಲಿ ನನ್ನ ಪೂಜೆಗೆ ಈ ವಿಧಿಯೇರ್ಪಟ್ಟಿರುವುದು. ಇದರೆ ಉತ್ತಮವಾದ ಬಿಲ್ವಪತ್ರೆಗೆ ಮಾತ್ರ ಈ ವಿಧಿಯು ಅನ್ವಯಿಸುವುದಿಲ್ಲ. ॥೬೩॥

ಶಿವೆ ! ಶುಕಪತ್ರೆ, ಕಪಿತ್ಥಪತ್ರೆ (ಬೇಲದ ಎಲೆ) ನಿರ್ಗುಂಡಿಕಾಪತ್ರೆ, ವಾರಣಪತ್ರೆ ಮತ್ತು ಬಿಲ್ವಪತ್ರೆಗಳೆಂದು ಐದುಪತ್ರೆಗಳೇ ನನ್ನಪೂಜೆಗೆ ಪ್ರಶಸ್ತವಾದವುಗಳು,

ಪಂಚೈವ ಬಿಲ್ವಾನಿ ಮಮೇಶಿಪೂಜನೇ
ಪ್ರಶಸ್ತರೂಪಂ ಪ್ರಿಯಮೇವ ಬಿಲ್ವಂ ॥೬೪॥

ವಸುಧಾರಾಧಿಪಮಿತ್ರಪಾದಪೂಜಾ
ವಸುಧಾಧ್ವಗ್ವರಹಾರಪಾದಸಾರಾಃ ।
ಸಕೃದಾರಗ್ವಧಪುಷ್ಪತೋಽರ್ಚ್ಯಲಿಂಗೇ
ಸಕಲಪ್ರಾಣಿವಧೋತ್ಥಪಾಪಮುಕ್ತಃ ॥೬೫॥

ಗೌರೀವಲ್ಲಭಲಿಂಗಪೂಜನರತೋ ಮಲ್ಲೀಭಿರೇವಾದರಾ-
ನ್ಮಲ್ಲೀಭಿರ್ನಿಯಮೇನ ಮಲ್ಲಯರತೋ ಗಲ್ಲಸ್ಯವಾದ್ಯಂ ಚರನ್ ।
ಹಲ್ಲೀಲಾಸ್ಯಲಯಾನುಗೇ ಮಮ ಕೃಪಾವಲ್ಲೀಪ್ರರೋಹಂ ಗತಾ
ತಸ್ಮಿನ್ನೇವ ಸಮುಲ್ಲಸತ್ಯನುದಿನಂ ಸಲ್ಲಾಪತಸ್ತಸ್ಯ ಹಿ ॥೬೬॥

ಶಮ್ಯಾಕಬಂಧೂಕಮಧೂಕಕಿಂಶುಕೈ-
ರ್ಧತ್ತೂರಕಾರ್ಕೈಶ್ಚ ಬಕೈಃ ಸಮರ್ಚ್ಯ ।

---

ದೇವಿ! ಆದರಲ್ಲಿಯೂ ಬಿಲ್ವಪತ್ರೆಯು ನನ್ನ ಪೂಜೆಗೆ ಅತಿಪ್ರಶಸ್ತನೆನಿಸಿರುವುದು. ॥೬೪॥

ಸಮಸ್ತನಿಧಿಗೂ ಅಧಿಪತಿಯಾದ, ಕುಬೇರನ ಪರಮಮಿತ್ರನಾದ, ಪರಶಿವನ ಪಾದಪೂಜಾನಿರತನಾದ ಆದಿಶೇಷನನ್ನೇ ಆಭರಣವನ್ನಾಗಿ ಉಳ್ಳ ನನ್ನ ಪೂಜ್ಯ ಲಿಂಗವನ್ನು ಒಂದುಸಲ ಕಕ್ಕೆಹೂಗಳಿಂದ ಪೂಜಿಸಿದವನೂ ಸಕಲಪ್ರಾಣಿಗಳನ್ನು ವಧೆಮಾಡಿದ ಪಾಪಗಳಿಂದ ಬಿಡುಗಡೆಹೊಂದುವನು. ॥೬೫॥

ಪಾರ್ವತಿಯೇ, ಮಲ್ಲಿಗೆ ಹೂಗಳಿಂದ ಭಕ್ತಿಪೂರ್ವಕವಾಗಿ ಶಿವಲಿಂಗಪೂಜೆಯನ್ನು ಮಾಡುತ್ತಾ, ಗಲ್ಲೆಂದು ಧ್ವನಿಗೈಯುವ ವಾದ್ಯವನ್ನು ಬಾರಿಸುತ್ತಾ ನಿಯಮದಿಂದ ನನ್ನಲ್ಲೆ ಲಯವಿಟ್ಟು, ಹಲ್ಲೀಸನಾಟ್ಯ ಮತ್ತು ಲಯವನ್ನು ಅನುಸರಿಸುವವನಲ್ಲಿ ನನ್ನ ದಯಾಲತೆಯು ಅಂಕುರಿತವಾಗಿ, ಅವನ ಸಂಭಾಷಣೆಯಿಂದ ಪ್ರತಿದಿನವೂ ಅವನಲ್ಲಿಯೇ ಅರಳುತ್ತಾ ಫಲಕೊಡುತ್ತಿರುವುದು. ॥೬೬॥

ಕಕ್ಕೆ, ಬಿಂದಿಗೆ, ಹಿಪ್ಪೆ, ಮುತ್ತುಗ, ದತ್ತೂರ, ಎಕ್ಕ ಮತ್ತು ಬಕಪುಷ್ಪಗಳಿಂದ ನನ್ನನ್ನು ಪೂಜೆಮಾಡುವ ಮಾನವನು ಭೂಲೋಕದಲ್ಲಿ ಸ್ವಲ್ಪವೂ

ನ ಶೋಕಶೂಲಂ ಲಭತೇ ಮನುಷ್ಯೋ-
ಽಪ್ಯಶೇಷಸೌಖ್ಯಂ ಲಭತೇ ಧರಾಯಾಂ ॥೬೭॥

ಗರ್ಜಂತಿ ಪಾಪಾನಿ ಕಿಲಾದ್ರಿಕನ್ಯೇ
ಮನ್ಯೇಽರ್ಜುನೀಸುಮಗಣೈರ್ಮಮ ಪೂಜಕಶ್ಚೇತ್ ।
ತರ್ಜೇತ್ಸರ್ವಯಮಭಟೌಘಕುಲಾನಿ ತಸ್ಯ
ಭರ್ಜಂತಿ ಫಾಲಫಲಕೇ ಕಲಿತಾಕ್ಷರಾಣಿ ॥೬೮॥

ಕಃ ಶೋಕಶಂಕಾವಸರೋ ಭವಾನಿ
ಅಶೋಕಕಾಶಾರ್ಚನ ವಂಶಕೋಟೌ ।
ಪರಾಕಕೃಚ್ಛ್ರಾಚರಣಾದಪೀಷ್ಟಂ
ವರಾಕಕಸ್ಯಾಪಿ ವಿಶೋಧ್ಯಮಂಹಸಾಂ ॥೬೯॥

ಬಕುಲಾರ್ಚನತೋ ನ ಚಾಕುಲೋ
ಭವತೇ ಹೀನಕುಲೋಽಪಿ ಲಿಂಗಮೌಲಾ ।

---

ದುಃಖವನ್ನೂ ಹೊಂದದೆ ಪರಲೋಕದಲ್ಲಿ ಅಪರಿಮಿತಸೌಖ್ಯವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ. ॥೬೭॥

ಎಲೌ ಪಾರ್ವತಿಯೇ, ಮತ್ತೀಮರದ ಪುಷ್ಪಸಮೂಹಗಳಿಂದ ನನ್ನನ್ನು ಪೂಜೆಮಾಡುವವನಿಗೆ ಸಮಸ್ತಪಾಪಗಳೂ ಬೆದರುವುವೆಂದು ತಿಳಿಯುವೆನು. ಅವನಿಗೆ ಸಕಲ ಯಮದೂತರಗುಂಪೂ ಭಯಪಡುವುದಲ್ಲದೇ ಅವನ ದುಷ್ಟವಾದ ಹಣೆಯಬರೆಹವೂ ಬದಲಾಯಿಸುವುದು. ಆ ಎಲ್ಲವೂ ಆತನಿಗೆ ಶುಭವಾಗಿಯೇ ಪರಿಣತವಾಗುವುದು. ॥೬೮॥

ಅಶೋಕ ಮತ್ತು ಕಾಶಪುಷ್ಪಗಳಸಮೂಹದಿಂದ ನನ್ನನ್ನು ಅರ್ಚನೆಮಾಡುವವನ ವಂಶಕೋಟಿಯಲ್ಲಿ ಶೋಕಕ್ಕೆ ಆಸ್ಪದವೇ ಉಂಟಾಗಲಾರದು. ಕೃಚ್ಛ್ರ ಚಾಂದ್ರಾಯಣಾದಿ ವ್ರತನಿಯಮಗಳಿಂದುಂಟಾಗುವ ಫಲಕ್ಕಿಂತಲೂ ಮಿಗಿಲಾದ ಫಲವುಂಟಾಗುವುದಲ್ಲದೆ ಅವನಿಗೆ ಪಾಪಪರಿಶುದ್ಧಿಯೂ ಒದಗಿ ಎಂತಹ ಅಲ್ಪನಾದರೂ ಅವನು ಮಹಾಮಹಿಮನೆನಿಸುವನು. ॥೬೯॥

ನೀಚಕುಲದಲ್ಲಿ ಹುಟ್ಟಿದವನಾದರೂ ಶಿವಲಿಂಗಮೌಲಿಯಲ್ಲಿ ಒಂದು ಬಕುಲ ಪುಷ್ಪವನ್ನು ಪೂಜಿಸುವುದರಿಂದ ಅವನು ಉತ್ತಮವರ್ಣದವನಂತಾಗುವುದು.

ಸ ಹಿ ಕಾಲಾನಲಜಾಲಘಾಲಮೂಲಂ
न हि पश्येत्कलशैलकन्यके ॥೭೦॥

ಪಾರಿಭದ್ರಸುಮಪೂಜಯಾ ಶಿವೇ
ವೀರಭದ್ರಗಣಪೋ ಮಮ ಲೀಲಃ ।
ಭದ್ರಮೇವ ಲಭತೇ ಜಿತತಂದ್ರೋ
ರುದ್ರಏವ ಸ ಭವೇನ್ನ ದರಿದ್ರಃ ॥೭೧॥

ಶಿವೇ ಮರುಬಕೈರ್ಬಕೈರ್ದಮನಕೈಶ್ಚ ಸಚ್ಚಂಪಕೈಃ ।
ತಥಾ ಕುರುಬಕೈರ್ಧನ್ಯೈಃ ಕನಕನಾಗಪುನ್ನಾಗಕೈಃ ॥೭೨॥

ಸಮರ್ಚ್ಯ ಶಿವಮಂಹಸಾಂ ಪ್ರವರರಾಶಿಪಾರಂಗತೋ-
ಪ್ಯರೌ ಹರಹರೇ ಕಮಪ್ಯತುಲತುಂಗಲಿಂಗೇ ಮಮ ॥೭೩॥

ಕದಲೀಫಲಪುಷ್ಪಪೂಜಯಾ
ದಲಿತಾನ್ಯೇವ ಭವಂತಿ ಪಾತಕಾನಿ ।

---

ಎಲೌ ಗಿರಿರಾಜಕುಮಾರಿಯೆ! ಅವನು ಜಾತಿರಹಿತನಾದ ಯೋಗಿಯಂತಾಗಿ ಕಾಲ ಮೃತ್ಯುವಿನ ದರ್ಶನವನ್ನೇ ಕಾಣಲಾರನು. ॥೭೦॥

ಭಕ್ತಿಪೂರ್ವಕವಾಗಿ ದೇವದಾರುಕುಸುಮದಿಂದ ನನ್ನನ್ನು ಪೂಜಿಸುವವನು ನನ್ನ ಲೀಲಾರೂಪಿಯಾದ ವೀರಭದ್ರನೆಂಬ ಗಣಾಧಿಪನಾಗುವನು. ಜಿತೇಂದ್ರಿಯನಾದ ಈತನು ಸದಾ ಸಕಲ ಮಂಗಳವನ್ನೇ ಪಡೆಯುತ್ತಾ, ಬಡತನಕ್ಕೆ ಸಿಲುಕದೆ ಕೊನೆಗೆ ಸಾಕ್ಷಾದ್ರುದ್ರನೇ ಆಗುವನು, ಎಂಬುದರಲ್ಲಿ ಸಂಶಯವಿಲ್ಲ. ॥೭೧॥

ಪಾರ್ವತಿಯೇ, ಮರುಗ, ಬಕಪುಷ್ಪ, ದವನ, ಸಂಪಿಗೆ, ಕೋಳಿಯುಗೋರಂಟಿ ಹೂ, ಸ್ವರ್ಣಪುಷ್ಪ, ನಾಗಸಂಪಿಗೆ, ಪುನ್ನಾಗ, ಈ ಹೂಗಳಿಂದ ಶಿವನ ಒಂದು ಲಿಂಗವನ್ನು ಪೂಜಿಸಿದವರು ಅತ್ಯುತ್ಕಟವಾದ ಪಾಪರಾಶಿಯ ತುದಿಯನ್ನೇ ಮುಟ್ಟಿದ್ದರೂ, ಆ ನನ್ನ ಲಿಂಗಪೂಜೆಯು ಅದೆಲ್ಲವನ್ನೂ ಹೊಡೆದೋಡಿಸುವುದು. ಶಿವನಾಮ ಸ್ಮರಣೆಯಿಂದ ಆ ಪುಷ್ಪಾರ್ಚನೆ ನಡೆಸಿದವರು ಅನಂತಸುಖಭಾಗಿಗಳಾಗುವುದರಲ್ಲಿ ಸಂಶಯವಿಲ್ಲ. ॥೭೨-೭೩॥

ಬಾಳೆಯಹೂವು ಮತ್ತು ಹಣ್ಣುಗಳನ್ನು ವಿಶೇಷವಾಗಿಪೂಜೆಮಾಡುವುದರಿಂದ ಮಾನವರ ಪಾಪಗಳೆಲ್ಲವೂ ಧ್ವಂಸವಾಗಿಹೋಗುವುವು. ಅದೂಅಲ್ಲದೆ ಜನ್ಮಾಂತರಾ

ದಲಿತಾನ್ಯಥ ತಸ್ಯ ದುಃಖಜಾಲಾ-
ನ್ಯಮಿತಾನ್ಯಪ್ಯಥ ಸತ್ಯಮೇವ ಗೌರಿ ॥೭೪॥

ಧ್ರುವಂ ಲೋಧ್ರೈರ್ವರ್ಧ್ರೈರ್ಧ್ರುವಶತಜಕಾಲೇಽಪ್ಯಚಲಿತೋ
ಽಚಲೇ ಮೇ ಶೈಲಾಜ್ಞೇ ಶಿವಶಿರಸಿ ಪುಷ್ಪಾರ್ಚಕವರಃ ।
ತಥಾ ಜಂಬೂನಿಂಬಪ್ರಭವಸುಮಸೇಫಾಲಿಕುಸುಮೈಃ
ಕುರಂಟೈರರ್ಚಾಮೇ ಭವತಿ ಕುಟಜೈರಪ್ಯತುಲಿತಾ ॥೭೫॥

ಕುಶಕಾಶಸುಮಾರ್ಚಕೋ ಯದಿ ಸ್ಯಾ-
ನ್ಮಯಿ ಭಕ್ತೋಽಂಬರಕೇಶಲಿಂಗೇ ।
ಯಮಪಾಶಕಶಾಭಿಘಾತದುಃಖಂ
ನ ಭವೇಜ್ಜಾತು ಕದಾಚಿದಸ್ಯ ಗೌರಿ ॥೭೬॥

ಭೂತಾಸ್ವಪಾಮಾರ್ಗದಲೈಃ ಸಮರ್ಚ್ಯ
ಲಿಂಗಂ ಮಮಾಂಗಂ ವಿಶತೇ ಸ ಧನ್ಯಃ ।

---

ರ್ಜಿತವಾದ ಅಪರಿಮಿತವಾದ ಅವನ ದುಃಖರಾಶಿಗಳೂ ಸಹ ಸತ್ಯವಾಗಿಯೂ ಕಳೆದು ಹೋಗುವುವು. ಇದು ನಿಜವೆಂದುತಿಳಿ. ॥೭೪॥

ಎಲೌ ದೇವಿಯೇ, ಕಂಚುವಾಳ, ಹಿಪ್ಪೆಹೂವು ಇವುಗಳನ್ನು ಶಿವಲಿಂಗಗಳಿಗೆ ಪೂಜೆಮಾಡುವವನು ನನ್ನ ಕೈಲಾಸಪರ್ವತದಲ್ಲಿ ಶಾಶ್ವತವಾದ ಧ್ರುವಪಟ್ಟದಷ್ಟು ಕಾಲಗಳಲ್ಲಿಯೂ ಸಹ ವಿಚಲಿತನಾಗುವುದಿಲ್ಲ. ಹಾಗೆಯೇ ನೇರಳೆ, ಬೇವು, ಸೇಫಾಲಿಕಾ, ಗೋರಂಟೆ, ಮತ್ತು ಗಿಡಮಲ್ಲಿಗೆ ಹೂಗಳಿಂದಲೂ ಸಹ ನನ್ನ ಪೂಜೆಯು ಅಪರಿಮಿತಫಲದಾಯಕವಾಗಿರುವುದು. ॥೭೫॥

ವ್ಯೋಮಕೇಶನೆನಿಸಿದ ನನ್ನ ಶಿವಲಿಂಗಕ್ಕೆ ಕುಶ ಮತ್ತು ಕಾಶಪುಷ್ಪಗಳಿಂದ ಪೂಜೆಮಾಡುವ ನನ್ನ ಭಕ್ತನಿಗೆ ಯಮನಪಾಶವೆಂಬ ಚಾವಟಿಯ ಹೊಡೆತದಿಂ ದುಂಟಾಗಬಹುದಾದ ದುಃಖವು ಎಂದೆಂದಿಗೂ ಸಂಭವಿಸಲಾರದು. ಯಮನ ಭಯವನ್ನೇ ತಪ್ಪಿಸುವ ಪೂಜಾಕ್ರಮವಿದು. ॥೭೬॥

ಚತುರ್ದಶೀ ತಿಥಿಗಳಲ್ಲಿ ಉತ್ತರಣೆಯ ದಳಗಳಿಂದ ನನ್ನ ಶಿವಲಿಂಗವನ್ನು ಪೂಜಿಸಿದವನು ಧನ್ಯನೆನಿಸಿ ನನ್ನ ಸಾಯುಜ್ಯವನ್ನು ಪಡೆಯುವನು. ಪಾರ್ವತಿಯೇ,

ಕನಿಷ್ಠಜನ್ಮಾಪಿ ಸಗರ್ಭದುಃಖಂ
ನೈವಾಪ್ನುಯಾಜ್ಞಾತು ಸುದರ್ಭತೋಽರ್ಚ್ಯ ||೭೭||

ಜಿತ್ವೈನಂ ಮದಸೌರಭ್ಯೈರಸಮಬಿಲ್ವಪುಷ್ಪೈರ್ದಲೈಃ
ಸುಸೌರಭಸುಮ್ನೈಃ ಶಿವೇ ನವವಸಂತಕಾಲೋತ್ಥಿತೈಃ ।
ಮಮೇಷ್ಟಜನಿಮರ್ಚನಂ ಯದಿ ಭವೇತ ಭಾಗ್ಯಾನ್ನಿಶಾ
ಸು ವರಕೇತಕೀಕುಸುಮಪೂಜಕೋ ಧನ್ಯಧೀಃ ||೭೮||

ಯಃ ಪುಂಡರೀಕಕುಸುಮೈರ್ನವಚಂದ್ರಖಂಡ
ಲೀಲಾಲಕಾಕಲಿತಲಿಂಗಸುಪೂಜಕಶ್ಚೇತ್ ।
ಆಖಂಡಲಾದಿಸುರವಂದಿತಪಾದಪೀಠ
ಶ್ಚಂಡಾಂಶುಜಾತವದನಂ ನ ಸ ಜಾತು ಪಶ್ಯೇತ್ ||೭೯||

ಕಮಲೈರಮಲೈರ್ಮಹೇಶಲಿಂಗಂ
ಶತಪತ್ರೈಃ ಶತಪತ್ರಮಿತ್ರನೇತ್ರಂ ।

---

ಹಾಗೆಯೇ ಉತ್ತಮವಾದ ದರ್ಭೆಗಳಿಂದ ನನ್ನನ್ನರ್ಚನೆಮಾಡಿದವನು ಎಂದೆಂದಿಗೂ ಗರ್ಭವಾಸದುಃಖವನ್ನು ಪಡೆಯದೆ ತಾನು ಜಾತಿಯಲ್ಲಿ ಕನಿಷ್ಠವರ್ಣದವನಾದರೂ ಅನಾಯಾಸವಾಗಿ ಮುಕ್ತನಾಗುವನು. ||೭೭||

ಕೋಮಲವಾಗಿ ಬೆಳೆದು ಸುವಾಸಿತಗಳಾಗಿ ಅಸದೃಶಗಳಾಗಿರುವ ಬಿಲ್ವದಳ ಮತ್ತು ಅದರ ಹೂಗಳು ಮತ್ತು ಅತಿಸುಗಂಧಮಯವಾದ ವಸಂತಋತುವಿನ ಹೊಸ ಹೊಸ ಕುಸುಮಗಳಿಂದ ನನ್ನ ಶಿವಲಿಂಗವನ್ನು ಪೂಜೆಮಾಡುವುದು ಕೇವಲ ಭಾಗ್ಯ ದಿಂದ ಮಾತ್ರ ಲಭ್ಯವಾಗತಕ್ಕದ್ದು. ರಾತ್ರಿವೇಳೆಗಳಲ್ಲಿ ಶ್ರೇಷ್ಠವಾದ ಕೇದಿಗೆ ಹೂ ಗಳನ್ನು ಶಿವಲಿಂಗಕ್ಕೆ ಅರ್ಚನೆಮಾಡುವವನು ಧನ್ಯಾತ್ಮನು. ||೭೮||

ಬಿಳುಪಾದ ತಾವರೆ ಹೂಗಳಿಂದ ಚಂದ್ರಶೇಖರನ ಶಿವಲಿಂಗವನ್ನು ಪೂಜೆ ಮಾಡುವುದಾದರೆ ಆತನು ದೇವೇಂದ್ರನೇ ಮೊದಲಾದ ದೇವತೆಗಳಿಂದ ನಮಸ್ಕರಿಸ ಲ್ಪಟ್ಟ ಪಾದಪೀಠವುಳ್ಳವನಾಗಿ ಯಮನ ಮುಖವನ್ನೇ ಎಂದಿಗೂ ನೋಡು ವುದಿಲ್ಲ. ||೭೯||

ನಿರ್ಮಲವಾದ ಕೆಂಪು ಕಮಲಗಳಿಂದ ಮಹೇಶನ ಶಿವಲಿಂಗವನ್ನೂ, ಶತ ಪತ್ರಗಳಿಂದ (ನೂರು ದಳಗಳುಳ್ಳ ಕಮಲಗಳಿಂದ) ಸೂರ್ಯಚಂದ್ರರನ್ನೇ ನೇತ್ರ

ಪರಿಪೂಜ್ಯ ಲಭೇತ ಕಲತ್ರಪುತ್ರಂ
ಮಖಸತ್ರಾದಧಿಕಾಂತಪುಣ್ಯವೃದ್ಧಿಃ ॥೪೦॥

ಬಿಂಬಾಭದಾಡಿಂಬಕದಂಬಪುಷ್ಪೈ
ರಂಬಾಪತೇಃ ಪ್ರಿಯತಮೋತ್ತಮಚಾರುಲಿಂಗಂ ।
ವೃಂದಾರಬೃಂದೋತ್ತಮಮೌಲಿವಂದ್ಯೋ
ಬಂಧಾದ್ವಿಮುಕ್ತಿಮಘಗಂಧಮಮೋ ಲಭೇನ್ನ ॥೪೧॥

ಅತಸೀತುಲಸೀಭಿರೀಶಲಿಂಗಂ
ಕುಮುದ್ಯೈರಪ್ಯಮುದ್ಯೈರ್ಮುದಾ ಭವಾನಿ ।
ಸಕೃದೀಶ್ವರಿ ಪೂಜ್ಯವನ್ಯಪುಷ್ಪೈ
ರ್ಯದಿ ಸಾಮಾನ್ಯನರೋಽಭವೇತ್ಸ ಧನ್ಯಃ ॥೪೨॥

ಅರ್ಕದ್ವಯಂ ಚ ಕರವೀರಮುನೀಂದ್ರಪುಷ್ಪೈ
ರ್ಧಾತ್ರೀಪವಿತ್ರಕುಸುಮೈರ್ವರಜಾತಿಕಾಭಿಃ ।

---

ವನ್ನಾಗಿ ಉಳ್ಳ ಶಂಕರನನ್ನು ಪೂಜಿಸಿದವನು ಪತ್ನೀಪುತ್ರರನ್ನೂ ಪಡೆಯುವುದಲ್ಲದೆ ಯಜ್ಞಯಾಗಾದಿಗಳಿಗಿಂತಲೂ ಹೆಚ್ಚಾದ ಪುಣ್ಯವೃದ್ಧಿಯನ್ನೂ ಪಡೆಯುತ್ತಾನೆ.॥೪೦॥

ತೊಂಡೆಯ ಹಣ್ಣಿನಂತೆ ಕಾಂತಿಯುಳ್ಳ, ದಾಳಿಂಬೆ ಮತ್ತು ಕದಂಬಕುಸುಮಗಳಿಂದ ಅಂಬಿಕಾರಮಣನಿಗೆ ಪ್ರೀತಿಕರವಾದ ಉತ್ತಮ ದಿವ್ಯಲಿಂಗವನ್ನು ಪೂಜೆ ಮಾಡುವವನು, ದೇವತೆಗಳ ಗುಂಪಿಗೆ ಶ್ರೇಷ್ಠರೆನಿಸಿದವರ ತಲೆಗಳಿಂದ ನಮಸ್ಕರಿಸಲ್ಪಡುತ್ತಾ ಈ ಸಂಸಾರಬಂಧನವನ್ನು ಳಿದು ಪಾಪದ ಗಂಧವನ್ನೇ ಪಡೆಯದೆ ಮುಕ್ತನಾಗುವನು. ॥೪೧॥

ಪಾರ್ವತಿಯೇ, ಎಳ್ಳಗಸೆ, ತುಲಸೀ, ಕನ್ನೈದಿಲೆ, ಈ ಕಾಡು ಹೂಗಳಿಂದ ಒಂದುಸಲ ಸಂತೋಷಪೂರ್ವಕವಾಗಿ ಪೂಜೆಮಾಡಿದ ಸಾಮಾನ್ಯಮನುಜನೂ ಧನ್ಯನೇ ಆಗುವನು. ಅವನಿಗೆ ಸಕಲವಿಧಗಳಾದ ಸೌಖ್ಯಗಳೂ ದೊರೆಯುವುವೆಂಬುದರಲ್ಲಿ ಸಂಶಯವಿಲ್ಲ. ॥೪೨॥

ಎರಡು ಎಕ್ಕದಹೂಗಳನ್ನೂ, ಏಳು ಕರವೀರಪುಷ್ಪಗಳನ್ನೂ, ಪವಿತ್ರಗಳಾದ ನೆಲ್ಲೀ, ಜಾಜಿ, ತುಂಬೇ, ನಂದಿ, ಕದಂಬ ಇವುಗಳನ್ನು ವಿಷಮಸಂಖ್ಯೆಯಲ್ಲಿಯೂ,

ದ್ರೋಣೈಶ್ಚ ಸಂದಿಕುಸುಮೈರಸಮೈಃ ಕದಂಬೈಃ
ಸೇವಂತಿಕಾತ್ರಯಮುಮೇ ಪರಿಪೂಜ್ಯ ಧನ್ಯಃ ॥೪೩॥

ಜಾತೇನ ಕಿಂ ತೇನ ನ ಪಾರಿಜಾತಃ
ಪೂಜಾಕರಂ ಯಸ್ಯ ನ ಮಾನಸಂ ಸ್ಯಾತ್ ।
ಮಂದೋಽಪಿ ಮಂದಾರಸುಪುಷ್ಪಪೂಜಯಾ
ವಾಚಸ್ಪತಿಂ ಧಿಕ್ಕುರುತೇ ಸಭಾಸು ॥೪೪॥

ಶಮೀಕುಸುಮಪೂಜಯಾ ಸುಮಶರೀರಲಿಂಗೇ ಶಿವೇ
ಶರಾರುರಿವ ನೀರಗೋಽಪ್ಯುರಗವೈರಿವೇಗಾತಿಗಃ ।
ಭವೌಘಚಿರಸಂಭೃತೈರಘವರಾಬ್ಧಿಮಧ್ಯಂ ಸರೋ
ನಿರಂತರಮನುಸ್ಮರೇಚ್ಛಮನಜಾತಭೀತ್ಯುಜ್ಝಿತಃ ॥೪೫॥

---

ಮತ್ತು ಮೂರು ಸೇವಂತಿಕಾಪುಷ್ಪಗಳನ್ನೂ ನನಗೆ ಭಕ್ತಿಯಿಂದ ಪೂಜೆಮಾಡಿದವನು ಧನ್ಯನೆನಿಸುತ್ತಾನೆ. ಮೇಲೆಹೇಳಿದ ಪುಷ್ಪಗಳು ನನಗೆ ವಿಶೇಷಪ್ರಿಯಕರಗಳು. ॥೪೩॥

ಯಾರಮನಸ್ಸು ಪಾರಿಜಾತಪುಷ್ಪವನ್ನು ಪರಶಿವನಿಗೆ ಅರ್ಪಿಸುವುದರಲ್ಲಿ ಪ್ರಯತ್ನಿಸುವುದಿಲ್ಲವೋ, ಅಂತಹವರು ಹುಟ್ಟಿದಮಾತ್ರದಿಂದ ಪ್ರಯೋಜನವೇನು ? ದೇವಿಯೇ, ಉತ್ತಮವಾದ ಪಾರಿಜಾತಪುಷ್ಪಗಳನ್ನು ಪೂಜೆಮಾಡುವುದರಿಂದ ಸ್ವಭಾವತಃ ದಡ್ಡನಾದರೂ ಅವನು ಸಭೆಗಳಲ್ಲಿ ಬೃಹಸ್ಪತಿಯನ್ನೂ ಧಿಕ್ಕಾರಮಾಡುವಂತಹ ಪಾಂಡಿತ್ಯವನ್ನು ಪಡೆಯುತ್ತಾನೆ. ॥೪೪॥

ಪುಷ್ಪಶರೀರರೂಪಿಯಾದ ಶಿವಲಿಂಗಕ್ಕೆ ಬನ್ನೀಹೂವನ್ನು ಪೂಜೆಮಾಡುವುದರಿಂದ ನೀರಿನಲ್ಲಿ ಅಡಗಿರುವ ಕ್ರೂರಪ್ರಾಣಿಯಂತೆ ಭೂಮಿಯಮೇಲೆ ಜೀವಿಸುವವನೂ ಸಹ ಗರುಡನವೇಗವನ್ನೂ ಮೀರುವಷ್ಟು ವೇಗಶಾಲಿಯಾಗಿ ಬಾಳುವನು. ಸಂಸಾರಜಾಲದಲ್ಲಿ ಬಹುಕಾಲದಿಂದ ಸಂಗ್ರಹಿಸಿರುವ ಮಹಾಪಾಪಗಳೆಂಬ ಸಮುದ್ರಮಧ್ಯದಲ್ಲಿರುವ ಮನುಜನು ಯಾವಾಗಲೂ ನನ್ನನ್ನು ಸ್ಮರಣೆಮಾಡುವುದಾದರೆ ಯಮನ ಭಯವಿಲ್ಲದವನಾಗಿ ಶಾಶ್ವತವಾದ ಮುಕ್ತಿಯನ್ನು ಪಡೆಯುವನು. ॥೪೫॥

ಸರ್ವಾವರ್ಣಮೇಧಶತಕಾದಪಿ ದೂರ್ವಯಾಚ್ಯಾ
ಶರ್ವಂ ಲಭತಿ ಪುಣ್ಯಫಲಂ ಚ ಸರ್ವಂ ।
ಸರ್ವೋರ್ವರಾವಿಧಿಜದಾನಕೃತಾಂ ಚ ಲೋಕಂ
ಕಾಲಸ್ಯ ಗರ್ವಮುಪನೀಯ ನಿಸರ್ಗ ಏಷಃ ॥೮೬॥

ಸೌವರ್ಣವರ್ಣಸುಮದಿವ್ಯಸುಕರ್ಣಿಕಾರೈಃ
ಸಂಪೂಜ್ಯ ಲಿಂಗಮಗಜೇ ಸಕಲೋಽಪಿ ವರ್ಣಃ ।
ಪರ್ವಣ್ಯಪಿ ಪ್ರಥಿತದೋಷಹರಂ ಪ್ರದೋಷೇ
ಅಪರ್ಣಾಪತೇಃ ಪ್ರಿಯತರೋ ಗಣಪಃ ಸ ತೂರ್ಣಂ ॥೮೭॥

ಸಿತಾಽಸಿತಸುಪಾಟಲೀ ಪಟಲಪುಷ್ಪಸಂಪೂಜಯಾ
ಸ ಪಾಟಯತಿ ಪಾತಕದ್ರುಮವನಂ ಕಟೇ ಮೇ ಶಿವೇ ।
ಸ ಸಂಕಟಕುಲಂ ಸದಾ ನ ಹಿ ಸ ಜಾತು ಪಶ್ಯೇನ್ನರಃ
ಸಕಂಟಕಚಯಂ ಶಿವೇ ಯಮಭಟೋರುದಂಡಾಹತಃ ॥೮೮॥

---

ವಿಧಿವತ್ತಾಗಿನಡೆಸಿದ ಸಂಪೂರ್ಣವಾದ ನೂರು ಅಶ್ವಮೇಧಯಾಗಗಳಿಂದ ಬರುವ ಪುಣ್ಯಫಲಕ್ಕಿಂತಲೂ ಗರಿಕೆಯಿಂದ ಶಿವಲಿಂಗಪೂಜೆಮಾಡುವುದರಿಂದ ಮಿಗಿಲಾದ ಪುಣ್ಯಪ್ರಾಪ್ತಿಯಾಗುವುದು. ಆದರಫಲವಾಗಿ ಸಕಲಭೂಮಂಡಲವನ್ನೂ ವಿಧಿಪೂರ್ವಕವಾಗಿ ದಾನಮಾಡುವುದರಿಂದ ಪಡೆಯಬಹುದಾದ ಪುಣ್ಯವು ಲಬ್ಧವಾಗಿ ಯಮನ ಗರ್ವವನ್ನು ಅಡಗಿಸಿ ಅವನು ನಿತ್ಯಮುಕ್ತನಾಗುವನು. ॥೮೬॥

ಪರ್ವತರಾಜಕುಮಾರಿಯೇ, ಚಿನ್ನದ ಬಣ್ಣಕ್ಕೆ ಸಮಾನವಾದ ಕಣಿಗಲೆ ಹೂಗಳಿಂದ ಶಿವಲಿಂಗವನ್ನು ಪೂಜೆಮಾಡುವ ಸಮಸ್ತವರ್ಣದವರೂ, ಪರ್ವಕಾಲಗಳಲ್ಲಿ ಪಾಪನಾಶಕನಾದ ಪಾರ್ವತೀರಮಣನನ್ನು ಅರ್ಚನೆಮಾಡುವವರೂ ಜಾಗ್ರತೆಯಾಗಿ ಶಿವನಿಗೆ ಪ್ರೀತಿಪಾತ್ರರಾದ ಗಣಾಧಿಪರಾಗುವರು. ॥೮೭॥

ಪಾರ್ವತಿಯೇ, ಬಿಳಿ ಮತ್ತು ಕೆಂಪು ಪಾದರೀ ಹೂಗಳಿಂದ ಶಿವಲಿಂಗದ ಶಿರಸ್ಸನ್ನು ಅಲಂಕರಿಸಿ ಪೂಜೆಮಾಡುವವನು ಪಾಪಗಳೆಂಬ ಮರಗಳ ಕಾಡನ್ನು ಧ್ವಂಸ ಮಾಡುವನಾಗುತ್ತಾನೆ. ಯಾವಾಗಲೂ ಅವನು ಸಂಕಟದ ರಾಶಿಯನ್ನೇ ಕಾಣದೇ ಯಮಭಟರ ದೊಡ್ಡ ದಂಡಗಳಿಗೂ ಗುರಿಯಾಗದೇ ಎಲ್ಲವನ್ನೂ ಜಯಿಸಿ ಪೂರ್ಣ ಸೌಖ್ಯವನ್ನು ಪಡೆಯುವನು. ॥೮೮॥

ಮಂದಾರಸುಂದರಸುಮೈರರವಿಂದಬೃಂದೈಃ
ಕುಂದೈಃ ಕದಂಬನಿಚಯೈರ್ವರಸಾಪಬೃಂದೈಃ ।
ಮಾಕಂದಕಂದಲದಲೈರ್ಗಿರಿಜೇ ಸ ಶಕ್ರೋ
ನಂದಾಯ ಮೇ ಭವತಿ ಚೇಂದುಕಲಾವತಂಸ
ಲಿಂಗಾರ್ಚನೇನ ಸ ನಿಶಾಸು ದಿವಾಪ್ರಪೀತಃ ॥೮೯॥

ಈಷಚ್ಛಿರೀಷಕುಸುಮೈರ್ಮಮ ಲಿಂಗಮೌಲಾ
ಯೋಷಾನುರಕ್ತಹೃದಯಃ ಸ ವಿಶೇಷಭೂಷಾ ।
ಪಾಪೌಘತಾಪಗಣನಾಂ ಗಣಪುಂಗವೇಂದ್ರೋ
ಭದ್ರಾಣಿ ಸೋಽಪ್ಯ ಲಭತೇ ಸಸುರೌಘವಂದ್ಯಃ ॥೯೦॥

ಉತ್ಫುಲ್ಲಹಲ್ಲಕುಸುಮೈರ್ಮೃಗಬಾಲಪಾಣಿ
ರ್ಲಿಂಗಾರ್ಚನೇನ ಕಲಯೇನ್ನ ಸ ಜಾತುಕಾಲಂ ।
ಆರಕ್ಷಕೋ ಭವತಿ ಸರ್ವಧರಾಧಿನಾಥ
ವಂದ್ಯಾಂಘ್ರಿಯುಗ್ಮನಖಚಂದ್ರರುಚಿರ್ಭವಾನಿ ॥೯೧॥

---

ಸುಂದರಗಳಾದ ಪಾರಿಜಾತಪುಷ್ಪಗಳು, ಅರಳಿದ ತಾವರೆಯ ಹೂಗಳು, ಗಿಡ ಮಲ್ಲಿಗೆ, ಕದಂಬಕುಸುಮ ಈ ಪುಷ್ಪಸಮೂಹಗಳು, ಸಿಹಿಮಾವಿನ ಎಳಚಿಗುರು, ಇವೇ ಮುಂತಾದವುಗಳಿಂದ ರಾತ್ರಿವೇಳೆಗಳಲ್ಲಿ ಚಂದ್ರಶೇಖರನೆನಿಸಿದ ನನ್ನ ಶಿವ ಲಿಂಗವನ್ನು ಪೂಜೆಮಾಡುವವನು ಪಾಪರಾಶಿಗಳಿಂದ ಮುಕ್ತನಾಗಿ ದೇವೇಂದ್ರನಂತೆ ನನಗೆ ಪ್ರಿಯನಾಗುವನು. ಅದೇ ರೀತಿ ಹಗಲುಹೊತ್ತಿನಲ್ಲಿ ಪೂಜಿಸುವವನೂ ಸಹ ನನ್ನ ಸಂತೋಷಕ್ಕೆ ಪಾತ್ರನಾಗಿ ಶಿವಸಾಯುಜ್ಯವನ್ನು ಪಡೆಯುವನು. ॥೮೯॥

ಇದೇ ರೀತಿ ಶಿರೀಷ (ಬಾಗೆ) ಪುಷ್ಪಗಳಿಂದ ನನ್ನ ಲಿಂಗದ ಶಿರಸ್ಸನ್ನು ಅಲಂಕರಿಸಿ ಭಯಭಕ್ತಿಯಿಂದ, ದಿವಾರಾತ್ರಿಗಳಲ್ಲಿ ಪೂಜೆಮಾಡುವವನು ಪಾಪ ಸಮೂಹಗಳಿಂದುಂಟಾಗುವ ದುಃಖವನ್ನು ಕಳೆದುಕೊಂಡು ಗಣೇಂದ್ರಾಧಿಪತಿಯೆನಿಸಿ ದೇವಸಮೂಹಗಳಿಂದ ನಮುಸ್ಕರಿಸಲ್ಪಡುತ್ತಾ, ಸಕಲ ಸ್ತ್ರೀಯರಿಂದಲೂ ಕಾಮಿಸ ಲ್ಪಡುವಂತಹ ಸೌಂದರ್ಯವನ್ನು ಪಡೆದು ಸುಖಿಯಾಗಿ ಜೀವಿಸುವನು. ॥೯೦॥

ಅರಳಿದ ಕಲ್ಹಾರಪುಷ್ಪಗಳಿಂದ ಶಿವಲಿಂಗಾರ್ಚನೆಮಾಡುತ್ತಾ ಕಾಲವನ್ನು ಕಳೆಯುವವನು ಚಕ್ರಾಧಿಪತಿಯಾಗಿ ಸಕಲಭೂಪತಿಗಳಿಂದಲೂ ನಮುಸ್ಕರಿಸಲ್ಪಡುವ

ವಿಷ್ಣುಕ್ರಾಂತಸುಮೈರ್ಮದೀಯಮಗಜೇ ಲಿಂಗಂ ಸಕೃತ್ಪೂಜಯ
ನ್ಸಂಕ್ರಾಂತಾವಪಿ ಪಾತಕಾನ್ಯಪಿ ನರಂ ನೈವಾಕ್ರಮಂತಿ ಧ್ರುವಂ ।
ತಸ್ಯೋತ್ಕ್ರಾಂತಿರಥಾಂತಿಮೇ ಸುಖಯುತಾ ಭೂಯಾಚ್ಚ ಮುಕ್ತ್ಯಂಗನಾ
ಹಸ್ತಾಕ್ರಾಂತತರಾ ಲಭೇತ ಸುಲಭಾ ಸತ್ಯಂ ನ ತೇ ವಿಸ್ಮಯಃ ॥೯೨॥

ಯಮವದನಂ ರದನೋರುಘೋಷಭೀಷಂ
ನಹಿ ಪಶ್ಯೇತ್ಪ್ರಸಭಂ ಸಭಯಂ ಭವಾನಿ ।
ಕೃತಸಂಕ್ರಂದನರಕ್ಷಣೋ ಮಹಾತ್ಮಾ
ಮದನಾರಿಂ ದಮನೈರಥಾರ್ಚ್ಯ ಚೈತ್ರೇ ॥೯೩॥

ಮಂದಾರಾಂಬುಜಮಲ್ಲಿಕಾಸುಕುಸುಮೀವಮಾಲಾಂ ಚ ನೀಲೋತ್ಪಲೈ
ರ್ಯುಕ್ತಾಂ ಯಃ ಪ್ರದದಾತಿ ಶಂಕರಮಹಾಲಿಂಗೇ ಸಹಸ್ರೈಃ ಕೃತೀ ।

---

ಚಂದ್ರಕಾಂತಿಯುಳ್ಳ ಪಾದಯುಗಳಗಳಿಂದ ಮೆರೆಯುತ್ತಾ ಚಕ್ರವರ್ತಿಯೆನಿಸು
ವನು ॥೯೧॥

ಪರ್ವತರಾಜಕುಮಾರಿಯೇ, ಸಂಕ್ರಮಣ ಕಾಲಗಳಲ್ಲಿ ವಿಷ್ಣುಕ್ರಾಂತಪುಷ್ಪ
ಗಳಿಂದ ನನ್ನ ಶಿವಲಿಂಗವನ್ನು ಒಂದು ಸಲ ಪೂಜಿಸುವ ಮಾನವನನ್ನಾದರೋ
ಯಾವ ಪಾಪಗಳೂ ನಿಶ್ಚಯವಾಗಿಯೂ ಆಕ್ರಮಿಸುವುದೇ ಇಲ್ಲವೆಂದು ತಿಳಿ.
ಅವನಿಗೆ ಉತ್ಕ್ರಮಣಕಾಲವೂ ಸುಖಕರವಾಗಿಯೇ ನಡೆಯುವುದು. ಅವನಿಗೆ
ಮೋಕ್ಷಾಂಗನೆಯು ಬಹು ಸುಲಭದಿಂದ ಹಸ್ತಗತಳಾಗುವಳು. ಇದು ಸತ್ಯ.
ದೇವಿಯೇ, ಈ ವಿಷಯದಲ್ಲಿ ನೀನು ಸಂದೇಹಪಡಬೇಡ. ॥೯೨॥

ಚೈತ್ರಮಾಸದಲ್ಲಿ (ವಸಂತ ಸಮಯದಲ್ಲಿ) ಮನ್ಮಥಾಂತಕನಾದ ನನ್ನ
ಶಿವಲಿಂಗವನ್ನು ದಮನಕಪುಷ್ಪಗಳಿಂದ ಅರ್ಚನೆಮಾಡುವ ಮಹಾತ್ಮನು
ಇಂದ್ರನನ್ನೂ ರಕ್ಷಿಸುವಂತಹ ಮಹಿಮೆಯುಳ್ಳವನಾಗಿ ಭಯಂಕರಗಳಾದ ದೊಡ್ಡ
ಕೋರೆದಾಡೆಗಳುಳ್ಳ ಭೀಕರವಾದ ಯಮನ ಮುಖವನ್ನು ನೋಡುವ ಸನ್ನಿವೇಶ
ವನ್ನೇ ಕಾಣುವುದಿಲ್ಲ. ಅಂದರೆ ಅವನಿಗೆ ಸದ್ಯೋಮುಕ್ತಿಯು ಲಭಿಸುವುದು. ॥೯೩॥

ಪಾರಿಜಾತ, ತಾವರೆ, ಮಲ್ಲಿಗೆ ಈ ಪವಿತ್ರಗಳಾದ ಪುಷ್ಪಗಳ ಜೊತೆಗೆ
ಕನ್ನೈದಿಲೆ ಹೂಗಳನ್ನು ಸೇರಿಸಿ ಮಾಲೆಮಾಡಿ, ಶ್ರೀಶಂಕರನ ಮಹಾಲಿಂಗಕ್ಕೆ
ಸಹಸ್ರ, ಐನೂರು ಅಥವಾ ಇನ್ನೂರೈವತ್ತು ಹಾರಗಳನ್ನು ಭಕ್ತಿಯಿಂದ ಸಮರ್ಪಿಸು

ತಸ್ಮಾದ್ಧರ್ಮಾರ್ಥಸುಸಂಖ್ಯಯಾ ಸುವಿಹಿತಾ ಸ್ಯಾತ್ಪ್ರೀತಯೇ ಮುಕ್ತಿದಾ
ಮುಕ್ತಾಪುಷ್ಪಸಮರ್ಚನಾದಪಿ ಸದಾ ಸಂಪ್ರೀತಯೇ ಮೇ ಪರಾ ॥೯೪॥

ಪುಷ್ಪಾಧ್ಯಾಯಮಿಮಂ ಸದೈವ ಹೃದಯೇ ಧಾರ್ಯೋಹಿ ವರ್ಯೈಃ ಸದಾ
ಕಾರ್ಯಂ ಸ್ಯಾನ್ಮಮ ಪೂಜನಂ ಸುವಿಹಿತಂ ವೀರ್ಯೋನ್ನತೈಃ ಶೈಲಜೇ ।
ಗರ್ವಂ ಚಾಪ್ಯಪಹೃತ್ಯ ಧೈರ್ಯಪರಮೈಃ ಸ್ವೇನಾರ್ಜಿತೈಃ ಪಾವನೈ
ರರ್ಚ್ಯೋಽಹಂ ಭುವಿ ಸಾದರಂ ಸುಮಗಣೈರ್ಹೀನೋಭವೇತ್ಪಾತಕೈಃ॥೯೫॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಪುಷ್ಪಾಧ್ಯಾಯನಿರೂಪಣಂ ನಾಮ
ನವಮೋಽಧ್ಯಾಯಃ

---

ಮವನಿಗೆ ಸ್ಥಿರವಾದ ಮೋಕ್ಷವುಂಟಾಗುವುದು. ಎಲೌ ದೇವಿಯೇ, ಈ ಹೂಮಾಲೆ ಗಳು ನನಗೆ ಮುತ್ತಿನ ಹಾರಗಳಿಗಿಂತ ಹೆಚ್ಚಿನ ಸಂತೋಷವನ್ನುಂಟುಮಾಡುವುವು. ಇವು ಯಾವಾಗಲೂ ಶಿವಾರ್ಚನೆಗೆ ಪ್ರೀತಿಕರಗಳೂ ಶ್ರೇಷ್ಠಗಳೂ ಆಗುವುವೆಂದು ತಿಳಿ. ॥೯೪॥

ಪಾರ್ವತಿಯೇ, ಈ ನನ್ನ ಪುಷ್ಪಪೂಜಾಧ್ಯಾಯದ ವಿಷಯವನ್ನು ಯಾವಾ ಗಲೂ ಸಾಧುಜನಗಳು ಮನಸ್ಸಿನಲ್ಲಿ ಸ್ಮರಿಸುತ್ತಿರಬೇಕು. ಪ್ರಭಾವಶಾಲಿಗಳಾದವರು ನನ್ನ ಪೂಜೆಯನ್ನು ಸರ್ವದಾ ಸಾವಧಾನವಾಗಿ ಮನನಮಾಡಬೇಕು. ಧೈರ್ಯಶಾಲಿ ಗಳು ತಮ್ಮ ಗರ್ವವನ್ನು ತ್ಯಜಿಸಿ, ತಾವು ಸಂಪಾದಿಸಿದ ಪವಿತ್ರಗಳಾದ ಪುಷ್ಪವೃಂದ ಗಳಿಂದ ಆದರಪೂರ್ವಕವಾಗಿ ಈ ಭೂಮಂಡಲದಲ್ಲಿ ನನ್ನನ್ನು ಪೂಜಿಸಬೇಕು. ಆದರಿಂದ ಅವರು ಸಕಲ ಪಾಪಗಳಿಂದಲೂ ಮುಕ್ತರಾಗುವರು, ಎಂದು ಪರಶಿವನು ಪಾರ್ವತಿಗೆ ಹೇಳಿದನು. ॥೯೫॥

ಇಂತು ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಪುಷ್ಪಾಧ್ಯಾಯನಿರೂಪಣೆ
ಯೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ದಶಮೋಽಧ್ಯಾಯಃ

|| ಈಶ್ವರ ಉವಾಚ ||

ವಕ್ಷ್ಯೇ ಪೂಜಾವಿಧಿಂ ದೇವಿ ಮಮ ಲಿಂಗೇ ವಿಶೇಷತಃ ।
ನಕ್ಷತ್ರೇಷು ವಿಶೇಷೇಣ ಫಲಂ ಸ್ಯಾತ್ಕೃತಪೂಜಯಾ ॥೧॥

ಪ್ರಥಮಾಯಾಂ ದ್ವಿಜಃ ಸ್ನಾತ್ವಾ ವಾಗ್ಯತೋ ಭಕ್ತಿಮಾನ್ನರಃ ।
ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಲಂಕೃತವಿಗ್ರಹಃ ॥೨॥

ಉಪಲಿಪ್ಯ ಸಮಾಂ ಭೂಮಿಂ ಗೋಮಯೇನ ಸ್ವಯಂ ಶಿವೇ ।
ಆಸನಂ ಪರಿಕಲ್ಪ್ಯಾಸ್ಮಿನ್ನಾವಾಹ್ಯ ವೃಷಭಂ ತತಃ ॥೩॥

ಲಿಂಗಮೂರ್ತಿಂ ಮಹಾದೇವಂ ಸ್ನಾಪ್ಯ ಪುಣ್ಯೋದಕೇನ ಚ ।
ಪಂಚಾಕ್ಷರೇಣ ಮಂತ್ರೇಣ ಪ್ರತಿಷ್ಠಾಪ್ಯ ವೃಷಾಸನೇ ॥೪॥

---

## ಹತ್ತನೆಯ ಅಧ್ಯಾಯ

ದೇವಿಯೇ, ಶಿವಲಿಂಗದಲ್ಲಿ ವಿಶೇಷವಾಗಿರುವ ಪೂಜಾವಿಧಿಯನ್ನು ಹೇಳುವೆನು ಕೇಳು ; ಶ್ರೇಷ್ಠವಾದ ತಿಥಿ ನಕ್ಷತ್ರಗಳಲ್ಲಿ ಮಾಡಿದ ಪೂಜೆಯಿಂದ ವಿಶೇಷ ಫಲವುಂಟಾಗುವುದು. ಪಾಡ್ಯಮಿ ದಿನ ಬ್ರಾಹ್ಮಣನು ಸ್ನಾನಮಾಡಿ, ಮೌನತಾಳಿ, ಭಕ್ತಿಯುಕ್ತನಾಗಿ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಶರೀರಕ್ಕೆ ಅಲಂಕರಿಸಿಕೊಂಡು, ಮಟ್ಟವಾದ ನೆಲವನ್ನು ಸಗಣಿಯಿಂದ ತಾನೇ ಸಾರಿಸಬೇಕು. ಅನಂತರ ಅದೇ ಸ್ಥಳದಲ್ಲಿ ಆಸನವನ್ನು ರಚಿಸಿ, ಅದರ ಮೇಲೆ ವೃಷಭವನ್ನು ಆವಾಹನೆಮಾಡಿ,

ಪುಷ್ಪೈಶ್ಚ ಬಿಲ್ವಪತ್ರೈಶ್ಚ ಪೂಜಯೇದ್ಗಿರಿಕನ್ಯಕೇ ।
ಧೂಪದೀಪಾದಿಕಂ ದತ್ವಾ ನೈವೇದ್ಯಂ ಚೈವ ಬುದ್ಧಿಮಾನ್ ॥೫॥

ಪ್ರದಕ್ಷಿಣತ್ರಯಂ ಕೃತ್ವಾ ಸ್ತೋತ್ರೈಃ ಸ್ತುತ್ವಾಽಭಿವಂದ್ಯ ಚ ।
ದದ್ಯಾತ್ಪೂಜಾಫಲಂ ತಸ್ಮೈ ನ ಫಲಂ ಕಾಂಕ್ಷಯೇದ್ಬುಧಃ ॥೬॥

ಬ್ರಹ್ಮಹತ್ಯಾಕೃತಂ ಪಾಪಂ ಛಿಂದ್ಯಾತ್ಪೂರ್ವೋಕ್ತಮಾರ್ಗತಃ ।
ದ್ವಿತೀಯಾಯಾಂ ತಥಾ ಸ್ನಾತ್ವಾ ಬ್ರಹ್ಮಚರ್ಯಪರಾಯಣಃ ॥೭॥

ಪಂಚಾಕ್ಷರೇಣ ಮಂತ್ರೇಣ ಸ್ನಾಪ್ಯಲಿಂಗಂ ಸಮಾಹಿತಃ ।
ತಿಲೈಶ್ಚ ತಂಡುಲೈಃ ಪುಷ್ಪೈಃ ಪೂಜ್ಯ ಪೂರ್ವೋಕ್ತಮಾರ್ಗತಃ ॥೮॥

ಹವಿರ್ನಿವೇದ್ಯ ಮೇಧಾವೀ ದಿನಮೇಕಮುಪೋಷಿತಃ ।
ಸುರಾಪಾನಕೃತಂ ಪಾಪಂ ದಗ್ಧ್ವಾ ಸ್ವರ್ಗಂ ಚ ಗಚ್ಛತಿ ॥೯॥

---

ಲಿಂಗಮೂರ್ತಿಯಾದ ಮಹಾದೇವನನ್ನು ಆ ವೃಷಭಾಸನದಲ್ಲಿ ಶಿವಪಂಚಾಕ್ಷರಮಂತ್ರ ದಿಂದ ಪ್ರತಿಷ್ಠೆಮಾಡಿ, ಪುಣ್ಯಜಲದಿಂದ ಆ ಪರಶಿವನಿಗೆ ಅಭಿಷೇಕಮಾಡಬೇಕು. ಅನಂತರ ಹೂ, ಬಿಲ್ವದಳ ಮುಂತಾದವುಗಳಿಂದ ಆ ದೇವದೇವನನ್ನು ಪೂಜಿಸ ಬೇಕು. ||೧-೨-೩-೪||

ಬುದ್ಧಿವಂತನಾದವನು ಧೂಪ, ದೀಪ, ನೈವೇದ್ಯಾದಿಗಳನ್ನು ಸಮರ್ಪಿಸಿ, ಮೂರು ಪ್ರದಕ್ಷಿಣೆಗಳನ್ನು ಮಾಡಿ ಶಿವಸ್ತೋತ್ರಗಳಿಂದ ಸದಾಶಿವನನ್ನು ಸ್ತುತಿಸಿ, ನಮಸ್ಕಾರಮಾಡಿ, ಪೂಜಾಫಲವನ್ನು ಆ ದೇವನಿಗೆ ಸಮರ್ಪಿಸಿ, ತಾನು ಮಾತ್ರ ಆ ಪೂಜಾಫಲವನ್ನು ಅಪೇಕ್ಷಿಸಬಾರದು. ಹಿಂದೆ ಹೇಳಿದ ಮಾರ್ಗದಿಂದ ಆಚರಿಸಿದರೆ ಬ್ರಹ್ಮಹತ್ಯೆಯಿಂದುಂಟಾದ ಪಾಪವನ್ನೂ ಸಹ ಕಳೆದುಕೊಳ್ಳುವನು. ||೫-೬||

ಬಿದಿಗೆ ದಿನ ಹಾಗೆಯೆ ಸ್ನಾನಮಾಡಿ ಬ್ರಹ್ಮಚರ್ಯನಿರತನಾಗಿ, ಸಾವಧಾನದಿಂದ ಪಂಚಾಕ್ಷರ ಮಂತ್ರಪುರಸ್ಸರವಾಗಿ ಶಿವಲಿಂಗಕ್ಕೆ ಅಭಿಷೇಕಮಾಡಿ, ಎಳ್ಳು, ಅಕ್ಕಿ, ಹೂವು ಮುಂತಾದವುಗಳಿಂದ ಹಿಂದೆ ಹೇಳಿದ ಮಾರ್ಗದಂತೆ ಪೂಜೆಮಾಡಿ, ಭಕ್ತಿ ಪರವಶನಾಗಿ ಆ ಪರಶಿವನಿಗೆ ಹವಿಸ್ಸನ್ನು ನಿವೇದನಮಾಡಿ ಒಂದು ದಿವಸ ಉಪವಾಸವ್ರತವನ್ನಾಚರಿಸಿದವನು ಸುರಾಪಾನಮಾಡಿದ ಪಾಪವನ್ನು ಕಳೆದು ಕೊಂಡು ಸ್ವರ್ಗವನ್ನೈದುವನು. ||೭-೮-೯||

ತೃತೀಯಾಯಾಂ ತಥಾ ಪೂಜ್ಯ ಶಿವಲಿಂಗಂ ಸಮಾಹಿತಃ ।
ಬ್ರಾಹ್ಮಣಾನ್ಭೋಜಯಿತ್ವಾ ತು ಸ್ವರ್ಣಸ್ತೇಯಾದ್ವಿಮುಚ್ಯತೇ ॥೧೦॥

ಚತುರ್ಥ್ಯಾಂ ಶಂಕರಂ ಭಕ್ತ್ಯಾ ಪೂಜ್ಯ ಪೂರ್ವೋಕ್ತಮಾರ್ಗತಃ ।
ಯಥಾಶಕ್ತಿ ಧನಂ ದತ್ವಾ ಬ್ರಾಹ್ಮಣಾಯ ಸಮಾಹಿತಃ ॥೧೧॥

ಗುರುತಲ್ಪಗದೋಷೇಣ ಮುಚ್ಯತೇ ನಾತ್ರ ಸಂಶಯಃ ।
ಪಂಚಮ್ಯಾಂ ತಂಡುಲೇನೈವ ಪೂಜ್ಯ ಪೂರ್ವೋಕ್ತಮಾರ್ಗತಃ ॥೧೨॥

ಮಹಾಪಾತಕಿಸಂಸರ್ಗಾತ್ ದೋಷಾನ್ಮುಕ್ತೋ ಭವೇನ್ನರಃ ।
ಷಷ್ಠ್ಯಾಂ ಘೃತೇನ ಸಂಸ್ನಾಪ್ಯ ಚಂದನೇನ ಘೃತೇನ ಚ ॥೧೩॥

ಮಹಾಪಾತಕದೋಷೇಣ ಮುಚ್ಯತೇ ನಾತ್ರ ಸಂಶಯಃ ।
ಸಪ್ತಮ್ಯಾಂ ಶುದ್ಧತೋಯೇನ ಸ್ನಾಪ್ಯ ಪುಷ್ಪೈಃ ಪ್ರಪೂಜಯೇತ್ ॥೧೪॥

---

ಹೀಗೆಯೆ ತದಿಗೆ ದಿನ ನೆಟ್ಟಮನಸ್ಸಿನಿಂದ ಶಿವಲಿಂಗವನ್ನು ಪೂಜೆಮಾಡಿ ಬ್ರಾಹ್ಮಣರಿಗೆ ಭೋಜನಮಾಡಿಸಿದರೆ ಸ್ವರ್ಣಸ್ತೇಯ (ಚಿನ್ನವನ್ನು ಕದಿಯುವುದು) ಪಾಪದಿಂದ ಮುಕ್ತನಾಗುವನು. ಚೌತಿಯ ದಿನ ಶಂಕರನನ್ನು ಭಕ್ತಿಯಿಂದ ಹಿಂದೆ ಹೇಳಿದಂತೆ ಪೂಜೆಮಾಡಿ, ಶಕ್ತ್ಯನುಸಾರ ಬ್ರಾಹ್ಮಣರಿಗೆ ದ್ರವ್ಯದಾನಮಾಡಿದವನು ಗುರುಸ್ತ್ರೀಸಂಭೋಗಜನಿತ ಮಹಾಪಾತಕದಿಂದ ಸಂದೇಹವಿಲ್ಲದೆ ಮುಕ್ತನಾಗುತ್ತಾನೆ. ॥೧೦-೧೧॥

ಪಂಚಮಿಯ ದಿನ ಹಿಂದೆ ಹೇಳಿದ ರೀತಿಯಲ್ಲಿ ಕೇವಲ ಅಕ್ಕಿಯಿಂದಲೇ ಶಿವಲಿಂಗಾರ್ಚನೆಮಾಡುವ ಮಾನವನು ಮಹಾಪಾಪಗಳನ್ನು ಮಾಡಿದವನ ಸಂಬಂಧದಿಂದುಂಟಾದ ದೋಷದಿಂದ ಮುಕ್ತನಾಗುತ್ತಾನೆ. ದೇವಿಯೇ! ಷಷ್ಠಿಯ ದಿನ ತುಪ್ಪದಿಂದ ಶಿವನಿಗೆ ಸ್ನಾನಮಾಡಿಸಿ, ಚಂದನವನ್ನು ಲೇಪನೆಮಾಡುವ ಮಾನವನು ಮಹಾಪಾಪಗಳ ದೋಷದಿಂದಲೂ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲ. ॥೧೨-೧೩॥

ಅಯ್ಯ ಮುನಿಯೇ, ಸಪ್ತಮಿಯ ದಿನ ಶುದ್ಧೋದಕದಿಂದ ಅಭಿಷೇಕಮಾಡಿ ಹೂಗಳಿಂದ ಪೂಜೆಮಾಡುವವನು ಕ್ಷುದ್ರಪಾಪಗಳಿಂದ ಬಿಡುಗಡೆ ಹೊಂದುವುದರಲ್ಲಿ ಅನುಮಾನವಿಲ್ಲ. ಅಷ್ಟಮಿಯಲ್ಲಿ ಪಂಚಗವ್ಯಗಳಿಂದ (ಹಾಲು, ಮೊಸರು, ತುಪ್ಪ,

ಕ್ಷುದ್ರಪಾಪಾತ್ಪ್ರಮುಚ್ಯೇತ ಮುನೇ ನಾತ್ರಾಸ್ತಿ ಸಂಶಯಃ ।
ಅಷ್ಟಮ್ಯಾಂ ಪಂಚಗವ್ಯೇನ ಸ್ನಾಪ್ಯ ತೋಯೇನ ಶಂಕರಂ ॥೧೫॥

ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹಿಯತೇ ।
ನವಮ್ಯಾಂ ಪೂಜ್ಯ ದೇವೇಶಂ ಸರ್ವಾನ್ಕಾಮಾನವಾಪ್ನುಯಾತ್ ॥೧೬॥

ದಶಮ್ಯಾಮೀಶ್ವರಂ ಪೂಜ್ಯ ಸರ್ವಪಾಪೈಃ ಪ್ರಮುಚ್ಯತೇ ।
ಏಕಾದಶ್ಯಾಂ ಶುಚಿಃ ಸ್ನಾತ್ವಾ ಭೋಜನೇನ ವಿವರ್ಜಿತಃ ॥೧೭॥

ಶಿವಂ ಶುದ್ಧೋದಕೈಃ ಸ್ನಾಪ್ಯ ಶಿವಲೋಕೇ ಮಹೀಯತೇ ।
ದ್ವಾದಶ್ಯಾಮಭಿಷಿಚ್ಯೇಶಂ ಗುಗ್ಗುಲಂ ಧೂಪಯೇನ್ನರಃ ॥೧೮॥

ಬ್ರಹ್ಮಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ತ್ರಯೋದಶ್ಯಾಂ ಶಿವಂ ಪೂಜ್ಯ ಶಂಕರಂ ಚಂದನೈಃ ಸಹ ॥೧೯॥

ವಿಲಿಪ್ಯ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ಚತುರ್ದಶ್ಯಾಂ ಮಹಾದೇವಂ ಸ್ನಾಪ್ಯ ಪೂರ್ವೋಕ್ತಮಾರ್ಗತಃ ॥೨೦॥

---

ಗೋಮೂತ್ರ ಮತ್ತು ಗೋಮಯಗಳಿಂದ) ಶಿವನಿಗೆ ಅಭಿಷೇಕಮಾಡಿ ಅನಂತರ ನೀರಿನಿಂದ ಅಭಿಷೇಕಮಾಡುವವನು ಸಕಲ ಪಾಪಗಳಿಂದಲೂ ಮುಕ್ತನಾಗಿ ಶಿವ ಲೋಕದಲ್ಲಿ ಮೆರೆಯುವನು. ನವಮಿಯಲ್ಲಿ ದೇವೇಶ್ವರನನ್ನು ಪೂಜೆಮಾಡಿದವನು ಸಕಲ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ. ||೧೪-೧೫-೧೬||

ದಶಮಿಯ ದಿನ ಈಶ್ವರನನ್ನು ಪೂಜಿಸುವವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ಏಕಾದಶಿಯ ದಿವಸ ಶುದ್ಧನಾಗಿ ಸ್ನಾನಮಾಡಿ ಭೋಜನ ಮಾಡದೆ ಶಿವನಿಗೆ ಶುದ್ಧೋದಕದಿಂದ ಅಭಿಷೇಕಮಾಡುವವನು ಶಿವಲೋಕದಲ್ಲಿ ಪೂಜಾರ್ಹನಾಗುತ್ತಾನೆ. ದ್ವಾದಶಿಯ ದಿವಸ ಈಶ್ವರನಿಗೆ ಅಭಿಷೇಕಮಾಡಿ ಗುಗ್ಗುಲ ಧೂಪವನ್ನು ಹಾಕುವ ಮಾನವನು ಬ್ರಹ್ಮಲೋಕವನ್ನೈದುವನು. ಇದರಲ್ಲಿ ವಿಚಾರಣೆಯೇ ಮಾಡಬೇಕಾಗಿಲ್ಲ. ||೧೭-೧೮||

ತ್ರಯೋದಶಿಯ ದಿನ ಶಿವನಿಗೆ ಚಂದನವನ್ನು ಲೇಪನಮಾಡಿ ಪೂಜಿಸುವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುವುದರಲ್ಲಿ ಸಂದೇಹವೇ ಇಲ್ಲ. ಚತುರ್ದಶಿಯಲ್ಲಿ ಹಿಂದಿನಂತೆಯೇ ತಿಲ, ತಂಡುಲ, ಪುಷ್ಪ ಮುಂತಾದವುಗಳಿಂದ

ತಿಲತಂಡುಲಪುಷ್ಪಾದ್ಯೈಃ ಪೂಜ್ಯ ವಿಪ್ರಂ ತು ಭೋಜಯೇತ್ ।
ಅಭೀಷ್ಟಂ ಸಕಲಂ ಲಬ್ಧ್ವಾ ಶಿವಲೋಕೇ ಮಹೀಯತೇ ॥೨೧॥

ಪಂಚದಶ್ಯಾಂ ಶುಚಿಃ ಸ್ನಾತ್ವಾ ತೋಯೇನೈವಾಭಿಷೇಚಯೇತ್ ।
ಪುಷ್ಪೈರ್ನಾನಾವಿಧೈಃ ಪೂಜ್ಯ ಬ್ರಾಹ್ಮಣಾನ್ಭೋಜಯೇನ್ಮುದಾ ॥೨೨॥

ಐಶ್ವರ್ಯಮಚಲಂ ಲಬ್ಧ್ವಾ ಪ್ರೇತ್ಯ ಸ್ವರ್ಗೇ ಮಹೀಯತೇ ॥೨೩॥

ಅಶ್ವಿನ್ಯಾಂ ದೇವಮಾರಾಧ್ಯ ಬ್ರಾಹ್ಮಣಾನ್ಭೋಜಯೇನ್ನರಃ ।
ಅಶ್ವಿನೀಲೋಕಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೨೪॥

ಭರಣ್ಯಾಂ ರುದ್ರಮಾರಾಧ್ಯ ಬ್ರಾಹ್ಮಣಂ ಭೋಜಯೇನ್ನರಃ ।
ಯಮಲೋಕಮವಾಪ್ನೋತಿ ಯಾವದಾಚಂದ್ರತಾರಕಂ ॥೨೫॥

ಕೃತ್ತಿಕಾಯಾಂ ಶಿವಂ ಪೂಜ್ಯ ಬ್ರಾಹ್ಮಣಾನೇವ ಭೋಜಯೇತ್ ।
ಅಗ್ನಿಲೋಕಮವಾಪ್ನೋತಿ ಯಾವದಾಚಂದ್ರತಾರಕಂ ॥೨೬॥

---

ಮಹಾದೇವನನ್ನು ಪೂಜಿಸಿ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ಇದರಿಂದ ಸಕಲಾಭೀಷ್ಟವನ್ನೂ ಪಡೆದು ಶಿವಲೋಕವನ್ನು ಸೇರಿ ಮೆರೆಯುವನು. ॥೧೯-೨೦-೨೧॥

ಪೂರ್ಣಿಮಾ ಮತ್ತು ಅಮಾವಾಸ್ಯೆಗಳಲ್ಲಿ ಸ್ನಾನಮಾಡಿ ಶುಚೀಭೂತನಾಗಿ ನೀರಿನಿಂದಲೇ ಶಿವನಿಗೆ ಅಭಿಷೇಕಮಾಡಬೇಕು. ಅನಂತರ ನಾನಾಬಗೆಯ ಹೂಗಳಿಂದ ಶಿವನಿಗೆ ಪೂಜೆಮಾಡಿ ಸಂತೋಷದಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದರಿಂದ ಇಹದಲ್ಲಿ ಸ್ಥಿರವಾದ ಐಶ್ವರ್ಯವನ್ನು ಪಡೆದು ಮೃತನಾದ ಮೇಲೆ ಸ್ವರ್ಗದಲ್ಲಿ ಆನಂದದಿಂದ ಮೆರೆಯುವನು. ॥೨೨-೨೩॥

ಅಶ್ವಿನೀನಕ್ಷತ್ರದಲ್ಲಿ ಮಹಾದೇವನನ್ನು ಪೂಜಿಸಿ ಬ್ರಾಹ್ಮಣನಿಗೆ ಭೋಜನ ಮಾಡಿಸುವ ಮಾನವನು ಅಶ್ವಿನೀಲೋಕವನ್ನೈದುವುದರಲ್ಲಿ ಸಂಶಯವೇ ಇಲ್ಲ. ದೇವಿ, ಭರಣೀನಕ್ಷತ್ರದಲ್ಲಿ ರುದ್ರನನ್ನು ಪೂಜಿಸಿ ಬ್ರಾಹ್ಮಣನನ್ನು ಭೋಜನದಿಂದ ಸಂತೋಷಪಡಿಸುವ ಮನುಜನು ಸೂರ್ಯ ಚಂದ್ರನಕ್ಷತ್ರಗಳಿರುವ ಪರ್ಯಂತ ಯಮ ಲೋಕದಲ್ಲಿ ಸುಖಿಸುವನು. ॥೨೪-೨೫॥

ಕೃತ್ತಿಕಾನಕ್ಷತ್ರದಲ್ಲಿ ಶಿವನನ್ನು ಪೂಜಿಸಿ ಬ್ರಾಹ್ಮಣರನ್ನು ಭೋಜನಾದಿ ಗಳಿಂದ ಸತ್ಕರಿಸಬೇಕು. ಇದರಿಂದ ಚಂದ್ರಸೂರ್ಯಾದಿಗಳಿರುವ ತನಕ ಅಗ್ನಿಲೋಕ

ರೋಹಿಣ್ಯಾಂ ಶಂಕರಂ ಪೂಜ್ಯ ಬ್ರಾಹ್ಮಣಾಯಾನ್ನದೋ ನರಃ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕಮವಾಪ್ನುಯಾತ್ ॥೨೭॥

ಮೃಗಶೀರ್ಷೇ ಮಹಾದೇವಂ ಪೂಜ್ಯಾನ್ನಂ ವಸ್ತ್ರಮೇವ ವಾ ।
ಬ್ರಾಹ್ಮಣಾಯಾದರಾದ್ದತ್ವಾ ಚಂದ್ರಲೋಕೇ ಮಹೀಯತೇ ॥೨೮॥

ಆರ್ದ್ರಾಯಾಂ ದೇವಮಾರಾಧ್ಯ ದದ್ಯಾದ್ಬ್ರಹ್ಮವಿದೇ ಧನಂ ।
ಸಮ್ಯಕ್‌ಜ್ಞಾನಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೨೯॥

ಅದಿತ್ಯೇ ಯೋಽರ್ಚಯಿತ್ವೇಶಂ ಬ್ರಾಹ್ಮಣಾನೇವ ಭೋಜಯೇತ್ ।
ಆದಿತ್ಯಲೋಕಮಾಪ್ನೋತಿ ಸ ಪುನರ್ಬ್ರಹ್ಮ ಗಚ್ಛತಿ ॥೩೦॥

ಪುಷ್ಯೇ ಪೂಜ್ಯ ಮಹಾದೇವಂ ವಿಪ್ರಾಯಾನ್ನಂ ದದಾತಿ ಯಃ ।
ಬೃಹಸ್ಪತಿಸಮೋ ಬುದ್ಧ್ಯಾ ಭವೇದತ್ರ ನ ಸಂಶಯಃ ॥೩೧॥

---

ವನ್ನು ಹೊಂದುವನು. ಇದು ನಿಶ್ಚಯ, ಇದರಲ್ಲಿ ವಿಚಾರಣೆ ಮಾಡಬೇಕಾದುದೇ ಇಲ್ಲ. ಅಯ್ಯ ಮುನಿಯೇ, ರೋಹಿಣೀ ನಕ್ಷತ್ರದಲ್ಲಿ ಶಂಕರನಿಗೆ ಪೂಜೆಮಾಡಿ ಬ್ರಾಹ್ಮಣನಿಗೆ ಅನ್ನದಾನಮಾಡುವ ಮಾನವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ಬ್ರಹ್ಮಲೋಕವನ್ನೈದುವನು. ॥೨೬-೨೭॥

ಮೃಗಶಿರಾ ನಕ್ಷತ್ರದಲ್ಲಿ ಮಹಾದೇವನನ್ನು ಪೂಜೆಮಾಡಿ ಬ್ರಾಹ್ಮಣನಿಗೆ ಅನ್ನವಸ್ತ್ರಗಳನ್ನು ಆದರದಿಂದ ದಾನಮಾಡುವವನು ಚಂದ್ರಲೋಕದಲ್ಲಿ ಸುಖಿಸುವನು. ಆರ್ದ್ರಾನಕ್ಷತ್ರದಲ್ಲಿ ಮಹಾದೇವನನ್ನು ಆರಾಧಿಸಿ ಬ್ರಹ್ಮಜ್ಞಾನಿಯಾದ ವಿಪ್ರನಿಗೆ ಧನವನ್ನು ದಾನಮಾಡುವವನು ಉತ್ತಮವಾದ ಜ್ಞಾನವನ್ನು ಪಡೆಯುವನೆಂಬುದರಲ್ಲಿ ವಿಚಾರಮಾಡಬೇಕಾಗಿಯೇ ಇಲ್ಲ. ಪುನರ್ವಸೂ ನಕ್ಷತ್ರದಲ್ಲಿ ಈಶ್ವರನನ್ನು ಅರ್ಚನೆ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸುವವನು ಸೂರ್ಯಲೋಕವನ್ನೈದಿ ಪುನಃ ಬ್ರಹ್ಮನಲ್ಲಿ ಐಕ್ಯನಾಗುವನು. ॥೨೮-೨೯-೩೦॥

ಪುಷ್ಯ ನಕ್ಷತ್ರದಲ್ಲಿ ಮಹಾದೇವನಿಗೆ ಪೂಜೆಮಾಡಿ ಬ್ರಾಹ್ಮಣನಿಗೆ ಅನ್ನದಾನ ಮಾಡುವವನು ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನೆನಿಸುವುದರಲ್ಲಿ ಸಂಶಯವೇ ಇಲ್ಲ.

ಆಶ್ಲೇಷರ್ಕ್ಷೇ ಮಹಾದೇವಂ ಪೂಜ್ಯ ಪುಷ್ಪಂ ದದಾತಿ ಯಃ ।
ನಾಗಲೋಕಮವಾಪ್ನೋತಿ ನ ಪುನಸ್ತತ್ರ ಜಾಯತೇ ॥೩೨॥

ಮಘೇ ದೇವಂ ಸಮಾರಾಧ್ಯ ತಿಲಾನಾಮಾಟಕಂ ನರಃ ।
ಶಿವಂ ವಾ ದ್ರೋಣಯುಗ್ಮಂ ವಾ ಬ್ರಾಹ್ಮಣಾಯ ದದಾತಿ ಯಃ ॥೩೩॥

ಸರ್ವಪಾಪವಿನಿರ್ಮುಕ್ತಃ ಪಿತೃಲೋಕಮವಾಪ್ನುಯಾತ್ ।
ಭಗನಕ್ಷತ್ರಕೇ ಭಕ್ತ್ಯಾ ಪೂಜ್ಯ ದೇವಂ ತ್ರಿಯಂಬಕಂ ॥೩೪॥

ಯಥಾಶಕ್ತಿಪ್ರದಾನೇನ ಭಗಲೋಕಮವಾಪ್ನುಯಾತ್ ।
ಉತ್ತರೇ ಶಿವಮಭ್ಯರ್ಚ್ಯ ಗಾಂದದಾತಿ ದ್ವಿಜಾತಯೇ ॥೩೫॥

ಸೂರ್ಯಲೋಕಮವಾಪ್ನೋತಿ ಸೌಖ್ಯಂ ಚಾನಂತ್ಯಮಶ್ನುತೇ ।
ಹಸ್ತೇ ಪೂಜ್ಯ ಮಹಾದೇವಂ ದತ್ವಾ ಬ್ರಹ್ಮವಿದೇ ಧನಂ ॥೩೬॥

---

ಆಶ್ಲೇಷಾ ನಕ್ಷತ್ರದಲ್ಲಿ ಮಹಾದೇವನನ್ನು ಪೂಜೆಮಾಡಿ ಪುಷ್ಪದಾನಮಾಡುವವನು ನಾಗಲೋಕವನ್ನೈದುವನು. ಅಲ್ಲಿ ಅವನಿಗೆ ಪುನರ್ಜನ್ಮವೇ ಉಂಟಾಗುವುದಿಲ್ಲ. ॥೩೧-೩೨॥

ಮಘಾನಕ್ಷತ್ರದಲ್ಲಿ ಮಹಾದೇವನನ್ನು ಪೂಜಿಸಿ, ಎಳ್ಳಿನ ಉಂಡೆಯನ್ನು ನಿವೇದನಮಾಡುತ್ತಾ ಶಿವಮೂರ್ತಿಯನ್ನಾಗಲಿ ಅಥವಾ ಎರಡು ತುಂಬೇಹೂವುಗಳನ್ನಾಗಲೀ ಬ್ರಾಹ್ಮಣನಿಗೆ ದಾನಮಾಡುವವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ ಪಿತೃಲೋಕವನ್ನೈದುವನು. ಪುಬ್ಬಾ ನಕ್ಷತ್ರದಲ್ಲಿ ಭಕ್ತಿಯಿಂದ ಮುಕ್ಕಣ್ಣನಾದ ಮಹಾದೇವನನ್ನು ಪೂಜಿಸಿ ಶಕ್ತ್ಯನುಸಾರ ದಾನಮಾಡುವವನು ಭಗಲೋಕವನ್ನೈದುವನು. ॥೩೩-೩೪॥

ಉತ್ತರಾನಕ್ಷತ್ರದಲ್ಲಿ ಶಿವನನ್ನು ಪೂಜಿಸಿ ಬ್ರಾಹ್ಮಣನಿಗೆ ಗೋದಾನ ಮಾಡುವವನು ಸೂರ್ಯಲೋಕವನ್ನು ಪಡೆದು ಅನಂತ ಸುಖಗಳನ್ನನುಭವಿಸುವನು. ಹಸ್ತನಕ್ಷತ್ರದಲ್ಲಿ ಮಹಾದೇವನನ್ನು ಪೂಜೆಮಾಡಿ ಬ್ರಹ್ಮಜ್ಞಾನಿಗೆ ದ್ರವ್ಯದಾನ ಮಾಡುವವನು ಸೂರ್ಯಲೋಕವನ್ನೈದುವನು. ಇದರಲ್ಲಿ ವಿಚಾರಣೆಮಾಡಬೇಕಾದ್ದೇ ಇಲ್ಲ. ॥೩೫-೩೬॥

ಸೂರ್ಯಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಚಿತ್ರಾಯಾಮೀಶ್ವರಂ ಪೂಜ್ಯ ದತ್ವಾ ಭಕ್ತ್ಯಾಂಗುಲೀಯಕಂ ॥೩೭॥

ತ್ವಷ್ಟಾರಂ ಪ್ರಾಪ್ಯ ತೇನೈವ ಮಹಾರುದ್ರಮವಾಪ್ನುಯಾತ್ ।
ಸ್ವಾತೌ ಸೋಮಂ ಸಮಭ್ಯರ್ಚ್ಯ ಬ್ರಾಹ್ಮಣಾನಪಿ ಪೂಜಯೇತ್ ॥೩೮॥

ವಾಯುಲೋಕಮವಾಪ್ನೋತಿ ಸೌಖ್ಯಂ ಚಾನಂತ್ಯಮಶ್ನುತೇ ।
ವಿಶಾಖೇ ಪೂಜ್ಯ ದೇವೇಶಂ ದತ್ವಾವೇದವಿದೇ ಧನಂ ॥೩೯॥

ಇಂದ್ರಾಗ್ನಿತ್ವಮವಾಪ್ನೋತಿ ಶಿವಂ ಪ್ರಾಪ್ನೋತ್ಯಸಂಶಯಂ ।
ಅನೂರಾಧಾದಿನೇ ಸಾಕ್ಷಾದಪಿ ಪೂಜ್ಯ ವೃಷಧ್ವಜಂ ॥೪೦॥

ದತ್ವಾ ಬ್ರಾಹ್ಮಣಹಸ್ತೇಽರ್ಥಂ ಮಿತ್ರಲೋಕಮವಾಪ್ನುಯಾತ್ ।
ಜ್ಯೇಷ್ಠಾಯಾಂ ಶಿವಮಾರಾಧ್ಯ ದತ್ವಾ ಮಾಷಂ ದ್ವಿಜಾತಯೇ ॥೪೧॥

ಇಂದ್ರಲೋಕಮವಾಪ್ನೋತಿ ಮುನೇ ನಾತ್ರ ವಿಚಾರಣಾ ।
ಮೂಲೇ ಮಹೇಶ್ವರಂ ಪೂಜ್ಯ ಬ್ರಾಹ್ಮಣಾಯ ದದಾತಿ ಯಃ ॥೪೨॥

---

ಚಿತ್ತಾನಕ್ಷತ್ರದಲ್ಲಿ ಈಶ್ವರನನ್ನು ಭಕ್ತಿಯಿಂದ ಪೂಜಿಸಿ ಉಂಗುರವನ್ನು ದಾನವಾಗಿ ಸಮರ್ಪಿಸುವವನು ತ್ವಷ್ಟೃಲೋಕವನ್ನು ಸೇರಿ ಅವನಿಂದಲೇ ಮಹಾ ರುದ್ರನ ಸಮೀಪವನ್ನು ಹೊಂದುತ್ತಾನೆ. ಸ್ವಾತೀನಕ್ಷತ್ರದಲ್ಲಿ ಶಂಕರನನ್ನು ಪೂಜಿಸಿ ಬ್ರಾಹ್ಮಣರನ್ನೂ ಪೂಜಿಸಬೇಕು. ಇದರಿಂದ ವಾಯುಲೋಕವನ್ನು ಸೇರಿ ಅಲ್ಲಿ ಅಪಾರವಾದ ಸುಖವನ್ನು ಹೊಂದುವನು ||೩೭-೩೮||

ವಿಶಾಖಾನಕ್ಷತ್ರದಲ್ಲಿ ಮಹೇಶ್ವರನನ್ನು ಪೂಜಿಸಿ, ವೇದಜ್ಞನಾದವನಿಗೆ ದ್ರವ್ಯದಾನಮಾಡುವವನು ಇಂದ್ರಾಗ್ನಿ ಪದವಿಯನ್ನು ಪಡೆದು ಕೊನೆಗೆ ಶಿವೈಕ್ಯ ನಾಗುವುದರಲ್ಲಿ ಸಂಶಯವೇ ಇಲ್ಲ. ಅನೂರಾಧಾ ನಕ್ಷತ್ರದ ದಿವಸ ವೃಷಭಧ್ವಜನಾದ ಪರಶಿವನನ್ನು ಪ್ರತ್ಯಕ್ಷವಾಗಿ ಪೂಜೆಮಾಡಿ ಬ್ರಾಹ್ಮಣನಿಗೆ ದ್ರವ್ಯದಾನಮಾಡುವಾತನು ಮಿತ್ರಲೋಕವನ್ನೈದುವನು. ಜ್ಯೇಷ್ಠಾನಕ್ಷತ್ರದ ದಿವಸ ಶಿವನನ್ನು ಪೂಜೆಮಾಡಿ ಬ್ರಾಹ್ಮಣನಿಗೆ ಉದ್ದನ್ನು ದಾನಮಾಡಿದವನು ಇಂದ್ರಲೋಕವನ್ನು ಸೇರುವನು. ಇದರಲ್ಲಿ ಅನುಮಾನವೇ ಇಲ್ಲ. ||೩೯-೪೦-೪೧||

ಮೂಲಾನಕ್ಷತ್ರದ ದಿವಸ ಮಹೇಶ್ವರನನ್ನು ಪೂಜಿಸಿ, ಬ್ರಾಹ್ಮಣನಿಗೆ ಅನ್ನ

ಅನ್ನಂ ಸ ನೈಋುತಂ ಗತ್ವಾ ರುದ್ರಲೋಕಮವಾಪ್నుಯಾತ್ ।
ಪೂರ್ವಾಷಾಢೇ ಮಹಾದೇವಂ ಪೂಜ್ಯ ಪುಷ್ಪಂ ದದಾತಿ ಯಃ ॥೪೩॥

ಸ ಯಾತಿ ವಾರುಣಂ ಲೋಕಂ ನಾತ್ರ ಕಾರ್ಯಾ ವಿಚಾರಣಾ ।
ಉತ್ತರಾಷಾಢನಕ್ಷತ್ರೇ ಪೂಜ್ಯ ದೇವಂ ತ್ರಿಯಂಬಕಂ ॥೪೪॥

ದತ್ವಾ ತಂಡುಲಮನ್ಯದ್ವಾ ಬ್ರಾಹ್ಮಣಾಯಾಗ್ನಿಹೋತ್ರಿಣೇ ।
ಬ್ರಹ್ಮಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೪೫॥

ಶ್ರವಣರ್ಕ್ಷೇ ಮಹಾದೇವಂ ಸಂಪೂಜ್ಯಾನ್ನಂ ಚತುರ್ವಿಧಂ ।
ಯೋ ದದಾತಿ ಬ್ರಾಹ್ಮಣೇಭ್ಯೋ ವಿಷ್ಣುಲೋಕೇ ಸಮೋದತೇ ॥೪೬॥

ಶಿವಂ ಧನಿಷ್ಠಾನಕ್ಷತ್ರೇ ಸಂಪೂಜ್ಯ ಬಿಲ್ವಪತ್ರಕೈಃ ।
ಇಷ್ಟಸಿದ್ಧಿಮವಾಪ್ನೋತಿ ಶಂಕರಸ್ಯ ಪ್ರಸಾದತಃ ॥೪೭॥

ರುದ್ರಂ ಶತಭಿಷೇ ಪೂಜ್ಯ ಬ್ರಾಹ್ಮಣಾಯ ಸುಕರ್ಮಿಣೇ ।
ದತ್ವಾ ವಸ್ತ್ರಂ ಹಿರಣ್ಯಂ ವಾ ವಾರುಣಂ ಲೋಕಮಾಪ್ನುಯಾತ್ ॥೪೮॥

---

ದಾನಮಾಡುವವನು ನೈಋುತಲೋಕವನ್ನು ಸೇರಿ ಅಲ್ಲಿಂದ ರುದ್ರಲೋಕವನ್ನು ಹೊಂದುವನು. ಪೂರ್ವಾಷಾಢಾ ನಕ್ಷತ್ರದಲ್ಲಿ ಮಹಾದೇವನನ್ನರ್ಚಿಸಿ ಪುಷ್ಪಸಮರ್ಪಣೆ ಮಾಡುವವನು ವರುಣಲೋಕವನ್ನು ಸೇರುತ್ತಾನೆಂಬುದರಲ್ಲಿ ವಿಚಾರಮಾಡ ಬೇಕಾದ್ದೇ ಇಲ್ಲ. ॥೪೨-೪೩॥

ಉತ್ತರಾಷಾಢ ನಕ್ಷತ್ರದಲ್ಲಿ ಮುಕ್ಕಣ್ಣೇಶ್ವರನನ್ನು ಪೂಜಿಸಿ, ಅಕ್ಕಿ ಅಥವಾ ಮತ್ತೇನಾದರೂ ಸರಿಯೇ ಅಗ್ನಿಹೋತ್ರಿಯಾದ ಬ್ರಾಹ್ಮಣನಿಗೆ ಸಮರ್ಪಿಸುವವನು ಬ್ರಹ್ಮಲೋಕವನ್ನು ಪಡೆಯುವನೆಂಬುದರಲ್ಲಿ ವಿಚಾರಣೆಮಾಡಬೇಕಾದ್ದೇ ಇಲ್ಲ. ಶ್ರವಣನಕ್ಷತ್ರದಲ್ಲಿ ಮಹಾದೇವನನ್ನು ಅರ್ಚನೆಮಾಡಿ ನಾಲ್ಕುಬಗೆಯ ಅನ್ನಗಳನ್ನು ಬ್ರಾಹ್ಮಣರಿಗೆ ದಾನಮಾಡುವವನು ವಿಷ್ಣುಲೋಕದಲ್ಲಿ ಆನಂದಪಡುವನು. ಧನಿಷ್ಠಾ ನಕ್ಷತ್ರದಲ್ಲಿ ಶಿವನನ್ನು ಬಿಲ್ವದಳಗಳಿಂದ ಪೂಜಿಸುವವನು ಆ ಶಂಕರನ ಅನುಗ್ರಹ ದಿಂದ ಇಷ್ಟಾರ್ಥಸಿದ್ಧಿ ಹೊಂದುವನು. ॥೪೪-೪೫-೪೬-೪೭॥

ಶತಭಿಷಾನಕ್ಷತ್ರದಲ್ಲಿ ರುದ್ರನನ್ನು ಪೂಜಿಸಿ, ಕರ್ಮನಿಷ್ಠನಾದ ಬ್ರಾಹ್ಮಣ ನಿಗೆ ವಸ್ತ್ರ, ಸುವರ್ಣ ಇವುಗಳನ್ನು ದಾನಮಾಡಿದವನು ವರುಣಲೋಕವನ್ನೈದು

ಪೂರ್ವಾಭಾದ್ರಪದೇ ಪೂಜ್ಯ ಪುರಾಣಂ ಪರಮೇಶ್ವರಂ ।
ಏಕಪಾದಭರಂ ಯಾತಿ ಮುನೇ ನಾತ್ರ ವಿಚಾರಣಾ ॥೪೯॥

ಯಸ್ತು ಪೂಜ್ಯೋತ್ತರಾಭಾದ್ರೇ ಶಿವಂ ಪರಮಕಾರಣಂ ।
ಬ್ರಾಹ್ಮಣಾಯ ವಿನೀತಾಯ ದದಾತಿ ಧನಮುತ್ತಮಂ ॥೫೦॥

ಅಹಿರ್ಬುಧ್ನ್ಯಮವಾಪ್ನೋತಿ ನಾಸ್ತಿ ಸಂಶಯಕಾರಣಂ ।
ರೇವತ್ಯಾಮಪಿ ಪೂಜ್ಯೇಶಂ ದತ್ವಾ ವಿಪ್ರಾಯ ಭೋಜನಂ ॥೫೧॥

ಸೂರ್ಯಲೋಕಮವಾಪ್ನೋತಿ ಸತ್ಯಂ ಸತ್ಯಂ ವದಾಮ್ಯಹಂ ॥೫೨॥

ಅರ್ಕವಾರೇ ಮಹಾದೇವಂ ತ್ರಿಃ ಕೃತ್ವಾ ತು ಪ್ರದಕ್ಷಿಣಂ ।
ಪ್ರಣಮ್ಯ ದಂಡವದ್ಭೂಮೌ ಭಕ್ತ್ಯಾ ಪರಮಯಾ ಸಹ ॥೫೩॥

ಸ್ನಾನಂ ಸ್ರಕ್ಚಂದನಾದ್ಯೈಸ್ತು ಸ್ವಶರೀರಮಲಂಕೃತಂ ।
ಭೋಗ್ಯಂ ದದಾತಿ ಯಾ ವೇಶ್ಯಾ ಯಥೇಷ್ಟಂ ಶಿವಯೋಗಿನೇ ॥೫೪॥

---

ವನು. ಪೂರ್ವಾಭಾದ್ರಪದ ನಕ್ಷತ್ರದಲ್ಲಿ ಪುರಾಣಪುರುಷನೆನಿಸಿದ ಪರಮೇಶ್ವರನನ್ನು ಪೂಜಿಸಿದವನು, ಅಜಚರಣದೇವತೆಯ ಲೋಕವನ್ನು ಸೇರುವನು. ಅಯ್ಯ ಮುನಿಯೆ! ಈ ವಿಚಾರದಲ್ಲಿ ಅನುಮಾನವೇ ಅವಶ್ಯಕವಿಲ್ಲ. ॥೪೮-೪೯॥

ಉತ್ತರಾಭಾದ್ರಪದ ನಕ್ಷತ್ರದಲ್ಲಿ ಪರಮಕಾರಣನೆನಿಸಿದ ಶಿವನನ್ನು ಪೂಜೆ ಮಾಡಿ ವಿನಯಸಂಪನ್ನನಾದ ಬ್ರಾಹ್ಮಣನಿಗೆ ಉತ್ತಮವಾದ ಧನದಾನವನ್ನು ಮಾಡುವವನು ಅಹಿರ್ಬುಧ್ನ್ಯಲೋಕವನ್ನು ಹೊಂದುವನು. ಇದರಲ್ಲಿ ಸಂಶಯಕ್ಕೇ ಕಾರಣವಿಲ್ಲ. ರೇವತೀನಕ್ಷತ್ರದಲ್ಲಿ ಈಶ್ವರನನ್ನು ಪೂಜೆಮಾಡಿ ಬ್ರಾಹ್ಮಣನಿಗೆ ಭೋಜನಮಾಡಿಸುವವನು ಸೂರ್ಯಲೋಕವನ್ನು ಹೊಂದುವನು. ದೇವಿ, ಇದು ಸತ್ಯವೆಂದು ನಾನು ದೃಢವಾಗಿ ಹೇಳುವೆನು. ॥೫೦-೫೧-೫೨॥

ಜೈಗೀಷವ್ಯಮಹಾಮುನಿಯೇ, ಭಾನುವಾರ ಮಹಾದೇವನಿಗೆ ಮೂರು ಪ್ರದಕ್ಷಿಣೆಮಾಡಿ ಪರಮಭಕ್ತಿಯಿಂದ ನೆಲದ ಮೇಲೆ ದಂಡಪ್ರಣಾಮ ಮಾಡಿ, ತನ್ನ ದೇಹವನ್ನು ಸ್ನಾನ ಸ್ರಕ್ಚಂದನಾದಿಗಳಿಂದ ಅಲಂಕರಿಸಿಕೊಂಡು ಶಿವಯೋಗಿಯಾದವನಿಗೆ ಅವನ ಇಷ್ಟಾನುಸಾರ ಸಂಭೋಗವನ್ನು ಯಾವ ಸೂಳೆಯು ಕಲ್ಪಿಸಿ ಕೊಡುವಳೋ ಅವಳ ಪುಣ್ಯಫಲವನ್ನು ತಿಳಿಸುವೆನು ಕೇಳು. ॥೫೩-೫೪॥

ತಸ್ಯಾಃ ಪುಣ್ಯಫಲಂ ಬ್ರಹ್ಮಂಛೃಣು ವೇದವಿದಾಂ ವರ ।
ಬ್ರಹ್ಮಹತ್ಯಾಸುರಾಪಾನಸ್ವರ್ಣಸ್ತೇಯಾದಿಪಾತಕೈಃ ॥೫೫॥

ಮುಚ್ಯತೇ ನಾತ್ರ ಸಂದೇಹೋ ಮದ್ಭಕ್ತಸ್ಯ ಹಿ ಪೂಜನಾತ್ ।
ಇಹ ಲೋಕೇ ಮುನೇಪುಂಸಾಂ ವಲ್ಲಭಾ ಭವತಿ ಧ್ರುವಂ ॥೫೬॥

ಆಯುರಾರೋಗ್ಯಮೈಶ್ವರ್ಯಮಪಿ ಪ್ರಾಪ್ನೋತ್ಯಸಂಶಯಃ ।
ಪ್ರೇತ್ಯ ಸೂರ್ಯಪ್ರತೀಕಾಶೈರ್ವಿಮಾನೈರ್ಬಹುಭಿಃ ಸಹ ॥೫೭॥

ಪಾರ್ವತೀಲೋಕಮಾಪ್ನೋತಿ ಸುಖಂ ಚಾಕ್ಷಯಮಶ್ನುತೇ ।
ಅರ್ಕವಾರೇ ತು ವಿದ್ವಾಂಸಂ ಧನಂ ದತ್ವಾ ತು ಭೋಜಯೇತ್ ॥೫೮॥

ವೇಶ್ಯಾಮಲಂಕೃತಾಂ ಬ್ರಹ್ಮಂಸ್ತಸ್ಯ ಪುಣ್ಯಫಲಂ ಶೃಣು ।
ಸರ್ವಪಾಪವಿನಿರ್ಮುಕ್ತಃ ಸರ್ವೈಶ್ವರ್ಯಮವಾಪ್ನುಯಾತ್ ॥೫೯॥

---

ಬ್ರಹ್ಮಹತ್ಯೆ, ಮದ್ಯಪಾನ, ಸುವರ್ಣಸ್ತೇಯ ಮುಂತಾದ ಪಾತಕಗಳಿಂದಲೂ ಆ ವೇಶ್ಯೆಯು ಮುಕ್ತಳಾಗುವಳು. ಅಯ್ಯ ಮುನಿಪುಂಗವನೆ, ಇದರಲ್ಲಿ ಸಂದೇಹ ವಿಲ್ಲ. ನನ್ನ ಭಕ್ತನ ಪೂಜೆಯಿಂದ ಇಹಲೋಕದಲ್ಲಿ ಪುರುಷರ ಪ್ರೀತಿಗೆ ಖಂಡಿತ ವಾಗಿಯೂ ಪಾತ್ರಳಾಗುವಳು. ಆಯುರಾರೋಗ್ಯ, ಐಶ್ವರ್ಯ ಮುಂತಾದವುಗಳನ್ನೂ ಸಂಶಯವಿಲ್ಲದೆ ಪಡೆಯುವಳು. ಅನಂತರ ಮೃತಳಾಗಿ ಸೂರ್ಯನಂತೆ ಪ್ರಕಾಶಿಸುವ ಅನೇಕ ವಿಮಾನಗಳಲ್ಲಿ ಮೆರೆಯುವ ಪಾರ್ವತೀಲೋಕವನ್ನು ಸೇರಿ ಅಕ್ಷಯವಾದ ಸುಖವನ್ನು ಹೊಂದುವಳು. ॥೫೫-೫೬-೫೭॥

ಭಾನುವಾರ ವಿದ್ವಾಂಸನಿಗೆ ದ್ರವ್ಯದಾನಮಾಡಿ ಭೋಜನವಿಟ್ಟು ಅಲಂಕೃತ ಳಾದ ವೇಶ್ಯೆಯನ್ನು ಸೇವೆಗೆ ಇಡುವವನ ಪುಣ್ಯಫಲವನ್ನು ಹೇಳುತ್ತೇನೆ ಕೇಳು ; ಅಯ್ಯ ಬ್ರಾಹ್ಮಣನೇ, ಅವನು ಸಕಲ ಪಾತಕಗಳಿಂತಲೂ ಮುಕ್ತನಾಗಿ ಸಮಸ್ತ ಐಶ್ವರ್ಯವನ್ನೂ ಹೊಂದುವನು. ಅಯ್ಯ ಮುನಿಯೆ, ತನ್ನ ಮರಣವಾದನಂತರ ಈ ಭಕ್ತನು ಈಶ್ವರಸಾಯುಜ್ಯವನ್ನು ಪಡೆಯುವನು. ಇದರಲ್ಲಿ ವಿಚಾರಣೆಮಾಡ ಬೇಕಾದ್ದಿಲ್ಲ. ॥೫೮-೫೯॥

ಪ್ರೇತ್ಯ ಚೇಶ್ವರಮಾಪ್ನೋತಿ ಮುನೇ ನಾತ್ರ ವಿಚಾರಣಾ ।
ಸೋಮವಾರೇ ಮಹಾದೇವಂ ದೃಷ್ಟ್ವಾ ಭೂಮೌ ಪ್ರಣಮ್ಯ ಚ ॥೬೦॥

ವಸ್ತ್ರಂ ವಾ ಧನಮನ್ಯದ್ವಾ ದದಾತಿ ಶಿವಯೋಗಿನೇ ।
ಸಂಕರಾಶ್ಚಾಪಿ ಮುಚ್ಯಂತೇ ಪಾಪೈಃ ಸರ್ವೈರ್ನ ಸಂಶಯಃ ॥೬೧॥

ಭೌಮವಾರೇ ಮಹಾದೇವಂ ಪ್ರಣಮ್ಯ ಶಿವಯೋಗಿನೇ ।
ದದಾತಿ ಧನಮನ್ಯದ್ವಾ ಸ ಯುದ್ಧೇ ಜಯಮಾಪ್ನುಯಾತ್ ॥೬೨॥

ಬುಧವಾರೇ ವಿರೂಪಾಕ್ಷಂ ಪ್ರಣಮ್ಯ ಭುವಿ ದಂಡವತ್ ।
ಅಭ್ಯಂಗಯೋಗಿನಂ ಕುರ್ವನ್ನಾರೋಗ್ಯಂ ಶೀಘ್ರಮಾಪ್ನುಯಾತ್ ॥೬೩॥

ಜೀವವಾರೇ ಶಿವಂ ದೃಷ್ಟ್ವಾ ಪ್ರಣಮ್ಯ ಪರಮೇಶ್ವರಂ ।
ಜ್ಞಾನಿನಂ ಭೋಜಯಿತ್ವಾ ತು ಶೀಘ್ರಂ ಜ್ಞಾನಮವಾಪ್ನುಯಾತ್ ॥೬೪॥

ಶುಕ್ರವಾರೇ ಮುನೇ ದೃಷ್ಟ್ವಾ ಪ್ರಣಮ್ಯ ವೃಷವಾಹನಂ ।
ಶಿವಯೋಗಿಕರೇ ದತ್ವಾ ಯತ್ಕಿಂಚಿದ್ಧನಮುತ್ತಮಂ ॥೬೫॥

---

ಸೋಮವಾರ ಮಹೇಶನ ದರ್ಶನಮಾಡಿ ನೆಲದಮೇಲೆ ನಮಸ್ಕರಿಸಿ, ಶಿವಯೋಗಿಯಾದವನಿಗೆ ವಸ್ತ್ರ, ಧನ ಅಥವಾ ಮತ್ತೇನನ್ನಾದರೂ ದಾನಮಾಡುವ ಸಂಕರವರ್ಣದವರೂ ಸಹ ಸಮಸ್ತ ಪಾತಕಗಳಿಂದಲೂ ಮುಕ್ತರಾಗುವುದರಲ್ಲಿ ಸಂದೇಹವೇ ಇಲ್ಲ. ॥೬೦-೬೧॥

ಮಂಗಳವಾರ ಮಹಾದೇವನಿಗೆ ನಮಸ್ಕರಿಸಿ ಶಿವಯೋಗಿಗೆ ಹಣ ಅಥವಾ ಮತ್ತೇನನ್ನಾದರೂ ದಾನಮಾಡುವವನು ಯುದ್ಧದಲ್ಲಿ ಜಯವನ್ನು ಪಡೆಯುವನು. ಬುಧವಾರ ವಿರೂಪಾಕ್ಷನಿಗೆ ಭೂಮಿಯಲ್ಲಿ ದಂಡಪ್ರಣಾಮಮಾಡಿ ಶಿವಯೋಗಿಗೆ ಅಭ್ಯಂಗಸ್ನಾನಮಾಡಿಸುವಾತನು ಜಾಗ್ರತೆ ಆರೋಗ್ಯವನ್ನು ಪಡೆಯುವನು. ಗುರುವಾರ ಶಿವದರ್ಶನಮಾಡಿ ಆ ಪರಮೇಶ್ವರನಿಗೆ ನಮಸ್ಕರಿಸಿ ಜ್ಞಾನಿಗೆ ಭೋಜನ ಮಾಡಿಸುವವನು ಶೀಘ್ರದಲ್ಲಿಯೇ ಸುಜ್ಞಾನವನ್ನು ಪಡೆದು ಮುಕ್ತನಾಗುವನು. ॥೬೨-೬೩-೬೪॥

ಅಯ್ಯ ಮುನಿಯೆ! ಶುಕ್ರವಾರ ವೃಷಭವಾಹನನಾಗಿರುವ ಶಂಕರನನ್ನು ದರ್ಶನಮಾಡಿ ನಮಸ್ಕರಿಸಿ ಶಿವಯೋಗಿಯ ಕೈಯಲ್ಲಿ ಯಾವುದಾದರೂ ಅಲ್ಪ

ವಂಧ್ಯಾ ಪುತ್ರಮವಾಪ್ನೋತಿ ನರಶ್ಚಾಪ್ನೋತಿ ಕಾಂಕ್ಷಿತಂ ।
ಮಂದವಾರೇ ಮಹಾದೇವಂ ನಮಸ್ಕೃತ್ಯ ತು ಯೋಗಿನೇ ॥೬೬॥

ದದಾತಿ ಧನಮತ್ಯಲ್ಪಮಪಿ ಯೋ ಮುನಿಸತ್ತಮ ।
ಸ ರಾಜ್ಞಾಂ ವಲ್ಲಭೋ ಭೂತ್ವಾ ಧನಮಕ್ಷಯಮಾಪ್ನುಯಾತ್ ॥೬೭॥

ವ್ಯತೀಪಾತೇ ಧನಂ ಧಾನ್ಯಂ ತಿಲಂ ವಾ ತಂಡುಲಂ ತು ವಾ ।
ನಮಸ್ಕೃತ್ಯ ಮಹಾದೇವಂ ಯೋಗಿನೇ ಯೋ ದದಾತಿ ಸಃ ॥೬೮॥

ಸರ್ವಪಾಪವಿನಿರ್ಮುಕ್ತಃ ಸ್ವರ್ಗಂ ಮೋಕ್ಷಂ ಚ ವಿಂದತಿ ।
ಬಹುನೋಕ್ತೇನ ಕಿಂ ಬ್ರಹ್ಮನ್ಮಹಾದೇವಸ್ಯ ಪೂಜನಾತ್ ॥೬೯॥

ನಿಕೃಷ್ಟವಿಪ್ರೋ ಮುಚ್ಯೇತ ಸ್ವಸಂಸಾರಮಹೋದಧೇಃ ॥೭೦॥

ಯಃ ಶಿವಂ ಪೂಜಯೇನ್ನಿತ್ಯಂ ಲಿಂಗೇ ಭಕ್ತ್ಯಾ ಮುನೇ ತು ಸಃ ।
ನ ಯಾತಿ ನರಕಂ ಘೋರಂ ಶಿವಂ ಸಾಕ್ಷಾದವಾಪ್ನುಯಾತ್ ॥೭೧॥

---

ಸಂಖ್ಯೆಯ ಉತ್ತಮಧನವನ್ನು ದಾನಮಾಡುವ ಬಂಜೆಯೂ ಸಹ ಪುತ್ರಸಂಪತ್ತನ್ನು ಪಡೆಯುವಳು. ಮಾನವನು ತನಗೆ ಬೇಕಾದ್ದನ್ನು ಪಡೆಯುವನು. ಶನಿವಾರ ಮಹಾದೇವನಿಗೆ ನಮಸ್ಕಾರಮಾಡಿ ಶಿವಯೋಗಿಗೆ ಅತ್ಯಲ್ಪವಾದ ದ್ರವ್ಯದಾನಮಾಡು ವವನೂ ರಾಜವಲ್ಲಭನಾಗಿ ಅಕ್ಷಯವಾದ ಧನಸಂಪತ್ತನ್ನು ಪಡೆಯುವನು. ॥೬೫-೬೬-೬೭॥

ವ್ಯತೀಪಾತದಲ್ಲಿ ಮಹಾದೇವನಿಗೆ ನಮಸ್ಕರಿಸಿ ಶಿವಯೋಗಿಗೆ, ಧನ, ಧಾನ್ಯ, ಎಳ್ಳು, ಅಕ್ಕಿ ಇವುಗಳಲ್ಲಿ ಯಾವುದನ್ನಾದರೂ ದಾನಮಾಡುವವನು ಸಕಲ ಪಾತಕ ಗಳಿಂದಲೂ ಮುಕ್ತನಾಗಿ ಸ್ವರ್ಗವನ್ನೂ ಮೋಕ್ಷವನ್ನೂ ಹೊಂದುತ್ತಾನೆ. ಅಯ್ಯ ಬ್ರಾಹ್ಮಣನೆ! ಹೆಚ್ಚುಮಾತಿನಿಂದೇನುಪ್ರಯೋಜನ? ಮಹೇಶನ ಪೂಜೆಯಿಂದ ಹೀನಬ್ರಾಹ್ಮಣನೂ ಸಹ ತನ್ನ ಸಂಸಾರವೆಂಬ ದೊಡ್ಡ ಸಾಗರದಿಂದ ಮುಕ್ತನಾಗು ತ್ತಾನೆ. ॥೬೮-೬೯-೭೦॥

ಮುನಿಯೆ! ನಿತ್ಯವೂ ಭಕ್ತಿಯಿಂದ ಶಿವಲಿಂಗದಲ್ಲಿ ಶಿವಾರ್ಚನೆಮಾಡು ವಾತನು ಘೋರನರಕವನ್ನು ಸೇರದೆ ಸಾಕ್ಷಾತ್ಪರಮೇಶ್ವರನನ್ನೇ ಸೇರುತ್ತಾನೆ.॥೭೧॥

ದಾನಾನಿ ಯಜ್ಞಾಂಶ್ಚ ಮಹಾತಪಾಂಸಿ
ಸಂನ್ಯಾಸವೃತ್ತಿಶ್ಚ ಜಿತೇಂದ್ರಿಯತ್ವಂ ।
ಸರ್ವಂ ನ ತುಲ್ಯಂ ಭವತೀಶ್ವರಸ್ಯ
ಲಿಂಗಸ್ಯ ನಿತ್ಯಾರ್ಚನಮೇತಿ ವೃದ್ಧಿಂ ॥೭೨॥

ಸತ್ರಾತಿರಾತ್ರಜನಿತಾದಪಿ ಪುಣ್ಯ ಸಂಘಾ
ತ್ಪಾತ್ರೇಷು ದಾನಕರಣಾದಪಿ ಪುಣ್ಯವರ್ಯಂ ।
ನಕ್ಷತ್ರಪೂಜನಮುಮೇ ಮಮ ಲಿಂಗಮೌಲಾ
ದ್ವಿತ್ರ್ಯೈರ್ಜಲೈಃ ಕುಸುಮಪತ್ರವರೈಃ ಕೃತಂ ಸ್ಯಾತ್ ॥೭೩॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ತಿಥಿನಕ್ಷತ್ರವಾರವ್ಯತೀಪಾತಾರ್ಚನ
ಮಹಿಮಾವರ್ಣನಂ ನಾಮ ದಶಮೋಽಧ್ಯಾಯಃ

---

ದಾನಗಳೂ, ಯಾಗಗಳೂ, ದೊಡ್ಡ ತಪಸ್ಸುಗಳೂ, ಸಂನ್ಯಾಸವೃತ್ತಿಯೂ ಜಿತೇಂದ್ರಿಯತ್ವವೂ ಇವೆಲ್ಲವೂ ಈಶ್ವರನ ಲಿಂಗಾರ್ಚನೆಗೆ ಸಮವಾಗಲಾರವು. ನಿತ್ಯ, ಲಿಂಗಾರ್ಚನೆಯು ಯಾವಾಗಲೂ ಭಕ್ತರನ್ನು ಅಭಿವೃದ್ಧಿಹೊಂದಿಸುವುದು. ॥೭೨॥

ಪಾರ್ವತಿಯೇ, ಸತ್ರ, ಅತಿರಾತ್ರಯಾಗಗಳಿಂದುಂಟಾಗುವ ಪುಣ್ಯರಾಶಿಗಿಂತಲೂ, ಸತ್ಪಾತ್ರನಿಗೆ ಅಮೂಲ್ಯ ವಸ್ತುಗಳ ದಾನಮಾಡುವುದರಿಂದುಂಟಾಗುವ ಪುಣ್ಯಸಂಘಕ್ಕಿಂತಲೂ, ನನ್ನ ಲಿಂಗದ ಮೇಲೆ ಎರಡು ಮೂರು ಹೂವುಗಳಿಂದಾಗಲಿ ಅಥವಾ ಪತ್ರೆಗಳಿಂದಲಾಗಲಿ ನೀರಿನಿಂದಲೇ ಆಗಲಿ ಆಯಾ ನಕ್ಷತ್ರಗಳಲ್ಲಿ ಮಾಡುವ ಪೂಜೆಯು ಉತ್ಕೃಷ್ಟ ಪುಣ್ಯದಾಯಕವಾದುದೆಂದು ಈಶ್ವರನು ಪಾರ್ವತಿಗೆ ಹೇಳಿದನು. ॥೭೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ತಿಥಿ, ನಕ್ಷತ್ರ, ವಾರ,
ವ್ಯತೀಪಾತಾದಿಗಳಲ್ಲಿ ಮಾಡಿದ ಶಿವಲಿಂಗಪೂಜಾಮಹಿಮೆಯ
ವರ್ಣನೆಯೆಂಬ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕಾದಶೋಽಧ್ಯಾಯಃ

॥ ಈಶ್ವರ ಉವಾಚ ॥

ಲಿಂಗದ್ವಯಂ ಸಮಾಖ್ಯಾತಂ ಚಲಂ ಚಾಚಲಮೇವ ಚ ।
ಚಲಂ ಧಾತುಷು ಸಂಕ್ಲೃಪ್ತಮಚಲಂ ಪಾರ್ಥಿವಾದಿಷು ॥೧॥

ಚಲೇ ಸದಾ ವಸತ್ಯೇವ ಪ್ರೀತಿಯುಕ್ತೋ ಮಹೇಶ್ವರಃ ।
ಅಚಲೇ ಮಂತ್ರಸಂಸ್ಕಾರಾತ್ಸತ್ಯಮೇವ, ಸದಾಶಿವಃ ॥೨॥

ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್ ।
ತಸ್ಮಾಲ್ಲಿಂಗದ್ವಯಂ ದೇವಿ ನಾವಮನ್ಯೇತ ಕರ್ಹಿಚಿತ್ ॥೩॥

---

## ಹನ್ನೊಂದನೆಯ ಅಧ್ಯಾಯ

ಗಿರಿಜೆಯೇ ಕೇಳು, ಶಿವಲಿಂಗಗಳಲ್ಲಿ ಚರ, ಮತ್ತು ಸ್ಥಿರಗಳೆಂದು ಎರಡು ವಿಧಗಳಿವೆ. ಚರಲಿಂಗವು ಲೋಹಗಳಿಂದ ಕಲ್ಪಿತವಾದುದು. ಸ್ಥಾವರಲಿಂಗವು ಮಣ್ಣು, ಕಲ್ಲು ಮುಂತಾದವುಗಳಿಂದ ನಿರ್ಮಿತವಾದುದು. ಚರಲಿಂಗಗಳಲ್ಲಿ ಮಹೇಶ್ವರನು ಯಾವಾಗಲೂ ಪ್ರೀತಿಯಿಂದ ವಾಸಮಾಡುತ್ತಾನೆ. ಸ್ಥಾವರಲಿಂಗಗಳಲ್ಲಿ ಮಂತ್ರಸಂಸ್ಕಾರಗಳಿಂದಲೂ ಪೂಜಾದಿಗಳಿಂದಲೂ ಸದಾಶಿವನು ನೆಲಸುತ್ತಾನೆ. ಚರಲಿಂಗಕ್ಕೆ ಅವಮಾನಮಾಡುವುದರಿಂದ ಸ್ಥಾವರಲಿಂಗದ ಪ್ರಭಾವವೂ ವ್ಯರ್ಥವಾಗುವುದು. ಅದ್ದರಿಂದ ಲೋಕದಲ್ಲಿ ಈ ಎರಡು ಲಿಂಗಗಳನ್ನೂ ಎಂದಿಗೂ ನಿಂದಿಸಬಾರದು. ॥೧-೨-೩॥

ಕೃತಾಪಮಾನೋ ಯೋ ಮೋಹಾನ್ನರಕೇ ಪಚ್ಯತೇ ಚಿರಂ ।
ತಸ್ಮಾತ್ಪತ್ರೈಃ ಫಲೈಸ್ತೋಯೈಃ ಕ್ಷೀರಾದ್ಯೈಃ ಸ್ನಾಪಯೇಚ್ಛಿವಂ ॥೪॥

ಸ ಯತ್ಫಲಮವಾಪ್ನೋತಿ ತದೇಕಾಗ್ರಮನಾಃ ಶೃಣು ।
ಸರ್ವಯಜ್ಞತಪೋದಾನತೀರ್ಥವೇದೇಷು ಯತ್ಫಲಂ ॥೫॥

ತತ್ಪುಣ್ಯಂ ಕೋಟಿಗುಣಿತಂ ಸ್ನಾಪ್ಯ ಲಿಂಗಂ ಲಭೇನ್ನರಃ ।
ಮಾತೃತಃ ಪಿತೃತಶ್ಚೈವ ಯತಶ್ಚೋದ್ವಹತೇ ಸ್ತ್ರಿಯಃ ॥೬॥

ಕುಲೈಕವಿಂಶಮುತ್ತಾರ್ಯ ಮಮ ಲೋಕೇ ಮಹೀಯತೇ ।
ಗಂಧಾನುಲೇಪನಾತ್ಪುಣ್ಯಂ ದ್ವಿಗುಣಂ ಚಂದನಸ್ಯ ತು ॥೭॥

ಚಂದನಾದಗರೋರ್ಜ್ಞೇಯಂ ಪುಣ್ಯಮಷ್ಟಗುಣಾಧಿಕಂ ।
ಕೃಷ್ಣಾಗರೋರ್ದೇವದಾರೋಃ ಫಲಂ ಯತ್ಸಮಮೇವ ಹಿ ॥೮॥

ಯಕ್ಷಕರ್ದಮಜಾಲೇಪಸ್ತತಃ ಶತಗುಣೋತ್ತರಃ ।
ಲಿಂಗಸ್ಯಾಲೇಪನಂ ಕುರ್ಯಾದ್ದಿವ್ಯಗಂಧೈಃ ಸುಗಂಧಿಭಿಃ ॥೯॥

---

ಅಜ್ಞಾನದಿಂದಲಾದರೂ ಶಿವಲಿಂಗಕ್ಕೆ ಅವಮಾನವನ್ನುಂಟುಮಾಡಿದವನು ಬಹುಕಾಲ ನರಕದಲ್ಲಿ ನರಳುವನು. ಆದ್ದರಿಂದ ಪತ್ರೆ, ಫಲ, ನೀರು, ಹಾಲು ಮುಂತಾದ ಸಾಧನಗಳಿಂದ ಶಿವನಿಗೆ ಅಭಿಷೇಕ, ಪೂಜೆ ಇವುಗಳನ್ನೆಸಗಬೇಕು. ಹೀಗೆ ಮಾಡಿದವನು ಪಡೆಯುವ ಫಲವನ್ನು ಏಕಾಗ್ರಚಿತ್ತದಿಂದ ಲಾಲಿಸು; ಸಮಸ್ತ, ಯಜ್ಞ, ತಪಸ್ಸು, ದಾನ, ತೀರ್ಥ, ವೇದಾಧ್ಯಯನ ಇವುಗಳಲ್ಲಿ ಯಾವ ಫಲವು ಹೇಳಲ್ಪಟ್ಟಿದೆಯೋ, ಅದಕ್ಕೆ ಕೋಟಿಪಾಲು ಪುಣ್ಯವನ್ನು ಲಿಂಗಾಭಿಷೇಕ ಮಾಡಿದವನು ಪಡೆಯುವನು. ಅಲ್ಲದೆ ಈ ಶಿವಾರ್ಚನೆಯು ತಾಯಿ, ತಂದೆ, ಹೆಂಡತಿ ಇವರ ಇಪ್ಪತ್ತೊಂದು ವಂಶೀಕರನ್ನೂ ನರಕದಿಂದ ಉದ್ಧರಿಸಿ ಕೊನೆಗೆ ನನ್ನ ಲೋಕದಲ್ಲಿ ಮೆರೆಯಿಸುವುದು. ॥೪-೫-೬॥

ಗಂಧಲೇಪನಕ್ಕಿಂತಲೂ ಶಿವಲಿಂಗಕ್ಕೆ ಚಂದನಲೇಪನವು ಎರಡರಷ್ಟು ಫಲಪ್ರದವು. ಚಂದನಕ್ಕಿಂತಲೂ ಕೃಷ್ಣಾಗರುವಿನ ಲೇಪನವು ಎಂಟುಪಾಲು ಗುಣಾಧಿಕವು. ಕೃಷ್ಣಾಗರುವಿಗೂ ದೇವದಾರುಗಂಧಲೇಪನಕ್ಕೂ ಸಮಾನವಾದ ಪುಣ್ಯಫಲವೇ ಉಕ್ತವಾಗಿದೆ. ಹಾಲುಮಡ್ಡಿಯ ಲೇಪನವು ಅದಕ್ಕಿಂತಲೂ ನೂರುಪಾಲು ಗುಣಾ

ವರ್ಷಕೋಟಿಶತಂ ಪುಣ್ಯಂ ಶಿವಲೋಕೇ ಸ ಮೋದತೇ ।
ಚಂದನಾಗರುಕಸ್ತೂರೀಕರ್ಪೂರೈಃ ಕುಂಕುಮಾದಿಭಿಃ ॥೧೦॥

ಲಿಂಗಮಾಪೀಠಮಾಲಿಪ್ಯ ಕಲ್ಪಕೋಟಿಂ ವಸೇದ್ದಿವಿ ।
ಸಂವೀಜ್ಯ ತಾಲವೃಂತೇನ ವಾಯುಲೋಕೇ ಮಹೀಯತೇ ॥೧೧॥

ಲಾಕ್ಷಾಂ ಪ್ರಾಣ್ಯಂಗನಿರ್ಮುಕ್ತಾಂ ಧೂಪಂ ದದ್ಯಾತ್ಸಕೃಚ್ಛಿವೇ ।
ಚತುರ್ವೇದಿಗೃಹೇ ಜನ್ಮ ಪ್ರಾಪ್ನೋತಿ ಶ್ರೀವಿರಾಜಿತಃ ॥೧೨॥

ಕೃಷ್ಣಾಗರುಂ ಸಕರ್ಪೂರಂ ಧೂಪಂ ದದ್ಯಾನ್ಮಹೇಶ್ವರೇ ।
ನೈರಂತರ್ಯೇಣ ಮಾಸಾರ್ಧಂ ತಸ್ಯ ಪುಣ್ಯಫಲಂ ಶೃಣು ॥೧೩॥

ಕಲ್ಪಾಯುತಂ ಮಹಾದೇವಿ ಭೋಗಭುಕ್ತ್ವಾ ನ್ಮಮಾಲಯೇ ।
ಭುಕ್ತ್ವಾ ಶಿವಪುರೇ ಭೋಗಂ ತಸ್ಯಾಂತೇ ಸ ಮಹೀಪತಿಃ ॥೧೪॥

---

ಧಿಕವು. ಇಂತಹ ಸುಗಂಧಭರಿತವಾದ ದಿವ್ಯಗಂಧಗಳಿಂದ ಶಿವಲಿಂಗಕ್ಕೆ ಲೇಪನ ಮಾಡಬೇಕು. ಹೀಗೆ ಲೇಪನಮಾಡಿದವನು ನೂರುಕೋಟಿವರ್ಷಗಳತನಕ ಪುಣ್ಯಪ್ರದವಾದ ಶಿವಲೋಕದಲ್ಲಿ ಆನಂದಿಸುವನು. ||೭-೮-೯||

ಚಂದನ, ಅಗರು, ಕಸ್ತೂರಿ, ಕರ್ಪೂರ, ಕುಂಕುಮ ಮುಂತಾದವುಗಳಿಂದ ಶಿವಲಿಂಗಕ್ಕೆ ಪೀಠದವರೆಗೂ ಲೇಪನಮಾಡಿದವನು ಕೋಟಿಕಲ್ಪಕಾಲ ಸ್ವರ್ಗದಲ್ಲಿ ವಾಸಮಾಡುವನು. ಶಿವನಿಗೆ ಬೀಸಣಿಗೆ (ಚಾಮರ) ಯಿಂದ ಬೀಸಿದವನು ವಾಯು ಲೋಕದಲ್ಲಿ ಸುಖಿಯಾಗಿರುವನು. ಸುಗಂಧವಾದ ಅರಗನ್ನೂ ಗುಗ್ಗುಲನ್ನೂ ಒಂದು ಬಾರಿ ಶಿವನಿಗೆ ಧೂಪಹಾಕುವವನು ಚತುರ್ವೇದಗಳನ್ನೂ ತಿಳಿದವನ ಮನೆಯಲ್ಲಿ ಜನ್ಮತಾಳಿ ಸಂಪತ್ತಿನಿಂದ ವಿದ್ಯಾಧನನೆನಿಸಿ ವಿರಾಜಿಸುವನು. ||೧೦-೧೨||

ದೇವಿಯೆ, ಹದಿನೈದು ದಿನಗಳ ವರೆಗೆ ಕರ್ಪೂರಮಿಶ್ರಿತವಾದ ಕೃಷ್ಣಾಗರುವನ್ನು ಮಹೇಶ್ವರನಿಗೆ ಎಡಬಿಡದೇ ಧೂಪಹಾಕುವವನಿಗೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು ; ಆತನು ನನ್ನ ಕೈಲಾಸಗೃಹದಲ್ಲಿ ಹತ್ತುಸಾವಿರ ಕಲ್ಪಗಳಕಾಲ ಸಕಲ ವಿಧಗಳಾದ ಭೋಗಗಳನ್ನನುಭವಿಸಿ ಅದು ಮುಗಿದನಂತರ ಭೂಮಿಯಲ್ಲಿ ರಾಜನಾಗುವನು. ||೧೩-೧೪||

ಸ ಸಾಗರೋರ್ವರಾಂತಾಯಾ ರಾಜ್ಯಂ ನಿಷ್ಕಂಟಕಂ ಲಭೇತ್ ।
ಗುಗ್ಗುಲಂ ಘೃತಸಂಮಿಶ್ರಂ ದಗ್ಧಂ ಗೃಹ್ಣಾತಿ ಶಂಕರಃ ॥೧೫॥

ಅಪರಾಧಸಹಸ್ರಂಚ ಇಹಾಮುತ್ರ ಕೃತಂ ಕ್ಷಮೇತ್ ।
ದೇವದಾರುಂ ಸ ಕರ್ಪೂರಂ ಧೂಪಂ ದತ್ವಾ ಮಹಾಫಲಂ ॥೧೬॥

ಶ್ರೀಫಲಂ ಪೂಜ್ಯಸಂಮಿಶ್ರಂ ದಗ್ಧ್ವಾ ಪ್ರಿಯತರಃ ಶಿವೇ ।
ಏಭ್ಯಃ ಸುಗಂಧಿತಂ ಧೂಪಂ ಷಟ್ಸಹಸ್ರಗುಣೋತ್ತರಂ ॥೧೭॥

ಅಗರುಂ ದಶಸಾಹಸ್ರಂ ದ್ವಿಗುಣಂ ಸ್ಯಾತ್ಸಿತಾಗರುಂ ।
ಗುಗ್ಗುಲಂ ದಶಸಾಹಸ್ರಂ ಸ ಘೃತಂ ಸ್ಯಾದನಂತಕಂ ॥೧೮॥

ಏತಾನಿ ಸ ಘೃತಂ ದಗ್ಧ್ವಾ ಅಗ್ನಿಷ್ಟೋಮಾಯುತಂ ಫಲಂ ।
ಪಾಪಾನಿ ನಿರ್ದಹಂತ್ಯೇವ ತುಷಾಗ್ನಿರಿವ ಕಾಂಚನಂ ॥೧೯॥

ಮಧೂಕತಿಲತೈಲೇನ ಕೌಸುಂಭೇನ ಮಹೇಶ್ವರಿ ।
ದದ್ಯಾಚ್ಛಿವಾಲಯೇ ದೀಪಾನ್ಸಿತವರ್ತಿಸಮುಜ್ಜ್ವಲಾನ್ ॥೨೦॥

---

ಆ ರಾಜನು ಸಮುದ್ರಪರ್ಯಂತವಾದ ಭೂಮಂಡಲವನ್ನು ನಿಷ್ಕಂಟಕವಾಗಿ ಪಾಲಿಸುವನು. ತುಪ್ಪದಿಂದ ಮಿಶ್ರವಾದ ಗುಗ್ಗುಲುಧೂಪವನ್ನು ಶಂಕರನು ಪ್ರೀತಿಯಿಂದ ಸ್ವೀಕರಿಸುತ್ತಾನೆ. ಇದರಿಂದ ಸಂತುಷ್ಟನಾಗಿ ಇಹಪರಗಳಲ್ಲೆಸಗಿದ ಸಹಸ್ರ ಅಪರಾಧಗಳನ್ನು ಶಂಕರನು ಕ್ಷಮಿಸುತ್ತಾನೆ. ಕರ್ಪೂರಮಿಶ್ರಿತವಾದ ದೇವದಾರುವನ್ನು ಧೂಪಕ್ಕೆ ಉಪಯೋಗಿಸಿದವನು ಅಸದೃಶವಾದ ಮಹಾಫಲವನ್ನು ಹೊಂದುತ್ತಾನೆ. ತುಪ್ಪದಿಂದ ಯುಕ್ತವಾದ ಬಿಲ್ವಪತ್ರೆಯ ಹಣ್ಣನ್ನು ಸುಟ್ಟು ಧೂಪ ಹಾಕಿದವನು ಶಿವನಿಗೆ ವಿಶೇಷ ಪ್ರಿಯಕರನೆನಿಸುವನು. ಇವುಗಳಿಂದ ಸುವಾಸಿತವಾದ ಧೂಪವು ಅರವತ್ತುಸಾವಿರ ಗುಣಾಧಿಕವಾಗಿ ಶಿವಪ್ರೀತಿಯನ್ನುಂಟುಮಾಡುವುದು. ॥೧೫-೧೬-೧೭॥

ಕೃಷ್ಣಾಗರುವು ಹತ್ತುಸಾವಿರದಷ್ಟು ಫಲದಾಯಕವು, ಬಿಳಿಯ ಅಗರುವು ಅದಕ್ಕೆ ಎರಡರಷ್ಟು ಫಲದಾಯಕವು. ಗುಗ್ಗುಲುವು ಹತ್ತು ಸಹಸ್ರ ಫಲಪ್ರದವು; ಘೃತಮಿಶ್ರವಾದ ಗುಗ್ಗುಲು ಧೂಪವು ಅನಂತಫಲದಾಯಕವು. ದೇವಿ! ಇವುಗಳನ್ನು ಘೃತಮಿಶ್ರಮಾಡಿ ಧೂಪಹಾಕುವವನು ಹೊಟ್ಟಿನ ಬೆಂಕಿಯು ಚಿನ್ನದ ಕಲ್ಮಷ

ಮಧೂಕಾತಿಲತೈಲೋತ್ಥಂ ದೀಪಂ ಸ್ಯಾದ್ದಶಕಂ ಫಲಂ ।
ಕೌಸುಂಭಂ ತಚ್ಛತಾಚ್ಛ್ರೇಷ್ಠಂ ಘೃತೇನಾನಂತ್ಯಮುಚ್ಯತೇ ॥೨೦॥

ಘೃತದೀಪಪ್ರದಾನೇನ ಗವ್ಯೇನ ಶತಯೋಜನಂ ।
ಮಮ ಲೋಕಂ ಭಾಸಯಿತ್ವಾ ವಿಮಾನೈರರ್ಕಸನ್ನಿಭೈಃ ॥೨೨॥

ಗಣಶ್ರೇಷ್ಠೋ ಭವೇದ್ದೇವಿ ನೈರಂತರ್ಯೇಣ ದೀಪದಃ ।
ದಶಾವರಂ ಶತಂ ಮಧ್ಯಂ ಸಹಸ್ರಂ ವರಮೇವ ಮೇ । ॥೨೩॥

ಏಕಂ ವಾಪಿ ಶಿವಸ್ಯಾಗ್ರೇ ದೀಪದೋಽಜ್ಞಾನನಾಶಕೃತ್ ।
ಯಃ ಕುರ್ಯಾತ್ಕಾರ್ತಿಕೇ ಮಾಸಿ ಶೋಭನಾಂ ದೀಪಮಾಲಿಕಾಂ ॥೨೪॥

ಘೃತೇನ ವಾಥ ತೈಲೇನ ಚತುರ್ದಶ್ಯಷ್ಟಮೀಷು ಚ ।
ಪೌರ್ಣಮಾಯಾಮಮಾಯಾಂ ವಾ ಗ್ರಹಣೇ ಪುಣ್ಯಪರ್ವಣಿ ॥೨೫॥

---

ಗಳನ್ನು ಸುಟ್ಟು ಸ್ವಚ್ಛಮಾಡುವಂತೆ ಮಾನವನ ಪಾಪಗಳನ್ನೆಲ್ಲಾ ಸುಟ್ಟು ಶುದ್ಧನನ್ನಾಗಿ ಮಾಡುವುವು. ಎಲೌ ಮಹೇಶ್ವರಿಯೆ, ಶಿವದೇವಾಲಯದಲ್ಲಿ ಹಿಪ್ಪೆ, ಎಳ್ಳು, ಕುಸುಮೆ, ಈ ಎಣ್ಣೆಗಳನ್ನು ಹಾಕಿ ಶುಭ್ರವಾದ ಬತ್ತಿಗಳಿಂದ ಉಜ್ವಲವಾಗಿ ಉರಿಯುವಂತೆ ದೀಪಗಳನ್ನು ಹೊತ್ತಿಸಬೇಕು. ॥೧೮-೧೯-೨೦॥

ಹಿಪ್ಪೆ ಮತ್ತು ಎಳ್ಳಿನ ಎಣ್ಣೆಯಿಂದ ಹೊತ್ತಿಸಿದ ದೀಪವು ಹತ್ತರಷ್ಟು ಹೆಚ್ಚಿನ ಫಲಗಳನ್ನುಂಟುಮಾಡುವುದು. ಕುಸುಮೆ ಎಣ್ಣೆಯ ದೀಪವು ಅದರ ನೂರಕ್ಕಿಂತಲೂ ಹೆಚ್ಚಾಗಿ ಶ್ರೇಷ್ಠಫಲದಾಯಕವು. ತುಪ್ಪದ ದೀಪವು ಅನಂತ ಫಲದಾಯಕವೆಂದು ಹೇಳಲ್ಪಡುತ್ತದೆ. ಹಸುವಿನ ತುಪ್ಪದ ದೀಪಗಳನ್ನು ಹೊತ್ತಿಸುವುದರಿಂದ ನೂರು ಯೋಜನ ವಿಸ್ತಾರವುಳ್ಳ ನನ್ನ ಲೋಕವನ್ನು ಬೆಳಗಿಸಿ, ಸೂರ್ಯ ಸಮಾನ ಕಾಂತಿಯುಳ್ಳ ದಿವ್ಯ ವಿಮಾನಗಳಲ್ಲಿ ಮಂಡಿಸಿ ಶಿವಲೋಕವನ್ನೈದುವಂತಹ ಫಲವನ್ನು ಪಡೆಯಬಹುದು. ಶಿವನಿಗೆ ನಿರಂತರವೂ ದೀಪಗಳನ್ನಿಡುವವನು ಗಣಶ್ರೇಷ್ಠನೆನಿಸುವನು. ॥೨೧-೨೨॥

ಶಿವದೇವಾಲಯದಲ್ಲಿ ಹತ್ತು ದೀಪಗಳಿಗಿಂತ ಕಮ್ಮಿಯಾಗಿ ದೀಪಸೇವೆ ನಡೆಸುವುದು ಕನಿಷ್ಠವೆನಿಸುವುದು. ನೂರು ಮಧ್ಯಮವು, ಸಾವಿರ ದೀಪಗಳು ದೀಪಸೇವೆಯಲ್ಲಿ ಶ್ರೇಷ್ಠವೆನಿಸುವುವು. ಕಡೆಯ ಪಕ್ಷ ಶಿವನ ಮುಂದೆ ಒಂದಾದರೂ

ಯಾವತ್ಪ್ರದೀಪಸಂಖ್ಯಾನಂ ಘೃತೇನಾಪೂರ್ಯಬೋಧಿತಂ ।
ತಾವದ್ಯುಗಸಹಸ್ರಾಣಿ ಶಿವಲೋಕೇ ಮಹೀಯತೇ ॥೨೬॥

ಸೂರ್ಯಾಯುತಪ್ರತೀಕಾಶೈರ್ವಿಮಾನೈರ್ಭಾಸಯನ್ದಿಶಃ ।
ದೀಪವೃಕ್ಷಾನ್ಸಮುದ್ಬೋಧ್ಯ ಶರ್ವಸ್ಯಾಯತನೇ ಶಿವೇ ॥೨೭॥

ಸರ್ವಸ್ಮಾದ್ದ್ವಿಗುಣಂ ಪುಣ್ಯಂ ಲಭತೇ ನಾತ್ರ ಸಂಶಯಃ ।
ಕೃಷ್ಣಂ ವರ್ಜ್ಯಂ ಸಿತಂ ಪೀತಂ ಪಟ್ಟಕೌಶೇಯರಾಂಕವಂ ॥೨೮॥

ಕಾರ್ಪಾಸಜಂ ವಾ ದೇವೇಶಿ ವಸ್ತ್ರಂ ದತ್ವಾ ಶಿವಾಯ ತು ।
ಸ್ವರ್ಣಕಾರ್ಪಾಸಜಂ ವಾಪಿ ಉಪವೀತಪ್ರದೋ ಮಮ ॥೨೯॥

ವಾಸಾಂಸಿ ಸುವಿಚಿತ್ರಾಣಿ ಸ್ವರ್ಣವಂತಿ ಮೃದೂನಿ ಚ ।
ಧೂಪಿತಾನಿ ಶಿವೇ ದತ್ವಾ ಲಭತೇ ಪುಣ್ಯಮುತ್ತಮಂ . ॥೩೦॥

---

ದೀಪವನ್ನು ಹೊತ್ತಿಸುವವನು ತನ್ನ ಅಜ್ಞಾನವನ್ನು ಹೋಗಲಾಡಿಸಿಕೊಳ್ಳುವನು. ಶಿವಪ್ರೀತಿಕರವಾದ ಕಾರ್ತಿಕ ಮಾಸದಲ್ಲಿ ತುಪ್ಪ ಅಥವಾ ಎಣ್ಣೆಯಿಂದ ಚತುರ್ದಶಿ, ಅಷ್ಟಮಿ, ಹುಣ್ಣಿಮೆ, ಅಮಾವಾಸ್ಯೆ, ಗ್ರಹಣ, ಪರ್ವಕಾಲಗಳಲ್ಲಿ ಮಂಗಳಕರವಾದ ದೀಪಮಾಲೆಯನ್ನಿಡುವವನು ತಾನಿಟ್ಟ ದೀಪಗಳ ಸಂಖ್ಯೆಗಳಿಗನುಗುಣವಾಗಿ ಅಷ್ಟುಸಾವಿರ ಯುಗಗಳ ವರೆಗೆ ಶಿವಲೋಕದಲ್ಲಿ ಪೂಜಿತನಾಗುತ್ತಾನೆ. ||೨೩-೨೪-೨೫-೨೬||

ದೀಪಸೇವೆ ಮಾಡಿದವನು ಹತ್ತುಸಾವಿರ ಸೂರ್ಯಸಮಾನ ಕಾಂತಿಗಳುಳ್ಳ ವಿಮಾನಗಳಲ್ಲಿ ಕುಳಿತು ದಿಕ್ಕುಗಳನ್ನೆಲ್ಲಾ ಬೆಳಗಿಸುತ್ತಾ ಶಿವಲೋಕವನ್ನು ಸೇರುವನು. ದೀಪವೆಂಬ ವೃಕ್ಷವನ್ನು ಶಿವದೇವಾಲಯದಲ್ಲಿ ಬೆಳಗಿಸಿದವನು ಎಲ್ಲಕ್ಕಿಂತಲೂ ಇಮ್ಮಡಿಯಾದ ಪುಣ್ಯವನ್ನು ಪಡೆಯುತ್ತಾನೆಂಬುದರಲ್ಲಿ ಸಂಶಯವೇ ಇಲ್ಲ. ||೨೭||

ಕಪ್ಪುಬಣ್ಣವನ್ನು ಬಿಟ್ಟು ಬಿಳಿ, ಹೊಂಬಣ್ಣ, ಪಟ್ಟೆ, ರೇಷ್ಮೆ, ಉಣ್ಣೆ ಅಥವಾ ಹತ್ತಿ ಬಟ್ಟೆಯ ವಸ್ತ್ರಗಳನ್ನು ಶಿವನಿಗೆ ಅರ್ಪಿಸಬೇಕು. ಚಿನ್ನ ಅಥವಾ ಹತ್ತಿಯ ಯಜ್ಞೋಪವೀತಗಳನ್ನು ನನಗೆ ಸಮರ್ಪಿಸಿ ಹಾಗೆಯೇ ಚಿತ್ರಮಯವೂ ಸುವರ್ಣಮಯವೂ, ಮೃದುವೂ ಆಗಿ ಧೂಪಯುಕ್ತವಾಗಿ ಸುವಾಸಿತವಾಗಿರುವ ವಸ್ತ್ರಗಳನ್ನು ಶಿವನಿಗೆ ಅರ್ಪಣೆಮಾಡಿದವನು ಉತ್ತಮವಾದ ಪುಣ್ಯವನ್ನು ಪಡೆಯುವನು. ||೨೮-೨೯-೩೦||

ಯಾವತ್ತದ್ವಸ್ತ್ರತಂತೂನಾಂ ಪರಿಮಾಣಂ ವಿಧೀಯತೇ ।
ತಾವದ್ಯುಗಸಹಸ್ರಾಣಿ ಶಿವಲೋಕೇ ಮಹೀಯತೇ ॥೩೦॥

ಯೋಽರ್ಕಪತ್ರಪುಟೇ ಕೃತ್ವಾ ಮಧುಪರ್ಕೇಽಚ ಮಂತ್ರಿತಂ ।
ನಿವೇದಯಿತ್ವಾ ಶರ್ವಾಯ ಸೋಽಶ್ವಮೇಧಫಲಂ ಲಭೇತ್ ॥೩೧॥

ತಂಡುಲಂ ಪ್ರಸ್ಥಮಾನೇನ ಕುರ್ವನ್ನನ್ನಂ ಸುಸಂಸ್ಕೃತಂ ।
ಶಿವಾಯ ತನ್ನಿವೇದ್ಯೈವಾಗ್ನಿಷ್ಟೋಮಫಲಂ ಲಭೇತ್ ॥೩೨॥

ದಿನೇ ದಿನೇ ಪರ್ವಣಿ ವಾ ಶಾಲ್ಯನ್ನೇನ ಸುಪುಣ್ಯಭಾಕ್ ।
ಹರಿದ್ರಾಕೃಸರಂ ದದ್ಯಾದ್ಯವಗೋಧೂಮಮಿಶ್ರಿತಂ ॥೩೪॥

ಚಣಕಾಢಕಮುದ್ಗಾನ್ನಂ ದತ್ತಂ ಸ್ಯಾದುತ್ತರೋತ್ತರಂ ।
ಸಗುಡಂ ಸಘೃತಂ ದೇವಿ ಪ್ರಶಸ್ತಂ ಮನ್ನಿವೇದನೇ ॥೩೫॥

---

ಅಲ್ಲದೆ ಆ ವಸ್ತ್ರಗಳ ದಾರಗಳಿರುವ ಸಂಖ್ಯೆಯಷ್ಟು ಸಾವಿರ ಯುಗ ವರ್ಷಗಳು ಶಿವಲೋಕದಲ್ಲಿ ಮೆರೆಯುತ್ತಾನೆ. ಪಾರ್ವತಿಯೇ, ಎಕ್ಕದೆಲೆಯ ದೊನ್ನೆಯಲ್ಲಿ ಮಧುಪರ್ಕವನ್ನು ಮಂತ್ರಪೂರ್ವಕವಾಗಿ ಶಿವನಿಗೆ ನಿವೇದಿಸುವವನು ಅಶ್ವಮೇಧ ಯಾಗದ ಫಲವನ್ನೈದುತ್ತಾನೆ. ॥೩೦-೩೧॥

ಒಂದು ಭಳ್ಳ ಅಕ್ಕಿಯ ಅನ್ನವನ್ನು ಚೆನ್ನಾಗಿ ಮಾಡಿ ಶಿವನಿಗೆ ನಿವೇದನ ಮಾಡುವವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾನೆ. ಪ್ರತಿದಿನವೂ ಅಥವಾ ಪರ್ವಕಾಲಗಳಲ್ಲಿಯಾದರೂ ಶಾಲ್ಯನ್ನವನ್ನು ಮಾಡಿ ಪರಮೇಶನಿಗೆ ನಿವೇದನಮಾಡುವವನು ವಿಶೇಷ ಪುಣ್ಯಭಾಗಿಯಾಗುವನು. ಅಕ್ಕಿ, ಗೋದುವೆ ಗಳಿಂದ ಬೆರೆತ ಅರಿಸಿನದ ಬಣ್ಣದ ಹುಗ್ಗಿಯನ್ನು ಮಾಡಿ ಶಿವನಿಗೆ ನಿವೇದನ ಮಾಡಬೇಕು. ॥೩೩-೩೪॥

ಕಡಲೆ, ತೊಗರಿ ಮತ್ತು ಹೆಸರುಕಾಳುಗಳಿಂದ ಸಂಸ್ಕೃತವಾದ ಅನ್ನವನ್ನು ಶಿವನಿಗೆ ನಿವೇದನ ಮಾಡಿದಲ್ಲಿ ಅದು ಉತ್ತರೋತ್ತರ ಶ್ರೇಷ್ಠವೆನಿಸಿ ನಿವೇದನ ಮಾಡಿದವನಿಗೆ ಮುಕ್ತಿಯು ದೊರೆಯುವುದು. ಈ ಅನ್ನಗಳಿಗೆ ಬೆಲ್ಲ, ಮತ್ತು ತುಪ್ಪ ಮಿಶ್ರಿತವಾಗಿದ್ದರೆ ತಾನೆ ಅವು ನನ್ನ ನಿವೇದನಕ್ಕೆ ಪ್ರಶಸ್ತಗಳೆನಿಸುವುವು. ಹಾಲು, ತುಪ್ಪ, ಮೊಸರು ಇವುಗಳಿಂದ ಮಿಶ್ರವಾಗಿ ತರಕಾರಿ, ಅಪೂಪ ಮತ್ತು

ಕ್ಷೀರಾಜ್ಯದಧಿಮಿಶ್ರಾನ್ನಂ ಶಾಕಾಪೂಪಾಜ್ಯಮಿಶ್ರಿತಂ ।
ದತ್ವಾ ವರ್ಷಾಯುತಂ ತೃಪ್ತೋ ದಿವಿ ತಿಷ್ಠತಿ ಭೋಗವಾನ್ ॥೩೬॥

ಯಾವಂತಸ್ತಂಡುಲಾಸ್ತಸ್ಮಿನ್ನೈವೇದ್ಯ ಪರಿಸಂಖ್ಯಯಾ ।
ತಾವದ್ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ॥೩೭॥

ಗೋಧೂಮಶರ್ಕರಾಪೂಪಂ ಘೃತಪಾಚಿತಮುತ್ತಮಂ ।
ಪಿಷ್ಟೋದ್ಭವಂ ಮಧ್ಯಮಂಸ್ಯಾದ್ಭಕ್ಷ್ಯಂ ವೈ ಚೋತ್ತರೋತ್ತರಂ॥೩೮॥

ಕೇವಲಂ ಪಾಯಸಂ ದತ್ವಾ ಶಿವಾಯಾನಂತಪುಣ್ಯಭಾಕ್ ।
ಪಾನೀಯಪಾನಕಾನಾಂ ತು ಪ್ರದದ್ಯಾದ್ಯಃ ಶಿವಾಯ ತು ॥೩೯॥

ಕ್ಷೀರಂ ದಧಿಘೃತಂ ಕ್ಷೌದ್ರಂ ಶರ್ಕರಾತಕ್ರಮೇವ ವಾ ।
ಶೀತಸ್ಯ ಸಲಿಲಸ್ಯಾಪಿ ಸಕರ್ಪೂರಸ್ಯ ಶಂಕರಿ ॥೪೦॥

---

ತುಪ್ಪಗಳಿಂದಬೆರೆತ ಅನ್ನವನ್ನು ಶಿವನಿಗೆ ಸಮರ್ಪಿಸಿದವನು ಹತ್ತುಸಾವಿರ ವರ್ಷಗಳ ಕಾಲ ಸ್ವರ್ಗದಲ್ಲಿ ಸಕಲಭೋಗದಿಂದ ತೃಪ್ತಿಪಡೆಯುವನು. ಪಾರ್ವತಿಯೇ, ಅನ್ನ ದಲ್ಲಿರುವ ಅಕ್ಕಿಕಾಳುಗಳ ಸಂಖ್ಯೆಯಷ್ಟು ಸಹಸ್ರಯುಗಗಳವರೆಗೆ ಅವನು ರುದ್ರ ಲೋಕದಲ್ಲಿ ಪೂಜಿಸಲ್ಪಡುವನು. ॥೩೫-೩೬-೩೭॥

ಪಾರ್ವತಿಯೇ! ಗೋದುವೆ, ಸಕ್ಕರೆಗಳಿಂದ ಯುಕ್ತವಾಗಿ ತುಪ್ಪದಲ್ಲಿ ಬೇಯಿ ಸಿರುವ ಅಪೂಪಾದಿ ಭಕ್ಷ್ಯಗಳು ಉತ್ತಮವಾದವುಗಳು. ಹಿಟ್ಟಿನಿಂದಮಾಡಿರುವ ಭಕ್ಷ್ಯಗಳು ಮಧ್ಯಮವೆನಿಸುವುವು. ಇವುಗಳಿಗೆ ಉತ್ತರೋತ್ತರ ಅಧಿಕಫಲಗಳುಂ ಟೆಂದು ತಿಳಿ. ಶಿವನಿಗೆ ಕೇವಲ ಪಾಯಸವೊಂದನ್ನು ನಿವೇದನಮಾಡಿಯೇ ಭಕ್ತನು ಅನಂತಪುಣ್ಯಗಳನ್ನುಗಳಿಸುವನು ಕುಡಿಯಲು ಯೋಗ್ಯವಾದ ಪಾನಕವೇ ಮೊದಲಾದವುಗಳನ್ನೂ, ಹಾಲು, ಮೊಸರು, ತುಪ್ಪ, ಮಧು (ಜೇನುತುಪ್ಪ), ಸಕ್ಕರೆ, ಮಜ್ಜಿಗೆ ಇವುಗಳನ್ನೂ ಮತ್ತು ಕರ್ಪೂರಮಿಶ್ರಿತವಾದ ಶುದ್ಧೋದಕವನ್ನೂ ಶಿವನಿಗೆ ನಿವೇದನಮಾಡುವುದರಿಂದ ಅವು ಉತ್ತರೋತ್ತರವಾಗಿ ಹೆಚ್ಚಿನಸುಕೃತಗಳನ್ನು ಅರ್ಪಿಸಿದವನಿಗೆ ಒದಗಿಸಿ ನನಗೆ ಹೆಚ್ಚುಪ್ರೀತಿಯನ್ನುಂಟುಮಾಡುವುವು. ॥೩೮-೩೯-೪೦॥

ನಿವೇದನೇ ಪರಾಪ್ರೀತಿರ್ಮನು ಸ್ಯಾದುತ್ತರೋತ್ತರಾ ।
ಕದಲೀನಾರಿಕೇಲಾಮ್ರದಾಡಿಮಂ ಮಾತುಲಿಂಗಕಂ ॥೪೧॥

ಪನಸಂ ವಾ ಫಲಾನ್ಯೇವ ಸುಸ್ವಾದುರಸವಂತಿ ಚ ।
ದದ್ಯಾನ್ನೈವೇದ್ಯಮೀಶಾಯ ಫಲಂ ಸ್ಯಾದುತ್ತರೋತ್ತರಂ ॥೪೨॥

ಪಂಚಸೌಗಂಧಿಕೋಪೇತಂ ತಾಂಬೂಲಂ ಚೋತ್ತಮೋತ್ತಮಂ ।
ಏಲಾಲವಂಗಕರ್ಪೂರಜಾತೀಪತ್ರಫಲಾನಿ ಚ ॥೪೩॥

ನಾಗವಲ್ಲೀದಲೋಪೇತಂ ದತ್ವಾ ಮುಖಫಲಂ ಲಭೇತ್ ।
ಕ್ರಮುಕಂ ನಾಗವಲ್ಲೀನಾಂ ದಲಾನಿ ದಲಯೇದಘಂ ॥೪೪॥

ಶ್ವೇತವರ್ಣಂ ಚ ಪತ್ರಂ ಚ ಕ್ರಮುಕಸ್ಯ ಫಲಾನಿ ಚ ।
ನಾರಿಕೇಳಫಲೋಪೇತಂ ಮಾತುಲಿಂಗಸಮಾಯುತಂ ॥೪೫॥

ಏಲಾಲವಂಗಕರ್ಪೂರೈರ್ಮುಖವಾಸಂ ಪ್ರಚಕ್ಷತೇ ।
ಮುಖವಾಸಂ ಶಿವೇ ದತ್ವಾ ವಸೇದ್ವರ್ಷಶತಂ ದಿವಿ ॥೪೬॥

---

ಬಾಳೆ, ತೆಂಗು, ಮಾವು, ದಾಳಿಂಬೆ, ಮಾದಲ, ಹಲಸು ಮುಂತಾದ ರುಚಿಯಾಗಿಯೂ ರಸಭರಿತವಾಗಿಯೂ ಇರುವ ಹಣ್ಣುಗಳನ್ನು ಈಶ್ವರನಿಗೆ ನೈವೇದ್ಯಕ್ಕಾಗಿ ಸಮರ್ಪಣೆಮಾಡುವವನಿಗೆ ಉತ್ತರೋತ್ತರವಾದ ಶುಭಫಲವು ಅಧಿಕವಾಗಿ ಲಭಿಸುವುದು. ಏಲಕ್ಕಿ, ಲವಂಗ, ಜಾಯಿಕಾಯಿ, ಪಚ್ಚಕರ್ಪೂರ, ಜಾಪತ್ರೆ, ಈ ಐದು ಸುಗಂದಭರಿತ ದ್ರವ್ಯಯುಕ್ತವಾಗಿರುವ ವೀಳೆದೆಲೆಯ ಉತ್ತಮೋತ್ತಮವಾದ ತಾಂಬೂಲವನ್ನು ಶಿವನಿಗೆ ಸಮರ್ಪಿಸಿದವನು ಯಜ್ಞದಫಲವನ್ನು ಪಡೆಯುವನು. ॥೪೧-೪೨-೪೩॥

ಅಡಕೆಯೂ, ವೀಳೆದೆಲೆಯ ದಳಗಳೂ ಪಾಪವನ್ನು ನಾಶಮಾಡುವುವು. ಬಿಳಿಬಣ್ಣದ ವೀಳೆದೆಲೆಯೂ, ಅಡಿಕೆಕಾಯಿಗಳೂ, ತೆಂಗಿನಕಾಯಿ, ಮಾದಲಹಣ್ಣು, ಏಲಕ್ಕಿ, ಲವಂಗ, ಕರ್ಪೂರ, ಈ ದ್ರವ್ಯಗಳಿಂದ ಯುಕ್ತವಾದ ತಾಂಬೂಲವು ಮುಖವಾಸವೆಂದು ಹೇಳಲ್ಪಡುತ್ತದೆ. ಶಿವನಿಗೆ ಮುಖವಾಸವನ್ನು ಸಮರ್ಪಿಸಿದವನು ನೂರುವರ್ಷಗಳಕಾಲ ಸ್ವರ್ಗದಲ್ಲಿ ವಾಸಮಾಡುತ್ತಾನೆ. ॥೪೪-೪೫-೪೬॥

ಶಾಲಿಪಿಷ್ಟೋದ್ಭವೈರ್ದೀಪೈರ್ನೀರಾಜ್ಯ ಘೃತವರ್ತಿಕೈಃ ।
ತತೋ ನೀರಾಜನಂ ದೀಪೈಃ ಷಡ್ವಿಂಶತ್ಯಾ ತು ಕಾರಯೇತ್ ॥೪೭॥

ಶತಂ ತು ಮಧ್ಯಮಂ ದೇವಿ ಸಹಸ್ರಂ ಪರಮಂ ವಿದುಃ ।
ವೃಷಾಕಾರಂ ನಟಾಕಾರಂ ನಾಕ್ಷತ್ರಂ ಪಂಚಚೈಕಕಂ ॥೪೮॥

ಕುಂಭದೀಪಂ ತತೋ ದದ್ಯಾತ್ಪುಣ್ಯಂ ಸ್ಯಾದುತ್ತರೋತ್ತರಂ ।
ಕುರ್ಯಾನ್ನೀರಾಜನಂ ಲಿಂಗೇ ಶಿವಮುದ್ದಿಶ್ಯ ಮಂಗಲೈಃ ॥೪೯॥

ಅಷ್ಟಮ್ಯಾದಿಷು ಸರ್ವೇಷು ದಿವಸೇಷೂತ್ಸವೇಷು ಚ ।
ಯಾವತ್ಪರ್ವಣಿ ವಿಧಿವತ್ಕುರ್ಯಾನ್ನೀರಾಜನಂ ಶಿವೇ ॥೫೦॥

ವರ್ತಿಸಂಖ್ಯಾಸಹಸ್ರಾಣಿ ದಿವಿ ಮೋದತಿ ಸೂರ್ಯವತ್ ।
ಕಾಂಸ್ಯಲೋಹಮಯೀಂ ಘಂಟಾಂ ಪ್ರಬಧ್ನೀಯಾಚ್ಛಿವಾಲಯೇ ॥೫೧॥

---

ಅಕ್ಕಿಯಹಿಟ್ಟಿನ ದೀಪಗಳಲ್ಲಿ ತುಪ್ಪದಬತ್ತಿಗಳನ್ನಿಟ್ಟು ಆರತಿಮಾಡಬೇಕು. ಅನಂತರ ಇಪ್ಪತ್ತಾರುದೀಪಗಳಿಂದ ಆರತಿಯನ್ನು ಮಾಡಬೇಕು. ಇದು ಸಾಮಾನ್ಯವಾದ ಆರತಿಯೆನಿಸುವುದು. ನೂರುಬತ್ತಿಗಳದೀಪವು ಮಧ್ಯಮವೆನಿಸುವುದು. ಸಾವಿರ ಬತ್ತಿಗಳ ಆರತಿಯನ್ನು ಪರಮಶ್ರೇಷ್ಠವೆಂದು ಹೇಳುವರು. ವೃಷಭಾಕೃತಿ, ನಾಟ್ಯಾಕೃತಿ, ನಕ್ಷತ್ರ, ಇವುಗಳ ಐದು ಅಥವಾ ಒಂದು ಆರತಿಯನ್ನು ಎಸಗಿ ಅನಂತರ ಕುಂಭಾರತಿಯನ್ನು ಮಾಡಬೇಕು, ಇದರಿಂದ ಆರಾಧಕನಿಗೆ ಉತ್ತರೋತ್ತರವಾದ ಪುಣ್ಯವುಂಟಾಗುವುದು. ॥೪೭-೪೮॥

ಪೂಜೆಯಾದನಂತರ ಮಂಗಳಾಕಾಂಕ್ಷಿಯು ಶಿವಲಿಂಗದಲ್ಲಿ ಶಿವನನ್ನು ಉದ್ದೇಶಿಸಿ ಮಂಗಳಾರತಿಯನ್ನೆತ್ತಬೇಕು. ಅಷ್ಟಮಿಯೇಮೊದಲಾದ ಪರ್ವದಿನಗಳಲ್ಲಿಯೂ ಉತ್ಸವಕಾಲಗಳಲ್ಲಿಯೂ ಇತರ ಪರ್ವಕಾಲಗಳಲ್ಲಿಯೂ ವಿಧಿಪೂರ್ವಕವಾಗಿ ಶಿವನಿಗೆ ನೀರಾಜನವನ್ನೆಸಗಬೇಕು. ಆ ಆರತಿಗಳಿಗೆ ಉಪಯೋಗಿಸುವ ಬತ್ತಿಗಳ ಸಂಖ್ಯೆಗಳಷ್ಟು ಸಾವಿರವರ್ಷಗಳವರೆಗೆ ಸ್ವರ್ಗದಲ್ಲಿ ಸೂರ್ಯನಂತೆ ಸಂತೋಷಪಡುವನು. ॥೪೯-೫೦॥

ಎಲೌ ಗಿರಿಜೆಯೇ, ಕಂಚಿನಲೋಹದಿಂದಮಾಡಿದ ಗಂಟೆಯನ್ನು ಶಿವದೇವಾಲಯದಲ್ಲಿ ಕಟ್ಟಬೇಕು. ಆ ಗಂಟೆಯು ನಾದವುಂಟುಮಾಡುವವರೆಗೂ

ಯಾವನ್ನಾದಂ ತದಾ ಪುಣ್ಯಂ ಕುರ್ವತೋ ಗಿರಿಕನ್ಯಕೇ ।
ಭೇರೀಮೃದಂಗಪಟಹವೀಣಾವೇಣುರವಾಕುಲಂ ॥೫೨॥

ಶಂಖಕಾಂಸ್ಯಾದಿವಾದಿತ್ರಂ ಯಃ ಶಿವಾಯ ನಿವೇದಯೇತ್ ।
ಸ ವಿಮಾನೈರ್ಮಹಾಭೋಗೈರ್ವಂಶವೀಣಾಪ್ಸರೋಗಣೈಃ ॥೫೩॥

ಯುಗಾನಾಮಯುತಂ ದೇವಿ ವಸೇಚ್ಛಿವಪುರೇ ಸುಖಂ ।
ಸ್ತ್ರೀಣಾಂ ನಾಟ್ಯಾದಿಕರಣೇ ತೌರ್ಯತ್ರಿಕಪುರಃಸರಂ ॥೫೪॥

ಯಥೇಷ್ಟಮೈಶ್ವರೇ ಲೋಕೇ ಮೋದತ್ಯಾಭೂತಸಂಪ್ಲವಂ ।
ಶಿವಸ್ಯೋಪರಿ ಯೋ ದದ್ಯಾದ್ವಿತಾನಂ ಪಟ್ಟವಸ್ತ್ರಜಂ ॥೫೫॥

ಮುಕ್ತಾಜಾಲಿಕಪರ್ಯಂತಂ ಮಧ್ಯಪದ್ಮೇನ ಚಿತ್ರಿತಂ ।
ಯೋಽಂತರ್ಗರ್ಭಗೃಹೇ ಶಂಭೋರ್ಬಧ್ವಾ ಮುಕ್ತೋ ಭವೇನ್ನರಃ ॥೫೬॥

ಯೋಽಂತಃ ಶಿವಗೃಹೇ ಭಕ್ತ್ಯಾ ಸ ಸುಗಂಧೈಃ ಪ್ರಲೇಪಯೇತ್ ।
ಕವಾಟಮಾರಭ್ಯಾಕುಡ್ಯಂ ತಿರ್ಯಗೂರ್ಧ್ವಸವೇದಿಕಂ ॥೫೭॥

---

ಕರ್ತೃವಿಗೆ ಆ ಪುಣ್ಯವು ಲಭಿಸುತ್ತಾಬರುವುದು. ನಗಾರಿ, ಮೃದಂಗ, ತಮಟೆ, ವೀಣೆ, ಕೊಳಲು ಈ ವಾದ್ಯಧ್ವನಿಗಳಿಂದ ಯುಕ್ತವಾಗಿರುವ ಶಂಖ ಮತ್ತು ಗಂಟೆ, (ಅಥವಾ ಜಾಗಟೆಗಳ) ವಾದ್ಯವನ್ನು ಶಿವನಿಗೆ ಸಮರ್ಪಿಸುವವನು ಅನೇಕ ಭೋಗಗಳಿಂದ ಕೂಡಿದ ಅಪ್ಸರೆಯರ ಗುಂಪುಗಳಿಂದ ನಡೆಯುವ ವೀಣಾವೇಣುವಾದ್ಯಗಳೊಡಗೂಡಿದ ವಿಮಾನಗಳಲ್ಲಿ ಕುಳಿತು ಹತ್ತುಸಾವಿರ ಯುಗಗಳವರೆಗೆ ಶಿವಲೋಕದಲ್ಲಿ ಸುಖವಾಗಿ ವಾಸಮಾಡುತ್ತಾನೆ. ॥೫೧-೫೨-೫೩॥

ಶಿವನ ಮುಂದೆ ತಾಳದೊಡನೆ ಸ್ತ್ರೀನಾಟ್ಯಾದಿಗಳನ್ನು ಮಾಡಿಸುವವನು ಶಿವಲೋಕದಲ್ಲಿ ಕಲ್ಪಪರ್ಯಂತರವೂ ತನ್ನಿಷ್ಟದಂತೆ ಸಂತೋಷದಿಂದಿರುವನು. ಶಿವನ ಮೇಲೆ ಪಟ್ಟೆಯ ವಸ್ತ್ರದ ಚೌಕಟ್ಟನ್ನು ಸುತ್ತಲೂ ಮುತ್ತಿನಸಮೂಹದಿಂದಲಂಕರಿಸಿ ಮಧ್ಯದಲ್ಲಿ ಪದ್ಮವನ್ನು ಕೆತ್ತಿಸಿ, ಶಂಭುವಿನ ಗರ್ಭಗುಡಿಯಲ್ಲಿ ಕಟ್ಟಿಸುವ ಮಾನವನು ಮುಕ್ತಿಹೊಂದುವನು. ॥೫೪-೫೫-೫೬॥

ಶಿವದೇವಾಲಯದ ಒಳಗಡೆ ಭಕ್ತಿಯಿಂದ ಸುಗಂಧದ್ರವ್ಯಗಳನ್ನು ಲೇಪನ ಮಾಡಬೇಕು. ಬಾಗಿಲಿನಿಂದ ಗೋಡೆಯವರೆಗೂ ಅಡ್ಡಡ್ಡಲಾಗಿಯೂ ಮೇಲಕ್ಕೂ

ವಾಸಯೇತ್ಪುಷ್ಪಮಾಲಾಭಿರ್ಧೂಪೈಶ್ಚಾಪಿ ಸುಗಂಧಿಭಿಃ ।
ಯಃ ಕುರ್ಯಾತ್ಸಕೃದಪ್ಯೇವಂ ತಸ್ಯ ಪುಣ್ಯಫಲಂ ಶೃಣು ॥೫೮॥

ಸರ್ವಕಾಮಸುಸಂಪೂರ್ಣೈಃ ಮಹಾಯಾನೈರ್ಮನೋಹರೈಃ ।
ಆಪೂರಯನ್ ದಿಶಃ ಸರ್ವಾ ಆಮೋದೈಶ್ಚ ಸುಗಂಧಿಭಿಃ ॥೫೯॥

ಕಲ್ಪಕೋಟಿಶತಂ ದಿವ್ಯಂ ಶಿವಲೋಕೇ ಮಹೀಯತೇ ।
ತಸ್ಯಾಂತೇ ಪೃಥಿವೀಪಾಲೋ ಭವೇದ್ರಾಜಾ ಮಹೇಶ್ವರಿ ॥೬೦॥

ಭಕ್ತ್ಯಾ ನಿವೇದ್ಯ ರುದ್ರಾಯ ತಾಲವೃಂತಂ ಸುಶೋಭನಂ ।
ದಶವರ್ಷ ಸಹಸ್ರಾಣಿ ರುದ್ರಲೋಕೇ ಮಹೀಯತೇ ॥೬೧॥

ಮಾಯೂರವ್ಯಜನಂ ದತ್ವಾ ಶಿವಾಯ ಚ ಸುಶೋಭನೇ ।
ವರ್ಷಕೋಟಿಶತಂ ಸಾಗ್ರಂ ಶಿವಲೋಕೇ ಮಹೀಯತೇ ॥೬೨॥

ಶಿವಾಯ ಚಾಮರಂ ದತ್ವಾ ಹೇಮರೂಪ್ಯಾದಿ ದಂಡಕಂ ।
ಹಂಸಕುಂದೇಂದುಧವಲಮ್ಮೃದುವಾಲಂ ಮನೋಹರಂ ॥೬೩॥

---

ವೇದಿಕೆಗಳೊಡನೆ ಹೂಮಾಲೆಗಳಿಂದಲಂಕಾರಮಾಡಿ ಸುಗಂಧಭರಿತವಾದ ಧೂಪಗಳನ್ನು ಹಾಕಬೇಕು. ಒಂದು ಸಲ ಈ ರೀತಿ ಮಾಡುವವನ ಪುಣ್ಯಫಲವನ್ನು ಹೇಳುತ್ತೇನೆ ಕೇಳು; ಸಕಲ ಇಷ್ಟಾರ್ಥಗಳಿಂದಲೂ ಪೂರ್ಣವಾದ ಮನೋಹರಗಳಾದ ವಿಮಾನಗಳಲ್ಲಿ ಕುಳಿತು ಸುಗಂಧದ್ರವ್ಯಗಳಿಂದ ಹತ್ತುದಿಕ್ಕುಗಳನ್ನೂ ಸುಗಂಧಗೊಳಿಸುತ್ತಾ ದಿವ್ಯಕೋಟಿಕಲ್ಪಗಳವರೆಗೆ ಶಿವಲೋಕದಲ್ಲಿ ಪೂಜಿತನಾಗುವನು. ಅದು ಮುಗಿದನಂತರ ಎಲೌ ಮಹೇಶ್ವರಿಯೇ, ಅವನು ಭೂಮಂಡಲಕ್ಕೆ ರಾಜನಾಗುತ್ತಾನೆ. ॥೫೭-೫೮-೫೯-೬೦॥

ವಿಶಾಲವಾಗಿ ಚೆನ್ನಾಗಿರುವ ಬೀಸಣಿಗೆಯನ್ನು ರುದ್ರನಿಗೆ ಭಕ್ತಿಯಿಂದ ಸಮರ್ಪಿಸಿದವನು ಹತ್ತುಸಾವಿರ ವರ್ಷ ರುದ್ರಲೋಕದಲ್ಲಿ ಮೆರೆಯುತ್ತಾನೆ. ಎಲೌ ಮಂಗಳಾಂಗಿಯೇ, ಶಿವನಿಗೆ ನವಿಲುಗರಿಯ ಬೀಸಣಿಗೆಯನ್ನು ಸಮರ್ಪಿಸಿದವನು ನೂರುಕೋಟಿ ವರ್ಷಗಳು ಸಂಪೂರ್ಣವಾಗಿ ಶಿವಲೋಕದಲ್ಲಿ ಪೂಜಿತನಾಗುತ್ತಾನೆ. ॥೬೧-೬೨॥

ಚಿನ್ನ ಅಥವಾ ಬೆಳ್ಳಿಯ ದಂಡಗಳುಳ್ಳ ಚಾಮರವನ್ನು ಮೃದುವಾದ ಹಂಸ,

ಚಾಮರಾಸಕ್ತಹಸ್ತಾಗ್ರದಿವ್ಯಸ್ತ್ರೀಪರಿವಾರಿತಃ ।
ಮಹಾಭೋಗೈರ್ವಿಮಾನಸ್ಥಶ್ಚಿರಂ ಶಿವಪುರೇ ವಸೇತ್ ॥೬೪॥

ಯೋ ದದ್ಯಾದ್ವಿಮಲಂ ಛತ್ರಂ ಪಾಂಡರಂ ಗುಚ್ಛಮಂಡಿತಂ ।
ಚಂದ್ರವೃತ್ತಶತೈಷೀಕಾ ನಿರ್ಮಿತಂ ಹೇಮದಂಡಕಂ ॥೬೫॥

ಏಕಾತಪತ್ರಸಾಮ್ರಾಜ್ಯಂ ತ್ರಿನೇತ್ರಕೃಪಯಾ ಲಭೇತ್ ।
ಶಿವಸ್ಯ ಪುರತೋ ದತ್ವಾ ದರ್ಪಣಂ ಚಾರು ನಿರ್ಮಲಂ ॥೬೬॥

ಚಂದ್ರಾಂಶುನಿರ್ಮಲಃ ಶ್ರೀಮಾನ್ಸುಭಗಃ ಕಾಮರೂಪಧೃಕ್ ।
ಕಲ್ಪಾಯುತಸಹಸ್ರಂ ಚ ಶಿವಲೋಕೇ ಸ ಮೋದತೇ ॥೬೭॥

ಕೃತ್ವಾ ಪ್ರದಕ್ಷಿಣಂ ಭಕ್ತ್ಯಾ ಶಿವಸ್ಯಾಯತನೇ ನರಃ ।
ಅಶ್ವಮೇಧಸಹಸ್ರಸ್ಯ ಲಭೇತ್ಪುಣ್ಯಂ ಪದೇಪದೇ ॥೬೮॥

---

ಮಲ್ಲಿಗೆ, ಚಂದ್ರರಂತೆ ಶುಭ್ರವಾದ ಚಮರೀ ಮೃಗದ ಬಾಲಗಳಿಂದ ಮನೋಹರವಾಗಿರುವಂತೆ ಮಾಡಿಸಿ, ಶಿವನಿಗೆ ಸಮರ್ಪಿಸುವವನು ತುದಿಗೈಯಲ್ಲಿ ಚಾಮರಗಳನ್ನು ಹಿಡಿದಿರುವ ದಿವ್ಯನಾರಿಯರಿಂದ ಪರಿವೃತನಾಗಿ ಮಹಾಭೋಗಗಳೊಡನೆ ವಿಮಾನದಲ್ಲಿ ಕುಳಿತು ಬಹುಕಾಲ ಶಿವಲೋಕದಲ್ಲಿ ವಾಸಮಾಡುವನು. ನಿರ್ಮಲವೂ, ಬಿಳಿಯ ಬಣ್ಣವುಳ್ಳದೂ, ಗೊಂಡೆಗಳಿಂದಲಂಕೃತವೂ ಚಂದ್ರನಂತೆ ದುಂಡಾಗಿರುವ ನೂರು ಈಷಿಕೆಗಳಿಂದ ನಿರ್ಮಿತವೂ ಆದ ಚಿನ್ನದ ದಂಡವುಳ್ಳ ಛತ್ರಿಯನ್ನು ಶಿವನಿಗೆ ಸಮರ್ಪಣೆಮಾಡುವವನು ಶಿವನ ದಯೆಯಿಂದ ಏಕಚಕ್ರಾಧಿಪತಿಯಾಗುವನು. ॥೬೩-೬೪-೬೫॥

ಶಿವನ ಮುಂಭಾಗದಲ್ಲಿ ಸುಂದರವೂ ನಿರ್ಮಲವೂ ಆದ ಕನ್ನಡಿಯನ್ನು ಸಮರ್ಪಿಸುವವನು ಚಂದ್ರಕಿರಣಗಳಂತೆ ನಿರ್ಮಲನಾಗಿ ಸಂಪದ್ಯುಕ್ತನೂ, ಸುಂದರನೂ, ಇಚ್ಛಾರೂಪಿಯೂ ಆಗಿ ಹತ್ತು ಸಹಸ್ರ ಕಲ್ಪಗಳ ವರೆಗೆ ಶಿವಲೋಕದಲ್ಲಿ ಆನಂದಿಸುವನು. ಶಿವದೇವಾಲಯವನ್ನು ಭಕ್ತಿಯಿಂದ ಪ್ರದಕ್ಷಿಣೆಮಾಡುವವನು ಒಂದೊಂದು ಪ್ರದಕ್ಷಿಣೆಗೂ ಸಹಸ್ರ ಅಶ್ವಮೇಧಯಾಗಗಳ ಪುಣ್ಯಫಲವನ್ನು ಪಡೆಯುವನು. ॥೬೬-೬೭-೬೮॥

ಲಿಂಗಪ್ರದಕ್ಷಿಣಂ ಕೋಟಿನಮಸ್ಕಾರೇ ಪರಾರ್ಧಕಂ ।
ಉರಸಾ ಶಿರಸಾ ದೃಷ್ಟ್ಯಾ ಬಾಹುಭ್ಯಾಮೂರವೇ ಶಿವೇ ॥೧೯॥

ಅಷ್ಟಮೂರ್ತಿಸ್ತಥಾಷ್ಟಾಂಗೈಃ ಪ್ರಣಮನ್ಮುಕ್ತಿಮೇತಿ ಚ ।
ಪಶ್ಯನ್ಲಿಂಗಂ ಮಹೇಶಸ್ಯ ಪ್ರಣವೇನ ಹೃದಾ ಶಿವೇ ॥೨೦॥

ಸ್ತುವೀತ ದೇವಮೀಶಾನಂ ಗಿರಾ ಚ ಸ್ಪಷ್ಟಯಾ ಸದಾ ।
ಏವಂ ಸಂಸ್ತುವತೇ ಮುಕ್ತಿಂ ದದಾಮ್ಯಹಮತಂದ್ರಿತಃ ॥೨೧॥

ಪ್ರಾತರ್ದೃಷ್ಟ್ವಾ ಮಹಾಲಿಂಗಂ ನೈಶಂ ಪಾಪಂ ವಿನಶ್ಯತಿ ।
ಆಜನ್ಮಸಂಚಿತಂ ಪಾಪಂ ಮಧ್ಯಾಹ್ನೇ ದರ್ಶನಾತ್ಕ್ಷಯಂ ॥೨೨॥

ಸಪ್ತಜನ್ಮಕೃತಂ ಪಾಪಂ ಸಾಯಂದರ್ಶನತಃ ಕ್ಷಯಃ ।
ಯಾತ್ಯೇವ ನಿಶಿ ದೃಷ್ಟ್ವೇಶಂ ಗೋದಾನಾಯುತಪುಣ್ಯಭಾಕ್ ॥೨೩॥

ಪ್ರದೋಷೇ ದೋಷರಾಹಿತ್ಯಂ ಬ್ರಹ್ಮಹತ್ಯಾದಿಪಂಚಕಂ ।
ನಶ್ಯತ್ಯೇವ ಶಿವಂ ವೀಕ್ಷ್ಯ ಶಿವಧರ್ಮಸ್ಯ ಸಂಗ್ರಹಃ ॥೨೪॥

---

ಲಿಂಗಪ್ರದಕ್ಷಿಣೆಯು ಕೋಟಿಪುಣ್ಯಫಲದಾಯಕವು. ನಮಸ್ಕಾರವು ಪರಾರ್ಧ ಸಂಖ್ಯೆಯಲ್ಲಿ ಪುಣ್ಯಫಲಪ್ರದವಾಗುವುದು. ಎದೆ, ತಲೆ, ಎರಡು ದೃಷ್ಟಿಗಳು, ಎರಡು ತೋಳ್ಗಳು, ಎರಡು ತೊಡೆಗಳು ಈ ಎಂಟು ಅಂಗಗಳಿಂದ ಅಷ್ಟಮೂರ್ತಿಯಾದ ಮಹೇಶ್ವರನಿಗೆ ಪ್ರಣಾಮಮಾಡುವವನು ಮುಕ್ತಿಹೊಂದುವನು. ಓಂಕಾರಪೂರ್ವಕವಾಗಿರುವ ಮಹೇಶ್ವರನ ಲಿಂಗವನ್ನು ದರ್ಶನಮಾಡುತ್ತಾ ಸ್ಪಷ್ಟವಾದ ಸ್ತುತಿವಚನಗಳಿಂದ ಸದಾಶಿವನನ್ನು ಸ್ತೋತ್ರಮಾಡಬೇಕು. ಈರೀತಿಯ ಸ್ತುತಿಯಿಂದ ನನ್ನನ್ನು ಸಂತೋಷಪಡಿಸುವವನಿಗೆ ನಾನು ಮುಕ್ತಿಯನ್ನು ಕರುಣಿಸುವೆನು. ॥೧೯-೨೦-೨೧॥

ಸದಾಶಿವನ ಮಹಾಲಿಂಗವನ್ನು ಪ್ರಾತಃಕಾಲ ದರ್ಶನಮಾಡುವುದರಿಂದ ರಾತ್ರಿ ಮಾಡಿದ ಪಾಪವು ನಾಶವಾಗುವುದು. ಮಧ್ಯಾಹ್ನಕಾಲದಲ್ಲಿ ಶಿವಲಿಂಗ ದರ್ಶನದಿಂದ ಹುಟ್ಟಿದಾರಭ್ಯ ಮಾಡಿದ ಸಕಲ ಪಾತಕಗಳೂ ನಾಶವಾಗುವುವು. ಸಾಯಂಕಾಲದ ಶಿವಲಿಂಗದರ್ಶನವು ಏಳು ಜನ್ಮಗಳಲ್ಲಿ ಗಳಿಸಿದ್ದ ಪಾಪಗಳೆಲ್ಲವನ್ನೂ ತೊಡೆದುಬಿಡುವುದು. ರಾತ್ರಿಯಲ್ಲಿ ಶಿವದರ್ಶನ ಮಾಡಿದರೆ ಹತ್ತುಸಾವಿರ ಗೋದಾನ

॥ ಈಶ್ವರ ಉವಾಚ ॥

ಯ ಇತ್ಥಂ ಶಿವಧರ್ಮಸಾರಮುಷುಭಿದ್ಜ್ಞಾತ್ವೈವ ಸಂಪೂಜಯ
ನ್ಯಾತಿ ಸ್ಥಾನಮಹೋ ಗಿರೀಂದ್ರತನಯೇ ಕೈಲಾಸಶೈಲಂ ಮಮ ।
ತತ್ರೈವಾವಿರತಂ ಮದೀಯಮಮಲಜ್ಞಾನಂ ಚ ವೇದಾಂತಜಂ
ಸಂಪ್ರಾಪ್ಯಾಮರರಾಜವಂದಿತಪದೋ ನಿತ್ಯಂ ಪ್ರಮೋದೇತ ಸಃ ॥೭೫॥

ಇತಿ ಶ್ರೀ ಶಿವರಹಸ್ಯೇ ಚರಾಚರಲಿಂಗಪೂಜೋಪಚಾರ
ಶಿವಧರ್ಮಮಹಿಮಾವರ್ಣನಂ ನಾಮ ಏಕಾದಶೋಽಧ್ಯಾಯಃ

---

ಗಳ ಪುಣ್ಯಭಾಗಿಯಾಗುವನು. ಪ್ರದೋಷ ಕಾಲಗಳಲ್ಲಿ ಪವಿತ್ರಮೂರ್ತಿಯಾದ ಶಿವನನ್ನು ನೋಡಿದರೆ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನ ಮತ್ತು ಈ ನಾಲ್ವರ ಸಹವಾಸರೂಪವಾದ ಪಂಚಮಹಾಪಾತಕಗಳೂ ನಾಶವಾಗುವುವು. ಎಲೌ ದೇವಿಯೇ, ಶಿವಧರ್ಮಸಂಗ್ರಹವು ಈರೀತಿಯಿರುವುದು. ॥೭೨-೭೩-೭೪॥

ಎಲೌ ಪರ್ವತರಾಜಕುಮಾರಿಯೇ, ಪಾಪನಾಶಕವಾದ ಈ ಶಿವಧರ್ಮಸಾರವನ್ನು ತಿಳಿದು ನನ್ನನ್ನು ಚೆನ್ನಾಗಿ ಪೂಜಿಸುವವನು ನನ್ನ ಕೈಲಾಸಪರ್ವತವನ್ನು ಅನಾಯಾಸವಾಗಿ ಸೇರುವನು. ಅನಂತರ ಅಲ್ಲಿಯೇ ಅವಿಚ್ಛಿನ್ನವಾಗಿ ವೇದಾಂತಜನ್ಯವಾದ ನನ್ನ ಪರಿಶುದ್ಧ ಜ್ಞಾನವನ್ನು ಪಡೆದು ದೇವೇಂದ್ರವಂದಿತ ಚರಣನಾಗಿ ನಿತ್ಯವೂ ಆನಂದಪಡುವನು, ಎಂದು ಪರಮೇಶ್ವರನು ಪಾರ್ವತಿಗೆ ಹೇಳಿದನು. ॥೭೫॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಸ್ಥಾವರಜಂಗಮಾತ್ಮಕವಾದ ಲಿಂಗಪೂಜೆ,
ಉಪಚಾರ ಮತ್ತು ಶಿವಧರ್ಮಗಳ ಮಹಿಮಾವರ್ಣನೆಯೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ದ್ವಾದಶೋಽಧ್ಯಾಯಃ

|| ಶ್ರೀ ಮಹಾದೇವ ಉವಾಚ ||

ನಿರ್ಮಾಲ್ಯಂ ಧಾರಯೇದ್ಭಕ್ತ್ಯಾ ಶಿರಸಾ ಪಾರ್ವತೀಪತೇಃ ।
ರಾಜಸೂಯಾಯುತಫಲಂ ಪ್ರಾಪ್ನೋತಿ ಭುವಿ ಮಾನವಃ ॥೧॥

ಶಿರಸಾ ಶಿವನಿರ್ಮಾಲ್ಯಂ ಭಕ್ತ್ಯಾ ಯೋ ಧಾರಯಿಷ್ಯತಿ ।
ಅಶುಚಿರ್ಭಿನ್ನಮರ್ಯಾದಃ ಸರ್ವಾವಸ್ಥಾಂ ಗತೋಽಪಿ ವಾ ॥೨॥

ನಿರ್ಮಾಲ್ಯಧಾರಣಾದ್ದೇವಿ ಶುಚಿಃ ಪೂತೋ ಭವಿಷ್ಯತಿ ।
ನಿರ್ಮಾಲ್ಯಧಾರಣೇ ಯೋಗ್ಯಾಸ್ತ್ರಿಪುಂಡ್ರಪರಿಚಿಹ್ನಿತಾಃ ॥೩॥

---

## ಹನ್ನೆರಡನೆಯ ಅಧ್ಯಾಯ

ಪಾರ್ವತಿಯೇ ಕೇಳು, ಮನುಷ್ಯನಾದವನು ಪಾರ್ವತೀರಮಣನ ನಿರ್ಮಾಲ್ಯವನ್ನು ಭಕ್ತಿಪೂರ್ವಕವಾಗಿ ತಲೆಯಲ್ಲಿ ಧಾರಣೆಮಾಡಲೇಬೇಕು. ಇದರಿಂದ ಅವನು ಹತ್ತುಸಹಸ್ರ ರಾಜಸೂಯಯಾಗಗಳ ಫಲವನ್ನು ಪಡೆಯುವನು. ಶುಚಿಯಿಲ್ಲದವನು, ಮರ್ಯಾದೆ ಬಿಟ್ಟವನು, ಅಥವಾ ಹೀನ ಅವಸ್ಥೆಯನ್ನು ಹೊಂದಿದವನೂ ಭಕ್ತಿಯಿಂದ ಶಿವನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಿದವನಾದರೆ ಆ ನಿರ್ಮಾಲ್ಯಧಾರಣೆಯಿಂದಲೇ ಆತನು ಶುಚಿಯೂ, ಪವಿತ್ರನೂ ಎನಿಸುವನು. ||೧-೨||

ಭಸ್ಮತ್ರಿಪುಂಡ್ರಗಳನ್ನು ಅಲಂಕರಿಸಿಕೊಂಡಿರುವವರೇ ಶಿವನಿರ್ಮಾಲ್ಯಗಳನ್ನು ಧಾರಣೆಮಾಡಲು ಯೋಗ್ಯರೆಂದು ತಿಳಿ. ಮೊದಲು ಕೊಟ್ಟ ಶಿವನಿರ್ಮಾಲ್ಯ,

ನಿರ್ಮಾಲ್ಯಂ ಪುರತೋ ದತ್ತಂ ಹವಿರನ್ನಂ ಫಲಂ ಜಲಂ ।
ನ ಚಂಡಾಧಿಕೃತಂ ಯತ್ರ ತದ್ಗ್ರಾಹ್ಯಂ ಭಸ್ಮಭೂಷಿತೈಃ ॥೪॥

ನಾಭಿಷಿಕ್ತಂ ಸ್ಥಾವರೇ ವಾ ಚರೇ ವಾಪಿ ಮಹೇಶ್ವರಿ ।
ಅನ್ನಂ ವಿನಾಪಿ ತದ್ಗ್ರಾಹ್ಯಂ ಫಲಾನಿ ಕ್ಷೀರಜಾತಯಃ ॥೫॥

ಸ್ವಾಯಂಭುವೇ ಪಾರ್ಥಿವೇ ಚ ಧಾತುಜೇ ರಸರತ್ನಜೇ ।
ನ ಚಂಡಾಧಿಕೃತಿರ್ದೇವಿ ತದ್ಗ್ರಾಹ್ಯಂ ವೈದಿಕೈರಪಿ ॥೬॥

ಮಲೋದರೈರ್ನ ಮೇ ಗ್ರಾಹ್ಯಂ ನಿರ್ಮಾಲ್ಯಂ ಜಲಮಣ್ವಪಿ ।
ಅನ್ಯೇಷಾಮಾಗಮಾನಾಂ ತು ನಿರ್ಮಾಲ್ಯಂ ನೈವ ಭಕ್ಷಯೇತ್ ॥೭॥

ನ ಲಂಘಯೇತ ನಿರ್ಮಾಲ್ಯಂ ಸೋಮಸೂತ್ರಂ ಚ ಪುಣ್ಯಹೃತ್ ।
ಅಶಾಂಭವೇಭ್ಯೋ ನಿರ್ಮಾಲ್ಯಂ ದತ್ವಾ ನರಕಮೃಚ್ಛತಿ ॥೮॥

---

ಹವಿಸ್ಸು, ಅನ್ನ, ಹಣ್ಣು, ನೀರು ಇವುಗಳು ವಿಶೇಷವಾಗಿ ಚಂಡೀಶ್ವರನಿಗೆ ಮಾತ್ರ ಸಲ್ಲತಕ್ಕವುಗಳು. ಆದ್ದರಿಂದಲೇ ಯಾವ ಶಿವನಿರ್ಮಾಲ್ಯವನ್ನು ತೆಗೆದುಕೊಳ್ಳ ಬೇಕಾದರೂ ಚಂಡೀಶ್ವರನ ಅನುಮತಿಯನ್ನು ಪಡೆಯಲೇ ಬೇಕು. ಎಲ್ಲಿ ಚಂಡೀ ಶ್ವರನ ಅಧಿಕಾರವ್ಯಾಪ್ತಿಗೆ ಶಿವನಿರ್ಮಾಲ್ಯವು ಒಳಪಡುವುದಿಲ್ಲವೋ ಅಲ್ಲಿಮಾತ್ರ ಭಸ್ಮಭೂಷಿತರಾದವರು ಅದನ್ನು ಸ್ವೀಕರಿಸಬಹುದು. ॥೩-೪॥

ಮಹೇಶ್ವರಿಯೇ, ಸ್ಥಾವರ ಅಥವಾ ಜಂಗಮಲಿಂಗಗಳಿಗೆ ಅಭಿಷೇಕಮಾಡದೇ ಅನ್ನವಿಲ್ಲದಿದ್ದರೂ ಹಣ್ಣು, ನೀರು ಮತ್ತು ಹಾಲಿನ ಜಾತಿಯ ಪದಾರ್ಥಗಳನ್ನು ಸ್ವೀಕರಿಸಬಹುದು. ದೇವಿ, ಸ್ವಯಮುದ್ಭವಿಸಿದ ಅಥವಾ ಪ್ರತಿಷ್ಠಿತವಾದ, ಲೋಹ ಗಳಿಂದ ಮಾಡಿದ, ಇಲ್ಲವೆ ರಸಗಳಿಂದಲೂ, ರತ್ನಗಳಿಂದಲೂ ಮಾಡಿರುವ ಲಿಂಗಗಳ ನಿರ್ಮಾಲ್ಯವನ್ನು ಹೆಚ್ಚಿನ ಅಧಿಕಾರವಿಲ್ಲದಿದ್ದಲ್ಲಿ ವೈದಿಕರೂ ಸಹ ಸ್ವೀಕರಿಸಬೇಕು. ॥೫-೬॥

ಹೊಟ್ಟೆಯಲ್ಲಿ ಕಲ್ಮಷಗಳನ್ನು ಹೊತ್ತಿರುವವರು ಶಿವನಿರ್ಮಾಲ್ಯವನ್ನೂ ಸ್ವಲ್ಪ ಶಿವತೀರ್ಥವನ್ನೂ ಸ್ವೀಕರಿಸಬಾರದು. ಇತರ ಆಗಮಗಳಂತೆ ಸಿದ್ಧವಾದ ನಿರ್ಮಾಲ್ಯಗಳನ್ನು ತಿನ್ನಲೇಬಾರದು. ನಿರ್ಮಾಲ್ಯವನ್ನೂ ಸೋಮಸೂತ್ರವನ್ನೂ ಎಂದೂ ದಾಟಬಾರದು. ಇದರಿಂದ ಪುಣ್ಯನಾಶವಾಗುವುದು. ಶಂಭುಭಕ್ತರಲ್ಲದವರಿಗೆ

ಶಂಭೋಃ ಸ್ನಾನೋದಕಂ ಸೇವ್ಯಂ ಸರ್ವತೀರ್ಥಮಯಂ ಹಿ ತತ್ ।
ಬಿಂದುತ್ರಯಾಧಿಕಂ ನೈವ ಗ್ರಾಹ್ಯಂ ತೀರ್ಥಂ ಶಿವಸ್ಯ ವೈ ॥೯॥

ಯತೋ ಮೂತ್ರಂ ಭವೇದ್ದೇಹೇ ಪೀತ್ವಾ ಮೃತ್ಯುಮವಾಪ್ನುಯಾತ್ ।
ಕರ್ಷಣಾದಿಪ್ರತಿಷ್ಠಾಂತಂ ಸಂಸ್ಕಾರಃ ಸ್ಯಾಚ್ಛಿವಾಲಯೇ ॥೧೦॥

ಕೃತ್ವಾ ಕುಂಭಾಭಿಷೇಕಾಂತಾಮಷ್ಟಬಂಧನಸಂಸ್ಕೃತಿಂ ।
ಶಿವಶಾಸ್ತ್ರವಿಧಾನೇನ ಸರ್ವಪಾಪೈಃ ಪ್ರಮುಚ್ಯತೇ ॥೧೧॥

ದೇವಖಾತಾಸಮಾಭೂಮಿಃ ಪ್ರಾಗುದಕ್ಪ್ರವಣೋನ್ನತಾ ।
ಶಿವಾಯತನನಿಕ್ಷೇಪೇ ವಿಶಿಷ್ಟಾ ಸಾ ಶಿವೇ ಸದಾ ॥೧೨॥

ಕೂಪಾರಾಮಾನ್ನಪಾನಾದಿ ಶಿವಾಯತನಕರ್ಮಸು ।
ಕೂಪಂ ಖಾತ್ವಾ ಶಿವಾಗಾರೇ ವಾಪೀಮಪಿ ತಟಾಕಕಂ ॥೧೩॥

---

ನಿರ್ಮಾಲ್ಯವನ್ನು ಕೊಟ್ಟವನು ನರಕವನ್ನೈದುವನು. ಸಕಲ ತೀರ್ಥಮಯವಾದ ಶಂಭುವಿನ ಸ್ನಾನಜಲವನ್ನು ಸೇವಿಸಬೇಕು. ಅದನ್ನು ಮೂರು ಹನಿಗಳಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ತೆಗೆದುಕೊಳ್ಳಲೇಬಾರದು. ॥೭-೮-೯॥

ಹೆಚ್ಚಾಗಿ ಶಿವಾಭಿಷೇಕದ ತೀರ್ಥವನ್ನು ಕುಡಿಯುವುದರಿಂದ ಆ ತೀರ್ಥವು ಮೂತ್ರವಾಗುತ್ತದೆ. ಶಿವತೀರ್ಥವನ್ನು ಹಾಗೆ ಮೂತ್ರಕ್ಕೆ ಪರಿಣಾಮಗೊಳಿಸುವವನು ಮೃತ್ಯುವನ್ನು ಪಡೆಯುವನು. ಇನ್ನು ಶಿವದೇವಾಲಯದಲ್ಲಿ ಕಲಾಕರ್ಷಣೆಯಿಂದ ಹಿಡಿದು ಪ್ರತಿಷ್ಠೆಯಾಗುವವರೆಗೂ ಶಿವಲಿಂಗಕ್ಕೆ ಆಗಬೇಕಾದ ಸಂಸ್ಕಾರವನ್ನು ನಡೆಸುವವನೂ, ಹಾಗೆಯೇ ಕುಂಭಾಭಿಷೇಕದ ವರೆಗೂ ಅಷ್ಟಬಂಧನ ಸಂಸ್ಕಾರವನ್ನು ಶಿವಶಾಸ್ತ್ರ (ಶಿವಾಗಮ) ವಿಧಿಗನುಸಾರವಾಗಿ ಮಾಡಿಸುವವನೂ ಸಕಲ ಪಾತಕಗಳಿಂದಲೂ ಮುಕ್ತನಾಗುವನು. ॥೧೦-೧೧॥

ದೇವಸ್ಥಾನಕ್ಕೆ ಉಪಯೋಗಿಸುವ ನೆಲವು ಸಮಮಟ್ಟದಲ್ಲಿರಬೇಕು. ಅಥವಾ ಪೂರ್ವ ಮತ್ತು ಉತ್ತರ ದಿಕ್ಕುಗಳಿಗೆ ಸ್ವಲ್ಪ ಎತ್ತರವಾಗಿದ್ದರೂ ಇರಬಹುದು. ಇಂತಹ ಭೂಮಿಯಲ್ಲಿ ಶಿವದೇವಾಲಯಗಳನ್ನು ಕಟ್ಟಿಸಬಹುದು. ಬಾವಿ, ಉದ್ಯಾನ, ಅನ್ನಪಾನೀಯಾದಿಗಳನ್ನು ಸಿದ್ಧಪಡಿಸುವ ಪಾಕಶಾಲೆ ಮುಂತಾದ ಶಿವದೇವಾಲಯಗಳ ಕೆಲಸಗಳನ್ನು ನಡೆಸುವ ಭೂಭಾಗವು ಲಕ್ಷಣವಿಶಿಷ್ಟವಾಗಿರಲೇಬೇಕು. ಶಿವಾಲಯ

ಯಾವತ್ತತ್ತೋಯಮಾನೇನ ಪಿತೃಭಿರ್ಮೋದತೇ ದಿವಿ ।
ಶಿವಲಿಂಗಾಗ್ರಗಂ ದೇವಿ ಯತ್ತೋಯಂ ಪುರತಃ ಸ್ಥಿತಂ ॥೧೪॥

ಶಿವಗಂಗೇತಿ ವಿಜ್ಞೇಯಂ ತತ್ರ ಸ್ನಾನಾಚ್ಛಿವಂ ವ್ರಜೇತ್ ।
ಗಂಗಾದ್ಯಾಃ ಪುಣ್ಯನದ್ಯೋ ಯೇ ಸಮುದ್ರಾಸ್ತತ್ರ ಸಂಸ್ಥಿತಾಃ ॥೧೫॥

ಶಿವಾಗ್ರಕೇ ಸಮುದ್ರೇಽಪಿ ನಿತ್ಯಂ ಸ್ನಾತ್ವಾ ಶಿವಂ ವ್ರಜೇತ್ ।
ಅನ್ಯತ್ರ ಸಾಗರೇ ದೇವಿ ಸ್ನಾನಂ ಪರ್ವಣಿ ಶಸ್ಯತೇ ॥೧೬॥

ದೂರತಃ ಶಿಖರಂ ದೃಷ್ಟ್ವಾ ನಮಸ್ಕಾರಃ ಶಿವಾಲಯೇ ।
ಸಪ್ತಜನ್ಮಕೃತೈಃ ಪಾಪೈಸ್ತತ್ಕ್ಷಣಾದೇವ ಮುಚ್ಯತೇ ॥೧೭॥

ಲಿಂಗಾನಾಂ ಚ ಶತಂ ಸಾಗ್ರಂ ಶಿವಕ್ಷೇತ್ರಂ ಶಿವೇ ವಿದುಃ ।
ದೇಹಿನಾಂ ತತ್ರ ಪಂಚತ್ವಂ ಶಿವಸಾಯುಜ್ಯಕಾರಣಂ ॥೧೮॥

---

ದಲ್ಲಿ ಬಾವಿಯನ್ನೂ ಕೊಳ, ಕೆರೆ ಮುಂತಾದ ಜಲಾಶಯಗಳನ್ನೂ ಕಟ್ಟಿಸುವವನು ಆ ಜಲಾಶಯಗಳಲ್ಲಿರುವ ನೀರಿನ ಪ್ರಮಾಣಕ್ಕನುಗುಣವಾಗಿ ತನ್ನ ಪಿತೃಗಳೊಡನೆ ತಾನೂ ಸ್ವರ್ಗದಲ್ಲಿ ವಿಶೇಷವಾಗಿ ಸಂತೋಷಪಡುವನು. ॥೧೨-೧೩॥

ಶಿವಾಲಯದಲ್ಲಿ ಶಿವಲಿಂಗದ ಮುಂದುಗಡೆ ಇರುವ ಕೊಳದ ನೀರು ಶಿವಗಂಗೆಯೆನಿಸುವುದು. ಅಲ್ಲಿ ಸ್ನಾನಮಾಡುವುದರಿಂದ ಮಾನವನು ಶಿವಸಾಯುಜ್ಯವನ್ನು ಪಡೆಯುವನು. ಗಂಗೆಯೇ ಮೊದಲಾದ ಸಕಲ ಪುಣ್ಯನದಿಗಳೂ ಎಲ್ಲಾ ಸಮುದ್ರಗಳೂ ಆ ನೀರಿನಲ್ಲಿ ಸನ್ನಿಹಿತವಾಗಿರುವುವು. ಶಿವನ ಮುಂದೆಯೇ ಇರುವ ಸಮುದ್ರದಲ್ಲಿ ನಿತ್ಯವೂ ಸ್ನಾನಮಾಡಿದವನೂ ಶಿವಲೋಕವನ್ನು ಸೇರುವನು. ಶಿವಸನ್ನಿಹಿತಗಳಲ್ಲದ ಬೇರೆ ಸಮುದ್ರಗಳಲ್ಲಾದರೋ ಪರ್ವಕಾಲಗಳಲ್ಲಿ ಮಾತ್ರ ಸ್ನಾನವು ಶ್ರೇಷ್ಠವೆನಿಸುವುದು. ॥೧೪-೧೫-೧೬॥

ಬಹಳ ದೂರದಿಂದಲೇ ಶಿವಾಲಯದ ಶಿಖರವನ್ನು ನೋಡಿ ಶಿವಾಲಯಕ್ಕೆ ನಮಸ್ಕಾರ ಮಾಡುವವನು ಏಳು ಜನ್ಮಗಳಲ್ಲಿ ಮಾಡಿದ ಪಾಪಗಳಿಂದಲೂ ಆ ಕ್ಷಣದಲ್ಲಿಯೇ ಬಿಡುಗಡೆ ಹೊಂದುವನು. ಎಲ್ಲಿ ಲಕ್ಷಣವಿಶಿಷ್ಟಗಳಾದ ನೂರು ಶಿವಲಿಂಗಗಳಿರುವುವೋ ಅದನ್ನು ಶಿವಕ್ಷೇತ್ರವೆಂದು ಹೇಳುವರು. ಪ್ರಾಣಿಗಳಿಗೆ ಅಲ್ಲಿ ದೊರಕುವ ಮರಣವು ಶಿವಸಾಯುಜ್ಯಕ್ಕೆ ಕಾರಣವೆನಿಸುವುದು. ಮನುಷ್ಯರು

ಮನುಷ್ಯಸ್ಥಾಪಿತೇ ಲಿಂಗೇ ಕ್ರೋಶಮಾನಂ ಶಿವೇ ಸದಾ ।
ಸ್ವಾಯಂಭುವೇ ಸಹಸ್ರಂ ಸ್ಯಾದಾರ್ಷೇ ಪುಣ್ಯಂ ತದರ್ಧಕಂ ॥೧೯॥

ಪಾಪಾಚಾರೋಽಪಿ ಮನುಜೋ ಮೃತಸ್ತತ್ರ ಪರಾಂ ಗತಿಂ ।
ಪ್ರಾಪ್ನೋತಿ ಪರಮಾಂ ದೇವಬಾಣಲಿಂಗಸ್ಥಿತೇ ಗೃಹೇ ॥೨೦॥

ತಸ್ಮಾದಾವಸಥಂ ಕುರ್ಯಾಚ್ಛಿವಕ್ಷೇತ್ರಸಮೀಪತಃ ।
ಶಿವೇ ದಾನಂ ಶಿವೇ ಹೋಮಂ ಶಿವೇ ಸ್ನಾನಂ ಶಿವೇ ಜಪಃ ॥೨೧॥

ಅಕ್ಷಯಾಣಿ ಫಲಾನ್ಯಾಹುಃ ಶಿವಾಗ್ರೇ ಚೇತ್ಕೃತಂ ಬಹು ।
ಶಿವಕ್ಷೇತ್ರೇ ನಿವಸತೋ ಯತ್ಫಲಂ ನೈಮಿಷೇ ಶಿವೇ ॥೨೨॥

ಪ್ರಯಾಗೇ ಚ ಪ್ರಭಾಸೇ ಚ ಗಂಗಾಸಾಗರಸಂಗಮೇ ।
ರುದ್ರಕೋಟ್ಯಾಂ ಗಯಾಯಾಂ ಚ ಸಾಲಗ್ರಾಮೇಽಮರೇಶ್ವರೇ ॥೨೩॥

---

ವಿಧಿವತ್ತಾಗಿ ಪ್ರತಿಷ್ಠೆಮಾಡಿದ ಶಿವಲಿಂಗಗಳ ಒಂದು ಹರಿದಾರಿವರೆಗಿನ ಭೂಮಿಯೆಲ್ಲಾ ಪುಣ್ಯಕ್ಷೇತ್ರವಾಗಿರುವುದು. ಸ್ವಯಮುದ್ಭವಲಿಂಗದಿಂದ ಸಾವಿರ ಹರಿದಾರಿ ದೂರ ಪುಣ್ಯಕ್ಷೇತ್ರವೆನಿಸುವುದು. ಋಷಿಗಳಿಂದ ಸ್ಥಾಪಿತವಾದ ಶಿವಲಿಂಗದಲ್ಲಿ ಅದರ ಅರ್ಧ ಎಂದರೆ ಐನೂರು ಹರಿದಾರಿ ದೂರದ ಪ್ರದೇಶವು ಪುಣ್ಯಕ್ಷೇತ್ರವೆನಿಸುವುದು. ॥೧೭-೧೮-೧೯॥

ಮನುಷ್ಯನು ಎಷ್ಟೇ ಪಾಪಾಚಾರಶೀಲನಾಗಿದ್ದರೂ ಶಿವಕ್ಷೇತ್ರಗಳಲ್ಲಿ ಅಥವಾ ಬಾಣಲಿಂಗವಿರುವ ಗೃಹದಲ್ಲಿ ಮೃತನಾದರೆ ಅದರಿಂದ ಅವನಿಗೆ ಪರಮಶ್ರೇಷ್ಠವಾದ ಗತಿಯುಂಟಾಗುವುದು. ಆದ್ದರಿಂದ ಶ್ರೇಯಸ್ಕಾಮಿಯಾದವನು ಶಿವಕ್ಷೇತ್ರದ ಸಮೀಪವೇ ಯಾವಾಗಲೂ ವಾಸಮಾಡಬೇಕು. ಶಿವಲಿಂಗದ ಮುಂದೆ ನಡೆಸಿದ ದಾನ, ಹೋಮ, ಸ್ನಾನ, ಜಪ ಮುಂತಾದವುಗಳೆಲ್ಲವೂ ಅಕ್ಷಯಫಲದಾಯಕಗಳೆಂದು ತಿಳಿದವರು ಹೇಳುವರು. ॥೨೦-೨೧॥

ದೇವಿಯೆ! ಶಿವಕ್ಷೇತ್ರದಲ್ಲಿ ವಾಸಮಾಡುವವನಿಗೆ ಯಾವ ಫಲವುಂಟಾಗುವುದೆಂಬುದನ್ನೂ, ಫಲಪ್ರದಗಳಾದ ಶಿವಕ್ಷೇತ್ರಗಳು ಯಾವುವು ಎಂಬುದನ್ನೂ ಹೇಳುವೆನು ಕೇಳು. ನೈಮಿಷ, ಪ್ರಯಾಗ, ಪ್ರಭಾಸ, ಗಂಗಾಸಮುದ್ರ ಸಂಗಮ, ರುದ್ರಕೋಟಿ, ಗಯೆ, ಸಾಲಗ್ರಾಮ, ಅಮರೇಶ್ವರ, ಪುಷ್ಕರ, ಭಾರ

ಪುಷ್ಕರೇ ಭಾರಭೂತೇಶೇ ಗೋಕರ್ಣೇ ಮಂಡಲೇಶ್ವರೇ ।
ಶ್ರೀಶೈಲೇ ತ್ರ್ಯಂಬಕೇ ದೇವಿ ಮಹಾಕಾಲೇ ಜಟೇಶ್ವರೇ ॥೨೪॥

ವಾರಾಣಸ್ಯಾಂ ತು ಕೇದಾರೇ ಓಂಕಾರೇ ವೈದ್ಯನಾಥಕೇ ।
ಕಾಲಂಜರೇ ತಥಾ ದೇವಿ ದೃಷ್ಟ್ವಾ ಮಾಂ ಪರಮೇಶ್ವರಂ ॥೨೫॥

ಸಂಪೂಜ್ಯ ಭಕ್ತಾನಪಿ ಚ ಯಥಾಶಕ್ತ್ಯಾನ್ನಪಾನದಃ ।
ಗೋದಾವರ್ಯಾಂ ಕೃಷ್ಣವೇಣ್ಯಾಂ ನರ್ಮದಾಯಾಂ ತಥಾ ಶಿವೇ ॥೨೬॥

ಗಂಗಾಯಾಂ ಯಮುನಾಯಾಂ ವಾ ವೇಣಾಚರ್ಮಣ್ವತೀಷು ಚ ।
ತಾಪೀಪಯೋಷ್ಣ್ಯಾಂ ಕಾವೇರ್ಯಾಂ ತುಂಗಾತಾಮ್ರಾಸು ನಿತ್ಯಶಃ ॥೨೭॥

ತತ್ತತ್ತೀರಸ್ಥಿತೇ ಕ್ಷೇತ್ರೇ ಲಿಂಗಂ ದೃಷ್ಟ್ವಾ ಪಿನಾಕಿನಃ ।
ಶ್ರೀಕಂಠೇ ರತ್ನಭೂತಾದ್ರೌ ಜಂಬುಕೇಶೇಽಥ ಮಾತೃಕೇ ॥೨೮॥

ಜಪ್ಯೇ ಕುಂಭೇಶ್ವರೇ ದೇವಿ ಅರ್ಜುನೇ ಶ್ವೇತಕಾನನೇ ।
ಛಾಯಾವನೇ ವೇದವನೇ ವಲ್ಮೀಕೇ ಪುಂಡರೀಕಕೇ ॥೨೯॥

ವೃದ್ಧಾಚಲೇ ಗೋನಗೇ ಚ ಕಾಲಹಸ್ತ್ಯರುಣಾಚಲೇ ।
ಕಾಂಚ್ಯಾಂ ಹಾಲಾಸ್ಯಸದನೇ ಪುಣ್ಯೇ ವೈ ಗಂಧಮಾದನೇ ॥೩೦॥

---

ಭೂತೇಶ, ಗೋಕರ್ಣ, ಮಂಡಲೇಶ್ವರ, ಶ್ರೀಶೈಲ, ತ್ರ್ಯಂಬಕ, ಮಹಾಕಾಲ, ಜಟೇಶ್ವರ, ಕಾಶಿ, ಕೇದಾರ, ಓಂಕಾರ, ವೈದ್ಯನಾಥ, ಕಾಲಂಜರ ಈ ಶಿವಕ್ಷೇತ್ರಗಳಲ್ಲಿ ನನ್ನ ದರ್ಶನಮಾಡಿ ಭಕ್ತಿಯಿಂದ ನನ್ನ ಭಕ್ತರನ್ನು ಅವರವರ ಶಕ್ತ್ಯನುಸಾರ ಪೂಜಿಸಿ, ಅವರಿಗೆ ಅನ್ನಪಾನಗಳನ್ನು ನೀಡುವವನು ಶಿವಸಾಯುಜ್ಯವನ್ನು ಪಡೆಯುವನು. ಹಾಗೆಯೇ ಗೋದಾವರಿ, ಕೃಷ್ಣವೇಣಿ, ನರ್ಮದೆ, ಗಂಗೆ, ಯಮುನೆ, ವೇಣಾ, (?) ಚರ್ಮಣ್ವತಿ, ತಾಪಿ, ಪಯೋಷ್ಣಿ, ಕಾವೇರಿ, ತುಂಗಾ, ತಾಮ್ರಪರ್ಣಿ ಈ ನದಿಗಳ ದಡಗಳಲ್ಲಿನ ಕ್ಷೇತ್ರಗಳಲ್ಲಿ ನಿತ್ಯವೂ ಶಿವಲಿಂಗದರ್ಶನ ಮಾಡುವವನೂ, ಶ್ರೀಕಂಠ, ರತ್ನಾಚಲ, ಜಂಬುಕೇಶ್ವರ, ಮಾತೃಭೂತೇಶ್ವರ, ಜಪ್ಯೇಶ್ವರ, ಕುಂಭೇಶ್ವರ, ಅರ್ಜುನ, ಶ್ವೇತಾರಣ್ಯ, ಛಾಯಾವನ, ವೇದಾರಣ್ಯ, ದೇವಾಟವಿ, ವಲ್ಮೀಕ, ಪುಂಡರೀಕ, ವೃದ್ಧಾಚಲ, ಗೋಪರ್ವತ (ವೃಷಭಾಚಲ) ಕಾಲಹಸ್ತಿ, ಅರುಣಾಚಲ, ಕಾಂಚಿ, ಹಾಲಾಸ್ಯಕ್ಷೇತ್ರ, ಪುಣ್ಯಕರವಾದ ಗಂಧಮಾ

ಛಿತ್ವಾ ಪದದ್ವಯಂ ವಾಪಿ ಶಿವಕ್ಷೇತ್ರೇ ವಸೇತ್ತು ಯಃ ।
ಸ ಯಾತಿ ಶಿವಸಾಯುಜ್ಯಂ ಕ್ಷೇತ್ರಸಂನ್ಯಾಸಕಾರಣಾತ್ ॥೩೧॥

ಕ್ಷೇತ್ರಾಣಾಂ ದರ್ಶನಂ ಪುಣ್ಯಂ ಪ್ರವೇಶಸ್ತಚ್ಛತಾಧಿಕಃ ।
ತಸ್ಮಾಚ್ಛತಗುಣಂ ಲಿಂಗಂ ದರ್ಶನಂ ಚ ಪ್ರದಕ್ಷಿಣಾತ್ ॥೩೨॥

ತಸ್ಮಾಚ್ಛತಗುಣಂ ಪುಣ್ಯಂ ಜಲಸ್ನಾನಮತಃ ಪರಂ ।
ಕ್ಷೀರಸ್ನಾನಮತೋ ದೇವಿ ಶತಾಧಿಕಮನುತ್ತಮಂ ॥೩೩॥

ದಧ್ನಾ ಸಹಸ್ರಮಾಖ್ಯಾತಂ ಮಧುನಾ ಸಿತಯಾ ಶತಂ ।
ಘೃತಸ್ನಾನೇನ ಚಾನಂತ್ಯಂ ಭಕ್ತಿಪೂಜಾ ತತೋಽಧಿಕಾ ॥೩೪॥

ನಾಸ್ತಿ ಲಿಂಗಾರ್ಚನಾತ್ಪುಣ್ಯಮಧಿಕಂ ದೇವಿ ನಿಶ್ಚಿತಂ ।
ಲಿಂಗೇಽರ್ಚಿತೇಽಖಿಲಂ ವಿಶ್ವಮರ್ಚಿತಂ ಸ್ಯಾನ್ನ ಸಂಶಯಃ ॥೩೫॥

---

ದನಕ್ಷೇತ್ರ ಈ ಶಿವಕ್ಷೇತ್ರಗಳಲ್ಲಿ ನೆಲಸಿರುವವನೂ ಅಥವಾ ಎರಡು ಕಾಲನ್ನೂ ಕಳೆದುಕೊಂಡಾದರೂ ಅಲ್ಲಿವಾಸಮಾಡಿ, ಕೆಲವುಕಾಲಾನಂತರ ಕ್ಷೇತ್ರಸಂನ್ಯಾಸಮಾಡುವವನೂ, ಶಿವಾನುಗ್ರಹವನ್ನು ಹೊಂದಿ, ಶಿವಸಾಯುಜ್ಯವನ್ನು ಪಡೆಯುವನು. ॥೨೨-೨೩-೨೪-೨೫-೨೬-೨೭-೨೮-೨೯-೩೦-೩೧॥

ಕೇವಲ ಕ್ಷೇತ್ರದರ್ಶನವೇ ಪುಣ್ಯಕರವು. ಅದನ್ನು ಪ್ರವೇಶಿಸುವುದು ಕ್ಷೇತ್ರ ದರ್ಶನಕ್ಕಿಂತಲೂ ನೂರರಷ್ಟು ಹೆಚ್ಚಿನ ಪುಣ್ಯವನ್ನು ಕೊಡಬಲ್ಲುದು. ಶಿವಲಿಂಗ ದರ್ಶನಮಾಡಿ ಪ್ರದಕ್ಷಿಣೆಮಾಡುವುದು, ಅದಕ್ಕಿಂತ ನೂರುಪಾಲು ಹೆಚ್ಚು ಪುಣ್ಯ ಕರವು. ಆ ಕ್ಷೇತ್ರದಲ್ಲಿ ನೀರಿನಿಂದ ಶಿವಲಿಂಗಕ್ಕೆ ಸ್ನಾನಮಾಡಿಸುವುದು ಅದ ಕ್ಕಿಂತಲೂ ನೂರುಪಾಲು ಅಧಿಕಪುಣ್ಯಕರವು. ಶಿವಲಿಂಗಕ್ಕೆ ನಡೆಸುವ ಕ್ಷೀರಸ್ನಾನವು ಜಲಸ್ನಾನಕ್ಕಿಂತಲೂ ಶತಗುಣಾಧಿಕವೂ ಉತ್ತಮವೂ ಆಗಿರುವುದೆಂದು ತಿಳಿ. ॥೩೨-೩೩॥

ಶಿವಲಿಂಗಕ್ಕೆ ಮೊಸರಿನಿಂದ ಅಭಿಷೇಕಮಾಡುವುದು ಕ್ಷೀರಾಭಿಷೇಕಕ್ಕಿಂತಲೂ ಸಾವಿರಪಾಲು ಗುಣಾಧಿಕವು. ಜೇನುತುಪ್ಪ, ಕಲ್ಲುಸಕ್ಕರೆಗಳಿಂದಮಾಡಿದ ಅಭಿಷೇಕವು ಇದಕ್ಕಿಂತಲೂ ನೂರುಪಾಲು ಪುಣ್ಯಾಧಿಕವು. ಭಕ್ತಿಯಿಂದ ಶಿವಲಿಂಗಾರ್ಚನೆಮಾಡುವುದು ಮತ್ತೂ ಪುಣ್ಯಪ್ರದವು. ಲಿಂಗಪೂಜೆಗಿಂತಲೂ ಹೆಚ್ಚಿನ ಪುಣ್ಯಕಾರ್ಯವೇ

ಯಃ ಪೂಜಿತಂ ಶಿವಂ ದೃಷ್ಟ್ವಾ ಪ್ರಣಮೇತ್ ಭುವಿ ಶಂಕರಿ ॥೩೬॥
ಯಸ್ತು ಲಿಂಗಾರ್ಚನಂ ತ್ಯಕ್ತ್ವಾ ದೇವಾನನ್ಯಾಂಶ್ಚ ಪೂಜಯೇತ್ ॥೩೭॥
ಪರ್ವಕಾಲೇಷು ಶರ್ವಾರ್ಚಾ ವಿಶಿಷ್ಟಾ ಸರ್ವಕರ್ಮಣಃ ।
ಗ್ರಹಣೇ ಸೋಮಸೂರ್ಯಾಣಾಂ ಪೂಜಾನಂತಫಲಪ್ರದಾ ॥೩೮॥
ಶಿವಮಾಲ್ಯಾಪನಯನಂ ಪೂಜಾಂತೇಷು ಪ್ರಮಾರ್ಜನಂ ।
ಏಕೈಕಮೇವ ತುಲ್ಯಂ ಸ್ಯಾಚ್ಚಾಂದ್ರಾಯಣಫಲಂ ಶಿವೇ ॥೩೯॥
ಯಃ ಕುರ್ಯಾದ್ರುದ್ರಹೋಮಂ ಚ ಚರುಣಾ ಸಘೃತೇನ ಚ ।
ಸಕೃತ್ತತ್ರಾಗ್ನಿಕಾರ್ಯೇಣ ರುದ್ರಸಾಯುಜ್ಯಮಾಪ್ನುಯಾತ್ ॥೪೦॥
ಶಿವಾಲಯಾಗ್ರೇ ಯಃ ಕುರ್ಯಾದ್ದಶಮಂಡಲಕಾನಿ ತು ।
ಸರ್ವಾನ್ನಬಲಿದಾನಂ ಚ ಕೃತ್ವಾ ಪುಣ್ಯಾಯುತಂ ಲಭೇತ್ ॥೪೧॥

---

ನಿಶ್ಚಯವಾಗಿಯೂ ಇಲ್ಲ. ಶಿವಲಿಂಗವು ಪೂಜಿಸಲ್ಪಟ್ಟರೆ ಸಕಲಪ್ರಪಂಚವೂ ಪೂಜಿಸಲ್ಪಟ್ಟಂತೆಯೇ ಆಗುವುದರಲ್ಲಿ ಸಂದೇಹವೇ ಇಲ್ಲ. ॥೩೪-೩೫॥

ಭಕ್ತಿಯುಕ್ತವಾಗಿ ಪೂಜೆಮಾಡಲ್ಪಟ್ಟಿರುವ ಶಿವಲಿಂಗವನ್ನು ನೋಡಿ ಯಾವನು ನಮಸ್ಕರಿಸುವನೋ ಅವನು ವಿಶ್ವವಂದ್ಯನಾಗಿ ಮುಕ್ತನಾಗುವನು. ಶಿವಲಿಂಗಪೂಜೆಯನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸುವವನು ನಿಜವಾಗಿಯೂ ಪತಿತನಾಗುವನು. ಪರ್ವಕಾಲಗಳಲ್ಲಿಯೂ ಸಕಲಕರ್ಮಗಳ ಆರಂಭದಲ್ಲಿಯೂ ಶಿವಪೂಜೆಯು ಶ್ರೇಷ್ಠವಾದುದು. ಚಂದ್ರಸೂರ್ಯರ ಗ್ರಹಣಕಾಲದಲ್ಲಿ ನಡೆಸುವ ಶಿವಪೂಜೆಯು ಅಪರಿಮಿತಫಲದಾಯಕವು. ಶಿವನ ನಿರ್ಮಾಲ್ಯವನ್ನು ತೆಗೆಯುವುದೂ, ಪೂಜೆಯು ಮುಗಿದಮೇಲೆ ಶಿವಲಿಂಗವನ್ನು ಶುದ್ಧಿಮಾಡುವುದೂ, ಇವುಗಳಲ್ಲಿ ಒಂದೊಂದೂ ಚಾಂದ್ರಾಯಣವ್ರತಫಲಕ್ಕೆ ಸಮಾನಫಲವುಳ್ಳದ್ದೆಂದು ಭಾವಿಸಬೇಕು. ॥೩೬-೩೭-೩೮-೩೯॥

ಎಲೌ ಪರ್ವತರಾಜಕುಮಾರಿಯೆ, ತುಪ್ಪಮಿಶ್ರಿತವಾದ ಚರುವಿನಿಂದ ಶಾಖಾನುಸಾರವಾದ ಅಗ್ನಿಮುಖಪೂರ್ವಕವಾಗಿ ಒಂದುಬಾರಿ ರುದ್ರಹೋಮಮಾಡುವವನು ರುದ್ರಸಾಯುಜ್ಯವನ್ನೈದುತ್ತಾನೆ. ಶಿವದೇವಾಲಯದ ಮುಂದುಗಡೆ ದಶಮಂಡಲ

ಪಂಚಾಕ್ಷರಜಪಾತ್ಕ್ಷೇತ್ರೇ ನಾಸ್ತ್ಯನ್ಯತ್ಪಾಪಶೋಧನಂ ।
ರುದ್ರಾಣಾಂ ಪ್ರಣವಸ್ಯಾಪಿ ಸರ್ವಪಾಪವಿಶೋಧನೇ ॥೪೨॥

ನ ಹಿ ಪಂಚಾಕ್ಷರಜಪಾಚ್ಛ್ರೇಯೋಽನ್ಯದ್ಭುವನೇಶ್ವರಿ ।
ಏವಂ ಜ್ಞಾತ್ವಾ ಜಪೇದ್ವಿದ್ವಾನ್ಪಂಚಾಕ್ಷರಮತಂದ್ರಿತಃ ॥೪೩॥

ವೃಕ್ಷಾಃ ಪುಷ್ಪಾಂಗಪತ್ರೈಶ್ಚ ಉಪಯುಕ್ತಾಃ ಶಿವಾರ್ಚನೇ ।
ಗಾವಶ್ಚೈವ ದ್ವಿಜಶ್ರೇಷ್ಠಾಃ ಪ್ರಯಾಂತಿ ಪರಮಾಂ ಗತಿಂ ॥೪೪॥

ಶಿವಾಲಯೇ ನಿಹತ್ಯೈಕಮಪಿ ತತ್ಸಕಲಂ ಲಭೇತ್ ।
ಶಿವಾರ್ಥಂ ಸತತಂ ಕಾರ್ಯಾ ಪುಷ್ಪಹಿಂಸಾ ಮಹೇಶ್ವರಿ ॥೪೫॥

ಯಜ್ಞಾರ್ಥಂ ಪಶುಹಿಂಸಾವನ್ನಾಸ್ತಿ ದೋಷಸ್ಯಕಾರಣಂ ।
ಪೂಜಿತಂ ವಾ ಮಹಾದೇವಂ ಪೂಜ್ಯಮಾನಮಥಾಪಿ ವಾ ॥೪೬॥

---

ವಿಧಾನದಿಂದ ಮಂಡಲಗಳನ್ನು ನಿರ್ಮಿಸಿ, ಅಲ್ಲಿ ಎಲ್ಲಕ್ಕೂ ಅನ್ನಬಲಿದಾನಮಾಡು ವವನು ಹತ್ತುಸಹಸ್ರದಷ್ಟು ಹೆಚ್ಚಿನ ಪುಣ್ಯರಾಶಿಯನ್ನು ಹೊಂದುವನು. ||೪೦-೪೧||

ಶಿವಕ್ಷೇತ್ರಗಳಲ್ಲಿ ಪಂಚಾಕ್ಷರಜಪಮಾಡುವುದಕ್ಕಿಂತ ಹೆಚ್ಚಿನ ಪಾಪಶುದ್ಧಿ ಮಾಡುವ ಕರ್ಮಗಳು ಬೇರೆ ಇಲ್ಲ. ಹಾಗೆಯೆ ರುದ್ರ ಮತ್ತು ಪ್ರಣವಮಂತ್ರಗಳಿಗೂ ಸಹ ಶಿವಕ್ಷೇತ್ರದಲ್ಲಿ ಪಾಪಶೋಧನಸಾಮರ್ಥ್ಯವಿರುತ್ತದೆ. ಎಲೌ ಭುವನೇಶ್ವರಿಯೆ! ಈ ಪಂಚಾಕ್ಷರಮಂತ್ರಜಪಕ್ಕಿಂತಲೂ ಪ್ರಪಂಚದಲ್ಲಿ ಹೆಚ್ಚಿನ ಶ್ರೇಯಸ್ಕರವಾದುದು ಬೇರೊಂದಿಲ್ಲವೆಂದು ತಿಳಿದು ಪಂಡಿತನಾದವನು ಆಲಸ್ಯರಹಿತನಾಗಿ ಅದನ್ನು ತಪ್ಪದೆ ಜಪಮಾಡಬೇಕು. ||೪೨-೪೩||

ಶಿವಕ್ಷೇತ್ರದಲ್ಲಿರುವ ವೃಕ್ಷಗಳು, ಹೂವು, ಪತ್ರೆ ಮುಂತಾದ ತಮ್ಮ ಅಂಗ ಗಳಿಂದ ಶಿವಪೂಜೆಗೆ ಉಪಯುಕ್ತವಾಗುತ್ತವೆ. ಅದೇ ರೀತಿ ಕ್ಷೀರಾದಿ ಪೂಜಾಸಾಧನ ಗಳನ್ನೊದಗಿಸುವ ಹಸುಗಳೂ, ಶಿವನ ಪೂಜಾಕಾರ್ಯಗಳಲ್ಲಿ ಶ್ರಮವಹಿಸುವ ಬ್ರಾಹ್ಮ ಣರೂ, ಶಿವಾನುಗ್ರಹದಿಂದ ಮುಕ್ತರೇ ಆಗುವರು. ಆದಕ್ಕಾಗಿ ಶಿವಾಲಯದಲ್ಲಿ ಮೇಲೆ ಹೇಳಿದ ವಸ್ತುಗಳನ್ನೂ ಗೋಬ್ರಾಹ್ಮಣರನ್ನೂ ಶ್ರಮಪಡಿಸಿಯೇ ಫಲಪಡೆಯಬೇಕು. ಈರೀತಿ ಅವರಿಗೆ ಹಿಂಸೆಕೊಡುವುದು ಪಾಪಕಾರಣವೆನಿಸಲಾರದು. ಶಿವಪೂಜೆಗಾಗಿ ಮಾಡುವ ಪುಷ್ಪಾಪಚಯವು ಹಿಂಸಾಕಾರ್ಯವೆನಿಸಲಾರದು. ||೪೪-೪೫||

ಯಾಗಕ್ಕೋಸ್ಕರ ಪಶುಹಿಂಸೆಮಾಡುವಂತೆ ಶಿವಪೂಜೆಗೋಸ್ಕರ ಪುಷ್ಪಗಳನ್ನು

ಶ್ರುತ್ವಾನುಮೋದತೇ ವಾಪಿ ಸ ಗಚ್ಛೇದೈಶ್ವರಂ ಪದಂ ।
ಅರ್ಚಿತಂ ಪರಮೇಶಾನಂ ಭವಂ ಶರ್ವಮುಮಾಪತಿಂ ॥೪೭॥

ಸಕೃತ್ಪ್ರಸಂಗಾದ್ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಆವಾಹನಂ ಚ ಸಾನ್ನಿಧ್ಯಂ ಸ್ಥಾಪನಂ ಪೂಜನಂ ತಥಾ ॥೪೮॥

ಪಂಚಭಿಸ್ಸ್ನಪನಂ ದೇವಿ ರುದ್ರಾಧ್ಯೈಶ್ಚ ಪ್ರಮುಚ್ಯತೇ ।
ಪಂಚಾಕ್ಷರೇಣ ಮಂತ್ರೇಣ ಬಿಲ್ವಪತ್ರೈಃ ಶಿವಾರ್ಚನಂ ॥೪೯॥

ಕರೋತಿ ಶ್ರದ್ಧಯಾ ಯುಕ್ತಃ ಸ ಗಚ್ಛೇದೈಶ್ವರಂ ಪದಂ ।
ದರ್ಶನಾದ್ಬಿಲ್ವವೃಕ್ಷಸ್ಯ ಸ್ಪರ್ಶನಾದ್ವಂದನಾದಪಿ ॥೫೦॥

ಅಹೋರಾತ್ರಕೃತಂ ಪಾಪಂ ನಶ್ಯತ್ಯೇವ ಮಹೇಶ್ವರಿ ।
ಸೇಕೇನ ಬಿಲ್ವಮೂಲೇಷು ತೋಯೇನಾಘನಿವಾರಣಂ ॥೫೧॥

---

ಪೀಡಿಸುವದು ದೋಷಕ್ಕೆ ಕಾರಣವಾಗುವುದಿಲ್ಲ. ಪೂಜಿಸಲ್ಪಟ್ಟ ಅಥವಾ ಪೂಜಿಸಲ್ಪಡುತ್ತಿರುವ ಮಹಾದೇವನ ವಿಷಯವನ್ನು ಕೇಳಿದವನೂ ಅಥವಾ ಆ ಪೂಜೆಗೆ ಸಹಕಾರವನ್ನಿತ್ತು ಅನುಮೋದಿಸುವವನೂ ಕೈಲಾಸವನ್ನು ಪಡೆಯುವನು. ಭಕ್ತಾದಿಗಳಿಂದ ಪೂಜೆಮಾಡಲ್ಪಟ್ಟಿರುವ ಪರಮೇಶ್ವರನೂ, ಜಗಜ್ಜನ್ಮಕಾರಣನೂ, ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ಹಿಂಸಿಸುವನೂ ಆದ ಉಮಾರಮಣನನ್ನು ಪ್ರಸಂಗವಶಾತ್ ಒಂದುಸಲ ನೋಡಿದರೂ ಮಾನವನು ಸಕಲಪಾಪಗಳಿಂದಲೂ ಮುಕ್ತನಾಗುತ್ತಾನೆ. ॥೪೬-೪೭॥

ಮಹೇಶ್ವರನ ಆವಾಹನೆ, ಸಾನ್ನಿಧ್ಯ, ಸ್ಥಾಪನೆ, ಪೂಜೆ, ರುದ್ರಾಧ್ಯಾಯ ಪಠನಪೂರ್ವಕವಾಗಿ ಶಿವಲಿಂಗಕ್ಕೆ ಪಂಚಾಮೃತಾಭಿಷೇಕ, ಮುಂತಾದವುಗಳನ್ನಾಚರಿಸುವುದರಿಂದ ಮಾನವನು ಶಾಶ್ವತವಾದ ಮುಕ್ತಿಯನ್ನುಪಡೆಯುವನು. ಪಂಚಾಕ್ಷರ ಮಂತ್ರಪೂರ್ವಕವಾಗಿ ಬಿಲ್ವದಳಗಳಿಂದ ಶಿವಲಿಂಗಾರ್ಚನೆಯನ್ನು ಶ್ರದ್ಧೆಯಿಂದ ಮಾಡುವವನು ನಿಜವಾಗಿಯೂ ಶಿವಸಾಯುಜ್ಯವನ್ನೈದುವನು. ॥೪೮-೪೯॥

ಮಹೇಶ್ವರಿಯೆ, ಬಿಲ್ವವೃಕ್ಷದ ದರ್ಶನ, ಸ್ಪರ್ಶನ, ಮತ್ತು ನಮಸ್ಕಾರಗಳಿಂದ ಹಗಲಿರುಳುಮಾಡಿದ ಪಾಪವು ಖಂಡಿತವಾಗಿಯೂ ನಾಶವಾಗಿಯೇತೀರುತ್ತದೆ. ಬಿಲ್ವವೃಕ್ಷದ ಬುಡದಲ್ಲಿರುವ ನೀರನ್ನು ಪ್ರೋಕ್ಷಿಸಿಕೊಳ್ಳುವುದರಿಂದ ಪಾಪನಾಶವಾಗು

ಶಿವಕ್ಷೇತ್ರೇ ಭಕ್ತಮೇಕಂ ಬಿಲ್ವಮೂಲೇಽಪಿ ವಾ ಶಿವೇ ।
ಭೋಜಯಿತ್ವಾ ಘೃತಾನ್ನೇನ ಸಕ್ಷೀರೇಣ ಸುಪುಣ್ಯಭಾಕ್ ॥೫೨॥

ಬಿಲ್ವಮೂಲಂ ಸಮಾಶ್ರಿತ್ಯ ಯಸ್ತ್ರಿರಾತ್ರಮುಪೋಷಿತಃ ।
ಹರನಾಮ ಜಪೇಲ್ಲಕ್ಷಂ ಸರ್ವಪಾಪೈಃ ಪ್ರಮುಚ್ಯತೇ ॥೫೩॥

ಯೋಽಂತಕಾಲೇ ಬಿಲ್ವಮೂಲೇ ಮೃತೋ ಯಾತಿ ಪರಾಂ ಗತಿಂ ।
ಬಿಲ್ವಪತ್ರೈರಖಂಡೈಸ್ತು ಚಂದ್ರಚೂಡಂ ಸಮರ್ಚಯೇತ್ ॥೫೪॥

ಕೃಷ್ಣಾಷ್ಟಮ್ಯಾಂ ಸೋಮವಾರೇ ಪ್ರದೋಷೇ ಪೂಜಯನ್ನರಃ ।
ಪಂಚಭಿಃ ಪಾತಕೈರ್ದೇವಿ ಮುಚ್ಯತೇ ನಾತ್ರ ಸಂಶಯಃ ॥೫೫॥

ಶುಷ್ಕೈಃ ಪರ್ಯುಷಿತೈರ್ವಾಽಪಿ ಬಿಲ್ವಪತ್ರೈಃ ಪ್ರಪೂಜಯೇತ್ ।
ಯುಗಾನಾಮಯುತಂ ಸಾಗ್ರಂ ಶಿವಲೋಕೇ ವಸೇನ್ನರಃ ॥೫೬॥

---

ವುದು. ಎಲೌ ಪಾರ್ವತಿಯೇ, ಶಿವಕ್ಷೇತ್ರದಲ್ಲಿ ಅಥವಾ ಬಿಲ್ವವೃಕ್ಷದ ಬುಡದಲ್ಲಿ ಒಬ್ಬ ಶೈವನಿಗೆ ಹಾಲಿನಿಂದ ಯುಕ್ತವಾದ ತುಪ್ಪದನ್ನವನ್ನು ಭೋಜನಮಾಡಿಸುವವನು ವಿಶೇಷಪುಣ್ಯಶಾಲಿಯೆನಿಸುವನು. ॥೫೦-೫೧-೫೨॥

ಬಿಲ್ವವೃಕ್ಷದಬುಡದಲ್ಲಿ ಮೂರುರಾತ್ರಿ ಉಪವಾಸವಿದ್ದು ಒಂದುಲಕ್ಷ ಶಿವನಾಮಗಳನ್ನು ಜಪಮಾಡುವವನು ಸಮಸ್ತಪಾತಕಗಳಿಂದಲೂ ಮುಕ್ತನಾಗುತ್ತಾನೆ. ಸಾಯುವ ಕಾಲದಲ್ಲಿ ಬಿಲ್ವವೃಕ್ಷದಬುಡದಲ್ಲಿ ಮರಣಹೊಂದುವವನು ಉತ್ತಮಗತಿಯನ್ನೈದುವನು. ಚಂದ್ರಶೇಖರನೆನಿಸಿದ ಮಹಾದೇವನನ್ನು ಅಚ್ಚಳಿಯದಂತೆ ಶುಭ್ರವಾಗಿರುವ ಬಿಲ್ವದಳಗಳಿಂದ ಪೂಜಿಸುವವನು, ಮಹಾಪಾಪಶೃಂಖಲೆಗಳಿಂದ ಶೀಘ್ರದಲ್ಲಿಯೇ ಬಿಡುಗಡೆಹೊಂದುವನು. ॥೫೩-೫೪॥

ಪರ್ವತಿಥಿಯೆನಿಸಿದ ಕೃಷ್ಣಪಕ್ಷದ ಅಷ್ಟಮೀ, ಸೋಮವಾರ, ಪ್ರದೋಷಕಾಲಗಳಲ್ಲಿ ಶಿವಲಿಂಗವನ್ನು ಪೂಜೆಮಾಡುವ ಮಾನವನು ಬ್ರಹ್ಮಹತ್ಯಾದಿ ಪಂಚಮಹಾಪಾತಕಗಳಿಂದಲೂ ಮುಕ್ತನಾಗುವುದರಲ್ಲಿ ಸಂದೇಹವೇ ಇಲ್ಲವೆಂದು ತಿಳಿ. ಒಣಗಿ ಅಥವಾ ಮಲಿನವಾಗಿರುವ ಬಿಲ್ವದಳಗಳಿಂದಲೂ ಸಹ ಶಿವನನ್ನು ಪೂಜೆಮಾಡಬಹುದು. ಹಾಗೆಪೂಜಿಸುವ ಮಾನವನು ಹತ್ತುಸಹಸ್ರಯುಗಗಳವರೆಗೆ ಶಿವಲೋಕದಲ್ಲಿ ವಾಸಮಾಡುವನು. ಅವನು ಸಕಲತೀರ್ಥಗಳಲ್ಲಿಯೂ ಸ್ನಾನಮಾಡಿದಂತೆಯೂ,

ಸಃ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಶಿವಲೋಕಮವಾಪ್ನೋತಿ ಸ್ವದೇಹಾಂತೇ ಸುದುರ್ಲಭಂ ॥೫೭॥

ಶಿವಾರ್ಚನರತೋ ನಿತ್ಯಂ ಮಹಾಪಾತಕಸಂಭವೈಃ ।
ದೋಷೈಃ ಕೃತೈರ್ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥೫೮॥

ದರ್ಶನಾಚ್ಛಿವಭಕ್ತಾನಾಂ ಸಕೃತ್ಸಂಭಾಷಣಾದಪಿ ।
ವಾಜಪೇಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಶಂಕರಿ ॥೫೯॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಪ್ಯಂತ್ಯಜನ್ಮಜಃ ।
ಶಿವಭಕ್ತಾಃ ಸದಾ ಪೂಜ್ಯಾಃ ಸರ್ವಾವಸ್ಥಾಸು ಶಂಕರಿ ॥೬೦॥

ನಾಸ್ಯಾಚಾರಂ ಪರೀಕ್ಷೇತ ನ ಕುಲಂ ನ ವ್ರತಂ ತಥಾ ।
ಭಸ್ಮರುದ್ರಾಕ್ಷಧಾರೀ ಯಃ ಪೂಜ್ಯ ಏವ ಹಿ ಶಂಕರಿ ॥೬೧॥

ಕರ್ಮಣಾ ಮನಸಾ ವಾಚಾ ಯಸ್ತು ಭಕ್ತಾನ್ವಿನಿಂದತಿ ।
ನಿರಯಾನ್ನಿಷ್ಕೃತಿಸ್ತಸ್ಯ ನಾಸ್ತ್ಯೇವಾಭೂತಸಂಪ್ಲವಂ ॥೬೨॥

---

ಸಮಸ್ತಯಾಗಗಳಲ್ಲಿ ದೀಕ್ಷೆವಹಿಸಿದವನಂತೆಯೂ ಪುಣ್ಯಭಾಗಿಯಾಗಿ ಈ ದೇಹತ್ಯಾಗಾನಂತರದಲ್ಲಿ ಅತಿದುರ್ಲಭವಾದ ಶಿವಲೋಕವನ್ನೈದುತ್ತಾನೆ. ॥೫೫-೫೬-೫೭॥

ಎಲೌ ಶಂಕರಿಯೇ, ನಿತ್ಯವೂ ಶಿವಪೂಜಾನಿರತನಾದವನು ತಾವರೆ ಎಲೆಯ ಮೇಲಿನ ನೀರಿನಂತೆ ಮಹಾಪಾತಕರೂಪವಾದ ತಾನುಮಾಡಿದ ದೋಷಗಳಿಂದ ತಾನು ಲಿಪ್ತನಾಗುವುದಿಲ್ಲ. ದೇವಿಯೇ, ಈಶ್ವರಭಕ್ತರ ಸಂದರ್ಶನ ಮತ್ತು ಒಂದು ಬಾರಿ ಸಂಭಾಷಣೆಯಿಂದಲೇ ಮಾನವನು ವಾಜಪೇಯಯಜ್ಞಫಲವನ್ನೈದುತ್ತಾನೆ, ಇದರಲ್ಲಿ ಸಂಶಯವಿಲ್ಲ. ॥೫೮-೫೯॥

ಪಾರ್ವತಿಯೇ, ಶಿವನಲ್ಲಿ ನಿಜವಾದಭಕ್ತಿಯುಳ್ಳವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಅಂತ್ಯಜ ಇವರಲ್ಲಿ ಯಾವ ಜಾತಿಗೆಸೇರಿದರೂ ಅವರು ಸರ್ವರೀತಿಯಲ್ಲಿಯೂ ಪೂಜಾರ್ಹರೆಂದು ತಿಳಿ. ಅಂತಹ ಈಶ್ವರಭಕ್ತರ ಆಚಾರ, ಕುಲ, ನಡತೆ, ಇವುಗಳನ್ನು ಎಂದೂ ಪರೀಕ್ಷೆಮಾಡಬಾರದು. ಭಸ್ಮರುದ್ರಾಕ್ಷಗಳನ್ನು ಧರಿಸಿದವನು ಯಾವನೇ ಆಗಲಿ ಅವನು ಪೂಜ್ಯನೇ ಸರಿ. ಕರ್ಮ, ಮನಸ್ಸು, ಮತ್ತು ವಾಗ್ರೂಪವಾದ ತ್ರಿಕರಣಗಳಿಂದಲೂ ಯಾರು ಶೈವರನ್ನು ನಿಂದಿಸುತ್ತಾರೋ

ಶಿವಭಕ್ತಾನ್ವರ್ಜಯಿತ್ವಾ ಸರ್ವೇಽಷಾಂ ಶಾಸಕೋಽಂತಕಃ ।
ಕಿಂ ಪುನರ್ಮಮ ಭಕ್ತಾನಾಮಹಮೇವ ಹಿ ಶಾಸಕಃ ॥೬೩॥

ನ ಶಿವಾಶ್ರಮಿಣೋ ಮೌಂಜೀ ನ ದಂಡೋ ನ ಕಮಂಡಲುಃ ।
ನೈವ ಕಾಷಾಯವಾಸಾಂಸಿ ಭಕ್ತಿರೇವಾತ್ರ ಕಾರಣಂ ॥೬೪॥

ಯದಿ ಭಕ್ತಾಃ ಪಶುಪತೌ ಪಾಪಕರ್ಮಸು ಯೇ ರತಾಃ ।
ಯಮಸ್ಯ ವದನಂ ದೇವಿ ನೈವ ಪಶ್ಯಂತಿ ಸರ್ವಥಾ ॥೬೫॥

ಯೇ ಪುನಃ ಶಾಂತಮನಸಃ ಶಿವಭಕ್ತಾ ಜಿತೇಂದ್ರಿಯಾಃ ।
ಮರ್ತ್ಯಂ ಧರ್ಮಂ ಗತಾಪೀಶೇ ವಿಜ್ಞೇಯಾಸ್ತೇ ಗಣೇಶ್ವರಾಃ ॥೬೬॥

ಮೃತಸ್ಯ ಜೀವತೋ ವಾಪಿ ಶಿವಭಕ್ತಸ್ಯ ಶಂಕರಿ ।
ಯಮಾದ್ಭಯಂ ನ ತಸ್ಯಾಸ್ತಿ ಅನ್ಯೇಽಷಾಂ ಕಾ ಕಥಾ ಶಿವೇ ॥೬೭॥

---

ಅವರಿಗೆ ಇಲ್ಲಿ ಜಗತ್ಪ್ರಳಯದವರೆಗೆ ನರಕದಿಂದ ಉದ್ಧಾರವೇ ಇಲ್ಲವೆಂದು ತಿಳಿ. ||೬೦-೬೧-೬೨||

ದೇವಿಯೇ, ಶೈವರನ್ನು ಬಿಟ್ಟು ಇತರ ಎಲ್ಲಪಾಪಿಗಳನ್ನೂ ಯಮನು ಶಿಕ್ಷೆ ಮಾಡುತ್ತಾನೆ. ಆದರೆ ಅವನು ನನ್ನ ಭಕ್ತರಗೋಜಿಗೆಬರುವುದಿಲ್ಲ. ನನ್ನ ಭಕ್ತರಿಗೆ ನಾನೇ ಶಿಕ್ಷಕನೆಂದು ತಿಳಿ. ಶಿವಾಶ್ರಮಸ್ವೀಕಾರಮಾಡಿದವರಿಗೆ, ಮೌಂಜಿ, ದಂಡ, ಕಮಂಡಲು, ಕಾಷಾಯವಸ್ತ್ರ, ಮುಂತಾದ ವರ್ಣಾಶ್ರಮಧರ್ಮಸೂಚಕಗಳಾದ ಇವುಗಳಾವುವೂ ಬೇಕಿಲ್ಲ, ಕೇವಲ ಶಿವಭಕ್ತಿಯೊಂದೇ ಎಲ್ಲಕ್ಕು ಕಾರಣವೆಂದು ತಿಳಿ. ಅದೊಂದಿದ್ದರೆ ಸಾಕು. ||೬೩-೬೪||

ಎಂತಹ ಪಾಪಕೆಲಸದಲ್ಲಿ ಆಸಕ್ತರಾಗಿದ್ದವರೂ ಈಶ್ವರನೆನಿಸಿದ ನನ್ನಲ್ಲಿ ಭಕ್ತಿಯುಳ್ಳವರಾಗಿದ್ದರೆ ಅವರಿಗೆ ಖಂಡಿತವಾಗಿ ಯಮನ ಮುಖದರ್ಶನವೂ ಉಂಟಾಗಲಾರದು- ಶಾಂತಮನಸ್ಸುಳ್ಳವರೂ, ಜಿತೇಂದ್ರಿಯರೂ ಆಗಿರುವ ನನ್ನ ಭಕ್ತರು ಮಾನವಧರ್ಮವನ್ನು ಅವಲಂಬಿಸಿದ್ದರೂ ಅವರೆಲ್ಲರೂ ಕೈಲಾಸದಲ್ಲಿರುವ ಗಣಶ್ರೇಷ್ಠರೆಂದೇ ತಿಳಿಯಲ್ಪಡಬೇಕು. ಸತ್ತುಹೋದ ಅಥವಾ ಬದುಕಿರುವ ನನ್ನ ಭಕ್ತನಿಗೆ ಎಂದಿಗೂ ಯಮನ ಭಯವೆಂಬುದೇ ಇಲ್ಲವೆಂದು ತಿಳಿ. ಹೀಗಿರುವಲ್ಲಿ ಇತರರಿಗೆ ಈ ವಿಷಯದಲ್ಲಿ ಹೇಳಬೇಕಾದ್ದೇನು. ||೬೫-೬೬-೬೭||

ತಸ್ಮಾದ್ಭಕ್ತಾಃ ಸದಾ ಪೂಜ್ಯಾಃ ರುದ್ರಕ್ಷೇತ್ರೇ ವಿಶೇಷತಃ ।
ಯತೀನಾಂ ಶಾಂಭವಾನಾಂ ಯೋ ಕುರ್ಯಾಃ ಶುಶ್ರೂಷಣಂ ಮುದಾ ॥೬೮॥

ಮಲೋಪಕರಣೈರನ್ನೈರಭ್ಯಂಗೈಃ ಪಾದಧಾವನೈಃ ।
ಶಿವಯೋಗಿಷ್ವಪಿ ಶಿವೇ ಸುಪುಣ್ಯಂ ಮಹದಾಪ್ನುಯಾತ್ ॥೬೯॥

ಯಃ ಕುರ್ಯಾತ್ಪರ್ವಕಾಲೇಷು ವಿಚಿತ್ರಕುಸುಮೋಜ್ಜ್ವಲಂ ।
ವಿತಾನಮಾಲಾವಿತತಂ ಧೂಪದೀಪವಿರಾಜಿತಂ ॥೭೦॥

ಮಂಡಪಂ ಚ ಸುಗಂಧಾಢ್ಯಂ ವಿತತಂ ಶಿವಪೂಜನೇ ।
ತ್ರಿಃ ಸಪ್ತಕುಲಸಂಯುಕ್ತಃ ಶಿವಲೋಕೇ ಮಹೀಯತೇ ॥೭೧॥

ಪಾಪಕಂಚುಕಮುತ್ಸೃಜ್ಯ ಜೀರ್ಣಂ ತ್ವಚಮಿವೋರಗಃ ।
ಯಾತಿ ತತ್ಸದನಂ ಗೌರಿ ಮದನಾಂತಕರಸ್ಯ ಮೇ ॥೭೨॥

---

ಆದ್ದರಿಂದಲೇ ಶಿವಕ್ಷೇತ್ರದಲ್ಲಿ ಶೈವರು ವಿಶೇಷವಾಗಿ ಪೂಜಾರ್ಹರೆನಿಸುವರು. ಸಂನ್ಯಾಸಿಗಳು, ಇತರ ಶೈವರು ಮುಂತಾದವರಿಗೆ ಪ್ರೀತಿಯಿಂದ ಮಲಮೂತ್ರಾದಿಗಳನ್ನು ತೆಗೆಯುವುದು, ಉತ್ತಮವಾದ ಅನ್ನವನ್ನಿಡುವುದು, ಅಭ್ಯಂಗಸ್ನಾನ ಮಾಡಿಸುವುದು, ಕಾಲುಗಳನ್ನೊತ್ತುವುದು ಮುಂತಾದ ಸೇವಗಳನ್ನೆಸಗುವವನು ವಿಶೇಷವಾದ ಪುಣ್ಯವನ್ನು ಹೊಂದುವನು. ||೬೮-೬೯||

ಉತ್ಸವಕಾಲಗಳಲ್ಲಿ ವಿಚಿತ್ರವಾದ ಹೂಗಳಿಂದ ಅಲಂಕೃತವಾಗಿರುವ ಚಪ್ಪರಗಳ ಮಾಲೆಗಳಿಂದ ವಿಸ್ತಾರವಾಗಿಯೂ, ಧೂಪದೀಪಾದಿಗಳಿಂದ ವಿರಾಜಿತವಾಗಿಯೂ, ಸುಗಂಧಭರಿತವಾಗಿಯೂ ಇರುವ ಮಂಡಪವನ್ನು ದೊಡ್ಡದಾಗಿ ಶಿವಪೂಜೆಗುಪಯೋಗವಾಗುವಂತೆ ಮಾಡಿಸುವವನು ತನ್ನ ಇಪ್ಪತ್ತೊಂದು ಬುಡಕಟ್ಟಿನವರೊಡನೆ ಶಿವಲೋಕದಲ್ಲಿ ಸುಖಿಸುವನು. ಇದರಲ್ಲಿ ಸಂಶಯವಿಲ್ಲ. ||೭೦-೭೧||

ಅಲ್ಲದೆ ಅವನು ಪಾಪವೆಂಬ ಕಂಚುಕವನ್ನು ಬಿಸುಟು ಸರ್ಪವು ಜೀರ್ಣವಾದ ಪೊರೆಯನ್ನು ತೊರೆದು, ಹೊಸ ಉತ್ಸಾಹವನ್ನು ಪಡೆಯುವಂತೆ ಮನ್ಮಥಾಂತಕನಾದ ನನ್ನ ಲೋಕವನ್ನು ಸೇರಿ ಆನಂದದಿಂದ ಜೀವಿಸುವನು. ಮಾವು, ಬಿಲ್ವ, ಜಾಜಿ, ವಿಜಯ, ಪಾರಿಜಾತ, ಗಿಡಮಲ್ಲಿಗೆ, ಮಲ್ಲಿಗೆ, ಪುನ್ನಾಗ, ನಾಗಸಂಪಿಗೆ, ವಕುಳ, ಅಸುಗೆ, ನೈದಿಲೆ, ಸಂಪಿಗೆ, ಕಣಿಗಲೆ, ಸೇವಂತಿಕೆ (ಯೂಥ) ಸುವರ್ಣಪುಷ್ಪ, ತೆಂಗು, ಕಬ್ಬಿನ ಜಲ್ಲೆಗಳು ಮುಂತಾದ ಹೂವು, ಪತ್ರೆ, ಫಲಾದಿಗಳಿಂದ ಶೋಭಿ

ಯಃ ಕುರ್ಯಾತ್ತು ಶಿವಾರಾಮಮಾಮ್ರಬಿಲ್ವಾದಿಶೋಭಿತಂ ।
ಜಾಜೀವಿಜಯಮಂದಾರ ಕುಂದಮಲ್ಲಿಕಯಾನ್ವಿತಂ ॥೭೩॥

ಪುನ್ನಾಗನಾಗಬಕುಲೈರಶೋಕೋತ್ಪಲಚಂಪಕೈಃ ।
ಕಲ್ಹಾರಯಾಥ ಹೇಮಾದ್ಯೈಃ ನಾರಿಕೇಲೇಕ್ಷು ದಂಡಕೈಃ ॥೭೪॥

ಯಾವತ್ತತ್ಪತ್ರಕುಸುಮಬೀಜಮೂಲಫಲಾನಿ ಚ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೭೫॥

ಸ್ವಯಮುತ್ಪಾಟ್ಯ ಪುಷ್ಪಾಣಿ ಯಃ ಶಿವಂ ಪೂಜಯೇತ್ಸಕೃತ್ ।
ತಾನಿ ಸಾಕ್ಷಾತ್ಪ್ರಗೃಹ್ಣಾತಿ ಮಹಾದೇವೋ ಘೃಣಾನಿಧಿಃ ॥೭೬॥

ನ ಭೂಮೌ ಪತಿತಾನ್ಯೇವ ಗೃಹ್ಣೀಯಾದಶುಚಿರ್ನರಃ ।
ಕುಡ್ಮಲೈರ್ನಾರ್ಚಯೇದೀಶಮನ್ಯಪುಷ್ಪೇ ತು ಪಾದಕಂ ॥೭೭॥

ನ ಶಿವಾರ್ಚನತುಲ್ಯೋಽಸ್ತಿ ಧರ್ಮೋಽನ್ಯೋ ಭುವನತ್ರಯೇ ।
ಸರ್ವಮನ್ಯತ್ಪರಿತ್ಯಜ್ಯ ಶಿವೈಕಾಹಿತಮಾನಸಃ ॥೭೮॥

---

ಸುತ್ತಾ, ವೃಕ್ಷಲತಾದಿಗಳಿಂದ ಪೂರ್ಣವಾದ ಶಿವೋದ್ಯಾನವನ್ನು ಮಾಡಿಸುವವನು ತಾನು ಕಟ್ಟಿಸಿರುವ ಉದ್ಯಾನದಲ್ಲಿರುವ ವೃಕ್ಷರಾಜಿಗಳ, ಪತ್ರೆ, ಹೂ, ಬೀಜ ಮತ್ತು ಹಣ್ಣು ಮುಂತಾದವುಗಳ ಸಂಖ್ಯೆಗೆ ಸಾವಿರಪಾಲು ವರ್ಷಗಳು ಶಿವಲೋಕದಲ್ಲಿ ನೆಲಸಿ ಅಲ್ಲಿ ಸರ್ವರಿಂದಲೂ ಪೂಜಿಸಲ್ಪಡುತ್ತಾನೆ. ॥೭೨-೭೩-೭೪-೭೫॥

ತಾನೇ ಹೂವುಗಳನ್ನುಕೊಯ್ದುತಂದು ಶಿವನಿಗೆ ಪೂಜೆಮಾಡುವವನ ಪುಷ್ಪಗಳನ್ನು ದಯಾನಿಧಿಯಾದ ಮಹಾದೇವನು ಪ್ರತ್ಯಕ್ಷವಾಗಿ ತಾನೇ ನಿಂತು ಸ್ವೀಕರಿಸುತ್ತಾನೆ. ಮನುಜನು ಎಂದೂ ನೆಲದಮೇಲೆ ಬಿದ್ದಿದ್ದಹೂಗಳನ್ನು ತೆಗೆದುಕೊಂಡು ಶಿವನಿಗೆ ಪೂಜಿಸಬಾರದು. ಅಥವಾ ಅರಳಿಲ್ಲದ ಮೊಗ್ಗುಗಳಿಂದಲೂ ಶಿವಾರ್ಚನೆ ಮಾಡಬಾರದು. ಪೂಜೆಗೆಯೋಗ್ಯವಲ್ಲದ ಹೂವುಗಳನ್ನು ಪಾದಪೀಠದಲ್ಲಿ ಹಾಕಬೇಕು. ॥೭೬-೭೭॥

ದೇವಿಯೇ, ಮೂರುಲೋಕಗಳಲ್ಲಿಯೂ ಶಿವಪೂಜೆಗೆ ಸಮಾನವಾದ ಬೇರೊಂದು ಧರ್ಮಕಾರ್ಯವಿಲ್ಲ. ಆದ್ದರಿಂದಲೇ ಮಂಗಳಾಪೇಕ್ಷೆಯುಳ್ಳವನು ಎಲ್ಲವನ್ನೂ ತೊರೆದು ಶಿವನಲ್ಲಿಯೇ ನೆಟ್ಟಮನವುಳ್ಳವನಾಗಿ ಶಿವಪೂಜೆಯನ್ನು ವಿಧಿವ

ಶಿವಪೂಜಾವಿಧಿಂ ಕುರ್ಯಾದ್ಯದಿಚ್ಛೇಚ್ಛಿವಮಾತ್ಮನಃ ।
ತ್ವರಿತಂ ಜೀವಿತಂ ಯಾತಿ ತ್ವರಿತಂ ಯಾತಿ ಯೌವನಂ ॥೭೯॥

ತ್ವರಿತಂ ವ್ಯಾಧಿರಭ್ಯೇತಿ ತಸ್ಮಾತ್ಪೂಜ್ಯಃ ಸದಾಶಿವಃ ।
ಯಾವನ್ನಾಯಾತಿ ಮರಣಂ ಯಾವನ್ನಾಕ್ರಮತೇ ಜರಾ ॥೮೦॥

ಯಾವನ್ನೇಂದ್ರಿಯದೌರ್ಬಲ್ಯಂ ತಾವತ್ಪೂಜಯ ಶಂಕರಂ ॥೮೧॥

॥ ಸೂತ ಉವಾಚ ॥

ಯಃ ಪೂಜಯೇತ್ತ್ರಿನಯನಂ ಶಶಿಖಂಡಚೂಡಂ
ಬಿಲ್ವೀದಲೈಶ್ಚ ಕುಸುಮೈಃ ಶಿವಲಿಂಗಮೌಲೌ ।
ಸೋಽತ್ಯರ್ಕರಾಜಿತವಿಮಾನವರೇಣ ಯಾತಿ
ಪ್ರೋದ್ಯತ್ಸುಧಾಂಶುಧವಲಂ ರಜತಾದ್ರಿಮೌಲಿಂ ॥೮೨॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಿವಧರ್ಮನಿರೂಪಣಂ ನಾಮ
ದ್ವಾದಶೋಽಧ್ಯಾಯಃ

---

ತ್ತಾಗಿಮಾಡಬೇಕು. ಮಾನವರಿಗೆ ಜೀವಿತಕಾಲವು ಕ್ಷಣಿಕವೆನಿಸಿರುವುದು. ಯೌವನವೂ ಕ್ಷಣಕಾಲದಲ್ಲಿಕಳೆದುಹೋಗುವುದು, ಮರುಕ್ಷಣದಲ್ಲಿಯೇ ರೋಗರುಜಿನಾದಿಗಳು ಹುಟ್ಟುವುವು. ಆದ್ದರಿಂದ ಮರಣವು ಬಾರದೆ, ಮುಪ್ಪುಂಟಾಗದೆ, ಇಂದ್ರಿಯಗಳು ಬಲಹೀನಗಳಾಗದೆಇರುವಷ್ಟರಲ್ಲಿಯೇ ನಿತ್ಯಮಂಗಳವಿಗ್ರಹನಾದ ಶಂಕರನನ್ನು ಪೂಜೆಮಾಡುವುದು ಉತ್ತಮವು ಎಂದು ಶಿವನು ಪಾರ್ವತಿಗೆ ಹೇಳಿದನು. ॥೭೮-೭೯-೮೦-೮೧॥

ತ್ರಿಲೋಚನನೂ, ಅರ್ಧಚಂದ್ರಶೇಖರನೂ ಆದ ಶಿವನನ್ನು ತನ್ನ ಲಿಂಗಮೌಳಿಯಲ್ಲಿ ಬಿಲ್ವದಳ, ಮತ್ತು ಹೂಗಳಿಂದ ಪೂಜೆಮಾಡುವವನು, ಸೂರ್ಯತೇಜಸ್ಸನ್ನೂ ಮೀರಿಸುವ ದಿವ್ಯಕಾಂತಿಯುಳ್ಳ ಶ್ರೇಷ್ಠವಾದ ವಿಮಾನದಲ್ಲಿ ಕುಳಿತು, ಪ್ರಕಾಶಿಸುತ್ತಿರುವ ಚಂದ್ರಕಿರಣಗಳಂತೆ ಶುಭ್ರವಾಗಿರುವ ರಜತಾಚಲಶಿಖರವನ್ನೈದುವನೆಂದು ಸೂತರು ಶೌನಕಾದಿಗಳಿಗೆ ಹೇಳಿದರು. ॥೮೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಧರ್ಮನಿರೂಪಣೆಯೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಅಥ ತ್ರಯೋದಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಮಾಸಿ ಮಾಸಿ ಮಹಾದೇವಿ ಪೂಜಯಾ ಮೇ ಸದಾಶಿವೇ ।
ಕಿಂ ಫಲಂ ಕೋ ವಿಧಿಸ್ತಸ್ಯ ಸಮಾಸೇನ ವದಾಮಿ ತೇ ॥೧॥

ಶೃಣುಷ್ವ ಸಾವಧಾನೇನ ಚೇತಸಾ ಮಾಸಪೂಜನಂ ।
ಯತ್ಕೃತ್ವಾ ಮನುಜಃ ಸದ್ಯೋ ವಿದ್ಯಾಂ ಹೃದ್ಯಾಂ ಸಮಶ್ನುತೇ ॥೨॥

ಆಸಮಾಪ್ತಿವ್ರತಸ್ಯಾಸ್ಯ ಭೂಶಯ್ಯಾ ನಕ್ತಭೋಜನಂ ।
ಶಿವೇ ತ್ರಿಷವಣಂ ಸ್ನಾನಂ ಭಸ್ಮರುದ್ರಾಕ್ಷಧಾರಣಂ ॥೩॥

---

## ಹದಿಮೂರನೆಯ ಅಧ್ಯಾಯ

ಮತ್ತೆ ಮಹೇಶ್ವರನು ಪಾರ್ವತಿಯೊಡನೆ ಹೀಗೆಂದನು. ಮಹಾದೇವಿಯೇ, ಪ್ರತಿತಿಂಗಳಲ್ಲಿಯೂ ನನ್ನನ್ನು ಪೂಜೆಮಾಡುವುದರಿಂದ ಯಾವ ಯಾವ ಫಲವುಂಟಾಗುವುದು ? ಅದರ ವಿಧಿ ಏನು ? ಎಂಬುದನ್ನು ಸಂಗ್ರಹಿಸಿ ನಿನಗೆ ಹೇಳುತ್ತೇನೆ ಕೇಳು, ಸಾವಧಾನಚಿತ್ತದಿಂದ ಮಾಸಪೂಜೆಯನ್ನು ವಿಧಿವತ್ತಾಗಿನಡೆಸುವ ಮಾನವನು ಕೂಡಲೆ, ನಿತ್ಯಸುಖಪ್ರದವಾದ ದಿವ್ಯಜ್ಞಾನವನ್ನು ಪಡೆಯುವನು. ॥೧-೨॥

ಆದರೆ ಈ ವ್ರತಮುಗಿಯುವವರೆಗೆ ಉಪಾಸಕರು ನೆಲದಮೇಲೆ ಮಲಗಬೇಕು. ಹಗಲು ಉಪವಾಸವಿದ್ದು ರಾತ್ರಿಮಾತ್ರ ಊಟಮಾಡಬೇಕು. ಮೂರು ಸಲ ಸ್ನಾನಮಾಡಬೇಕು. ಯಾವಾಗಲೂ ಭಸ್ಮರುದ್ರಾಕ್ಷಗಳನ್ನು ಧರಿಸಿ, ಕ್ಷಮೆ, ದಾನ, ಅಹಿಂಸೆ, ಸತ್ಯ, ಋಜುಸ್ವಭಾವಗಳಲ್ಲಿ ನಿರತನಾಗಿ ಬ್ರಹ್ಮಚರ್ಯದಲ್ಲಿಯೇ

ಕ್ಷಮಾದಾನಮಹಿಂಸಾ ಚ ಸತ್ಯಾರ್ಜವಪರಾಯಣಃ ।
ಬ್ರಹ್ಮಚರ್ಯಾದಿನಿರತೋ ವಿರತೋ ವಿಷಯೇಷು ಚ ॥೪॥

ಪಾಷಂಡಪತಿತೋದಕ್ಯಾಸೂತಕಾಂತ್ಯಜಪೂರ್ವಕಾನ್ ।
ವರ್ಜಯೇತ್ಸರ್ವಯತ್ನೇನ ಮನಸಾ ಕರ್ಮಣಾ ಗಿರಾ ॥೫॥

ಸಂತುಷ್ಟಶ್ಚ ಪ್ರಶಾಂತಶ್ಚ ಶಿವಧ್ಯಾನರತೋ ಭವೇತ್ ।
ಸಂಪೂಜ್ಯ ಚ ಗಣೇಶಾನಂ ನಾಂದೀಶ್ರಾದ್ಧಂ ವಿಧಾಯ ಚ ॥೬॥

ಗೋದಾನಂ ಚ ವೃಷೋತ್ಸರ್ಗಂ ಕುರ್ಯಾದ್ಬ್ರಾಹ್ಮಣಭೋಜನಂ ।
ಶಾಂತಾನಾಂ ಶಾಂಭವಾನಾಂ ಚ ಶತಂ ದಶವರಂ ಶಿವೇ ॥೭॥

ತೈರಭ್ಯನುಜ್ಞಾಮಾಸಾದ್ಯ ಸ್ವಯಂ ನಕ್ತಾಶನೋ ಭವೇತ್ ।
ಸಾಮಾನ್ಯಮೇತತ್ಕಥಿತಂ ವ್ರತಸ್ಯಾಸ್ಯ ಸದಾಶಿವೇ ॥೮॥

ಪ್ರತಿಮಾಸಂ ವಿಶೇಷಂ ಚ ಶಿವಪೂಜಾವಿಧಿಂ ಶೃಣು ।
ಯತ್ಕೃತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೯॥

---

ಇರುತ್ತಾ ಪ್ರಕ್ಚಂದನವನಿತಾದಿವಿಷಯಸುಖಗಳನ್ನು ಬಿಡಬೇಕು. ಪಾಷಂಡ, ಪತಿತ, ರಜಸ್ವಲೆ, ಆಶೌಚವಿಶಿಷ್ಟರು, ಅಂತ್ಯಜರೇ ಮೊದಲಾದವರನ್ನು ವರ್ಜಿಸುವುದಲ್ಲದೆ ಅವರಲ್ಲಿ ದೈಹಿಕವಾದ ಮತ್ತು ಮಾನಸಿಕ, ವಾಚಿಕಗಳಾದ ಯಾವ ಸಂಪರ್ಕವನ್ನೂ ಹೊಂದಿರಬಾರದು. ॥೩-೪-೫॥

ಸಂತೋಷಯುಕ್ತನಾಗಿ, ಶಾಂತಮನಸ್ಸಿನಿಂದ ಶಿವಧ್ಯಾನಾಸಕ್ತನಾಗಬೇಕು. ಗಣೇಶನನ್ನು ಪೂಜಿಸಿ, ನಾಂದೀಶ್ರಾದ್ಧವನ್ನು ಮಾಡಿ, ಗೋದಾನ, ವೃಷೋತ್ಸರ್ಗ ಗಳನ್ನು ನಡೆಸಿ, ಶಾಂತಚಿತ್ತರಾಗಿ ನೂರು ಅಥವಾ ಹತ್ತುಮಂದಿ ಶೈವರಿಗೆ ಭೋಜನ ಮಾಡಿಸಬೇಕು. ಅನಂತರ ಅವರಿಂದ ಅನುಜ್ಞೆಪಡೆದು ತಾನು ರಾತ್ರಿ ಭೋಜನ ಗೈಯಬೇಕು. ಇದು ವ್ರತಸಾಮಾನ್ಯಕ್ಕೂ ಇರುವ ವಿಧಿ. ಇದನ್ನು ಈಗ ನಿನಗೆ ನಾನು ಹೇಳಿರುವೆನು. ಇನ್ನು ಪ್ರತಿತಿಂಗಳಲ್ಲಿಯೂ ವಿಶೇಷವಾಗಿ ಮಾಡಬೇಕಾದ ಶಿವಪೂಜಾವಿಧಿಯನ್ನು ಹೇಳುವೆನು ಕೇಳು. ಈ ವಿಶೇಷವಿಧಿಯ ಪೂಜೆಯನ್ನು ನೆರವೇರಿಸಿ ಮಾನವನು ಸಕಲಪಾಪಗಳಿಂದಲೂ ಮುಕ್ತನಾಗುವುದರಲ್ಲಿ ಸಂಶಯವೇ ಇಲ್ಲವೆಂದು ತಿಳಿ. ॥೬-೭-೮-೯॥

ಪದ್ಮರಾಗೋದ್ಭವಂ ಚೈತ್ರೇ ಪೂಜಯೇಲ್ಲಿಂಗಮೈಶ್ವರಂ ।
ವೈಶಾಖೇ ವಜ್ರಲಿಂಗಂ ಚ ಜ್ಯೇಷ್ಠೇ ಮರಕತೋದ್ಭವಂ ॥೧೦॥

ಆಷಾಢೇ ಮೌಕ್ತಿಕಂ ವಿದ್ಯಾಚ್ಛ್ರಾವಣೇ ನೀಲನಿರ್ಮಿತಂ ।
ಮಾಸಿ ಭಾದ್ರಪದೇ ಗೌರಿ ಗೋಮೇದಮಣಿಕಲ್ಪಿತಂ ॥೧೧॥

ಆಶ್ವಯುಜ್ಯಾಂ ಚ ವಿಧಿಯುಗ್ಮಾಣಿಕೋದ್ಭವಮುತ್ತಮಂ ।
ಕಾರ್ತಿಕ್ಯಾಂ ವೈದ್ರುಮಂ ಲಿಂಗಂ ವೈಡೂರ್ಯಂ ಮಾರ್ಗಶೀರ್ಷಕೇ॥೧೨॥

ಪುಷ್ಯರಾಗಮಯಂ ಪುಷ್ಯೇ ಮಾಘೇ ಸೂರ್ಯಸ್ಯ ಕಾಂತಿಜಂ ।
ಫಾಲ್ಗುನೇ ಚಂದ್ರಕಾಂತೋತ್ಥಂ ಲಿಂಗಂ ಸಂಪೂಜ್ಯ ಶೈಲಜೇ ॥೧೩॥

ಸಮುಚ್ಚಾರ್ಯಮಿದಂ ಸ್ತೋತ್ರಂ ಸ್ತುವೀತ ಪರಮೇಶ್ವರಂ ।
ಸರ್ವಮಾಸೇಷು ಪೂಜ್ಯೋಽಪಿ ಬಿಲ್ವಪತ್ರೈಃ ಸದೈವ ಮಾಂ ॥೧೪॥

---

ದೇವಿಯೇ ಕೇಳು, ಚೈತ್ರಮಾಸದಲ್ಲಿ ಪದ್ಮರಾಗಮಣಿರಚಿತವಾದ ಶಿವಲಿಂಗವನ್ನು ಪೂಜಿಸಬೇಕು. ವೈಶಾಖದಲ್ಲಿ ವಜ್ರದಿಂದ ನಿರ್ಮಿತವಾದ ಶಿವಲಿಂಗವನ್ನೂ, ಜ್ಯೇಷ್ಠದಲ್ಲಿ ಮರಕತಲಿಂಗವನ್ನೂ, ಆಷಾಢದಲ್ಲಿ ಮೌಕ್ತಿಕಲಿಂಗವನ್ನೂ, ಶ್ರಾವಣದಲ್ಲಿ ನೀಲಮಣಿಲಿಂಗವನ್ನೂ, ಭಾದ್ರಪದದಲ್ಲಿ ಗೋಮೇದಮಣಿನಿರ್ಮಿತಲಿಂಗವನ್ನೂ, ಆಶ್ವಯುಜದಲ್ಲಿ ಮಾಣಿಕ್ಯಲಿಂಗವನ್ನೂ, ಕಾರ್ತಿಕದಲ್ಲಿ ವಿದ್ರುಮ (ಹವಳ) ಲಿಂಗವನ್ನೂ, ಮಾರ್ಗಶಿರಮಾಸದಲ್ಲಿ ವೈಡೂರ್ಯಲಿಂಗವನ್ನೂ, ಪುಷ್ಯಮಾಸದಲ್ಲಿ ಪುಷ್ಯರಾಗಲಿಂಗವನ್ನೂ, ಮಾಘಮಾಸದಲ್ಲಿ ಸೂರ್ಯಕಾಂತಿಮಣಿಖಚಿತಲಿಂಗವನ್ನೂ, ಫಾಲ್ಗುಣಮಾಸದಲ್ಲಿ ಚಂದ್ರಕಾಂತಮಣಿನಿರ್ಮಿತ ಶಿವಲಿಂಗವನ್ನೂ ಪೂಜೆಮಾಡಿ ಪರಮೇಶ್ವರನನ್ನು ಈ ಮುಂದೆ ಹೇಳುವ ಸ್ತೋತ್ರವನ್ನುಚ್ಚರಿಸುತ್ತಾ ಸ್ತುತಿಸಬೇಕು. ॥೧೦-೧೧-೧೨-೧೩॥

ದೇವಿ! ನಾನು ಎಲ್ಲ ಕಾಲಗಳಲ್ಲಿಯೂ ಬಿಲ್ವದಳಗಳಿಂದ ಪೂಜಿಸಲು ಯೋಗ್ಯನಾಗಿದ್ದರೂ ಪ್ರತಿಮಾಸದಲ್ಲಿಯೂ ನಡೆಯುವ ಈ ವಿಶೇಷಪೂಜೆಯಿಂದ ಭಕ್ತರಿಗೆ ಹೆಚ್ಚು ಫಲವುಂಟು. ಪೂಜಾಕಾಲದಲ್ಲಿ ಈ ರೀತಿ ಧ್ಯಾನಿಸಬೇಕು—
"ಯೋಗಿಹೃದಯ ವಾಸಿಯೂ, ಮಂಗಳಕರನೂ, ಶಾಂತಮೂರ್ತಿಯೂ, ಶಿವರೂಪನೂ, ಶುಭಕಾರ್ಯಗಳಲ್ಲಿ ಉತ್ತಮನೂ, ಮಂಗಳಮಾರ್ಗನಿರ್ಮಾಪಕನೂ ಆದ

13

ಶಿವ ಶಿವಕರಂ ಶಾಂತಂ ಶಿವಾತ್ಮಾನಂ ಶಿವೋತ್ತಮಂ ।
ಶಿವಮಾರ್ಗಪ್ರಣೇತಾರಂ ಪ್ರಣತೋಽಸ್ಮಿ ಸದಾಶಿವಂ ॥೧೫॥

ಶಾಶ್ವತಂ ಶೋಭನಂ ಶುದ್ಧಂ ಶಶ್ವದ್ದೋಷಪ್ರಮೋಚಕಂ ।
ವಿಶ್ವಂ ವಿಶ್ವೇಶ್ವರಂ ದೇವಂ ಶಂಕರಂ ಪ್ರಣಮಾಮ್ಯಹಂ ॥೧೬॥

ಸರ್ವಪಾಪಹರಂ ನಾಥಂ ಸರ್ವರೋಗಹರಂ ಶಿವಂ ।
ಸರ್ವಪಾಪಪ್ರಶಮನಂ ನಮಾಮ್ಯಾರ್ತಿನಿವಾರಕಂ ॥೧೭॥

ಅಸ್ಥಾನಸ್ಥಾನಸಂಸ್ಥಾನಸಂಸ್ಥಿತಿಸ್ಥಿತಿಕಾರಣಂ ।
ಸ್ಥಿರಸ್ಥಾನಸ್ಥಯೋಗಸ್ಥಂ ಸ್ಥಾಣುಮೀಶಂ ನಮಾಮ್ಯಹಂ ॥೧೮॥

ಈಶಾನಂ ಪುರುಷಂ ಘೋರಂ ವಾಮಂ ಸದ್ಯಂ ಮಹೇಶ್ವರಂ ।
ಈಶಾನಃ ಸರ್ವಭೂತಾನಾಮೀಶ್ವರಂ ಪ್ರಣಮಾಮ್ಯಹಂ ॥೧೯॥

ಈಶಾನಂ ವರದಂ ದೇವಮೀಶ್ವರಂ ಮಂತ್ರನಾಯಕಂ ।
ಇತ್ಥಂ ಮಾಸಸ್ತುತಿಂ ಸ್ತುತ್ವಾ ದೇವಂ ನತ್ವಾ ಮಹೇಶ್ವರಂ ॥೨೦॥

---

ಶಿವನನ್ನು ವಂದಿಸುತ್ತೇನೆ. ನಿತ್ಯನೂ, ಶೋಭನರೂಪಿಯೂ, ಶುದ್ಧನೂ, ಬಾರಿ ಬಾರಿಗೂ ಭಕ್ತರ ದೋಷಗಳನ್ನು ಹೋಗಲಾಡಿಸುವವನೂ, ಜಗದ್ರೂಪಿಯೂ, ಜಗದೊಡೆಯನೂ, ಕ್ರೀಡಾದಿಗುಣಭರಿತನೂ ಆದ ಶಂಕರನಿಗೆ ನಮಿಸುವೆನು. ಸಕಲ ಪಾಪನಾಶಕನೂ, ಸಮಸ್ತ ರೋಗನಿವಾರಕನೂ, ಶುಭಸ್ವರೂಪನೂ, ಸಮಸ್ತ ಪಾಪಗಳನ್ನೂ ಶಮನಮಾಡುವವನೂ, ಪೀಡೆಯನ್ನು ಪರಿಹರಿಸುವವನೂ ಆದ ಮಹಾದೇವನಿಗೆ ನಾನು ನಮಸ್ಕರಿಸುವೆನು. ಸ್ಥಾನರಹಿತನೂ, ಉತ್ತಮಸ್ಥಾನ ದಲ್ಲಿ ನೆಲಸಿರುವವನೂ, ಪ್ರಪಂಚದ ಸಂಸ್ಥಿತಿಗೆ ಕಾರಣಭೂತನೂ, ಸ್ಥಿರವಾದ ಸ್ಥಾನದಲ್ಲಿ ಯೋಗಾರೂಢನೂ, ನಾಶರಹಿತನಾದ್ದರಿಂದ ಸ್ಥಾಣುವೂ ಎನಿಸಿದ ಈಶ್ವರನಿಗೆ ನಮಸ್ಕಾರ ಮಾಡುತ್ತೇನೆ. ಸಕಲ ಲೋಕಗಳನ್ನು ಸಂರಕ್ಷಿಸುವವನೂ, ಪುರುಷನೆನಿಸಿದವನೂ, ಶತ್ರುಭಯಂಕರನೂ, ಸುಂದರದೇಹವುಳ್ಳವನೂ, ಸದ್ಯೋ ಜಾತನೆನಿಸಿದವನೂ, ಮಹೇಶ್ವರನೂ, ಈಶಾನನೂ, ಸಕಲ ಪ್ರಾಣಿಗಳಿಗೂ ಒಡೆಯನೂ, ಆದ ಸ್ವಾಮಿಗೆ ನಮಿಸುವೆನು. ಈಶಾನನೂ, ವರಪ್ರದನೂ, ಈಶ್ವರನೂ, ಮಂತ್ರನಾಯಕನೂ ಆದ ಮಹಾದೇವನಿಗೆ ಪ್ರಣಾಮಮಾಡುತ್ತೇನೆ.

ಸಮುಕ್ತ ಸರ್ವಪಾಪೇಭ್ಯೋ ಮಮ ಲೋಕೇ ಭವೇದ್ಗಣಃ ।
ಮಾಸಾರ್ಚನಸಮೋ ಧರ್ಮೋ ನಾಸ್ತ್ಯನ್ಯೋ ಭುವನತ್ರಯೇ ॥೨೦॥

ಇತಿ ವಿಜ್ಞಾಯ ಯತ್ನೇನ ಪೂಜನೀಯೋ ಮಹೇಶ್ವರಃ ।
ಯೇ ಭಕ್ತ್ಯಾ ದೇವದೇವೇಶೇ ಶಿವಂ ಶಾಂತಮಜಂ ಶುಭಂ ॥೨೨॥

ಪೂಜಯಂತಿ ಸದಾ ಭಕ್ತ್ಯಾ ಮದ್ಭಕ್ತಾಸ್ತಪಸಿ ಸ್ಥಿತಾಃ ।
ಸಂಪೂಜ್ಯ ಪಶುಭರ್ತಾರಂ ವಿಶುದ್ಧೇನಾಂತರಾತ್ಮನಾ ॥೨೩॥

ಇಹ ಲೋಕೇ ಸುಖಂ ಪ್ರಾಪ್ಯ ತೇ ಯಾಂತಿ ಪರಮಂ ಪದಂ ।
ಮಾಸಿ ಮಾಸಾರ್ಚನೇ ದೇವಿ ನಾಮಾನ್ಯನ್ಯಾನಿ ಮೇ ಸದಾ ॥೨೪॥

ಪ್ರವಕ್ಷ್ಯಾಮಿ ಮುದಾ ತುಭ್ಯಂ ಹೃಷ್ಟಾ ತ್ವಮವಧಾರಯ ।
ಸರ್ವಮಾಸೇಷು ರತ್ನಾನಾಮಲಾಭೇ ಹೈಮಮೇವ ಚ ॥೨೫॥

---

ಎಂಬುದಾಗಿ ಮಾನಸಸ್ತೋತ್ರವನ್ನು ಸ್ತುತಿಸಿ, ಮಹೇಶ್ವರನಿಗೆ ನಮಸ್ಕಾರಮಾಡಿದವನು ಸಕಲ ಪಾತಕಗಳಿಂದಲೂ ಮುಕ್ತನಾಗಿ ಕೊನೆಗೆ ನನ್ನ ಲೋಕದಲ್ಲಿ ಗಣಾಧಿಪತ್ಯವನ್ನು ಹೊಂದುವನು. ||೧೪-೧೫-೧೬-೧೭-೧೮-೧೯-೨೦||

ಎಲೌ ಪಾರ್ವತಿಯೇ, ಈ ಮಾಸಪೂಜೆಗೆ ಸಮಾನವಾದ ಬೇರೊಂದು ಧರ್ಮವೇ ಈ ಮೂರುಲೋಕಗಳಲ್ಲಿಯೂ ಇಲ್ಲವೆಂದುತಿಳಿದು ನಿಯಮದಿಂದ ಮಹೇಶ್ವರನನ್ನು ಪೂಜಿಸಬೇಕು. ಶಂಕರನು ದೇವಾಧಿದೇವನೆಂದು ತಿಳಿದು, ಯಾರು ಶಾಂತನೂ, ಮಂಗಳವಿಗ್ರಹನೂ, ಜನ್ಮರಹಿತನೂ, ಶುಭಕರನೂ, ಆದ ನನ್ನನ್ನು ಯಾವಾಗಲೂ ಭಕ್ತಿಯಿಂದ ಪೂಜೆಮಾಡುತ್ತಾ ನನ್ನಲ್ಲಿ ಭಕ್ತಿಯನ್ನಿಟ್ಟೇ ತಪಸ್ಸನ್ನು ಪರಿಶುದ್ಧಾಂತಃಕರಣದಿಂದ ಗೈಯುವರೋ, ಅವರು ಈ ಲೋಕದಲ್ಲಿ ಸುಖವನ್ನು ಹೊಂದಿ ಕೊನೆಗೆ ಪರಮಪದವನ್ನೈದುವರು. ||೨೧-೨೨-೨೩||

ಮಾಸವ್ರತದಲ್ಲಿ ಒಂದೊಂದು ತಿಂಗಳಿನ ಪೂಜೆಯಲ್ಲಿಯೂ ನನ್ನ ಬೇರೆಬೇರೆ ನಾಮಗಳನ್ನು ಉಚ್ಚರಿಸುತ್ತಾ ಪೂಜಿಸಬೇಕು. ಹಾಗೆ ಉಪಯೋಗಿಸುವ ನಾಮಗಳನ್ನು ಪ್ರೀತಿಯಿಂದ ನಿನಗೆ ಹೇಳುತ್ತೇನೆ, ನೀನು ಸಂತುಷ್ಟಳಾಗಿ ಲಾಲಿಸು; ಪ್ರತಿ ತಿಂಗಳಲ್ಲಿಯೂ ರತ್ನಗಳು ದೊರಕದೆಹೋದರೆ, ಚಿನ್ನ. ಚಿನ್ನವಿಲ್ಲದಿದ್ದರೆ ಬೆಳ್ಳಿ, ಬೆಳ್ಳಿಯೂ ದೊರಕದಿದ್ದರೆ ಶಿಲೆ, ಆದೂ ಸಿಗದಿದ್ದಲ್ಲಿ ಮಣ್ಣು ಮುಂತಾದ ವಸ್ತು

ಹೇಮಾಲಾಭೇ ರಾಜತಂ ವಾ ತಾಮ್ರಜಂ ಶೈಲಮೇವ ವಾ ।
ಮೃನ್ಮಯಂ ವಾ ಯಥಾಲಾಭಂ ಕ್ಷಣಿಕಂ ವಾನ್ಯದೇವತಾಂ ॥೨೬॥

ಸರ್ವಗಂಧಮಯಂ ಚಾಪಿ ಲಿಂಗಂ ಕುರ್ಯಾದ್ಯಥಾರುಚಿ ।
ವ್ರತಾವಸಾನಸಮಯೇ ಸಮಾಚರಿತನೈತ್ಯಕಃ ॥೨೭॥

ಕೃತ್ವಾ ವೈಶೇಷಿಕೀಂ ಪೂಜಾಂ ಹುತ್ವಾ ಪಾಯಸಮೀಶ್ವರಿ ।
ರುದ್ರಮಂತ್ರೈರ್ಮಾಸಿ ಮಾಸಿ ಸ್ವಯಮಾಚಾರ್ಯ ಏವ ವಾ ॥೨೮॥

ಪಂಚಾಮೃತಾಜ್ಯಮಿಶ್ರೇಣ ಬಿಲ್ವಾನಾಂ ಸಮಿಧಃ ಶುಭಾಃ ।
ಸ್ವಸ್ವಶಾಖೋಕ್ತಮಾರ್ಗೇಣ ಪ್ರತಿಷ್ಠಾಪ್ಯ ಹುತಾಶನಂ ॥೨೯॥

ಪೂರ್ವಮಾಘಾರಮಾಸಾದ್ಯ ಪಶ್ಚಾದಷ್ಟಶತಂ ಹುನೇತ್ ।
ಭವಾಯೇತ್ಯಷ್ಟನಾಮ್ನಾದೌ ಸ್ವಿಷ್ಟಾಂತಂ ಹೋಮಮಾಚರೇತ್॥೩೦॥

---

ಗಳಲ್ಲಿ ತಮಗೆ ದೊರೆತವುಗಳಿಂದ ಕ್ಷಣಿಕಲಿಂಗವನ್ನೋ ಅಥವಾ ಸ್ಥಿರಲಿಂಗವನ್ನೋ ಸುಗಂಧಮಯವನ್ನಾಗಿ ಮಾಡಿಕೊಂಡು ಪೂಜಾವಿಧಿಯನ್ನು ಮೀರದಂತೆ ತನ್ನ ಮನಸ್ಸಿಗೆ ಒಪ್ಪುವಂತೆ ಶಿವಲಿಂಗವನ್ನು ಪೂಜಿಸಬೇಕು. ॥೨೪-೨೫-೨೬॥

ಮಾಸವ್ರತದ ಕೊನೆಯಲ್ಲಿ ವ್ರತಸಿದ್ಧಿಗಾಗಿ ಮಾಸಾಂತ್ಯದಿನದಲ್ಲಿ ನಿತ್ಯಕರ್ಮಗಳನ್ನೆಸಗಿ, ವಿಶೇಷಪೂಜೆಯನ್ನೆಸಗಿ ಅಗ್ನಿಯಲ್ಲಿ ರುದ್ರಮಂತ್ರಪೂರ್ವಕವಾಗಿ ತಾನೋ ಅಥವಾ ತನ್ನಪರವಾಗಿ ಆಚಾರ್ಯನೋ ಪಾಯಸವನ್ನು ಹೋಮಮಾಡಬೇಕು. ತಮ್ಮ ತಮ್ಮ ಶಾಖೆಗಳಲ್ಲಿ ಹೇಳಿದ ಅಗ್ನಿಮುಖಮಾರ್ಗದಿಂದ ಯಜ್ಞೇಶ್ವರನನ್ನು ಪ್ರತಿಷ್ಠೆ ಮಾಡಿ, ಪಂಚಾಮೃತ, ಘೃತಮಿಶ್ರವಾದ ಬಿಲ್ವಗಳಸಮಿತ್ತುಗಳನ್ನು ಸೇರಿಸಿ ಹೋಮ ಮಾಡಬೇಕು. ಮೊದಲು ಆಘಾರಾಜ್ಯದಿಂದ ಹೋಮವನ್ನು ನಡೆಸಿ, ಅನಂತರ ಎಂಟುನೂರು ಪ್ರಧಾನಹೋಮಗಳನ್ನು ನೆರವೇರಿಸಬೇಕು. ಅನಂತರ "ಭವಾಯ ಸ್ವಾಹಾ" ಎಂಬುದಾಗಿ ಭವಾದಿಎಂಟುನಾಮಮಂತ್ರಗಳಿಂದ ಎಂಟುಬಾರಿ ಹೋಮ ಮಾಡಬೇಕು. ಕೊನೆಯಲ್ಲಿ ಸ್ವಿಷ್ಟಕೃತ್ ಹೋಮವನ್ನು ನಡೆಸಿ ಹೋಮ ಸಮಾಪ್ತಿಗೊಳಿಸಬೇಕು. ॥೨೭-೨೮-೨೯-೩೦॥

ದದ್ಯಾದ್ಗೋಮಿಥುನಂ ದೇವಿ ಮಾಸಾಂತೇ ಶಾಂಭವಾಯ ತು ।
ವ್ರತಮೇತಚ್ಛಿವಪ್ರೀತ್ಯೈ ಕುರ್ವನ್ಮುಕ್ತಿಮವಾಪ್ನುಯಾತ್ ॥೩೧॥

ಸ ಏವ ತಪಸಾಂ ಶ್ರೇಷ್ಠಃ ಸ ಏವ ಚ ಮಹಾವ್ರತೀ ।
ನ ತೇನ ಸದೃಶಃ ಕಶ್ಚಿತ್ಕೃತಕೃತ್ಯೋ ಮುಮುಕ್ಷುಷು ॥೩೨॥

ದಿವಾಽನಶ್ನಂಭವೇ ನಕ್ತಂ ಭುಕ್ತ್ವಾ ಮಾಸಾರ್ಚನಾವಿಧೌ ।
ಮುಕ್ತ ಏವ ಭವೇತ್ಸತ್ಯಂ ವ್ರತಂ ದ್ವಾದಶವಾರ್ಷಿಕಂ ॥೩೩॥

ಪುರಾ ಗಣೇಂದ್ರೈಶ್ಚ ಕೃತಂ ಮಮ ಪ್ರೀತ್ಯರ್ಥಮೀಶ್ವರಿ ।
ಮುನೀಶ್ವರೈರ್ದೇವಗಣೈರ್ಬ್ರಹ್ಮವಿಷ್ಣ್ವೀಶ್ವರಾದಿಭಿಃ ॥೩೪॥

ತೇನೈವ ಸ್ವಪದಂ ಪ್ರಾಪ್ತಾಃ ಶಿವತುಲ್ಯಬಲಾಃ ಶಿವೇ ।
ಭಸ್ಮಧಾರಣಸಂಪನ್ನಾಸ್ತ್ರಿಪುಂಡ್ರಪರಿಚಿಹ್ನಿತಾಃ ॥೩೫॥

---

ಒಂದು ತಿಂಗಳು ಕಳೆದನಂತರ ಕೊನೆಯಲ್ಲಿ ವ್ರತಾಂಗವಾಗಿ ಶೈವೋತ್ತಮ ನೆನಿಸಿದವನಿಗೆ ಎರಡು ಗೋವುಗಳನ್ನೂ ದಾನಮಾಡಬೇಕು. ಶಿವನ ಪ್ರೀತ್ಯರ್ಥವಾಗಿ ಈ ವ್ರತವನ್ನುಮಾಡುವವನು ನಿಜವಾಗಿಯೂ ಮುಕ್ತಿಹೊಂದುತ್ತಾನೆ. ಈರೀತಿ ವ್ರತವನ್ನು ಮಾಡಿದವನೇ ತಪಸ್ವಿಗಳಲ್ಲಿ ಶ್ರೇಷ್ಠನು. ಮಹಾವ್ರತಶಾಲಿಯೂ ಈತನೇ. ಇವನಿಗೆ ಸಮಾನರಾದವರು ಮೋಕ್ಷಾಪೇಕ್ಷಿಗಳಲ್ಲಿ ಮತ್ತಾರೂ ದೊರೆಯು ಲಾರರು. ಇವನೇ ಕೃತಕೃತ್ಯನು. ಪಾರ್ವತಿಯೇ, ಈಮಾಸಪೂಜಾವ್ರತದಲ್ಲಿ ಹಗಲು ಊಟಮಾಡದೇ ರಾತ್ರಿವೇಳೆಯಲ್ಲಿ ಮಾತ್ರ ಭೋಜನಮಾಡುತ್ತಾ ಹನ್ನೆರಡು ವರ್ಷಗಳಕಾಲ ಈ ವ್ರತವನ್ನು ತಪ್ಪದೆ ಆಚರಿಸುವವರು, ಸತ್ಯವಾಗಿಯೂ ಮುಕ್ತ ರಾಗುವರು. ॥೩೧-೩೨-೩೩॥

ಈಶ್ವರಿಯೇ, ಹಿಂದೆ ನನ್ನ ಪ್ರೀತಿಯನ್ನು ಸಂಪಾದಿಸುವುದಕ್ಕೋಸ್ಕರ ಗಣಾಧಿ ಪತಿಗಳೂ, ಮುನಿಪುಂಗವರೂ, ದೇವತೆಗಳ ಸಮೂಹವೂ, ಬ್ರಹ್ಮ, ವಿಷ್ಣು ಮತ್ತು ಈಶಾನ ಇವರೇ ಮೊದಲಾದವರೂ ಈ ವ್ರತವನ್ನು ಆಚರಿಸಿರುವರು. ಆದರಿಂದಲೇ ಅವರು ನನಗೆ ಸಮಾನ ಬಲಶಾಲಿಗಳಾಗಿ ಭಸ್ಮಧಾರಣಸಂಪನ್ನರೂ ತ್ರಿಪುಂಡ್ರಾಲಂ ಕೃತರೂ ಆಗಿ ನನ್ನ ಕೈಲಾಸವನ್ನು ಪಡೆದಿದ್ದಾರೆ. ॥೩೪-೩೫॥

ನೋಕ್ತಪೂರ್ವಂ ಮಹೇಶಾನಿ ಮಾಸಾರ್ಚನಮಿದಂ ಶಿವೇ ।
ಸ ಯತ್ಫಲಮವಾಪ್ನೋತಿ ತದೇಕಾಗ್ರಮನಾಃ ಶೃಣು ॥೩೬॥

ಕಲ್ಪಕೋಟಿಶತಂ ದಿವ್ಯಂ ಕಲ್ಪಕೋಟಿಶತಾನಿ ಚ ।
ವಸೇಚ್ಛಿವಪುರೇ ದೇವಿ ಶಿವತುಲ್ಯಬಲೋ ಯುವಾ ॥೩೭॥

ರುದ್ರಾಣೀಗಣಸಾಹಸ್ರೈರ್ವಾಸೋಭರಣಭೂಷಿತೈಃ ।
ಸ ವಿಮಾನೈರ್ಮಹಾಭೋಗೈರ್ವಂಶವೀಣಾದಿಭಿಃ ಸಹ ॥೩೮॥

ದುಂದುಭೀನಾಂ ಚ ನಿರ್ಘೋಷೈರ್ನಿರ್ಜಿತಾಂಬುಧಿನಿಸ್ವನೈಃ ।
ಯುಗಾಯುತಶತಂ ಸಾಗ್ರಂ ಶಿವಲೋಕೇ ಮಹೀಯತೇ ॥೩೯॥

ತಸ್ಮಾಂತೇ ಧರ್ಮಶೇಷೇಣ ತ್ರೈಲೋಕ್ಯಾಧಿಪತಿರ್ಭವೇತ್ ।
ತ್ವಂಗತ್ತುಂಗತುರಂಗೌಘಮಾತಂಗಗಣಸಂವೃತಃ ॥೪೦॥

ಶತಾಂಗದಾರಿತಾರಾತಿಮಂಡಲೋಚ್ಚಲಿತಾಂಡಭೂಃ ।
ಕೋದಂಡಖಂಡಿತೋಚ್ಚಂಡದಂಡಿತಾರಾತಿಮಂಡಲಃ ॥೪೧॥

---

ಎಲೌ ಮಹೇಶ್ವರಿ, ಈ ಮಾಸಾರ್ಚನೆಯನ್ನು ನಾನು ಹಿಂದೆ ಯಾರಿಗೂ ಹೇಳಿಲ್ಲ. ಇದೇ ಮೊದಲು ನಿನಗೆ ಹೇಳಿರುವೆನು. ಈ ಮಾಸಾರ್ಚನೆಯಿಂದ ಉಂಟಾಗುವ ಫಲವನ್ನು ಏಕಾಗ್ರಮನಸ್ಸಿನಿಂದ ಲಾಲಿಸು. ದೇವಿ, ಆತನು ದಿವ್ಯ ಮಾನದ ನೂರುಕೋಟಿ ಕಲ್ಪಗಳವರೆಗೆ ಶಿವಸದೃಶಬಲವುಳ್ಳವನೂ ಯುವಕನೂ ಆಗಿ ದಿವ್ಯವಾದ ಶಿವಲೋಕವಾಸವನ್ನನುಭವಿಸುವನು. ಮಹಾಭೋಗಗಳುಳ್ಳ ದಿವ್ಯವಿಮಾನಗಳಲ್ಲಿ ವಸ್ತ್ರಾಭರಣಭೂಷಿತರಾಗಿರುವ ಸಾವಿರಾರು ರುದ್ರಾಣೀಗಣಗಳಿಂದ ಸೇವಿಸಲ್ಪಡುತ್ತಾ, ವೀಣಾ, ವೇಣು ಮುಂತಾದ ವಾದ್ಯಧ್ವನಿಗಳಿಂದಲೂ, ಸಮುದ್ರಘೋಷವನ್ನು ಗೆದ್ದಿರುವ ನಗಾರಿಗಳ ಘೋಷಣೆಯಿಂದಲೂ ಯುಕ್ತನಾಗಿ ಹತ್ತುಲಕ್ಷ ಯುಗಗಳ ವರೆಗೆ ಶಿವಲೋಕದಲ್ಲಿ ಮೆರೆಯುವನು. ॥೩೬-೩೭-೩೮-೩೯॥

ಆ ಶಿವಲೋಕಭೋಗಾವಧಿಯು ಮುಗಿದ ತರುವಾಯ ಇನ್ನೂ ಆ ಧರ್ಮ ಶೇಷವು ಉಳಿಯುವುದರಿಂದ ಭೂಲೋಕಕ್ಕೆ ಬಂದು ಅಲ್ಲಿ ವೇಗವುಳ್ಳ ಎತ್ತರವಾದ ಕುದುರೆ ಮತ್ತು ಆನೆಗಳ ಗುಂಪಿನಿಂದ ಯುಕ್ತನಾಗಿ ಸಕಲ ಭೂಮಂಡಲದಲ್ಲಿರುವ ಶತ್ರುರಾಜರ ಸಮೂಹವನ್ನೂ ತನ್ನ ಶಕ್ತಿಯಿಂದ ಧ್ವಂಸಮಾಡಿ, ಧನುಸ್ಸಿನಿಂದ

ವಿಧಿಂ ವಕ್ಷ್ಯೇ ಸಮಾಸೇನ ಮಾಸಾರ್ಚನವಿಧೌ ಶಿವೇ ।
ಚೈತ್ರಾದಿಷು ಚ ಮಾಸೇಷು ಸ್ನಾತ್ವಾಪ್ರಾತಃ ಸಮಾಹಿತಃ ॥೪೨॥

ಕೃತನಿತ್ಯಕ್ರಿಯೋ ಮೌನೀ ಪ್ರತಿಷ್ಠಾಪ್ಯ ಮಹೇಶ್ವರಂ ।
ಉಕ್ತಲಿಂಗೇ ವಿಶೇಷೇಣ ಶುದ್ಧೋದಂ ಸ್ನಾಪ್ಯ ಭಕ್ತಿತಃ ॥೪೩॥

ಉಪಲಿಪ್ಯ ಸಮಂ ದೇಶಂ ಗೋಮಯೇನ ನವಾಂಭಸಾ ।
ರಂಗವಲ್ಲೀಭಿರಾಪೂರ್ಯ ಪದ್ಮಸ್ವಸ್ತಿಕಚಿಹ್ನಿತೈಃ ॥೪೪॥

ಮಂಟಪಂ ಪುಷ್ಪಮಾಲಾಢ್ಯಂ ಕೃತ್ವಾ ದರ್ಪಣಚಿತ್ರಿತಂ ।
ಕುಸುಮೇಷು ಸುಗಂಧೈಶ್ಚ ಫಲೈಶ್ಚ ವಿವಿಧೈಸ್ತಥಾ ॥೪೫॥

ಭಕ್ಷ್ಯಭೋಜ್ಯೈರನೇಕೈಶ್ಚ ಘೃತದೀಪೈಶ್ಚ ಸಂಯುತಂ ।
ತಸ್ಯ ದಕ್ಷಿಣಪಾರ್ಶ್ವೇ ತು ವಿನ್ಯಸೇದಗರುಂ ಶಿವೇ ॥೪೬॥

ದದ್ಯಾತ್ಪಶ್ಚಿಮಪಾರ್ಶ್ವೇ ತು ಶೋಭನಾರ್ಥಂ ಮನಃ ಶಿಲಾಃ ।
ಉತ್ತರೇ ಚಂದನಂ ದದ್ಯಾದ್ಧರಿತಾಲಂ ಸುಪೂಜಿತಂ ॥೪೭॥

---

ಕೊಬ್ಬಿದ ವೈರಿಸಮೂಹದ ಕೊಬ್ಬನ್ನಡಗಿಸಿ ಮೂರು ಲೋಕಗಳಿಗೂ ಚಕ್ರಾಧಿಪತಿಯಂತಾಗಿ ರಾಜಭೋಗವನ್ನು ಅನುಭವಿಸುವನು. ॥೪೦-೪೧॥

ಪಾರ್ವತಿಯೆ, ಸಂಕ್ಷೇಪವಾಗಿ ಮಾಸಪೂಜಾವಿಧಿಯನ್ನು ಹೇಳುತ್ತೇನೆ ಕೇಳು, ಚೈತ್ರವೇ ಮೊದಲಾದ ತಿಂಗಳಲ್ಲಿ ಪ್ರಾತಕಾಲ ಸ್ನಾನಮಾಡಿ, ಸಮಾಧಾನಚಿತ್ತದಿಂದ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಮೌನದಿಂದ ಕ್ರಮವಾಗಿ ಆಯಾ ತಿಂಗಳಿಗೆ ಹೇಳಿರುವ ಶಿವಲಿಂಗದಲ್ಲಿ ಮಹೇಶ್ವರನನ್ನು ಪ್ರತಿಷ್ಠಿಸಿ, ವಿಶೇಷ ಭಕ್ತಿಯಿಂದ ಶುದ್ಧೋದಕಸ್ನಾನಮಾಡಿಸಿ, ಶುದ್ಧವಾದ ಭೂಭಾಗವನ್ನು ಸಗಣಿ ಮತ್ತು ನಿರ್ಮಲ ನೀರುಗಳಿಂದ ಸಾರಿಸಿ, ರಂಗವಲ್ಲಿಯಿಂದ ಪದ್ಮ, ಸ್ವಸ್ತಿಕ ಚಿಹ್ನೆಗಳನ್ನು ಬರೆಸಿ, ಅಲ್ಲಿ ಮಂಟಪವನ್ನಿರಿಸಿ ಅದನ್ನು ಹೂಮಾಲೆಗಳಿಂದಲಂಕರಿಸಿ, ಕನ್ನಡಿಗಳನ್ನು ಹಾಕಿ ಅನಂತರ ಸುಗಂಧಭರಿತವಾದ ಪುಷ್ಪಗಳು, ಬಗೆಬಗೆಯ ಹಣ್ಣುಗಳು, ಭಕ್ಷ್ಯ, ಭೋಜ್ಯ, ತುಪ್ಪದ ದೀಪಗಳನ್ನು ನಿವೇದನಮಾಡಿ ಆ ಮಂಟಪದ ಬಲಭಾಗದಲ್ಲಿ ಅಗರು ಧೂಪವನ್ನು ಇರಿಸಬೇಕು. ॥೪೨-೪೩-೪೪-೪೫-೪೬॥

ಪಶ್ಚಿಮದಿಕ್ಕಿನಲ್ಲಿ ಮಂಗಳಕ್ಕೋಸ್ಕರ ಮಣಿಶಿಲೆಯನ್ನಿಡಬೇಕು. ಉತ್ತರ

ಪಂಚಾಮೃತೈಃ ಫಲರಸೈಃ ಪಂಚಗವ್ಯಸುಪಾತ್ರಕೈಃ ।
ಸಾಮಾನ್ಯಾರ್ಘ್ಯವಿಶೇಷಾರ್ಘ್ಯೌ ಪ್ರಾಕ್ಸಂಸ್ಥಾಪ್ಯ ಪುಷ್ಪಪೂರಿತೌ ॥೪೮॥

ಪಾದ್ಯಾರ್ಘ್ಯಾಚಮನೈಃ ಪಾತ್ರೈಃ ಶೋಧಿತೈರ್ನೀರಪೂರಿತೈಃ ।
ಪಾಟಲೋತ್ಪಲಕಲ್ಹಾರಕರವೀರಉಶೀರಕೈಃ ॥೪೯॥

ಸಂಯುಕ್ತೈಃ ಸ್ಥಾಪಯೇದ್ದೇವಿ ಮಂಟಪಾಗ್ರೇ ಶಿವಸ್ಯ ಹಿ ।
ದೂರ್ವಾಪಾಮಾರ್ಗದರ್ಭಾಗ್ರಪೂರಿತೈಃ ಕಲಶೋದಕೈಃ ॥೫೦॥

ಶಂಖೈಶ್ಚ ದಕ್ಷಿಣಾವರ್ತೈರತ್ನಗರ್ಭೈರ್ಮಹೇಶ್ವರಿ ।
ಸವ್ಯಾವರ್ತೈರ್ಯಥಾ ಜೋಷಂ ಶಂಖಪಾತ್ರೇ ಪರಿಸ್ಥಿತೈಃ ॥೫೧॥

ಸುಪುಷ್ಪಗರ್ಭೈಃ ಕುಂಭೈಶ್ಚ ಪಂಚಪಲ್ಲವಚಕ್ರಕೈಃ ।
ಕ್ಷೀರಂ ಪಲಶತಂ ಪ್ರೋಕ್ತಂ ದಧಿ ತದ್ದ್ವಿಗುಣಂ ಭವೇತ್ ॥೫೨॥

---

ದಿಕ್ಕಿನಲ್ಲಿ ಚೆನ್ನಾಗಿ ಪೂಜಿಸಲ್ಪಟ್ಟ ಚಂದನ ಮತ್ತು ಹರಿದ್ರಾಗಳನ್ನಿರಿಸಬೇಕು. ಪಂಚಾಮೃತ, ಹಣ್ಣುಗಳರಸ, ಪಂಚಗವ್ಯಗಳ ಪಾತ್ರೆಗಳೊಡನೆ ಸಾಮಾನ್ಯಾರ್ಘ್ಯ ಮತ್ತು ವಿಶೇಷಾರ್ಘ್ಯ ಪ್ರದಾನಕ್ಕೋಸ್ಕರ ಹೂಗಳಿಂದ ತುಂಬಲ್ಪಟ್ಟ ಎರಡು ಅರ್ಘ್ಯಪಾತ್ರೆಗಳನ್ನು ಪೂರ್ವದಿಕ್ಕಿನಲ್ಲಿರಿಸಬೇಕು. ॥೪೭-೪೮॥

ಶಿವನ ಮಂಟಪದ ಮುಂದೆ ಶೋಧಿಸಿದ ನೀರಿನಿಂದ ಪೂರ್ಣವಾಗಿ ಪಾದರಿ, ನೈದಿಲೆ, ಕಣಿಗಲೆ, ಕಲ್ಹಾರ, ಲಾಮಂಚಗಳಿಂದ ಯುಕ್ತವಾಗಿರುವ ಪಾದ್ಯ, ಅರ್ಘ್ಯ ಮತ್ತು ಆಚಮನಗಳ ಪಾತ್ರೆಗಳನ್ನು ಇರಿಸಬೇಕು. ಗರಿಕೆ, ಉತ್ತರಣೆ ಮತ್ತು ದರ್ಭೆಯ ತುದಿಗಳಿಂದ ಪೂರ್ಣವಾದ ಕಲಶೋದಕಗಳನ್ನೂ ಶಿವನ ಅರ್ಘ್ಯಕ್ಕಾಗಿ ಸಿದ್ಧಗೊಳಿಸಬೇಕು. ॥೪೯-೫೦॥

ರತ್ನಗರ್ಭವುಳ್ಳ ಬಲಮುರಿಶಂಖಗಳಿಂದಲೂ, ಇಷ್ಟಬಂದಂತೆ ಶಂಖಪಾತ್ರೆಗಳಲ್ಲಿರುವ ನೀರಿನಿಂದಲೂ, ಹೂ ಮತ್ತು ಐದು ಬಗೆಯ ಚಿಗುರುಗಳಿಂದ ಪೂರ್ಣವಾದ ಕಲಶಗಳಿಂದಲೂ ಆ ಮಂಟಪದ ಮುಂಭಾಗವನ್ನು ಅಲಂಕಾರಮಾಡಬೇಕು. ॥೫೧॥

ದೇವಿಯೇ, ಈ ಮಾಸ ಪೂಜಾವಿಧಿಯಲ್ಲಿ ಅಭಿಷೇಕಕ್ಕಾಗಿ ಉಪಯೋಗಿಸುವ ದ್ರವ್ಯಗಳಲ್ಲಿ ಹಾಲು ನೂರುಪಲಪ್ರಮಾಣವೆಂದೂ, ಮೊಸರು ಅದರೆರಡರಷ್ಟೂ,

ಘೃತಂ ತತ್ತ್ರಿಗುಣಂ ಪ್ರೋಕ್ತಂ ಮಧು ತತ್ರ ಚತುರ್ಗುಣಂ ।
ಸಿತಾ ಪಂಚಗುಣಾ ತತ್ರ ಪ್ರೋಕ್ತಾ ಪೂಜಾರ್ಚನಾವಿಧೌ ॥೫೩॥

ಸುಶ್ವೇತನಾರಿಕೇಲಾಂಬುಘಟೈರ್ದಶಸುಪೂರಿತೈಃ ।
ಕದಲೀಫಲಸಾಹಸ್ರೈಃ ಪನಸೈಃ ಶತಕೋಶಕೈಃ ॥೫೪॥

ಪಕ್ವಾಮ್ರಜಾಲಸುರಸೈರ್ಜಂಬೀರರಸಸಪ್ಲುತೈಃ ।
ಗಂಧೋದಕೈಶ್ಚಂದ್ರಮಿಶ್ರೈಃ ಸ ಕಸ್ತೂರೀಸಮನ್ವಿತೈ ॥೫೫॥

ಕುಶರತ್ನೋದಕೈರ್ದೇವಿ ಸ್ವರ್ಣೋದೈರ್ವಾಸಿತೈರ್ಜಲೈಃ ।
ಭಕ್ತ್ಯಾ ವಿತ್ತಾನುಸಾರೇಣ ಫಲಮಾಢ್ಯ ದರಿದ್ರಯೋಃ ॥೫೬॥

ತ್ವರಿತೈಃ ಪಾವಮಾನೈಶ್ಚ ಶತರುದ್ರೈರ್ಮಹೇಶ್ವರಂ ।
ಭೂತಶುದ್ಧಿಂ ವಿಧಾಯಾದೌ ಧೃತಭಸ್ಮತ್ರಿಪುಂಡ್ರವಾನ್ ॥೫೭॥

---

ತುಪ್ಪವು ಅದಕ್ಕೆ ಮೂರರಷ್ಟೆಂದೂ, ಜೇನು ನಾಲ್ಕರಷ್ಟು ಪ್ರಮಾಣವೆಂದೂ, ಕಲ್ಲು ಸಕ್ಕರೆಯು ಅದರ ಐದುಪಾಲು ಗುಣಾಧಿಕವೆಂದೂ ಹೇಳಲ್ಪಟ್ಟಿದೆ. ॥೫೨-೫೩॥

ಹತ್ತು ಗಡಿಗೆಗಳಲ್ಲಿ ಚೆನ್ನಾಗಿ ತುಂಬಿರುವ ಎಳನೀರುಗಳಿಂದಲೂ, ಸಾವಿರ ಬಾಳೆಹಣ್ಣು, ನೂರು ಹಲಸಿನತೊಳೆ ಮತ್ತು ಪಕ್ವವಾದ ಮಾವಿನ ಹಣ್ಣುಗಳ ರಾಶಿಗಳಿಂದಲೂ, ರಸಭರಿತವಾದ ನಿಂಬೆಯ ಹಣ್ಣಿನ ರಸಗಳಿಂದ ಪೂರ್ಣವಾದ ಕಲಶಗಳಿಂದಲೂ, ಚಂದ್ರ, ಕಸ್ತೂರಿ ಇವುಗಳಿಂದ ಮಿಶ್ರಿತವಾದ ಗಂಧೋದಕಗಳಿಂದಲೂ, ಕುಶೋದಕ ಮತ್ತು ರತ್ನೋದಕಗಳಿಂದಲೂ, ಸ್ವರ್ಣೋದಕಗಳಿಂದಲೂ, ಸುಗಂಧವಾದ ಜಲಧಾರೆಯಿಂದಲೂ, ಭಕ್ತಿಪೂರ್ವಕವಾಗಿ ತನ್ನ ಐಶ್ವರ್ಯಾನುಗುಣವಾಗಿ ಧನಿಕನಾಗಲೀ, ಬಡವನಾಗಲೀ ಶಿವಲಿಂಗಕ್ಕೆ ಅಭಿಷೇಕ ಮತ್ತು ಪೂಜಾದಿಗಳನ್ನು ನಡೆಸಬೇಕು. ಧನಿಕನು ಹೆಚ್ಚು ಹಣ ಖರ್ಚುಮಾಡಿದರೂ ಬಡವನು ಸ್ವಲ್ಪವೆಚ್ಚದಿಂದ ಪೂಜಿಸಿದರೂ, ಇಬ್ಬರಿಗೂ ಸಮಾನವಾದ ಫಲವುಂಟಾಗುವುದು. ॥೫೪-೫೫-೫೬॥

ಪಂಚಬ್ರಹ್ಮಾನುವಾಕಗಳಿಂದಲೂ ಪವಮಾನಮಂತ್ರಗಳಿಂದಲೂ, ಶತರುದ್ರೀಯಮಂತ್ರಗಳಿಂದಲೂ ಮಹೇಶ್ವರನಿಗೆ ಅಭಿಷೇಕಮಾಡಬೇಕು. ಮೊದಲು ಭೂತ

ರುದ್ರಾಕ್ಷಮಾಲಾಭರಣಶ್ಚಂದ್ರಾಭರಣಮೀಶ್ವರಂ ।
ಕುಶಚೇಲಾಜಿನೇ ಸ್ಥಿತ್ವಾ ಸ್ವಾಚಾಂತಃಶಿವಭಾವನಃ ॥೫೮॥

ಪ್ರಾಗುದಙ್ಮುಖ ಏವಾಯಮರ್ಚಕಃ ಶಿವಪೂಜನೇ ।
ಸಂಸ್ಥಿತಃ ಸುಸ್ಥಿರೋ ಮೌನೀ ಜಪೇತ್ಪಂಚಾಕ್ಷರಂ ಮನುಂ ॥೫೯॥

ಸಹಸ್ರಮುತ್ತಮಂ ದೇವಿ ಶತಾಷ್ಟೋತ್ತರಮಧ್ಯಮಂ ।
ಅಂಗನ್ಯಾಸಕರನ್ಯಾಸೈರ್ನ್ಯಸೇದ್ದೇಹಂ ಸ್ವಕಂ ಶಿವೇ ॥೬೦॥

ಶಿವಾತ್ಮಕಾಂ ತನುಂ ಕೃತ್ವಾ ಭಾವಂ ಪ್ರಾಕೃತಮುತ್ಸೃಜೇತ್ ।
ತತ್ತನ್ಮಾಸೇಷು ಪುಷ್ಪಾಣಿ ನಾಮಾನ್ಯಪಿ ಮಹೇಶಿತುಃ ॥೬೧॥

ಪ್ರವಕ್ಷ್ಯಾಮಿ ಮಹಾದೇವಿ ಸಾಮಾನ್ಯಂ ಬಿಲ್ವಪಲ್ಲವಂ ।
ಪದ್ಮಾನಿ ಕರವೀರಾಣಿ ಉತ್ಪಲಾನಿ ಮಹೇಶ್ವರಿ ॥೬೨॥

---

ಶುದ್ಧಿಯನ್ನೆಸಗಿ, ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಗಳನ್ನಲಂಕರಿಸಿಕೊಂಡು ಚಂದ್ರಶೇಖರನನ್ನು ಹೃದಯದಲ್ಲಿ ಧ್ಯಾನಿಸುತ್ತಾ ದರ್ಭಾಸನದಲ್ಲಿ ಕುಳಿತು, ಆಚಮನ ಮಾಡಿ ಶಿವನಲ್ಲಿ ಭಕ್ತಿಯುಳ್ಳವನಾಗಬೇಕು. ಶಿವಪೂಜೆಮಾಡುವಾಗ ಮೊದಲು ಪೂರ್ವ ಅಥವಾ ಉತ್ತರದಿಕ್ಕುಗಳಿಗೆ ಅಭಿಮುಖವಾಗಿಯೇ ಪೂಜೆಮಾಡುವವನು ಸ್ಥಿರವಾಗಿ ಕುಳಿತು ಪಂಚಾಕ್ಷರಮಂತ್ರವನ್ನು ಜಪಮಾಡಬೇಕು. ॥೫೭-೫೮-೫೯॥

ಜಪಸಂಖ್ಯೆಯಲ್ಲಿ ಸಾವಿರಬಾರಿ ಶಿವಪಂಚಾಕ್ಷರಜಪವು ಉತ್ತಮವಾದುದು. ನೂರೆಂಟು ಸಂಖ್ಯೆ ಮಧ್ಯಮವಾದುದು. ಈ ಜಪಮಾಡುವಾಗ ತನ್ನ ದೇಹಾಂತರ್ಗತವಾದ ಅಂಗನ್ಯಾಸ ಕರನ್ಯಾಸಗಳನ್ನು ಮಾಡಿಕೊಂಡು ಅನಂತರ ತನ್ನ ದೇಹವನ್ನು ಶಿವಸ್ವರೂಪವೆಂದು ಭಾವಿಸಿ, ಪ್ರಕೃತಿಗತವಾದ ಶರೀರವೆಂಬುದನ್ನು ಮರೆತು ಧ್ಯಾನಮಾಡಬೇಕು. ಈಗ ಆಯಾ ತಿಂಗಳಲ್ಲಿ ಪೂಜಾರ್ಹಗಳಾದ ಪ್ರತ್ಯೇಕ ಹೂವುಗಳನ್ನೂ ಅವುಗಳ ಹೆಸರನ್ನೂ ಹೇಳುವೆನು ಕೇಳು ; ಎಲ್ಲಾ ಕಾಲಗಳಲ್ಲಿಯೂ ಎಲ್ಲ ಮಾಸಗಳಲ್ಲಿಯೂ ಬಿಲ್ವಪತ್ರೆಯು ಮಾತ್ರ ಶಿವಪೂಜೆಗೆ ಸಾಮಾನ್ಯವಾದುದು. ಕಮಲ ಮಕ್ತು ಕಣಿಗಲೆ ಇವುಗಳು ಚೆನ್ನಾಗಿ ಅರಳಿದ್ದರೆ ಮಾತ್ರ ಅವು ಸದಾ ಪೂಜಾರ್ಹಗಳು. ॥೬೦-೬೧-೬೨॥

ಉತ್ಫುಲ್ಲಾನಿ ಚ ಗ್ರಾಹ್ಯಾನಿ ತತ್ತನ್ಮಾಸೋದ್ಭವಾನ್ಯಪಿ ।
ಚರುಂ ಸಘೃತಮೇವೇಹ ಪ್ರಶಸ್ತಂ ಸಾರ್ವಮಾಸಿಕೇ ॥೬೩॥

ತತ್ತನ್ಮಾಸಾಂತಪೌರ್ಣಮ್ಯಾಂ ಹೋಮಃ ಕಾರ್ಯೋ ಮಹೇಶ್ವರಿ ।
ಸ್ವಸ್ವಶಾಖೋಕ್ತಮಾರ್ಗೇಣ ಪ್ರತಿಷ್ಠಾಪ್ಯ ಹುತಾಶನಂ ॥೬೪॥

ಪರಿಸ್ತೀರ್ಯ ಹುತಾಶಂ ತಂ ಆಘಾರಾದ್ಯಂ ತತಶ್ಚರೇತ್ ।
ಪಾಯಸಂ ಸಘೃತಂ ದೇವಿ ಜುಹ್ವಾ ಚ ಜುಹುಯಾದ್ದ್ವಿಜೈಃ ॥೬೫॥

ಸ್ವಯಂ ದಶಾವರೈರ್ವಿಪ್ರೈಃ ಶಾಂಭವೈರ್ಭಸ್ಮಭೂಷಿತೈಃ ।
ಭವಾಷ್ಟನಾಮಭಿಸ್ತತ್ರ ಸ್ವಾಹಾಂತೈರ್ಜುಹುಯಾತ್ತದಾ ॥೬೬॥

ಶತಮಂತ್ರೈಸ್ತಥಾಪತ್ರೈಃ ಶತಂ ಸ ಘೃತಪಾಯಸಂ ।
ತತಃ ಸ್ವಿಷ್ಟಕೃದಂತೋ ಹಿ ಹೋಮಃ ಕಾರ್ಯೋ ವಿಜಾನತಾ ॥೬೭॥

ಗಾವಶ್ಚ ದಕ್ಷಿಣಾ ದೇಯಾ ವೃಷೈಕಾದಶವತ್ಸಕಾಃ ।
ಸವಸ್ತ್ರಾ ಕಾಂಚನಖುರಾ ರೌಪ್ಯಶೃಂಗೋರುವಸ್ತ್ರಕಾಃ ॥೬೮॥

---

ಸ್ವಾಭಾವಿಕವಾಗಿ ಆಯಾ ತಿಂಗಳುಗಳಲ್ಲಿ ಮಾತ್ರ ಬಿಡುವ ಅರಳಿದ ಹೂಗಳನ್ನೂ ಪೂಜೆಮಾಡಬಹುದು. ಪೂಜಾನಂತರ ನಡೆಸುವ ಹೋಮಕ್ಕೆ ಸಕಲ ತಿಂಗಳಲ್ಲಿಯೂ ತುಪ್ಪ ಮತ್ತು ಚರುವೇ ಪ್ರಶಸ್ತವೆನಿಸುವುದು. ಆಯಾ ಶಾಖೆಗಳಲ್ಲಿ ಹೇಳಿದ ಅಗ್ನಿಮುಖರೀತಿಯಿಂದ ಅಗ್ನಿಯನ್ನು ಪ್ರತಿಷ್ಠಿಸಿ, ಆಯಾ ತಿಂಗಳಿನ ಕೊನೆಯ ಹುಣ್ಣಿಮೆಯಲ್ಲಿ ಹೋಮಮಾಡಬೇಕು. ॥೬೩-೬೪॥

ಆ ಅಗ್ನಿಗೆ ಪರಿಸ್ತರಣಹಾಕಿ ಆಘಾರಾಜ್ಯದ ಹೋಮವಾದ ಮೇಲೆ ಪ್ರಧಾನ ಹೋಮವನ್ನು ಘೃತಮಿಶ್ರವಾದ ಪಾಯಸದಿಂದ ಬ್ರಾಹ್ಮಣೋತ್ತಮರ ಸಹಾಯದಿಂದ ಜುಹುವಿನ (ಸ್ರುವದ) ಮೂಲಕ ಹೋಮಮಾಡಬೇಕು. ತಾನೂ ಶ್ರೇಷ್ಠರಾದ ಭಸ್ಮಭೂಷಿತರಾಗಿ ಈಶ್ವರಭಕ್ತಿನಿಷ್ಠರಾದ ಹತ್ತುಮಂದಿ ಬ್ರಾಹ್ಮಣರೊಡನೆ 'ಭವಾಯ ಸ್ವಾಹಾ' ಎಂಬ ಶಿವನ ಎಂಟು ನಾಮಗಳನ್ನೂ ಉಚ್ಚರಿಸುತ್ತಾ ಅಗ್ನಿಗೆ ಹೋಮಮಾಡಬೇಕು. ॥೬೫-೬೬॥

ಘೃತಮಿಶ್ರವಾದ ಪಾಯಸವನ್ನು ಬಿಲ್ವಪತ್ರೆಗಳೊಡನೆ ಸೇರಿಸಿ ಪರಿಶುದ್ಧವಾದ ಶತರುದ್ರೀಯಮಂತ್ರಗಳಿಂದ ಹೋಮಮಾಡುತ್ತಾ ವಿಧಿಯನ್ನು ಪೂರ್ಣವಾಗಿ ಅರಿತ

ಶಾಂಭವೇಭ್ಯೋ ಬ್ರಾಹ್ಮಣೇಭ್ಯೋ ಮುಂಘಂ ವಾ ದ್ರೋಣಮಾತ್ರಕಂ।
ದದ್ಯಾದ್ವಿತ್ತಾನುಸಾರೇಣ ವಾಗ್ಯತೋ ಭಕ್ತಿತತ್ಪರಃ ॥೬೯॥

ವಿವಿಧಂ ತತ್ರ ಮಾಸಾಂತೇ ಸ್ತೋತ್ರೈಃ ಸ್ತುತ್ವಾ ಮಹೇಶ್ವರಂ।
ಪ್ರಸಾದಯೇತ್ಸ ನಕ್ತಾಶೀ ಹವಿಷ್ಯಂ ಲವಣೋಜ್ಝಿತಂ ॥೭೦॥

ನಿತ್ಯಂ ದ್ವಾದಶಮಾಸಂ ವೈ ತ್ರಿಕಾಲಂ ಸ್ನಾನತತ್ಪರಃ।
ಧೌತವಾಸಾಃ ಶುಚಿರ್ದಾಂತೋ ಭಸ್ಮರುದ್ರಾಕ್ಷಭೂಷಣಃ ॥೭೧॥

ಅಗ್ನಿರಿತ್ಯಾದಿಭಿರ್ಮಂತ್ರೈಃ ಶಿವಸಾತ್ಕೃತಮಾನಸಃ।
ಮಾಸಾರ್ಚನವ್ರತಂ ಹ್ಯೇತತ್ಕೃತ್ವಾ ಚ ವಿಧಿಪೂರ್ವಕಂ ॥೭೨॥

ಶತಾವರಂ ಸಹಸ್ರಾನ್ವಾ ಮಾಸಾಂತೇ ಬ್ರಾಹ್ಮಣಾರ್ಚನಂ।
ದ್ವಾದಶಾವರಮೇವೇಶಿ ಭೋಜಯೇದ್ಭಕ್ಷ್ಯಭೋಜ್ಯಕೈಃ ॥೭೩॥

---

ಸ್ವಿಷ್ಟಕೃದ್ಧೋಮದವರೆಗೂ ಆಹುತಿಕೊಡಬೇಕು. ಅನಂತರ ವಸ್ತ್ರ, ಚಿನ್ನದ ಗೊರಸು, ಬೆಳ್ಳಿಯ ಕೊಂಬುಗಳು, ಬೆಲೆಬಾಳುವ ವಸ್ತ್ರಭೂಷಣಾದಿಗಳು ಇವುಗಳಿಂದಲಂಕೃತವಾಗಿ ಕರುಗಳೊಡಗೂಡಿದ ಹನ್ನೊಂದು ಹಸುಗಳನ್ನೂ ಹನ್ನೊಂದು ವೃಷಭಗಳನ್ನೂ ಶಿವಪೂಜಕರಾದ ಬ್ರಾಹ್ಮಣರಿಗೆ ದಾನಮಾಡಬೇಕು. ಒಂದು ಬಳ್ಳ ಧಾನ್ಯ ಹಿಡಿಯುವ ಮೊಸರು ಕಡೆಯುವ ಮತ್ತು ಹಾಲು ಕರೆಯುವ ಪಾತ್ರೆಯನ್ನು ತನ್ನ ಐಶ್ವರ್ಯಾನುಸಾರವಾಗಿ ನಿಯಮಭಕ್ತಿಗಳಿಂದ ಶಾಂಭವರಿಗೆ ದಾನಮಾಡಬೇಕು. ॥೬೭-೬೮-೬೯॥

ಆಯಾ ತಿಂಗಳ ಕೊನೆಯಲ್ಲಿ ಮಹೇಶನನ್ನು ಅನೇಕ ರೀತಿಯ ಸ್ತೋತ್ರಗಳಿಂದ ಸ್ತುತಿಸಿ, ರಾತ್ರಿಹೊತ್ತು ಉಪ್ಪಿಲ್ಲದ ಹವಿಸ್ಸನ್ನು ಭುಜಿಸಬೇಕು. ಹನ್ನೆರಡು ತಿಂಗಳಕಾಲ ನಿತ್ಯವೂ ಮೂರು ಸಂಧ್ಯಾಕಾಲಗಳಲ್ಲಿಯೂ ಸ್ನಾನತತ್ಪರನಾಗಿ ಒಗೆದ ಬಟ್ಟೆಗಳನ್ನು ಧರಿಸುತ್ತಾ, ಶುಚಿಯಾಗಿ ಜಿತೇಂದ್ರಿಯನಾಗಿ ಅಗ್ನಿರಿತ್ಯಾದಿಯಾದ ಮಂತ್ರಗಳಿಂದ ಭಸ್ಮರುದ್ರಾಕ್ಷಗಳನ್ನಲಂಕರಿಸಿಕೊಂಡು ಶಿವನಲ್ಲಿರಿಸಿದ ಮನಸ್ಸುಳ್ಳವನಾಗಿ, ವಿಧಿಯನ್ನನುಸರಿಸಿ ಈ ಮಾಸಾರ್ಚನವ್ರತವನ್ನು ಮಾಡಬೇಕು. ತಿಂಗಳ ಕೊನೆಯಲ್ಲಿ ಸಾವಿರದನೂರು ಅಥವಾ ಹನ್ನೆರಡು ಮಂದಿ ಬ್ರಾಹ್ಮಣರನ್ನಾದರೂ ಪೂಜೆಮಾಡಿ ಅವರಿಗೆ ಭಕ್ಷ್ಯಭೋಜ್ಯಗಳಿಂದ ಊಟಮಾಡಿಸಬೇಕು. ॥೭೦-೭೧-೭೨-೭೩॥

ಸ್ವಸ್ತಿ ವಾಚ್ಯ ಚ ತಾನ್ಸರ್ವಾಂಸ್ತಾಂಬೂಲೈರ್ದಕ್ಷಿಣಾದಿಭಿಃ ।
ಸ ಯತ್ಫಲಮವಾಪ್ನೋತಿ ತಚ್ಚ ನಾನ್ಯೈರ್ಮಹಾಮಖೈಃ ॥೭೪॥

ಆದ್ಯಂತೇ ವಾ ದ್ವಿಜಾ ಭೋಜ್ಯಾ ಮಾಸಾಂತೇ ವಾ ಮಹೇಶ್ವರಿ ।
ವಿಮಾನೈಃ ಸೂರ್ಯಸಂಕಾಶೈರ್ಯಾತಿ ಶಂಭೋರ್ವರಾಲಯಂ ॥೭೫॥

ಮಾತೃತಃ ಪಿತೃತಶ್ಚೈವ ಶತವಂಶಸಮನ್ವಿತಃ ॥೭೬॥

॥ ಸ್ಕಂದ ಉವಾಚ ॥

ಮಾಸಾರ್ಚನವ್ರತವಿಧಿಸ್ತವ ವಿಶ್ರುತೋಽಯಂ
ಪುಣ್ಯಾಯುತಾರ್ಜಿತಗತಿಪ್ರದ ಏಷ ಧರ್ಮಃ ।
ಜ್ಞಾನಪ್ರದೋಽಯಮಮಲಃ ಶಿವಭಕ್ತಿವರ್ಯೈಃ
ಕಾರ್ಯೋಽಧುನಾ ಗಿರಿಸುತೇ ಶಿವತುಷ್ಟಿಸಿದ್ಧ್ಯೈ ॥೭೭॥

---

ಸ್ವಸ್ತಿವಾಚನ ಮಾಡಿಸಿ, ಅವರೆಲ್ಲರನ್ನೂ ತಾಂಬೂಲ, ದಕ್ಷಿಣೆ ಮುಂತಾದವುಗಳಿಂದ ತೃಪ್ತಿಪಡಿಸುವವನು ಪಡೆಯುವ ಫಲವು ಇತರ ದೊಡ್ಡ ಯಾವ ಯಾಗಗಳ ಆಚರಣೆಯಿಂದಲೂ ಬರಲಾರದು. ಮಹೇಶ್ವರಿಯೇ, ತಿಂಗಳ ಮೊದಲು ಅಥವಾ ಕೊನೆಯಲ್ಲಿ ಅಥವಾ ಕೇವಲ ತಿಂಗಳ ಕೊನೆಯೊಂದರಲ್ಲೇ ಆದರೂ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಹೀಗೆ ವ್ರತವನ್ನಾಚರಿಸಿದವರು ಸೂರ್ಯಸಮಾನ ಕಾಂತಿಯುಳ್ಳ ವಿಮಾನಗಳಲ್ಲಿ ಕುಳಿತು ತಾಯಿ, ತಂದೆ ಮುಂತಾದ ತನ್ನ ನೂರು ವಂಶೀಕರೊಡನೆ ಶಂಕರನ ಕೈಲಾಸವನ್ನು ಸೇರುವರು. ಇದರಲ್ಲಿ ಸಂಶಯವಿಲ್ಲ. ॥೭೪-೭೫-೭೬॥

ಮಾಸಾರ್ಚನವಿಧಿಯು ನಿನಗೆ ಈಗ ಹೇಳಲ್ಪಟ್ಟಿದೆ. ಈ ಧರ್ಮವು ಹತ್ತು ಸಾವಿರ ಪುಣ್ಯಕಾರ್ಯಗಳಿಂದ ಸಂಪಾದಿಸಲ್ಪಡುವ ಗತಿಯನ್ನುಂಟುಮಾಡುವುದಾಗಿದೆ. ಜ್ಞಾನವನ್ನುಂಟುಮಾಡುವ ಈ ನಿರ್ಮಲವಾದ ಧರ್ಮವು ಶೈವೋತ್ತಮರಿಂದ ಆಚರಿಸಲ್ಪಡಬೇಕು. ಮತ್ತು ಶಿವನಿಗೆ ಸಂತೋಷವನ್ನುಂಟುಮಾಡುವ ಧರ್ಮವೆಂದರೆ ಇದೊಂದೇ. ಆದ್ದರಿಂದಲೇ ಎಲ್ಲರೂ ಇದನ್ನು ಅನುಸರಿಸಬೇಕು, ಎಂದು ಶಿವನು ಗಿರಿಜೆಗೆ ಹೇಳಿದುದನ್ನು ಷಣ್ಮುಖಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೭೭॥

ಕ್ಷೇತ್ರೇಷು ಗಿರಿನದೀವನಪುಣ್ಯದೇಶೇ
ಶ್ರದ್ಧಾನ್ವಿತೋಽಥ ಮನುಜೋ ದ್ವಿಜ ಏವ ಮುಖ್ಯಃ ।
ಮಾಸೇಷು ಶರ್ವಾರ್ಚನಮೇವ ಮುಖ್ಯಂ
ಸರ್ವೇಷು ಮಂತ್ರಸಹಿತೋ ವಿಧಿರೇವ ಸಿದ್ಧಃ ॥೭೮॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಮಾಸಾರ್ಚನವಿಧಿನಿರೂಪಣಂ ನಾಮ ತ್ರಯೋದಶೋಽಧ್ಯಾಯಃ

---

ಶಿವಾರ್ಚನೆಗೆ ಉತ್ತಮವಾದ ಶಿವಕ್ಷೇತ್ರಗಳು, ಬೆಟ್ಟ, ನದಿ, ಅರಣ್ಯ ಮುಂತಾದ ಪುಣ್ಯಪ್ರದೇಶಗಳೇ ಬೇಕು. ಇವುಗಳಲ್ಲಿ ಶ್ರದ್ಧಾಳುವಾಗಿ ಶಿವಭಕ್ತಿಯನ್ನು ಹೊಂದಿರುವ ಬ್ರಾಹ್ಮಣನೇ ಮುಖ್ಯನಾದವನು. ಸಮಸ್ತತಿಂಗಳುಗಳಲ್ಲಿಯೂ ಶಿವಪೂಜೆಯೇ ಮುಖ್ಯವಾದುದು. ಮಂತ್ರಸಮೇತವಾದ ಈ ವಿಧಿಯೇ ಸಿದ್ಧಿಕರವು, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೭೮॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಮಾಸಪೂಜಾವಿಧಿನಿರೂಪಣೆ ಎಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಚತುರ್ದಶೋಽಧ್ಯಾಯಃ

॥ ಈಶ್ವರ ಉವಾಚ ॥

ಚೈತ್ರೇ ತ್ರಿನೇತ್ರಮಭ್ಯರ್ಚ್ಯ ಅಗ್ನಿಷ್ಟೋಮಾಯುತಂ ಲಭೇತ್ ।
ಆವಾಹ್ಯ ಮಂಡಪೇ ತಸ್ಮಿನ್ಲಿಂಗಂ ಮಾಣಿಕ್ಯಸಂಭವಂ ॥೧॥

ಪಂಚಪಲ್ಲವಸಂಯುಕ್ತಂ ಕುಂಭಂ ಮಂತ್ರೇಣ ಚೋತ್ತಮಂ ।
ವಿಲಿಪ್ಯ ಗೋಮಯೇನ ಕ್ಷ್ಮಾಂ ರಂಗವಲ್ಲ್ಯಾದ್ಯಲಂಕೃತಾಂ ॥೨॥

ರಂಭಾಸ್ತಂಭಯುತಂ ದಿವ್ಯಂ ಮಣಿತೋರಣಮಂಡಿತಂ ।
ಗಂಧಪುಷ್ಪಾಕ್ಷತೈರ್ಯುಕ್ತಂ ಪಂಚಗವ್ಯಂ ಪವಿತ್ರಕಂ ॥೩॥

---

## ಹದಿನಾಲ್ಕನೆಯ ಅಧ್ಯಾಯ

ಮಹೇಶ್ವರನು ಪಾರ್ವತಿಗೆ ಪ್ರತಿಮಾಸದಲ್ಲಿಯೂ ನಡೆಸುವ ಶಿವಾರ್ಚನೆಯ ಕ್ರಮವನ್ನೂ, ಅದರಿಂದ ಲಭಿಸುವ ಪುಣ್ಯಪ್ರಕಾರವನ್ನೂ ವಿವರವಾಗಿ ಈ ರೀತಿ ಉಪದೇಶಿದನು. ಚೈತ್ರಮಾಸದಲ್ಲಿ ವಿಧಿವತ್ತಾಗಿ ತ್ರಿಲೋಚನನೆನಿಸಿದ ಶಂಕರನನ್ನು ಪೂಜಿಸಿದವನು ಹತ್ತುಸಹಸ್ರ ಅಗ್ನಿಷ್ಟೋಮಯಾಗಗಳ ಫಲವನ್ನು ಪಡೆಯುತ್ತಾನೆ. ವಿಧಿವತ್ತಾಗಿ ಶಿವನಿಗಾಗಿರಚಿಸಿದ ಮಂಟಪದಲ್ಲಿ ಮಾಣಿಕ್ಯರಚಿತವಾದ ಶಿವಲಿಂಗವನ್ನು ಆವಾಹಿಸಿ, ಐದುಚಿಗುರುಗಳಿಂದ ಯುಕ್ತವಾದ ಉತ್ತಮಕುಂಭವನ್ನು ಮಂತ್ರಪೂರ್ವಕವಾಗಿ ಸ್ಥಾಪಿಸಿ, ಗೋಮಯದಿಂದ ಭೂಮಿಯನ್ನು ಸಾರಿಸಿ, ರಂಗವಲ್ಲಿಯೇ ಮೊದಲಾದವುಗಳಿಂದಲಂಕರಿಸಿ, ಬಾಳೆಯಕಂಬಗಳನ್ನುಕಟ್ಟಿ ದಿವ್ಯ

ಪಂಚಾಮೃತಾದಿಸಂಭಾರಂ ಫಲಜಾಲರಸಂ ಶಿವೇ ।
ಕುಶದೂರ್ವಾಕ್ಷತಾಮಿಶ್ರೈಃ ಪಾದ್ಯಾರ್ಘ್ಯಾಚಮನಾಂಬುಭಿಃ ॥೪॥

ಗಂಧಚಂದನಪಾತ್ರೈಶ್ಚ ದೀಪಸ್ತಂಭದ್ಯುಶೋಜ್ಜ್ವಲಂ ।
ಧೂಪೈರ್ಗುಗ್ಗುಲುಮಿಶ್ರೈಶ್ಚ ಸಘೃತೈಃ ಸುಮಪಾತ್ರಕೈಃ ॥೫॥

ಕಲ್ಪಯಿತ್ವಾಥ ಸಂಭಾರಂ ಅರ್ಚಕೋ ಬ್ರಾಹ್ಮಣೈಃ ಸಹ ।
ಶಾಂಭವೈರ್ಭಸ್ಮರುದ್ರಾಕ್ಷಧಾರಿಭಿಃ ಸಂಯುತೋಽಂಬಿಕೇ ॥೬॥

ಅಗ್ನಿರಿತ್ಯಾದಿಭಿರ್ಮಂತ್ರೈಃ ಸ್ವಯಮುದ್ಧೂಲಯೇತ್ತನುಂ ।
ನದ್ಯಾಂ ವಾ ದೇವಖಾತಾದೌ ವಾಪೀಕೂಪೋದಕೈಃ ಶುಭೈ ॥೭॥

ಸ್ನಾಸ್ಯಾಮೀತ್ಯಥ ಸಂಕಲ್ಪ್ಯ ಚೈತ್ರಸ್ನಾನೇನ ಶಂಕರಃ ।
ಪ್ರೀಯತಾಮಿತಿ ದೇವೇಶಿ ತ್ರಿಯಾಯುಷತ್ರಿಪುಂಡ್ರಕಃ ॥೮॥

---

ವಾದ ಮಣಿತೋರಣಗಳಿಂದ ಆ ಮಂಟಪವನ್ನು ಅಲಂಕರಿಸಬೇಕು. ಗಂಧ, ಹೂ, ಅಕ್ಷತೆಗಳಿಂದಯುಕ್ತವಾದ ಪವಿತ್ರವಾದ ಪಂಚಗವ್ಯವನ್ನೂ, ಪಂಚಾಮೃತವೇ ಮೊದಲಾದ ಸಾಮಾನುಗಳನ್ನೂ ಶಿವಾಭಿಷೇಕಕ್ಕಾಗಿ ಹಣ್ಣುಗಳ ರಸಗಳನ್ನೂ ಸಿದ್ಧಪಡಿಸಬೇಕು. ದರ್ಭೆ, ಗರಿಕೆ ಮತ್ತು ಅಕ್ಷತೆಗಳಿಂದ ಕೂಡಿದ ಪಾದ್ಯ, ಅರ್ಘ್ಯ ಮತ್ತು ಆಚಮನೀಯೋದಕಗಳಿಂದಲೂ, ಗಂಧ ಮತ್ತು ಚಂದನಗಳನ್ನಿಡುವ ಪಾತ್ರೆಗಳಿಂದಲೂ, ದೀಪದಕಂಬಗಳಜ್ವಾಲೆಗಳಿಂದಲೂ, ತುಪ್ಪಮಿಶ್ರವಾದ ಗುಗ್ಗುಲು ಧೂಪಗಳಿಂದಲೂ, ಪುಷ್ಪಪಾತ್ರೆಗಳಿಂದಲೂ, ಸಿದ್ಧವಾಗಿರುವ ಪೂಜಾಸಲಕರಣೆಗಳನ್ನು ಸಿದ್ಧಮಾಡಿಕೊಂಡು, ಪೂಜೆಮಾಡುವವನು ಭಸ್ಮರುದ್ರಾಕ್ಷಸಂಪನ್ನರಾದ ಶೈವಬ್ರಾಹ್ಮಣರೊಡನೆ, ಬೆರೆತು, "ಅಗ್ನಿರಿತಿಭಸ್ಮ" ಎಂಬ ಮಂತ್ರಗಳಿಂದ ತನ್ನ ದೇಹವನ್ನು ಭಸ್ಮದಿಂದ ಉದ್ಧೂಳನಮಾಡಿಕೊಳ್ಳಬೇಕು. ||೧-೨-೩-೪-೫-೬||

ಪುಣ್ಯಪ್ರದವಾದ ನದಿ ಅಥವಾ ಕೆರೆ, ಕುಂಟೆ, ವಾಪೀಕೂಪಗಳ ಮಂಗಳ ಜಲಗಳಲ್ಲಿ ಸ್ನಾನಮಾಡುತ್ತೇನೆಂದು ಆರಾಧಕನು ಸಂಕಲ್ಪಮಾಡಿ ಸ್ನಾನನಿಯಮದಂತೆ ಸ್ನಾನಮಾಡಬೇಕು. ಸ್ನಾನವಾದನಂತರ ಈ ಚೈತ್ರಸ್ನಾನದಿಂದ ಶಂಕರನು ಪ್ರೀತನಾಗಲೆಂದು ಹೇಳಿ ಭಸ್ಮತ್ರಿಪುಂಡ್ರಧಾರಣಮಾಡಿ, ರುದ್ರಾಕ್ಷಮಾಲೆಗಳನ್ನೂ ಕಂಕಣಗಳನ್ನೂ ಧರಿಸಿ, ಶುಚಿಯಾಗಿ ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು,

ರುದ್ರಾಕ್ಷಹಾರವಲಯುಕೃತನಿತ್ಯಕ್ರಿಯಃ ಶುಚಿಃ ।
ಧೌತವಸ್ತ್ರಧರಃ ಶಾಂತಃ ಸ ಪವಿತ್ರಕರಸ್ತಥಾ ॥೯॥

ಚೈಲಾಜಿನಾಸ್ತೃತೇ ವಾಪಿ ಶಿವೇ ಕುಶಮಯಾಸನೇ ।
ಸ್ಥಿತ್ವಾ ಶಿವಾರ್ಚನಸ್ಥಾನೇ ಶಿವೈಕಗತಮಾನಸಃ ॥೧೦॥

ಆಗಮಂ ವೈದಿಕಂ ವಾಪಿ ಪೂಜಾಕ್ರಮಯುತಃ ಶಿವೇ ।
ಅಂಗನ್ಯಾಸಾದಿಕಂ ಕೃತ್ವಾ ಧ್ಯಾಯೇದ್ದೇವಮುಮಾಸಖಂ ॥೧೧॥

ಉಮಾಸನ್ಮುಖಮೇವೇಶಂ ತ್ರಿನೇತ್ರಂ ಚಂದ್ರಶೇಖರಂ ।
ವರದಾಭಯಹಸ್ತಂ ಚ ನೀಲಕಂಠಂ ಪಿನಾಕಿನಂ ॥೧೨॥

ಮೃಗಟಂಕಧರಂ ಸೌಮ್ಯಂ ವಸ್ತ್ರಾಭರಣಭೂಷಿತಂ ।
ಉಮಯಾ ಸಂಯುತಂ ಧ್ಯಾತ್ವಾ ಜಪನ್ಮಂತ್ರಂ ಮುದಾ ಯುತಃ ॥೧೩॥

ಪಂಚಾಕ್ಷರಸಹಸ್ರಂ ಚ ಶತಮಷ್ಟಾಧಿಕಂ ಶಿವೇ ।
ಸಂಕಲ್ಪ್ಯ ಮಾಸಪೂಜಾದೌ ಯಜೇದ್ದೇವಮನನ್ಯಧೀಃ ॥೧೪॥

---

ಒಗೆದ ಬಟ್ಟೆಗಳನ್ನು ಧರಿಸಿ, ಶಾಂತಮನಸ್ಕನಾಗಿ ಕೈಯಲ್ಲಿ ಪವಿತ್ರವನ್ನಿಟ್ಟುಕೊಂಡು ಕೃಷ್ಣಾಜಿನ ಅಥವಾ ದರ್ಭಾಸನದಲ್ಲಿ ಶಿವಪೂಜಾಸ್ಥಾನದಲ್ಲಿ ಕುಳಿತು, ಶಿವೈಕಾಗ್ರಚಿತ್ತನಾಗಬೇಕು. ಆಗಮ, ಅಥವಾ ವೈದಿಕಮಂತ್ರಪೂರ್ವಕಪೂಜಾಕ್ರಮಯುಕ್ತನಾಗಿ ಅಂಗನ್ಯಾಸ, ಕರನ್ಯಾಸಾದಿಗಳನ್ನು ಮುಗಿಸಿ, ತರುವಾಯ ಉಮಾರಮಣನಾದ ಮಹಾದೇವನನ್ನು ಈರೀತಿ ಧ್ಯಾನಮಾಡಬೇಕು. ॥೭-೮-೯-೧೦-೧೧॥

"ಪರಮೇಶ್ವರನು ಸದಾ ಉಮೆಯೊಡನೆ ಮಂಡಿಸಿರುವವನು, ಮೂರು ಕಣ್ಣುಗಳುಳ್ಳವನು, ಚಂದ್ರಶಿರೋಭೂಷಣನು, ವರದ ಮತ್ತು ಅಭಯಪಾಣಿಗಳುಳ್ಳವನು, ಕಪ್ಪುಕಂಠವುಳ್ಳವನು, ಪಿನಾಕವೆಂಬ ಧನುಸ್ಸುಹಿಡಿದಿರುವವನು, ಜಿಂಕೆ ಮತ್ತು ಟಂಕಗಳನ್ನು ಧರಿಸಿರುವವನು, ಸೌಮ್ಯಮೂರ್ತಿಯು, ವಸ್ತ್ರ ಮತ್ತು ಒಡವೆಗಳಿಂದಲಂಕೃತನು," ಹೀಗೆಂದು ಮಹೇಶನನ್ನು ಧ್ಯಾನಮಾಡಿ, ಪ್ರೀತಿಯಿಂದ ಶಿವಪಂಚಾಕ್ಷರಮಂತ್ರವನ್ನು ಸಾವಿರಬಾರಿಯೋ ಅಥವಾ ನೂರೆಂಟುಸಾರಿಯೋ ಜಪಿಸುತ್ತಾ ಸಂಕಲ್ಪಮಾಡಿಕೊಂಡು ಮಾಸಪೂಜೆಯೇ ಮೊದಲಾದವುಗಳಲ್ಲಿ ಮಹಾದೇವನನ್ನು ಸ್ಥಿರಚಿತ್ತದಿಂದ ಪೂಜಿಸಬೇಕು. ॥೧೨-೧೩-೧೪॥

ಅಪನೀಯಾಥ ನಿರ್ಮಾಲ್ಯಂ ಲಿಂಗಮೌಲಿಗತಂ ಶಿವೇ ।
ಸಂಶೋಧ್ಯ ಚ ಶುಭೈರ್ವಸ್ತ್ರೈರ್ಲಿಂಗಮಾಪೀಠಮಂಬಿಕೇ ॥೧೫॥

ಅದ್ಭಿಃ ಪೂತೇ ತಥಾ ಪೀಠೇ ದೇವಮಾವಾಹ್ಯ ಭಕ್ತಿತಃ ।
ದೃಷ್ಟ್ವಾ ತಲ್ಲಿಂಗಂ ತದಾ ಪ್ರೋಕ್ತಂ ಮಂತ್ರೈಃ ಶಾಂಭವಸತ್ತಮಃ ॥೧೬॥

ಪಂಚಾಕ್ಷರೇಣ ತತ್ಸರ್ವಮುಪಚಾರಂ ಪ್ರಕಲ್ಪಯೇತ್ ।
ಗಾಯತ್ರ್ಯಾ ಚ ಸಮಭ್ಯರ್ಚ್ಯ ಶಿವಲೋಕಮವಾಪ್ನುಯಾತ್ ॥೧೭॥

ಕಲ್ಪಿತೇ ಚಾಸನೇ ಸ್ಥಾಪ್ಯ ಧರ್ಮಜ್ಞಾನಮಯೇ ಶುಭೇ ।
ವೈರಾಗ್ಯೈಶ್ವರ್ಯಸಂಪನ್ನೇ ದಾರವೇ ಧಾತುಜೇಽಥವಾ ॥೧೮॥

ಓಂಕಾರಂ ಮಧ್ಯಪದ್ಮೇ ತು ಸೋಮಸೂರ್ಯಾಗ್ನಿಸಂಭವೇ ।
ಪಾದ್ಯಮಾಚಮನಾರ್ಘ್ಯಂ ಚ ದತ್ವಾ ರುದ್ರಾಯ ಶಂಭವೇ ॥೧೯॥

ಸ್ನಾಪಯೇತ್ಪಂಚಗವ್ಯೇನ ಮಧುಪರ್ಕೇಣ ವೈ ಶಿವೇ ।
ಕ್ಷೀರೇಣ ದಧ್ನಾಜ್ಯೇನಾಪಿ ಕ್ಷೌದ್ರೇಣ ಸಿತಯಾ ಶಿವೇ ॥೨೦॥

---

ಮೊದಲು ಶಿವಲಿಂಗದ ತಲೆಯಮೇಲಿರುವ ಹಿಂದಿನ ನಿರ್ಮಾಲ್ಯಗಳನ್ನು ತೆಗೆದು ಮಂಗಳವಸ್ತ್ರಗಳಿಂದ ಶಿವಲಿಂಗವನ್ನು ಪೀಠದವರೆಗೂ ಶುದ್ಧಿಮಾಡಬೇಕು. ಮೊದಲು ಶುದ್ಧವಾದನೀರಿನಿಂದ ಶಿವಪೀಠವನ್ನು ಸ್ವಚ್ಛಗೊಳಿಸಬೇಕು. ಅನಂತರ ಮಹಾದೇವನನ್ನು ಭಕ್ತಿಯಿಂದ ಆವಾಹನೆಮಾಡಿ, ಹಿಂದೆ ಹೇಳಿದ ಆ ಲಿಂಗವನ್ನು ದರ್ಶನಮಾಡಿ ಶೈವವರ್ಯನು ಪಂಚಾಕ್ಷರಮಂತ್ರಗಳಿಂದ ಎಲ್ಲಾ ಉಪಚಾರಗಳನ್ನೂ ಕಲ್ಪಿಸಬೇಕು. ಗಾಯತ್ರೀಮಂತ್ರಗಳಿಂದ ಶಿವಪೂಜೆಮಾಡಿದವನು ಶಿವಲೋಕವನ್ನೈದುವನು. ॥೧೫-೧೬-೧೭॥

ಧರ್ಮಜ್ಞಾನಸ್ವರೂಪವೂ, ಶುಭಕರವೂ, ವೈರಾಗ್ಯ, ಐಶ್ವರ್ಯ ಇವುಗಳಿಂದ ಯುಕ್ತವೂ ಆದ ಶಿವಪೀಠವು ಮರ, ಅಥವಾ ಲೋಹ ಇವುಗಳಿಂದ ಮಾಡಿದ್ದಾಗಿರಬೇಕು. ಇಂತಹ ಆಸನದಲ್ಲಿ ದೇವನನ್ನು ಸ್ಥಾಪಿಸಿ, ಮಧ್ಯಪದ್ಮದಲ್ಲಿ ಓಂಕಾರವನ್ನು ಬರೆದು, ಚಂದ್ರ, ಸೂರ್ಯ ಮತ್ತು ಅಗ್ನಿ ಇವರ ಉತ್ಪತ್ತಿಗೆ ಕಾರಣನಾದ ಶಂಭುವಿಗೆ ಪಾದ್ಯ, ಆಚಮನ, ಮತ್ತು ಅರ್ಘ್ಯಗಳನ್ನು ಸಮರ್ಪಿಸಿ, ಅನಂತರ, ಪಂಚಗವ್ಯ ಪದಾರ್ಥಗಳಿಂದಲೂ, ಮಧುಪರ್ಕದಿಂದಲೂ, ಹಾಲು, ಮೊಸರು, ತುಪ್ಪ, ಜೇನು,

ಫಲೋದಕೈಸ್ತತಃ ಶುದ್ಧೈರಂಬುಭಿಃ ಸ್ವರ್ಣಮಧ್ಯಗೈಃ ।
ಶೋಧಿತೈರ್ವಾಸಿತೈರ್ವಾಪಿ ಪಾಟಲಾಗರುಮಿಶ್ರಿತೈಃ ॥೨೧॥

ಗೋಶೃಂಗೇಣಾಥ ಶಂಖೇನ ವರ್ಧನ್ಯಾ ವಾಭಿಷೇಚಯೇತ್ ।
ಧಾರಾಂ ಪ್ರಕಲ್ಪಯೇಲ್ಲಿಂಗೇ ಅವಿಚ್ಛಿನ್ನಾಂ ಗಿರೀಂದ್ರಜೇ ॥೨೨॥

ಧೂಪೈಶ್ಚ ಧೂಪಯೇತ್ತತ್ರ ದೀಪಾನುದ್ಬೋಧ್ಯ ತತ್ರ ಹಿ ।
ಬ್ರಾಹ್ಮಣೈಃ ಶಾಂಭವೈಃ ಸಾರ್ಧಂ ಲಿಂಗಂ ತದಭಿಷೇಚಯೇತ್ ॥೨೩॥

ಏಕವಾರಂ ತ್ರಿವಾರಂ ವಾ ಜಪ್ಯೋ ರುದ್ರಃ ಸಶಾಂತಿಕಃ ।
ಏಕಾದಶಗುಣೋ ರುದ್ರೋ ಜಪ್ಯಶ್ಚಮಕಶಾಂತಿಕಃ ॥೨೪॥

ತರ್ಪಯೇದಭಿಷೇಕಾಂತೇ ಭವಾದ್ಯೈರಷ್ಟನಾಮಭಿಃ ।
ಉದ್ವರ್ತಯೇಚ್ಛುಭ್ರೈರ್ವಸ್ತ್ರೈಃ ಸ್ಥಾಪ್ಯ ಪೀಠೇ ಮಹೇಶ್ವರಂ ॥೨೫॥

---

ಮತ್ತು ಸಕ್ಕರೆಗಳಿಂದಲೂ ಮಂತ್ರಪಠನಪೂರ್ವಕವಾಗಿ ಅಭಿಷೇಕಮಾಡಬೇಕು. ॥೧೮-೧೯-೨೦॥

ಆಮೇಲೆ ಎಳನೀರುಗಳಿಂದಲೂ, ಹಾಗೆಯೇ ಚೆನ್ನಾಗಿ ಶೋಧಿಸಿ, ಸುವಾಸಿತವಾಗಿ ಮಾಡಲ್ಪಟ್ಟಿರುವ ಗಂಧ, ಮತ್ತು ಅಗರುಮಿಶ್ರಿತವಾದ ಶುದ್ಧವಾಗಿರುವ ಸುವರ್ಣಸ್ಪರ್ಶವುಳ್ಳ ಜಲಧಾರೆಯಿಂದಲೂ, ಹಸುವಿನಕೊಂಬು, ಶಂಖ, ಅಥವಾ ಉದ್ಧರಣೆ, (ಗಿಂಡಿ) ಇವುಗಳ ಮೂಲಕ ಅಭಿಷೇಕಮಾಡಬೇಕು. ಒಟ್ಟಿನಲ್ಲಿ ಶಿವಲಿಂಗದಲ್ಲಿ ಜಲಧಾರೆಯು ಎಡಬಿಡದೆ ಬೀಳುವಂತೆ ಮಾಡಬೇಕು. ॥೨೧-೨೨॥

ಅಭಿಷೇಕಕಾಲದಲ್ಲಿ ಶಿವಲಿಂಗದ ಬಳಿ ಧೂಪವನ್ನು ಹಾಕಬೇಕು. ದೀಪಗಳನ್ನೂ ಚೆನ್ನಾಗಿ ಉರಿಯುವಂತೆ ಹೊತ್ತಿಸಿ, ಶಾಂಭವವಿಪ್ರರೊಡನೆ ಆ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ಶಾಂತಿಪಾಠದೊಡನೆ ಒಂದು ಅಥವಾ ಮೂರುಬಾರಿ ರುದ್ರ ಮಂತ್ರವನ್ನು ಜಪಮಾಡಬೇಕು. ಚಮಕಮಂತ್ರಶಾಂತಿಕವಾದ ಅಂದರೆ ಶಂಚಮೇ ಎಂಬ ಅನುವಾಕದಿಂದ ಪ್ರಾರಂಭವಾದ ರುದ್ರಮಂತ್ರವನ್ನು ಹನ್ನೊಂದುಬಾರಿ ಜಪಿಸಬೇಕು. ॥೨೩-೨೪॥

ಅಭಿಷೇಕವಾದಮೇಲೆ ಭವಾಯ, ಎಂಬ ನಾಮಪೂರ್ವಕವಾದ ಎಂಟು ಶಿವ ನಾಮಗಳಿಂದ ತರ್ಪಣಮಾಡಬೇಕು. ಅನಂತರ ಶುಭ್ರವಸ್ತ್ರಗಳಿಂದ ಒರೆಸಬೇಕು.

ಚಂದನೇನೋಪಲಿಪ್ಯೇಶಂ ವಸ್ತ್ರಯಜ್ಞೋಪವೀತಕಂ ।
ದದ್ಯಾತ್ರಿಶಾಖಾಬಿಲ್ವೈಶ್ಚ ಪೂಜಯೇನ್ಮಲ್ಲಿಕಾಸುಮೈಃ ॥೨೬॥

ದಮನೈಶ್ಚ ಶುಭೈಃ ಪದ್ಮೈಃ ಪುಂಡರೀಕೋತ್ಪಲಾದಿಭಿಃ ।
ನೀಲೋತ್ಪಲಾನಾಂ ಮಾಲಾಭಿರ್ನಂದ್ಯಾವರ್ತಶಮೀಭವೈಃ ॥೨೭॥

ಚಂಪಕೈರ್ಜಾತಿಪುಷ್ಪೈಶ್ಚ ಬಕುಲೈಃ ಕರವೀರಕೈಃ ।
ದತ್ವಾ ಸೌಗಂಧಿಕಂ ಧೂಪಂ ಪಾಯಸಂ ಚ ನಿವೇದಯೇತ್ ॥೨೮॥

ಸ ಶರ್ಕರಾಂಬುಸಂಮಿಶ್ರಮೇಲಾಚೂರ್ಣವಿಮಿಶ್ರಿತಂ ।
ಪಾನಕಂ ದಧಿಭಕ್ತಂ ಚ ಸೋಪದಂಶಂ ನಿವೇದಯೇತ್ ॥೨೯॥

ಕೃತ್ವಾ ಪ್ರದಕ್ಷಿಣಂ ದೇವಿ ನಮಸ್ಕಾರಾದಿಪಂಚಕಂ ।
ಶತಾಷ್ಟನಾಮಭಿಃ ಪೂಜಾಂ ಕುರ್ಯಾದ್ಬಿಲ್ವೈರ್ಮಹೇಶ್ವರಿ ॥೩೦॥

---

ಆಮೇಲೆ ಪೀಠದಲ್ಲಿ ಮಹೇಶನನ್ನು ಸ್ಥಾಪಿಸಿ, ಚಂದನವನ್ನು ಲೇಪನಮಾಡಿ, ವಸ್ತ್ರ, ಯಜ್ಞೋಪವೀತಗಳನ್ನು ಸಮರ್ಪಿಸಿ, ಮೂರುದಳವುಳ್ಳ ಬಿಲ್ವಪತ್ರೆ ಮತ್ತು ಮಲ್ಲಿಗೆಯ ಹೂಗಳಿಂದ ಶಿವಲಿಂಗವನ್ನು ಪೂಜಿಸಬೇಕು. ॥೨೫-೨೬॥

ದಮನಕಪುಷ್ಪ (ದವನ), ವಿಕಸಿತಗಳಾದ ತಾವರೆ ಹೂಗಳು, ಕಮಲ, ನೈದಿಲೆ ಮುಂತಾದವುಗಳಿಂದಲೂ, ಕನ್ನೈದಿಲೆ ಹೂಗಳ ಹಾರಗಳಿಂದಲೂ, ನಂದ್ಯಾವರ್ತ (ನಂದಿಬಟ್ಟಲು) ಪುಷ್ಪ ಮತ್ತು ಬನ್ನೀಹೂಗಳ ಮಾಲೆ, ಸಂಪಿಗೆ, ಜಾಜಿ, ಬಕುಲ, ಕಣಿಗಲೆ ಈ ಹೂಗಳಿಂದಲೂ ಸ್ವಾಮಿಯನ್ನು ಪೂಜಿಸಬೇಕು. ಅನಂತರ ಸುಗಂಧಭರಿತವಾದ ಧೂಪವನ್ನು ಸಮರ್ಪಿಸಿ ಪಾಯಸವನ್ನು ನಿವೇದನಮಾಡಬೇಕು. ॥೨೭-೨೮॥

ಸಕ್ಕರೆಯಿಂದಲೂ ಏಲಕ್ಕಿಪುಡಿಯಿಂದಲೂ ಸಿದ್ಧಗೊಳಿಸಿರುವ ಪಾನಕವನ್ನೂ ಮೊಸರನ್ನ ಮತ್ತು ವ್ಯಂಜನಪದಾರ್ಥ (ನೆಂಚಿಕೊಳ್ಳುವಪದಾರ್ಥ) ಗಳನ್ನೂ ಶಿವನಿಗೆ ನಿವೇದನಮಾಡಬೇಕು. ಅನಂತರ ಪ್ರದಕ್ಷಿಣೆಮಾಡಿ ಐದು ನಮಸ್ಕಾರಗಳನ್ನೆಸಗಿ, ಶಿವನ ನೂರೆಂಟುನಾಮಗಳಿಂದ ಮತ್ತೆ ಬಿಲ್ವಪೂಜೆಯನ್ನು ನಡೆಸಬೇಕು.॥೨೯-೩೦॥

ನಾಮಭಿಶ್ಚಾಂದಸೈರ್ದೇವಿ ಪೂಜಯೀತ ಸ್ತುವೀತ ಚ ।
ತಾನಿ ನಾಮಾನಿ ವಕ್ಷ್ಯಾಮಿ ಸಮಾಹಿತಮನಾಃ ಶೃಣು ॥೩೧॥

ನಮೋಽಸ್ತು ತುಭ್ಯಂ ದೇವಾಯ ಸುವ್ರತಾನಂತತೇಜಸೇ ।
ನಮಃ ಕ್ಷತ್ರಾಧಿಪತಯೇ ವಾಜಿನೇ ಶೂಲಿನೇ ನಮಃ ॥೩೨॥

ಹ್ರಸ್ವಾಯೋರ್ಧ್ವಾಯ ಧೂಮ್ರಾಯ ದಂಡಿನೇ ರುಕ್ಮರೇತಸೇ ।
ನಮೋ ಜ್ಯೇಷ್ಠಾಯ ಶ್ರೇಷ್ಠಾಯ ಬಲಪ್ರಮಥನಾಯ ಚ ॥೩೩॥

ನಮೋ ವನ್ಯಾಯ ಪೂಜ್ಯಾಯ ಸದ್ಯೋಜಾತಾಯ ವೈ ನಮಃ ।
ಗಹ್ವರಾಯ ಘನೇಶಾಯ ಹವ್ಯವಾಹಾಯ ಚಾರಿಣೇ ॥೩೪॥

---

ದೇವಿ, ವೇದಪ್ರತಿಪಾದ್ಯವಾದ ಈ ನಾಮಗಳಿಂದ ಪೂಜೆ ಮತ್ತು ಸ್ತೋತ್ರಗಳನ್ನು ನಡೆಸಬೇಕು. ಆ ನಾಮಾವಳಿಗಳನ್ನು ಹೇಳುವೆನು ಸಾವಧಾನಚಿತ್ತದಿಂದ ಕೇಳು ;

೧. ಓಂ ನಮೋಽಸ್ತು ತುಭ್ಯಂ ದೇವಾಯ ನಮಃ [ಸರ್ವವ್ಯಾಪಿಯಾದ ನಿನಗೆ ನಮಸ್ಕಾರ]
೨. ಓಂ ಸುವ್ರತಾನಂತತೇಜಸೇ ನಮಃ [ದಿವ್ಯತೇಜಸ್ಸಿನಿಂದ ಸಕಲ ವಸ್ತುಗಳಲ್ಲಿಯೂ ಅಡಗಿರುವವನು]
೩. ಓಂ ಕ್ಷತ್ರಾಧಿಪತಯೇ ನಮಃ [ಹಿಂಸೆಯಿಂದ ಕಾಪಾಡುವವರಿಗೆ ಅಧಿಪತಿಯು]
೪. ಓಂ ವಾಜಿನೇ ನಮಃ [ಅಶ್ವರೂಪದಿಂದ ಜಗತ್ತಿನಲ್ಲಿ ಸಂಚರಿಸುವವನು]
೫. ಓಂ ಶೂಲಿನೇ ನಮಃ [ಶೂಲಾಯುಧಧಾರಿಯು]
೬. ಓಂ ಹ್ರಸ್ವಾಯ ನಮಃ [ಉಪಾಧಿವಶದಿಂದ ಕುಳ್ಳಾಗಿ ಕಾಣುವವನು]
೭. ಓಂ ಊರ್ಧ್ವಾಯ ನಮಃ [ಎತ್ತರದ ಆಕಾರದಲ್ಲಿರುವವನು]
೮. ಓಂ ಧೂಮ್ರಾಯ ನಮಃ [ಧೂಮ್ರವರ್ಣರೂಪಿಯು]
೯. ಓಂ ದಂಡಿನೇ ನಮಃ [ದಂಡಾಯುಧಧಾರಿಯು]
೧೦. ಓಂ ರುಕ್ಮರೇತಸೇ ನಮಃ [ಸುವರ್ಣದಂತಿರುವ ರೇತಸ್ಸುಳ್ಳವನು]
೧೧ ಓಂ ಜ್ಯೇಷ್ಠಾಯ ನಮಃ [ಲೋಕಕ್ಕೇ ದೊಡ್ಡವನು]
೧೨. ಓಂ ಶ್ರೇಷ್ಠಾಯ ನಮಃ [ಜಗತ್ತಿಗೆ ಶ್ರೇಷ್ಠನೆನಿಸಿದವನು]
೧೩. ಓಂ ಬಲಪ್ರಮಥನಾಯ ನಮಃ [ಬಲಿಷ್ಠರನ್ನು ಬಗ್ಗಿಸುವವನು]

ಭೂತಾನಾಮುದ್ಭವಾಯಾಥ ಪ್ರಭವೇ ವಿಭವೇ ನಮಃ ।
ದೇವಾಯ ದ್ಯೋತಮಾನಾಯ ಮಾನಾತೀತಾಯ ಶಂಭವೇ ॥೩೫॥

ವೇದಾಂಗಾಯ ಪ್ರದಾನಾಯ ಯೋಗಸಾಂಖ್ಯವಿಹಾರಿಣೇ ।
ಧ್ರುವಾಽಧ್ರುವಾಯ ಶಾಂತಾಯ ವಿಶ್ವಾಂಯ ಸುಮುಹೂರ್ತಯೋ ॥೩೬॥

ಗ್ರಹಾಯ ಗ್ರಾಹ್ಯರೂಪಾಯ ಗ್ರಹಸ್ಥಾಯ ಯುತಾತ್ಮನೇ ।
ಅಹೋರಾತ್ರಾಯ ಮಾಸಾಯ ಋತವೇ ಕ್ರತವೇ ನಮಃ ॥೩೭॥

---

೧೪. ಓಂ ವನ್ಯಾಯ ನಮಃ [ಅರಣ್ಯದಲ್ಲಿ ಹುಟ್ಟಿದ ಪ್ರಾಣಿಗಳ ಸ್ವರೂಪದಲ್ಲಿರುವವನು]

೧೫. ಓಂ ಪೂಜ್ಯಾಯ ನಮಃ [ಪೂಜೆಗೆ ಅರ್ಹನೆನಿಸಿದವನು]

೧೬. ಓಂ ಸದ್ಯೋಜಾತಾಯ ನಮಃ [ಇಚ್ಛಾಮಾತ್ರದಿಂದ ಜನಿಸುವವನು]

೧೭. ಓಂ ಗಹ್ವರಾಯ ನಮಃ [ಗುಹೆಯ ರೂಪದಲ್ಲಿರುವವನು]

೧೮. ಓಂ ಘನೇಶಾಯ ನಮಃ [ಮೇಘಾಧಿಪತಿಯಾಗಿರುವವನು]

೧೯. ಓಂ ಹವ್ಯವಾಹಾಯ ನಮಃ [ಹವಿಸ್ಸನ್ನು ಹೊರುವ ಅಗ್ನಿರೂಪದಲ್ಲಿರುವವನು]

೨೦. ಓಂ ಚಾರಿಣೇ ನಮಃ [ಸಂಚಾರಕ್ರಿಯೆಯಲ್ಲಿರುವವನು]

೨೧. ಓಂ ಭೂತಾನಾಮುದ್ಭವಾಯ ನಮಃ [ಪ್ರಾಣಿಗಳಿಗೆ ಉತ್ಪತ್ತಿಸ್ಥಾನದಂತಿರುವವನು]

೨೨. ಓಂ ಪ್ರಭವೇ ನಮಃ [ಸ್ವಾಮಿಯಂತಿರುವವನು]

೨೩. ಓಂ ವಿಭವೇ ನಮಃ [ಸಕಲ ಲೋಕರಕ್ಷಕನು]

೨೪. ಓಂ ದೇವಾಯ ನಮಃ [ಪ್ರಪಂಚರೂಪದಿಂದ ಕ್ರೀಡಿಸುವವನು]

೨೫. ಓಂ ದ್ಯೋತಮಾನಾಯ ನಮಃ [ವಿಶೇಷವಾಗಿ ಹೊಳೆಯುವವನು]

೨೬. ಓಂ ಮಾನಾತೀತಾಯ ನಮಃ [ಪ್ರಮಾಣಾತೀತನು]

೨೭. ಓಂ ಶಂಭವೇ ನಮಃ [ಸುಖಕರನು]

೨೮. ಓಂ ವೇದಾಂಗಾಯ ನಮಃ [ವೇದದ ಅಂಗವಾದ ಶಾಸ್ತ್ರರೂಪದಲ್ಲಿರುವವನು]

೨೯. ಓಂ ಪ್ರದಾನಾಯ ನಮಃ [ಶ್ರೇಷ್ಠವಾದ ದಾನವಸ್ತುರೂಪದಲ್ಲಿರುವವನು]

೩೦. ಓಂ ಯೋಗಸಾಂಖ್ಯವಿಹಾರಿಣೇ ನಮಃ [ಯೋಗ ಮತ್ತು ಸಾಂಖ್ಯತತ್ತ್ವಗಳಿಂದ ದೊರೆಯುವವನು]

೩೧. ಓಂ ಧ್ರುವಾಯ ನಮಃ [ಶಾಶ್ವತವಾದ ವಸ್ತುವೆನಿಸಿದವನು]

ಸಂವತ್ಸರಾಧಿಪತಯೇ ಯುಗಕಾಲಾತ್ಮನೇ ನಮಃ ।
ಪರಾರ್ಧಾಯ ಪ್ರಸನ್ನಾಯ ಶುಷ್ಕಾಯ ಹರಿತಾಯ ಚ ॥೩೮॥

ಧರ್ಮಾಧರ್ಮಸ್ವರೂಪಾಯ ಪರಾಯ ವಿಭವೇ ನಮಃ ।
ಪುರಾಂತಕಾಯ ಭೀಮಾಯ ಸರ್ಗಾಯ ಧೃತಯೇ ನಮಃ ॥೩೯॥

ಮನ್ವಂತರಾಯ ಕಾವ್ಯಾಯ ವಿಶ್ವಾಪ್ಯಾಯವಿಧಾಯಿನೇ ।
ವಿಶ್ವಸರ್ಗಾಯ ಭರ್ಗಾಯ ಜ್ಯೋತಿಷೇ ದಿವ್ಯಚಕ್ಷುಷೇ ॥೪೦॥

---

೩೨. ಓಂ ಅಧ್ರುವಾಯ ನಮಃ [ಕ್ಷಣಿಕವಸ್ತುರೂಪದಲ್ಲಿ ಪ್ರತಿಫಲಿಸುವವನು]

೩೩. ಓಂ ಶಾಂತಾಯ ನಮಃ [ಶಾಂತಸ್ವರೂಪಿಯು]

೩೪. ಓಂ ವಿಶ್ವಾಯ ನಮಃ [ಲೋಕಸ್ವರೂಪನು]

೩೫. ಓಂ ಸುಮಹರ್ಷಯೇ ನಮಃ [ಮಹಿಮನಾದ ಮಹರ್ಷಿಯಂತಿರುವವನು]

೩೬. ಓಂ ಗ್ರಹಾಯ ನಮಃ [ನವಗ್ರಹಸ್ವರೂಪಿಯು]

೩೭. ಓಂ ಗ್ರಾಹ್ಯರೂಪಾಯ ನಮಃ [ಸರ್ವರೂ ಸ್ವೀಕರಿಸುವ ಆಕಾರವುಳ್ಳವನು]

೩೮. ಓಂ ಗ್ರಹಸ್ಥಾಯ ನಮಃ [ಗ್ರಹಮಂಡಲಮಧ್ಯವರ್ತಿಯು]

೩೯. ಓಂ ಯುತಾತ್ಮನೇ ನಮಃ [ಪ್ರಯತ್ನಿಸುವ ಸ್ವಭಾವವುಳ್ಳವನು]

೪೦. ಓಂ ಅಹೋರಾತ್ರಾಯ ನಮಃ [ಹಗಲು ಮತ್ತು ರಾತ್ರಿರೂಪದಿಂದಿರುವವನು]

೪೧. ಓಂ ಮಾಸಾಯ ನಮಃ [ತಿಂಗಳಿನಂತೆ ತೋರುವ ಕಾಲರೂಪಿಯು]

೪೨. ಓಂ ಋತವೇ ನಮಃ [ಎರಡು ತಿಂಗಳಿನ ಒಂದು ಋತುವಿನಂತೆ ತೋರುವವನು]

೪೩. ಓಂ ಕ್ರತವೇ ನಮಃ [ಯಾಗಸ್ವರೂಪನು]

೪೪. ಓಂ ಸಂವತ್ಸರಾಧಿಪತಯೇ ನಮಃ [ಸಂವತ್ಸರಕ್ಕೆ ಅಧಿಪತಿಯಂತಿರುವವನು]

೪೫. ಓಂ ಯುಗಕಾಲಾತ್ಮನೇ ನಮಃ [ಯುಗಗಳ ರೂಪದಲ್ಲಿ ತೋರುವ ಕಾಲರೂಪಿಯು]

೪೬. ಓಂ ಪರಾರ್ಧಾಯ ನಮಃ [ಪರಾರ್ಧವೆಂಬ ಅಪರಿಮಿತ ಸಂಖ್ಯಾರೂಪಿಯು]

೪೭. ಓಂ ಪ್ರಸನ್ನಾಯ ನಮಃ [ಭಕ್ತರಿಗೆ ಪ್ರಸನ್ನನಾಗಿ ತೋರುವವನು]

೪೮. ಓಂ ಶುಷ್ಕಾಯ ನಮಃ [ಒಣಗಿದ ವಸ್ತುವಿನಂತಿರುವವನು]

೪೯. ಓಂ ಹರಿತಾಯ ನಮಃ [ಹಸುರುಬಣ್ಣದಿಂದ ವಿರಾಜಿಸುವವನು]

ಕಲ್ಪೋದಯನಿಬದ್ಧಾಯ ಶುದ್ಧಬುದ್ಧಾಯ ರಂಹಸೇ ।
ಬ್ರಹ್ಮಣೇ ಬ್ರಹ್ಮಭೂತಾಯ ಬ್ರಹ್ಮಾಧಿಪತಯೇ ನಮಃ ॥೪೧॥

ವಿದ್ಯೇಶಾಯಾದಿದೇವಾಯ ವಿದ್ಯಾಧಿಪತಯೇ ನಮಃ ।
ನಮೋವ್ರತಾಧಿಪತಯೇ ಮಂತ್ರಾಧಿಪತಯೇ ನಮಃ ॥೪೨॥

ಪಿತೄಣಾಂ ಪತಯೇ ಚೈವ ಪಶೂನಾಂ ಪತಯೇ ನಮಃ ।
ಶೇಷಭೂಷಾಯ ತುಷ್ಟಾಯ ಪುಷ್ಟಾಯ ಚ ನಮೋ ನಮಃ ॥೪೩॥

---

೫೦. ಓಂ ಧರ್ಮಾಧರ್ಮಸ್ವರೂಪಾಯ ನಮಃ [ಧರ್ಮ ಮತ್ತು ಅಧರ್ಮ ರೂಪದಿಂದ ತೋರುವವನು]

೫೧. ಓಂ ಪರಾಯ ನಮಃ [ಶ್ರೇಷ್ಠವಾದ ಆಕಾರವುಳ್ಳವನು]

೫೨. ಓಂ ವಿಭವೇ ನಮಃ [ಸರ್ವರಕ್ಷಕನು]

೫೩. ಓಂ ಪುರಾಂತಕಾಯ ನಮಃ [ತ್ರಿಪುರನಾಶಕನು]

೫೪. ಓಂ ಭೀಮಾಯ ನಮಃ [ಭಯಂಕರನಾದವನು]

೫೫. ಓಂ ವರ್ಗಾಯ ನಮಃ [ಒಂದೊಂದು ಗುಂಪಿನಂತೆಯೂ ತೋರುವವನು]

೫೬. ಓಂ ಧೃತಯೇ ನಮಃ [ಧೈರ್ಯರೂಪಿಯು]

೫೭. ಓಂ ಮನ್ವಂತರಾಯ ನಮಃ [ಮನ್ವಂತರವೆಂಬ ಕಾಲರೂಪಿಯು]

೫೮. ಓಂ ಕಾವ್ಯಾಯ ನಮಃ [ಕಾವ್ಯಸ್ವರೂಪನು]

೫೯. ಓಂ ವಿಶ್ವಾಪ್ಯಾಯವಿಧಾಯಿನೇ ನಮಃ [ಪ್ರಪಂಚಕ್ಕೆ ಮನಸ್ಸಂತೋಷವನ್ನು ಕರುಣಿಸುವವನು]

೬೦. ಓಂ ವಿಶ್ವಸರ್ಗಾಯ ನಮಃ [ಲೋಕದ ಸೃಷ್ಟಿಕರ್ತೃವು]

೬೧. ಓಂ ಭರ್ಗಾಯ ನಮಃ [ಲೋಕದ ಭರಣ (ರಕ್ಷಣ) ಶೀಲನು]

೬೨. ಓಂ ಜ್ಯೋತಿಷೇ ನಮಃ [ತೇಜೋರೂಪದಿಂದಿರುವವನು]

೬೩. ಓಂ ದಿವ್ಯಚಕ್ಷುಷೇ ನಮಃ [ದಿವ್ಯಜ್ಞಾನಿಯಾದವನು]

೬೪. ಓಂ ಕಲ್ಪೋದಯನಿಬದ್ಧಾಯ ನಮಃ [ಕಲ್ಪ, ಯುಗ ಮುಂತಾದ ಕಾಲ ಸಮೂಹವನ್ನು ಸೃಷ್ಟಿಸುವವನು]

೬೫. ಓಂ ಶುದ್ಧಬುದ್ಧಾಯ ನಮಃ [ಶುದ್ಧವಾದ ಅಂದರೆ ದೋಷವಿಲ್ಲದ ಜ್ಞಾನಸ್ವರೂಪನು]

ವೃಷಭಾಯ ಪುರಾಣಾಯ ಪತ್ತೀನಾಂ ಪತಯೇ ನಮಃ ।
ಪ್ರಜಾಪತೀನಾಂ ಪತಯೇ ವ್ಯೋಮಕೇಶಾಯ ತೇ ನಮಃ ॥೪೪॥

ಸಿದ್ಧಾಯ ಬೃಹತೇ ಚೈವ ಘನಘೋಷಾಯ ತೇ ನಮಃ ।
ದೈತ್ಯದಾನವಪೂಜ್ಯಾಯ ವಾಯವೇ ರಕ್ಷಘಾತಿನೇ ॥೪೫॥

ಯಕ್ಷಾಯ ಭಿಕ್ಷುರೂಪಾಯ ಛಿನ್ನಪಾಶಾಯ ತೇ ನಮಃ ।
ಪಕ್ಷಿವಾಹಪ್ರಪೂಜ್ಯಾಯ ಗುಹ್ಯಲಿಂಗಾಯ ತೇ ನಮಃ ॥೪೬॥

---

೬೬. ಓಂ ರಂಹಸೇ ನಮಃ [ಮಿತಿಮೀರಿದ ವೇಗವುಳ್ಳವನು]
೬೭. ಓಂ ಬ್ರಹ್ಮಣೇ ನಮಃ [ಚತುರ್ಮುಖಬ್ರಹ್ಮಸ್ವರೂಪನು]
೬೮. ಓಂ ಬ್ರಹ್ಮಭೂತಾಯ ನಮಃ [ಪರಬ್ರಹ್ಮವಸ್ತುವಾಗಿ ಪ್ರಪಂಚದಂತೆ ತೋರುವವನು]
೬೯. ಓಂ ಬ್ರಹ್ಮಾಧಿಪತಯೇ ನಮಃ [ಜ್ಞಾನಾಶ್ರಯನಾದವನು]
೭೦. ಓಂ ವಿದ್ಯೇಶಾಯ ನಮಃ [ಸಕಲ ವಿದ್ಯಾ (ಜ್ಞಾನ) ಧಿಪತಿಯಾದವನು]
೭೧. ಓಂ ಆದಿದೇವಾಯ ನಮಃ [ಸಕಲ ದೇವತೆಗಳಿಗೂ ಮೊದಲನೆಯವನು]
೭೨. ಓಂ ವಿದ್ಯಾಧಿಪತಯೇ ನಮಃ [ಸಕಲ ಕಲೆಗಳಿಗೂ ಅಧೀಶ್ವರನು]
೭೩. ಓಂ ವ್ರತಾಧಿಪತಯೇ ನಮಃ [ಸಕಲ ವ್ರತಗಳಿಗೂ ಅಧಿನಾಥನು]
೭೪. ಓಂ ಮಂತ್ರಾಧಿಪತಯೇ ನಮಃ [ಎಲ್ಲ ಮಂತ್ರಗಳಿಗೂ ದೇವತೆಯಂತಿರುವವನು]
೭೫. ಓಂ ಪಿತೄಣಾಂ ಪತಯೇ ನಮಃ [ಪಿತೃದೇವತೆಗಳಿಗೆಲ್ಲಾ ಅಧಿಪತಿಯು]
೭೬. ಓಂ ಪಶೂನಾಂ ಪತಯೇ ನಮಃ [ಅಜ್ಞಾನಿಗಳ ಒಡೆಯನು]
೭೭. ಓಂ ಶೇಷಭೂಷಾಯ ನಮಃ [ಆದಿಶೇಷನನ್ನೇ ಆಭರಣವನ್ನಾಗಿ ಉಳ್ಳವನು]
೭೮. ಓಂ ತುಷ್ಟಾಯ ನಮಃ [ಸಂತುಷ್ಟನಾದವನು]
೭೯. ಓಂ ಪುಷ್ಟಾಯ ನಮಃ [ಸಕಲ ಗುಣಗಳಿಂದಲೂ ಭರಿತನಾದವನು]
೮೦. ಓಂ ವೃಷಭಾಯ ನಮಃ [ಬಸವನ ಆಕಾರದಲ್ಲಿ ತೋರುವವನು]
೮೧. ಓಂ ಪುರಾಣಾಯ ನಮಃ [ಅನಾದಿಪುರುಷನು]
೮೨. ಓಂ ಪತ್ತೀನಾಂಪತಯೇ ನಮಃ [ಸಕಲಸೈನ್ಯಾಧಿಪತಿಯು]
೮೩. ಓಂ ಪ್ರಜಾಪತೀನಾಂಪತಯೇ ನಮಃ [ಕಲ್ಪಭೇದದಿಂದ ಬರುವ ಚತುರ್ಮುಖ ಬ್ರಹ್ಮರಿಗೂ ಯಜಮಾನನೆನಿಸಿದವನು]

ಪರ್ವಾಯ ಪರ್ವಮಧ್ಯಾಯ ಶರ್ವರೀಶವಿಧಾರಿಣೇ ।
ಭವ್ಯಾಯ ಗವ್ಯರೂಪಾಯ ಮಖಾಧ್ಯಕ್ಷಾಯ ಧಾತವೇ ॥೪೭॥

ಭವವೈದ್ಯಾಯ ಘೋರಾಯ ವಾಮದೇವಾಯ ತೇ ನಮಃ ।
ಸದ್ಯೋಜಾತಾಯ ಪೂರ್ಷಾಯ ಈಶಾನಾಯ ನಮೋ ನಮಃ ॥೪೮॥

---

೮೪. ಓಂ ವ್ಯೋಮಕೇಶಾಯ ನಮಃ [ಆಕಾಶವನ್ನೇ ಕೇಶಪಾಶವನ್ನಾಗಿ ಮಾಡಿಕೊಂಡಿರುವವನು]

೮೫. ಓಂ ಸಿದ್ಧಾಯ ನಮಃ [ತಪಸ್ಸಿದ್ಧಿಯನ್ನು ಪಡೆದಿರುವವನು]

೮೬. ಓಂ ಬೃಹತೇ ನಮಃ [ಉಪಾಧಿವಶದಿಂದ ದೊಡ್ಡವನಾಗಿ ಕಾಣುವವನು]

೮೭. ಓಂ ಘನಘೋಷಾಯ ನಮಃ [ಮೇಘಧ್ವನಿಯಂತೆ ತೋರುವವನು]

೮೮. ಓಂ ದೈತ್ಯದಾನವಪೂಜ್ಯಾಯ ನಮಃ [ದೈತ್ಯರಿಂದಲೂ ದಾನವರಿಂದಲೂ ಪೂಜಿತನಾದವನು]

೮೯. ಓಂ ವಾಯವೇ ನಮಃ [ವಾಯುರೂಪಿಯು]

೯೦. ಓಂ ರಕ್ಷಘಾತಿನೇ ನಮಃ [ರಜೋಗುಣವಿಶಿಷ್ಟರನ್ನು ನಾಶಗೊಳಿಸುವವನು]

೯೧. ಓಂ ಯಕ್ಷಾಯ ನಮಃ [ಯಕ್ಷರಂತೆ ತೋರುವವನು]

೯೨. ಓಂ ಭಿಕ್ಷುರೂಪಾಯ ನಮಃ [ಭಿಕ್ಷುಕವೇಷದಲ್ಲಿರುವವನು]

೯೩. ಓಂ ಕಕ್ಷವಾಸಾಯ ನಮಃ [ಪೊದರಿನಲ್ಲಿ ವಾಸಮಾಡುವವನು]

೯೪. ಓಂ ಪಕ್ಷಿವಾಹಪ್ರಪೂಜ್ಯಾಯ ನಮಃ [ಪಕ್ಷಿವಾಹನನಾದ ವಿಷ್ಣುವಿನಿಂದ ಪೂಜಿಸಲ್ಪಡುವವನು]

೯೫. ಓಂ ಗುಹ್ಯಲಿಂಗಾಯ ನಮಃ [ಗೋಪ್ಯವಾದ ಶಿವಲಿಂಗಸ್ವರೂಪಿಯು]

೯೬. ಓಂ ಪರ್ವಾಯ ನಮಃ [ಪರ್ವಕಾಲದಂತೆ ಪವಿತ್ರನು]

೯೭. ಓಂ ಪರ್ವಮಧ್ಯಾಯ ನಮಃ [ಪರ್ವಕಾಲಾಂತರ್ವರ್ತಿಯು]

೯೮. ಓಂ ಶರ್ವರೀಶವಿಧಾರಿಣೇ ನಮಃ [ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನು]

೯೯. ಓಂ ಭವ್ಯಾಯ ನಮಃ [ಕ್ಷೇಮರೂಪದಿಂದಿರುವವನು]

೧೦೦. ಓಂ ಗವ್ಯರೂಪಾಯ ನಮಃ [ಗೋವಿನ ಪವಿತ್ರವಸ್ತುವಿನಂತಿರುವವನು]

೧೦೧. ಓಂ ಮಖಾಧ್ಯಕ್ಷಾಯ ನಮಃ [ಯಾಗಾಧಿಪತಿಯೆನಿಸಿದವನು]

೧೦೨. ಓಂ ಧಾತವೇ ನಮಃ [ಗೈರಿಕಾದಿಧಾತುರೂಪದಿಂದಿರುವವನು]

೧೦೩. ಓಂ ಭವವೈದ್ಯಾಯ ನಮಃ [ಸಂಸಾರವೆಂಬ ವ್ಯಾಧಿಗೆ ವೈದ್ಯನಂತಿರುವವನು]

೧೦೪. ಓಂ ಘೋರಾಯ ನಮಃ [ಭಯಂಕರಸ್ವರೂಪಿಯು]

ಏವಂ ನಾಮಾಷ್ಟಕೇನೇಶಂ ಶತೇನೈವ ಪ್ರಪೂಜಯೇತ್ ।
ಸ್ತುವೀತ್ಥೈವಂ ಮಹಾದೇವಂ ಚೈತ್ರೇ ವೈ ಲಿಂಗರೂಪಿಣಂ ॥೪೯॥

ಸದ್ಯೋಜಾತಾದಿಪಿದ್ಯಾಪ್ರಭವವಿಧಿಕೃತೇ ಶೂಲಿನೇ ಗೋಪ್ತ್ರಿಣೇ ಗೋ
ವೃಷಭಾಂಕಧ್ವಜಿನೇಜಿನಪಾಸಸೇ ವಿಧಿಮಹಾಮುಂಡೋರುಸಪ್ತಸ್ಷಸೇ ।
ಜ್ವಾಲಾಕೂಲವಿಶೋಷಿತಾಖಿಲಮಹಾಕಾಲಾಯ ಫಾಲೋಜ್ವಲ
ನ್ನೀಲಾಲೋಲವಿಷೋರುಕಂಠರಭಸಾ ಪ್ರೂಷಾಯ ತುಭ್ಯಂ ನಮಃ ॥೫೦॥

ಸಾಮಸ್ತೋಮನುತಾಯ ವೇದಕಲಿತೋತ್ಸವಮಾಂತಸಂಚಾರಿಣೇ
ವಾಮಾರ್ಧಾಕೃತಯೇ ಸದಾ ಸುಕೃತಯೇ ಕಾಮಾಂಗನಾಶಾಯ ತೇ ।

---

೧೦೫. ಓಂ ವಾಮದೇವಾಯ ನಮಃ [ದೇವಾಧಿದೇವನು]
೧೦೬. ಓಂ ಸದ್ಯೋಜಾತಾಯ ನಮಃ [ಇಚ್ಛಾಮಾತ್ರದಿಂದ ಆಕಾರವನ್ನು ತಾಳುವವನು]
೧೦೭. ಓಂ ಪುರುಷಾಯ ನಮಃ [ಲೋಕೋತ್ತರವಾದ ಗುಣಗಳುಳ್ಳ ಮನುಷ್ಯನಂತಿರುವವನು]
೧೦೮. ಓಂ ಈಶಾನಾಯ ನಮೋ ನಮಃ [ಲೋಕಾಧಿಪತಿಯೆನಿಸಿರುವವನು]

ಎಂಬ ನೂರೆಂಟು ನಾಮಗಳಿಂದ ಪೂಜೆಮಾಡಬೇಕು. ಚೈತ್ರಮಾಸದಲ್ಲಿ ಲಿಂಗರೂಪಿಯಾದ ಮಹಾದೇವನನ್ನು ಇದೇ ಸ್ತೋತ್ರಮಾಡಬೇಕು.॥೩೧-೩೨-೩೩-೩೪-೩೫-೩೬-೩೭-೩೮-೩೯-೪೦-೪೧-೪೨-೪೩-೪೪-೪೫-೪೬-೪೭-೪೮-೪೯॥

ಸದ್ಯೋಜಾತವೇ ಮೊದಲಾದ ಪಂಚಮುಖಗಳಿಂದಲೂ ವಿದ್ಯೆ (ಜ್ಞಾನ)ಯಿಂದ ಲಭಿಸುವ ಫಲವನ್ನು ಬೋಧಿಸುವವನೂ, ಶೂಲಪಾಣಿಯೂ, ಜಗದ್ರಕ್ಷಕನೂ, ವೃಷಭಧ್ವಜನೂ, ಗಜಚರ್ಮಧಾರಿಯೂ, ಬ್ರಹ್ಮನೇ ಮೊದಲಾದವರ ಮಹಾ ಶಿರಸ್ಸುಗಳನ್ನು ಎದೆಯಲ್ಲಿ ಮಾಲೆಯನ್ನಾಗಿ ಧರಿಸಿರುವವನೂ, ಜ್ವಾಲೆಗಳ ಸಮೂಹ ದಿಂದ ಒಣಗಿಸಲ್ಪಟ್ಟ ಸಮಸ್ತ ಮಹಾಕಾಲವುಳ್ಳವನೂ, ಹಣೆಯಲ್ಲಿ ಉಜ್ವಲಿಸುವ ಅಗ್ನಿಗಣ್ಣುಳ್ಳವನೂ, ಕಂಠದಲ್ಲಿ ಕಾಲಕೂಟ ವಿಷವನ್ನು ಧರಿಸಿರುವವನೂ, ಸಕಲ ಲೋಕಗಳನ್ನೂ ಪುಷ್ಟಿಗೊಳಿಸುವವನೂ ಆದ ನಿನಗೆ ನಮಸ್ಕಾರ. ॥೫೦॥

ಸಾಮವೇದದ ಮಂತ್ರಸಮೂಹದಿಂದ ಸ್ತೋತ್ರಮಾಡಲ್ಪಟ್ಟವನೂ, ವೇದಾಂತಮಾರ್ಗಗಳಲ್ಲಿ ಸಂಚರಿಸುವವನೂ, ಅರ್ಧನಾರೀಶ್ವರದೇಹನೂ, ಸರ್ವದಾ

ವ್ಯೋಮಾಕಾರಶರೀರಧೂಮಪಟಲೀಕೇಶಾಯ ಪಾಶಾವೃತಾ
ಪಾರಾವಾರವಿಕಾರಸಂಸೃತಿಭಯೋತ್ತಾರಾಯ ತುಭ್ಯಂ ನಮಃ ॥೫೧॥

ಭಸ್ಮಾಂಗಾಯ ಭವಾಯ ಭಾವುಕಹೃದೋತ್ತುಂಗಾಯ ಗಂಗಾರಯ
ಸ್ಫಾರಾಘೋರಮಹೋತ್ತಮಾಂಗವಿಲಸಲ್ಲಿಂಗಾಯ ಶಂಗಾಯ ತೇ ।
ಕಾಮಾದ್ಯಂಗವಿಭಂಗಕಾಯ ಸುಮಹಾದಿವ್ಯಾಂಗಸಂಗಸ್ಫುರಜ್ಜ್ವಾಲಾಂ-
ಗಾಯ ಕುರಂಗವಾಲವಿಲಸದ್ಧಸ್ತಾಯ ತುಭ್ಯಂ ನಮಃ ॥೫೨॥

ಹಂಸಾಖ್ಯನಾಗಕೃತಹಂಸಕಪಾದಪದ್ಮ
ದೂರಾದ್ಯದೃಶ್ಯವರಹಂಸರಥೇಡಿತಾಯ ।
ಹಂಸೋರುನೇತ್ರಕಲಿತೋತ್ತಮಘಾಲದೇಶ
ಶಶ್ವಜ್ಜಗದ್ಧಿತಕೃತೇ ಸುರಹಂಸಕಾಯ ॥೫೩॥

---

ಪುಣ್ಯಶಾಲಿಯೂ, ಮನ್ಮಥನ ದೇಹವನ್ನು ನಾಶಗೊಳಿಸಿದವನೂ, ಅಂತರಿಕ್ಷದಾಕಾರದ ದೇಹವುಳ್ಳವನೂ, ದೂಳಿನ ಸಮೂಹದಂತಿರುವ ಕೇಶಪಾಶವುಳ್ಳವನೂ, ಸಂಸಾರ ಬಂಧನರೂಪವಾದ ಅಪಾರ ಪಾಶಗಳಿಂದ ಕೂಡಿರುವವನೂ ಈ ಸಂಸಾರಬಂಧನದಿಂದ ಉದ್ಧಾರ ಮಾಡುವವನೂ ಆದ ಶಂಕರನೇ, ನಿನಗೆ ನಮಸ್ಕಾರಮಾಡುವೆನು. ॥೫೧॥

ಭಸ್ಮಲೇಪಿತದೇಹವುಳ್ಳವನೂ, ಜಗದುತ್ಪತ್ತಿಕಾರಣನೂ, ಮಂಗಳಹೃದಯ ರಲ್ಲಿ ಶ್ರೇಷ್ಠನಾದವನೂ, ಗಂಗಾನದಿಯು ವಿಸ್ತಾರವಾಗಿಯೂ, ಗಂಭೀರವಾಗಿಯೂ ಇರುವ ಪ್ರವಾಹವನ್ನು ತಲೆಯಲ್ಲಿ ಧರಿಸಿ ಶಿವಲಿಂಗಸ್ವರೂಪನಾಗಿರುವವನೂ, ಸುಖ ಕರನೂ, ಮನ್ಮಥನೇ ಮೊದಲಾದವರ ದೇಹವನ್ನು ಧ್ವಂಸಮಾಡಿದವನೂ, ದೊಡ್ಡ ದಿವ್ಯದೇಹಸಂಬಂಧದಿಂದ ಶೋಭಿಸುವ ಜ್ವಾಲಾದೇಹವುಳ್ಳವನೂ, ಜಿಂಕೆಯ ಬಾಲ ದಿಂದ ಶೋಭಿಸುವ ಹಸ್ತವುಳ್ಳವನೂ ಆದ ನಿನಗೆ ನಮಸ್ಕಾರ. ॥೫೨॥

ಹಂಸನಾಮಕನಾದ ನಾಗದೇವತೆಯಿಂದ ಪೂಜಿಸಲ್ಪಟ್ಟ 'ಸೋಽಹಂ' ಎಂಬ ಜ್ಞಾನರೂಪದಿಂದಿರುವ ಪಾದಪದ್ಮವುಳ್ಳವನೇ, ಅನೇಕ ಪ್ರಯತ್ನದಿಂದಲೂ ದರ್ಶನ ವನ್ನು ಪಡೆಯದ ಹಂಸವಾಹನನಾದ ಬ್ರಹ್ಮನಿಂದ ಪೂಜಿತನಾದವನೇ, ಸೂರ್ಯನನ್ನೇ ಒಂದು ನೇತ್ರವನ್ನಾಗಿ ಮಾಡಿಕೊಂಡು ವಿರಾಜಿಸುವ ಮುಖಪ್ರದೇಶವುಳ್ಳವನೇ, ಲೋಕೋಪಕಾರದೃಷ್ಟಿಯಿಂದ ಸರ್ವದಾ ವರ್ತಿಸುತ್ತಿರುವ ಪರಮಪುರುಷನೇ, ದೇವತೆಗಳಿಗೆ ಹಂಸಪಕ್ಷಿಯಂತೆ ಆಹ್ಲಾದಕನಾಗಿರುವವನೇ ನಿನಗೆ ನಮಸ್ಕಾರ. ॥೫೩॥

ಈಶಾಯ ಶಾಶ್ವತಜಗತ್ಸ್ಥಿತಿ ನಾಶಕೋಶ
ವ್ಯೋಮಾಂಬಕೇ ಶಶಿಧಾಮವಿಭಾಸಿಧಾಮ್ನೇ ।
ಭೂಮ್ನೇ ವಿಧೂತತಮಸೇ ರಭಸೇ ವಿಶೋಕೆ
ಸೀಮ್ನೇ ಭವಾಯ ವಿಭವಾಯ ನಮೋ ನಮಸ್ತೇ ॥೫೪॥

॥ ಸೂತ ಉವಾಚ ॥

ಸ್ತುತ್ವೈವಂ ದೇವಮೀಶಾನಂ ಪುನಃ ಸಂಪೂಜ್ಯ ಶಂಕರಂ ।
ಈಶಾನಂ ಪುರುಷಂ ದೇವಂ ವಾಮದೇವಮಘೋರಕಂ ॥೫೫॥

ಸದ್ಯೋಜಾತಂ ಚ ದೇವೇಶಿ ನಾಮಭಿಃ ಸಂಸ್ತುವೀತ ಚ ।
ತತೋ ನೀರಾಜನಂ ದದ್ಯಾದ್ವಾದಿತ್ರಾಣಾಂ ನಿನಾದತಃ ॥೫೬॥

ಶಂಖಕಾಹಲನಿರ್ಘೋಷೈರ್ಭೇರೀಝಂಕಾರಮರ್ದಲೈಃ ।
ವೇಣುವೀಣಾಮೃದಂಗೈಶ್ಚ ಜಯಶಬ್ದೈಃ ಸುಮಂಗಲೈಃ ॥೫೭॥

ಪೂಜಾಂ ಸಮಾಪ್ಯ ನಿಯತಃ ಕರತಾಲಪುನರ್ತನೈಃ ।
ಪ್ರಸಾದಯೇನ್ಮಹಾದೇವಂ ಪೂಜಾಂತೇ ಶಾಂಭವೈಃ ಸಹ ॥೫೮॥

---

ಜಗದ್ರಕ್ಷಕನೂ, ಶಾಶ್ವತನೂ, ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಆಶ್ರಯನೂ, ವ್ಯೋಮಕೇಶನೂ, ಚಂದ್ರಕಾಂತಿಯಿಂದ ಶೋಭಿಸುವ ತೇಜಸ್ಸುಳ್ಳವನೂ, ವಿಶೇಷವಾಗಿ ಪಾಪಗಳನ್ನು ತೊಳೆದುಕೊಂಡವನೂ, ವಿಶ್ವವ್ಯಾಪಿಯೂ, ಶೋಕಗಳ ಎಲ್ಲೆಗೆ ಸಿಲುಕದವನೂ, ಭವಸಂಜ್ಞಕನೂ, ಐಶ್ವರ್ಯಸ್ವರೂಪಿಯೂ, ಆದ ನಿನಗೆ ನಮಸ್ಕಾರಮಾಡುತ್ತೇನೆ. ॥೫೪॥

ದೇವಿ! ಈರೀತಿ ಈಶ್ವರದೇವನನ್ನು ಸ್ತೋತ್ರಮಾಡಿ, ಪುನಃ, ಮಂಗಳಕರನನ್ನು ಈಶ, ಪುರುಷ, ದೇವ, ವಾಮದೇವ, ಅಘೋರ, ಸದ್ಯೋಜಾತ ಈ ನಾಮಗಳಿಂದ ಸ್ತೋತ್ರಮಾಡಿ ವಾದ್ಯಧ್ವನಿಗಳೊಡನೆ ನೀರಾಜನವನ್ನು ಮಾಡಬೇಕು. ॥೫೫-೫೬॥

ಶಂಖ, ಕೊಂಬು, ನಗಾರಿ, ಝಲ್ಲರಿ, ಮದ್ದಲೆ, ಕೊಳಲು, ವೀಣೆ, ಮೃದಂಗ ಮುಂತಾದ ವಾದ್ಯಧ್ವನಿಗಳಿಂದಲೂ, ಮಂಗಳಕರವಾದ ಜಯಶಬ್ದಗಳಿಂದಲೂ, ಪೂಜೆಯನ್ನು ಮುಗಿಸಿ ನಿಯಮಬದ್ಧನಾಗಿ ಕೈತಾಳಹಾಕಿಕೊಂಡು ನಾಟ್ಯವಾಡುತ್ತಾ

ನಿವೇದಿತೈಶ್ಚ ತಾಂಬೂಲೈಃ ಪೂಜಯೇದ್ದಕ್ಷಿಣಾದಿಭಿಃ ।
ಏಕವಾರಂ ತ್ರಿವಾರಂ ವಾ ಪೂಜಯೇದ್ಗಿರಿಜಾಪತಿಂ ॥೫೯॥

ಛತ್ರೈಶ್ಚ ಚಾಮರೈರ್ದೇವಿ ವ್ಯಜನಾದರ್ಶಕೈರಪಿ ।
ಚೈತ್ರೇ ತ್ರಿನೇತ್ರಪೂಜಾತಃ ಕ್ಷಿಪ್ರಂ ನಶ್ಯತಿ ಪಾತಕಂ ॥೬೦॥

ಚಿತ್ರಾಯಾಮಥ ಪೌರ್ಣಮ್ಯಾಂ ಹೋಮಂ ಕುರ್ಯಾಚ್ಚ ಶಾಂಭವೈಃ ।
ದದ್ಯಾದ್ಗೋಮಿಥುನಂ ತತ್ರ ಮಾಸಿಮಾಸಿ ವಿಶೇಷತಃ ॥೬೧॥

ಪ್ರಸಂಗಾಚ್ಚೈವ ಸಂಪೂಜ್ಯೋ ಭಕ್ತಿಹೀನೈರಪಿ ದ್ವಿಜೈಃ ।
ಭಾವಾನುರೂಪಫಲದೋ ಭಗವಾನಗಜಾಪತಿಃ ॥೬೨॥

ಉಚ್ಛಿಷ್ಟಃ ಪೂಜಯನ್ಯಾತಿ ಪೈಶಾಚಂ ತು ದ್ವಿಜಾಧಮಃ ।
ಸಂಕ್ರುದ್ಧೋ ರಕ್ಷಸಾಂ ಯೋನಿಮಭಕ್ಷಃ ಕ್ಷಯರೋಗವಾನ್ ॥೬೩॥

---

ಪೂಜೆಯು ಮುಗಿದ ಮೇಲೆ ಶೈವರೊಡನೆ ಮಹಾದೇವನನ್ನು ಸಂತೋಷಪಡಿಸಬೇಕು. ॥೫೭-೫೮॥

ತಾಂಬೂಲ, ದಕ್ಷಿಣೆ ಮುಂತಾದವುಗಳನ್ನು ನಿವೇದನಮಾಡಿ ಪೂಜೆಮಾಡಬೇಕು. ಒಂದು ಅಥವಾ ಮೂರುಬಾರಿ ಗಿರಿಜಾರಮಣನನ್ನು ಪೂಜಿಸಬೇಕು. ಛತ್ರ, ಚಾಮರ, ಬೀಸಣಿಗೆ, ಕನ್ನಡಿ ಮುಂತಾದವುಗಳಿಂದ ಚೈತ್ರಮಾಸದಲ್ಲಿ ಮಹೇಶನಿಗೆ ಪೂಜೆಮಾಡುವುದರಿಂದ ಪಾಪವು ಜಾಗ್ರತೆ ನಾಶವಾಗುವುದು. ॥೫೯-೬೦॥

ಶಿವಭಕ್ತಿಯಲ್ಲಿ ನಿರತರಾದವರು ಚಿತ್ರಾಪೂರ್ಣಿಮೆಯ ದಿನ ಶಿವಪ್ರೀತಿಕರವಾಗಿ ಹೋಮಮಾಡಬೇಕು. ತಿಂಗಳು ತಿಂಗಳಲ್ಲಿಯೂ ವಿಶೇಷವಾಗಿ ಗೋಮಿಥುನವನ್ನು ದಾನಮಾಡಬೇಕು. ವಿಶೇಷ ಭಕ್ತಿಹೀನರಾದ ಬ್ರಾಹ್ಮಣರೂ ಪ್ರಸಂಗವೊದಗಿದಾಗ ಶಿವನನ್ನು ಪೂಜೆಮಾಡಬೇಕು. ಏಕೆಂದರೆ ಭಗವಂತನಾದ ಪಾರ್ವತೀರಮಣನು ಭಕ್ತರ ಭಕ್ತಿಗನುರೂಪವಾಗಿ ಫಲವನ್ನು ಕರುಣಿಸುವನು. ॥೬೧-೬೨॥

ಶಿವನನ್ನು ಪೂಜಿಸುತ್ತಾ ಉಚ್ಛಿಷ್ಟವನ್ನು ತಿನ್ನುವ ಬ್ರಾಹ್ಮಣಾಧಮನು ಪೈಶಾಚಜನ್ಮವನ್ನು ತಾಳುವನು. ಹೆಚ್ಚು ಕೋಪವುಳ್ಳವನು ರಾಕ್ಷಸಜನ್ಮವನ್ನೂ ಏನೂ ಭಕ್ಷಣೆ ಮಾಡದವನು ಕ್ಷಯರೋಗವನ್ನೂ, ಗಾನಶೀಲನೂ ನಾಟ್ಯಸ್ವಭಾವವುಳ್ಳವನೂ ಗಾಂಧರ್ವಪದವಿಯನ್ನು ಪಡೆಯುವರು. ತನ್ನ ಧರ್ಮವನ್ನು ಆಡಂಬರ

ಗಾನಶೀಲಶ್ಚ ಗಾಂಧರ್ವಂ ನೃತ್ಯಶೀಲಶ್ಚ ಪೂರುಷಃ ।
ಸ್ವಧರ್ಮಖ್ಯಾಪಕೋ ಯಸ್ತು ಕುಹಕಃ ಪ್ರೋಚ್ಯತೇ ದ್ವಿಜಃ ॥೬೪॥

ತಸ್ಮಾಚ್ಛೀಲವತಾ ಭಾವ್ಯಮರ್ಚನೇ ಚ ವಿಶೇಷತಃ ।
ವಿಶೋಷಯೇತ್ತನುಂ ದೇವಿ ನಕ್ತಾಶೀ ಕ್ಷಾರವರ್ಜಿತಃ ॥೬೫॥

ಏವಂ ಚೈತ್ರಾದಿಮಾಸಸ್ಯ ಪೂಜನಂತೇ ಪ್ರಕೀರ್ತಿತಂ ।
ಯತ್ಕೃತ್ವಾ ಮನುಜಃ ಸದ್ಯೋ ಲಭೇದ್ರುದ್ರಗಣತ್ವತಾಂ ॥೬೬॥

ಪಿತಾಮಹೈಃ ಸಹೈವಾಯಂ ನರಕಸ್ಥೈರಪಿ ದ್ವಿಜಃ ।
ಯಾತಿ ಶಂಭೋರ್ವರಸ್ಥಾನಂ ವಿಮಾನೈಃ ಸಾರ್ವಕಾಮಿಕೈಃ ॥೬೭॥

॥ ಸ್ಕಂದ ಉವಾಚ ॥

ಚೈತ್ರೇ ತ್ರಿನೇತ್ರಪದಪಂಕಜಮಿತ್ರಭಾವಾ
ಚ್ಚಿತ್ರೈಶ್ಚ ಪಾತಕವರೈಃ ಸ ಹಿ ಮುಕ್ತ ಏವ ।

---

ಪಡಿಸಿಕೊಳ್ಳುವ ಬ್ರಾಹ್ಮಣನು ಕುಹಕನೆಂದು ಹೇಳಲ್ಪಡುವನು. ಆದ್ದರಿಂದಲೇ ಶಿವನನ್ನು ಪೂಜೆಮಾಡಬೇಕಾದರೆ ಭಕ್ತನು ಒಳ್ಳೆಯ ನಡೆನುಡಿಗಳನ್ನು ಪಡೆದಿರ ಬೇಕು. ಮತ್ತು ರಾತ್ರಿವೇಳೆಗಳಲ್ಲಿ ಮಾತ್ರ ಉಪ್ಪಿಲ್ಲದೇ ಭೋಜನಮಾಡುತ್ತಾ ತನ್ನ ಶರೀರವನ್ನು ದೇವರಿಗಾಗಿ ದಂಡಿಸಬೇಕು. ಒಟ್ಟಿನಲ್ಲಿ ಸದ್ಭಾವನೆಯೇ ಶಿವಾರ್ಚನೆಗೆ ಮುಖ್ಯಸಾಧನೆ. ॥೬೩-೬೪-೬೫॥

ದೇವಿಯೇ, ನಾನು ಇಲ್ಲಿನವರೆಗೆ ಚೈತ್ರಮಾಸದಲ್ಲಿ ನಡೆಸುವ ಶಿವಪೂಜಾ ವಿಧಾನವನ್ನು ನಿನಗೆ ಹೇಳಿರುವೆನು. ಇದನ್ನು ಮಾಡಿ ಮನುಜನು ಕೂಡಲೇ ರುದ್ರಗಣತ್ವವನ್ನು ಹೊಂದುತ್ತಾನೆ. ಅಲ್ಲದೆ ಇವನು ನರಕದಲ್ಲಿರುವ ತನ್ನ ತಾತಂದಿ ರೊಡನೆ ಸರ್ವತ್ರಗಾಮಿಗಳಾದ ವಿಮಾನಗಳಲ್ಲಿ ಕುಳಿತು ಶಂಕರನ ಶ್ರೇಷ್ಠವಾದ ಕೈಲಾಸಸ್ಥಾನವನ್ನು ಪಡೆಯುವನು. ॥೬೬-೬೭॥

ಚೈತ್ರಮಾಸದಲ್ಲಿ ಮಹೇಶನ ಪಾದಕಮಲವನ್ನು ಮೈತ್ರಿಯಿಂದ ಪೂಜಿಸು ವವನು ಮಹಾ ಮಹಾ ಪಾತಕಗಳಿಂದಲೂ ಮುಕ್ತನಾಗುವನು. ಅವನು ಭೂಮಿಯ ಲ್ಲಿದ್ದುಗೊಂಡೇ ಪುತ್ರ, ಮಿತ್ರ, ಒಳ್ಳೆಯ ಪತ್ನಿ ಇವರಿಂದ ಯುಕ್ತನಾಗಿ, ಸತ್ರ ಮತ್ತು

ಸತ್ರಾತಿರಾತ್ರಶತಕಾದಪಿ ಪುಣ್ಯಭಾಕ್ಸ್ಯಾತ್
ಪುತ್ರಾದಿಮಿತ್ರಸುಕಲತ್ರಯುತೋ ಭುವಿಸ್ಥಃ ॥೬೮॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಚೈತ್ರಮಾಸಪೂಜಾವಿಸ್ತಾರವರ್ಣನಂ
ನಾಮ ಚತುರ್ದಶೋಽಧ್ಯಾಯಃ

---

ಅತಿರಾತ್ರ ಮುಂತಾದ ನೂರಾರು ಮಹಾಯಾಗಗಳಿಗಿಂತಲೂ ಹೆಚ್ಚು ಪುಣ್ಯಭಾಗಿಯಾಗುವನೆಂದು ಶಿವನು ಪಾರ್ವತಿಗೆ ಹೇಳಿದುದನ್ನು ಸ್ಕಂದನು ಜೈಗೀಷವ್ಯನಿಗೆ ತಿಳಿಸಿದನು. ॥೬೮॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಚೈತ್ರಮಾಸದಲ್ಲಿ
ಮಾಡಬೇಕಾದ ಪೂಜಾವಿಸ್ತಾರವರ್ಣನೆಯೆಂಬ ಹದಿನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಪಂಚದಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ವೈಶಾಖಾರ್ಚನಜಂ ದೇವಿ ವಿಧಿಂ ವಕ್ಷ್ಯಾಮಿ ತೇ ಶೃಣು ।
ಸರಿತ್ಸರಸ್ತಟಾಕೇಷು ದೇವಖಾತೋದಕೂಪಕೇ ॥೧॥

ಸ್ನಾಯಾನ್ನಿತ್ಯಂ ಚ ತನ್ಮಾಸಿ ಶಿವಂ ಹೃದಿ ಸಮರ್ಚ್ಯ ಚ ।
ಧೌತವಸ್ತ್ರಧರಃ ಶಾಂತೋ ಆಚಾಂತಃ ಕೃತನೈತ್ಯಕಃ ॥೨॥

ಪೂಜಾಸ್ಥಾನಂ ಶುಭಂ ದೇಶಂ ಗೋಮಯೇನೋಪಲಿಪ್ಯ ಚ ।
ತ್ರಿಶೂಲವಜ್ರಪದ್ಮಾದಿಸ್ವಸ್ತಿಕಾದ್ಯೈರಲಂಕೃತಂ ॥೩॥

---

## ಹದಿನೈದನೆಯ ಅಧ್ಯಾಯ

ದೇವಿ, ವೈಶಾಖಮಾಸದ ಪೂಜಾವಿಧಿಯನ್ನು ಹೇಳುತ್ತೇನೆ ಕೇಳು, ವೈಶಾಖಮಾಸ ಪೂರ್ತಿಯಾಗಿ ನದಿ, ಸರೋವರ, ಕೆರೆ, ಅಥವಾ ದೇವಸ್ಥಾನದ ಬಾವಿಯ ನೀರಿನಲ್ಲಿ ನಿತ್ಯವೂ ಹೃದಯದಲ್ಲಿ ಶಿವನನ್ನು ಧ್ಯಾನಿಸುತ್ತಾ ಸ್ನಾನ ಮಾಡಬೇಕು. ಅನಂತರ ಒಗೆದ ಬಟ್ಟೆಗಳನ್ನುಟ್ಟು, ಶಾಂತನಾಗಿ ಆಚಮನಮಾಡಿ, ನಿತ್ಯಕರ್ಮಗಳನ್ನು ಮುಗಿಸಿ ಪೂಜೆಮಾಡುವ ಮಂಗಳ ಪ್ರದೇಶವನ್ನು ಸಗಣಿಯಿಂದ ಸಾರಿಸಿ, ತ್ರಿಶೂಲ, ವಜ್ರ, ಪದ್ಮ ಮೊದಲಾದವುಗಳಿಂದಲೂ ಸ್ವಸ್ತಿಕ ಚಿಹ್ನೆಗಳಿಂದಲೂ ಅಲಂಕರಿಸಿ, ರಂಗವಲ್ಲಿಗಳನ್ನಿಟ್ಟು ಅಲ್ಲಿ ಮಂಟಪವನ್ನು ಸ್ಥಾಪಿಸಿ ಆದಕ್ಕೆ ತೋರಣ, ಮೇಲ್ಕಟ್ಟು, ಹೂಮಾಲೆಗಳನ್ನೂ, ಬಾಳೆಯ ಕಂಬಗಳನ್ನೂ

ರಂಗವಲ್ಲೀಕೃತಾನೇಕವಿಮಂಟಪಂ ತೋರಣಾನ್ವಿತಂ ।
ವಿತಾನಪುಷ್ಪಮಾಲಾಭಿಃ ಶೋಭಿತಂ ಕದಲೀದಲ್ಯೈಃ ॥೪॥

ತನ್ಮಧ್ಯೇ ಚ ಮಹಾಪೀಠೇ ಸ್ಥಾಪಯೇಲ್ಲಿಂಗಮುತ್ತಮಂ ।
ವಜ್ರಜಂ ಹೇಮಜಂ ವಾಪಿ ಮೃನ್ಮಯಂ ವಾ ಮಹೇಶ್ವರಿ ॥೫॥

ತದಗ್ರೇ ಕುಂಭಮವ್ಯಗ್ರಃ ಸ್ಥಾಪಯೇತ್ಪಲ್ಲವೈರ್ಯುತಂ ।
ನದೀನದಾಹೃತೈಸ್ತೋಯೈಃ ಪೂರಿತಂ ಶೋಧಿತೈಃ ಶಿವೇ ॥೬॥

ಸಾಮಾನ್ಯಾರ್ಘ್ಯವಿಶೇಷಾರ್ಘ್ಯೌ ದೇವಾಗ್ರೇ ಸ್ಥಾಪಯೇತ್ತತಃ ।
ದರ್ಭದೂರ್ವಾಗ್ರಪುಷ್ಪಾಢ್ಯೌ ಕಲ್ಪನೀಯೌ ವಿಶೇಷತಃ ॥೭॥

ಪಂಚಗವ್ಯಕಪಾತ್ರಂ ಚ ಪೂರಯೇತ್ಪಂಚಗವ್ಯಕೈಃ ।
ತತ್ತನ್ಮಂತ್ರೈರ್ವಿಲೋಲಯಿತ್ವಾ ಗಂಧಪುಷ್ಪಾದ್ಯಲಂಕೃತಂ ॥೮॥

ತತಃ ಪಂಚಾಮೃತಂ ಶುದ್ಧಂ ಗವ್ಯಮೇವ ಪ್ರಸಾಧಯೇತ್ ।
ಫಲಾನಾಂ ಚ ರಸಂ ದೇವಿ ಗಂಧರತ್ನೋದಕಂ ತತಃ ॥೯॥

---

ಕಟ್ಟಿ ಅಲಂಕಾರಮಾಡಿ ಆ ಮಂಟಪದ ಮಧ್ಯದಲ್ಲಿ ವಜ್ರ, ಚಿನ್ನ ಅಥವಾ ಮಣ್ಣಿನಿಂದ ಮಾಡಿದ ಉತ್ತಮವಾದ ಶಿವಲಿಂಗವನ್ನು ದೊಡ್ಡಪೀಠದಲ್ಲಿ ಸ್ಥಾಪಿಸಬೇಕು. ||೧-೨-೩-೪-೫||

ದೇವಿಯೇ, ಶಿವಲಿಂಗದ ಮುಂಭಾಗದಲ್ಲಿ ಪಲ್ಲವಗಳಿಂದ ಯುಕ್ತವಾಗಿ ಶೋಧಿಸಲ್ಪಟ್ಟ ನದಿ, ನದ ಮುಂತಾದವುಗಳಿಂದ ತರಲ್ಪಟ್ಟ ಪವಿತ್ರಜಲಪೂರ್ಣವಾಗಿರುವ ಕುಂಭವನ್ನು ಸ್ಥಿರವಾಗಿರಿಸಬೇಕು. ಅನಂತರ ಮಹಾದೇವನ ಮುಂದುಗಡೆ ಸಾಮಾನ್ಯಾರ್ಘ್ಯ ವಿಶೇಷಾರ್ಘ್ಯಗಳನ್ನು ಇರಿಸಬೇಕು. ಆ ಅರ್ಘ್ಯಪಾತ್ರೆಗಳು, ದರ್ಭೆ, ಗರಿಕೆ ಇವುಗಳ ತುದಿಗಳಿಂದಲೂ ಹೂಗಳಿಂದಲೂ ಯುಕ್ತವಾಗಿರಬೇಕು. ಪಂಚಗವ್ಯದ ಪಾತ್ರೆಯನ್ನು ಆಯಾ ಮಂತ್ರಗಳಿಂದ ಬೆರೆಸಿ ಗಂಧಪುಷ್ಪಾದಿಗಳಿಂದ ಲಂಕೃತವಾದ ಪಂಚಗವ್ಯವಸ್ತುಗಳಿಂದ ಪೂರ್ಣಗೊಳಿಸಬೇಕು. ||೬-೭-೮||

ಅನಂತರ ಹಸುವಿನ ಶುದ್ಧಪಂಚಾಮೃತವನ್ನೂ ಹಣ್ಣುಗಳ ರಸ, ಗಂಧೋದಕ, ರತ್ನೋದಕ ಎಳ್ಳುಮಿಶ್ರವಾದ ಬಿಳಿಯ ಅಕ್ಷತೆ ಮುಂತಾದವುಗಳನ್ನು ಸಿದ್ಧಪಡಿಸಿಟ್ಟುಕೊಳ್ಳಬೇಕು. ಹಾಗೆಯೇ ಒಳ್ಳೆಯ ನಕ್ಷತ್ರ, ಚಂದ್ರತಾರಾಬಲಯುಕ್ತವಾದ

ಅಕ್ಷತಾ ಧವಲಾಸ್ತತ್ರ ಸಾಧಯೇತ್ತಿಲಮಿಶ್ರಿತಾಃ ।
ಸುದಿನೇ ಶುಭನಕ್ಷತ್ರೇ ಚಂದ್ರತಾರಾಬಲಾನ್ವಿತೇ ॥೧೦॥

ಗಂಧಪುಷ್ಪಫಲೋಪೇತಂ ಧೂಪದೀಪೈರಲಂಕೃತಂ ।
ಪೂಜಾಸ್ಥಾನಂ ಸಮಾವಿಶ್ಯ ಸಂಸ್ಥಿತಃ ಪ್ರಾಙ್ಮುಖಸ್ತದಾ ॥೧೧॥

ಕುಶಚೈಲಾಜಿನೇ ವಾಪಿ ಶಾಂಭವೈಃ ಸಹ ಸುವ್ರತಃ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮನೋದ್ಧೂಲಯೇತ್ತನುಂ ॥೧೨॥

ತ್ರಿಯಾಯುಷತ್ರಿಪುಂಡ್ರಾಂಕೋ ದಿವ್ಯರುದ್ರಾಕ್ಷಭೂಷಣಃ ।
ಶಿವಾಭಿಷೇಕೇ ವರಯೇತ್ಸಂಕಲ್ಪ್ಯೈವ ಚ ತಾನ್ದ್ವಿಜಾನ್ ॥೧೩॥

ಭಸ್ಮರುದ್ರಾಕ್ಷಸಂಪನ್ನಾಂಸ್ತ್ರಿಪುಂಡ್ರಪರಿಮಂಡಿತಾನ್ ।
ನಿರ್ಮಾಲ್ಯಮಪನೋದ್ಯೈವಂ ಶಿವಂ ಪರಮಕಾರಣಂ ॥೧೪॥

ಮಂತ್ರಂ ಪಂಚಾಕ್ಷರಂ ಧೀಮಾನ್ಜಪೇಚ್ಛತಸಹಸ್ರಕಂ ।
ಐಶಾನ್ಯಾಂ ಚಂಡಮಾರಾಧ್ಯ ನಿರ್ಮಾಲ್ಯಂ ತತ್ರ ದಾಪಯೇತ್ ॥೧೫॥

---

ಸುದಿನದಲ್ಲಿ ಗಂಧ, ಪುಷ್ಪ, ಹಣ್ಣುಗಳಿಂದ ಕೂಡಿ ಧೂಪದೀಪಗಳಿಂದಲಂಕೃತವಾಗಿರುವ ಪೂಜಾಸ್ಥಾನವನ್ನು ಸೇರಿ, ಪೂರ್ವಾಭಿಮುಖವಾಗಿ ದರ್ಭೆ ಅಥವಾ ಕೃಷ್ಣಾಜಿನದ ಆಸನದಲ್ಲಿ ನಿಯಮಯುಕ್ತನಾಗಿ ಶೈವರೊಡನೆ ಕುಳಿತುಕೊಂಡು "ಅಗ್ನಿರಿತಿಭಸ್ಮ" ಮುಂತಾದ ಮಂತ್ರಗಳಿಂದ ದೇಹಕ್ಕೆ ಭಸ್ಮವನ್ನು ಬಳಿದುಕೊಳ್ಳಬೇಕು. ॥೯-೧೦-೧೧-೧೨॥

ತ್ರಿಯಾಯುಷ ಮಂತ್ರದಿಂದ ಭಸ್ಮತ್ರಿಪುಂಡ್ರವನ್ನು ಧರಿಸಿ, ದಿವ್ಯವಾದ ರುದ್ರಾಕ್ಷಗಳನ್ನಲಂಕರಿಸಿಕೊಂಡು, ಭಸ್ಮರುದ್ರಾಕ್ಷಧಾರಿಗಳಾಗಿರುವ ಶೈವ ಬ್ರಾಹ್ಮಣರನ್ನು ಶಿವನಿಗೆ ಅಭಿಷೇಕಮಾಡುವುದಕ್ಕೋಸ್ಕರ ವರಣಮಾಡಬೇಕು. ಹೀಗೆ ಮಾಡಿದ ಮೇಲೆ ನಿರ್ಮಾಲ್ಯವನ್ನು ತೆಗೆದು ಪರಮಕಾರಣಭೂತನಾದ ಶಿವನ ಪಂಚಾಕ್ಷರಮಂತ್ರವನ್ನು ಹತ್ತುಸಾವಿರ ಬಾರಿ ಜಪಮಾಡಬೇಕು. ॥೧೩-೧೪॥

ಈಶಾನ್ಯದಿಕ್ಕಿನಲ್ಲಿ ಚಂಡೀಶ್ವರನನ್ನು ಪೂಜಿಸಿ, ಅಲ್ಲಿ ಶಿವನಿರ್ಮಾಲ್ಯವನ್ನು ಇಡಿಸಬೇಕು. ಅನಂತರ ಶಿವಪೀಠದಲ್ಲಿ ಆಧಾರಶಕ್ತ್ಯಾದಿಮೂರ್ತಿಗಳನ್ನು ಕರ್ಮಾಂಗವಾಗಿ ಆವಾಹಿಸಿ ಪೂಜಿಸಬೇಕು. ಆಧಾರಶಕ್ತಿಯನ್ನೂ, ಅಲ್ಲಿಯೇ ಇರುವ ಶ್ಯಾಮಾ

ಕಲ್ಪಯೇದಾಸನಂ ಪಶ್ಚಾದಾಧಾರಾದಿ ಯಥಾಕ್ರಮಂ ।
ಆಧಾರಶಕ್ತಿಂ ತತ್ರತ್ಯಾಂ ಶ್ಯಾಮಾಂ ಸಂಪೂಜ್ಯ ದೇಶಿಕಃ ॥೧೬॥

ಅನಂತಂ ಧವಲಂ ನಾಗಮಾಸನಾಧಃ ಪ್ರಪೂಜಯೇತ್ ।
ಭೂಭೂತಶುದ್ಧಿಂ ಕೃತ್ವೈವ ಶಂಖಂ ತತ್ರಪ್ರಸಾದಯೇತ್ ॥೧೭॥

ನ ಭೂಮಿಲಗ್ನಂ ಪಾತ್ರಸ್ಥಂ ಪುಣ್ಯಾಂಬುಪರಿಪೂರಿತಂ ।
ಧರ್ಮಂ ಜ್ಞಾನಂ ಚ ವೈರಾಗ್ಯಂ ಅಧರ್ಮಾದೀಂಸ್ತತೋ ಯಜೇತ್ ॥೧೮॥

ತಸ್ಯೋರ್ಧ್ವಛದನಂ ಪದ್ಮಮಾಸನಂ ಪರಿಕಲ್ಪಯೇತ್ ।
ಅಷ್ಟಪತ್ರಾಣಿ ತಸ್ಯಾಹುರಣಿಮಾದಿಗುಣಾಷ್ಟಕಂ ॥೧೯॥

ಕೇಸರಾಣಿ ಚ ದಿವ್ಯಾನಿ ರುದ್ರವಾಮಾದಿಶಕ್ತಿಭಿಃ ।
ಬೀಜಾದಿಶಕ್ತಿಪರ್ಯಂತಮಾಸನೋಪರಿ ಪೂಜಯೇತ್ ॥೨೦॥

ಆವಾಹನಂ ಸ್ಥಾಪನಂ ಚ ಸಂನಿರೋಧಂ ನಿರೀಕ್ಷಣಂ ।
ಪಾದ್ಯಮಾಚಮನಂ ಚಾರ್ಘ್ಯಂ ಗಂಧಪುಷ್ಪಮನಂತರಂ ॥೨೧॥

---

ದೇವಿಯನ್ನೂ ಪೂಜಿಸಿ, ಪೂಜಕನು ತನ್ನ ಆಸನದ ಕೆಳಭಾಗದಲ್ಲಿ ಶುಭ್ರವರ್ಣದ ಅನಂತನನ್ನು ಆರಾಧಿಸಬೇಕು. ಭೂಶುದ್ಧಿಯನ್ನೂ, ಭೂತಶುದ್ಧಿಯನ್ನು ಮಾಡಿ, ಅನಂತರ ಅಭಿಷೇಕಶಂಖವನ್ನು ಅರ್ಚಿಸಬೇಕು. ॥೧೫-೧೬-೧೭॥

ಪುಣ್ಯೋದಕಗಳಿಂದ ಪೂರ್ಣವಾಗಿ ಅಭಿಷೇಕಕ್ಕಾಗಿ ತಂದಿರುವ ಜಪ ಪಾತ್ರೆಯನ್ನು ಯಾವಾಗಲೂ ನೆಲದಮೇಲೆ ಇರಿಸಬಾರದು. ಯಾವುದಾದರೂ ಪೀಠಗಳ ಮೇಲೆಯೇ ಸ್ಥಾಪಿಸಬೇಕು. ಧರ್ಮ, ಜ್ಞಾನ, ವೈರಾಗ್ಯ, ಅಧರ್ಮ ಮುಂತಾದವುಗಳನ್ನು ಅನಂತರ ಪೀಠದಲ್ಲಿ ಆವಾಹಿಸಬೇಕು. ಅದರ ಮೇಲೆ ಎಸಳು ಎಸಳಾಗಿ ಅರಳಿರುವ ಕಮಲವನ್ನು ಶಿವನಿಗೆ ಆಸನವನ್ನಾಗಿ ಮಾಡಬೇಕು. ಆ ಕಮಲವು ಅಣಿಮಾದಿ ಎಂಟು ಶಕ್ತಿಗಳ ಗುಣರೂಪವಾಗಿದ್ದು ಎಂಟು ದಳಗಳುಳ್ಳದ್ದೆಂದು ಹೇಳುವರು. ರುದ್ರ, ವಾಮ ಮುಂತಾದ ಶಕ್ತಿಗಳಿಂದ ದಿವ್ಯ ಕೇಸರಗಳನ್ನೂ ಬೀಜಾದಿಯಾಗಿ ಶಕ್ತಿಯವರೆಗೂ ಇರುವ ಆಸನಾಭಿಮಾನದೇವತೆಗಳನ್ನು ಪೂಜೆಮಾಡಬೇಕು. ॥೧೮-೧೯-೨೦॥

ಆವಾಹನೆ, ಸ್ಥಾಪನೆ, ಪ್ರಾಣಾಯಾಮ, ನಿರೀಕ್ಷಣೆ, ಪಾದ್ಯ, ಆಚಮನ,

ಧೂಪಂ ದೀಪಂ ಚ ತಾಂಬೂಲಂ ದತ್ವಾ ಸಂಸ್ನಾಪಯೇತ್ತತಃ ।
ಧ್ಯಾಯೇದೀಶಾನಮವ್ಯಗ್ರಂ ಉಗ್ರಂ ದೇವಂ ಪಿನಾಕಿನಂ ॥೨೨॥

ತ್ರಿಲೋಚನಂ ನೀಲಕಂಠಂ ವರದಾಭಯಪಾಣಿನಂ ।
ಉಮಾಸಹಾಯಂ ವಿಶ್ವೇಶಂ ವಿಶ್ವಾಧಾರಂ ಸನಾತನಂ ॥೨೩॥

ಸರ್ವಾಭರಣಶೋಭಾಢ್ಯಂ ಗಂಧವಾಸಾದ್ಯಲಂಕೃತಂ ।
ತ್ರಿಪುಂಡ್ರಚಂದ್ರಾರ್ಧಧರಂ ಭೂತಿಭೂಷಿತವಿಗ್ರಹಂ ॥೨೪॥

ಮಂದಸ್ಮಿತಮುಖಾಂಭೋಜಂ ಸುಂದರಾನನಪಂಕಜಂ ।
ಧ್ಯಾಯೇದ್ದೇವಂ ವಿರೂಪಾಕ್ಷಂ ನಿರ್ಜಿತ್ಯಾಕ್ಷಾಣಿ ಸುವ್ರತಃ ॥೨೫॥

ತತಃ ಸಂಸ್ಥಾಪ್ಯ ತಲ್ಲಿಂಗಂ ಪೀಠೇ ವೈ ಸ್ನಾನಕರ್ಮಣಿ ।
ವಿಶೋಧ್ಯ ಲಿಂಗಂ ಶುದ್ಧೋದೈಃ ಪಂಚಗವ್ಯೈಃ ಪ್ರಸೇಚಯೇತ್ ॥೨೬॥

---

ಅರ್ಘ್ಯ, ಗಂಧ, ಪುಷ್ಪ ಇವುಗಳನ್ನು ಸಮರ್ಪಿಸಿ ಅನಂತರ ಧೂಪ, ದೀಪ ತಾಂಬೂಲ ಸಹಿತವಾದ ಮಧುಪರ್ಕವನ್ನು ಕೊಟ್ಟು ಸ್ನಾನಮಾಡಿಸಬೇಕು. ಆಮೇಲೆ ವಿಕಾರ ರಹಿತನೂ, ಭಯಂಕರನೂ, ಪಿನಾಕವೆಂಬ ಬಿಲ್ಲನ್ನು ಹಿಡಿದವನೂ ಆದ ಮಹಾ ದೇವನನ್ನು ಈ ರೀತಿ ಧ್ಯಾನಮಾಡಬೇಕು. ॥೨೧-೨೨॥

ಮೂರುಕಣ್ಣುಳ್ಳವನೂ, ಕಪ್ಪುಗೊರಳನೂ, ವರದ ಮತ್ತು ಅಭಯಮುದ್ರೆ ಗಳುಳ್ಳ ಕೈಗಳುಳ್ಳವನೂ, ಉಮಾರಮಣನೂ, ವಿಶ್ವೇಶ್ವರನೂ, ಜಗದಾಧಾರನೂ, ಪುರಾತನನೂ, ಸಕಲಾಭರಣಶೋಭೆಗಳಿಂದಲೂ ಯುಕ್ತನೂ, ಗಂಧ, ವಸ್ತ್ರ ಮುಂತಾದವುಗಳಿಂದಲಂಕೃತನೂ, ಭಸ್ಮತ್ರಿಪುಂಡ್ರ ಮತ್ತು ಅರ್ಧಚಂದ್ರನನ್ನು ಧರಿಸಿದವನೂ, ವಿಭೂತ್ಯಲಂಕೃತದೇಹನೂ, ಮುಗುಳುನಗೆಯಿಂದ ಯುಕ್ತವಾದ ಮುಖಕಮಲವುಳ್ಳವನೂ, ಸುಂದರವಾದ ಮೊಗದಾವರೆಯುಳ್ಳವನೂ, ವಿರೂಪವಾದ (ಮೂರು ಸಂಖ್ಯೆಗಳಿಂದ) ನೇತ್ರಗಳುಳ್ಳವನೂ, ಆದ ಮಹೇಶನನ್ನು ನಿಯಮ ಪೂರ್ವಕವಾಗಿ ಜಿತೇಂದ್ರಿಯನಾಗಿ ಧ್ಯಾನಮಾಡಬೇಕು. ॥೨೩-೨೪-೨೫॥

ಅನಂತರ ಆ ಲಿಂಗವನ್ನು ಪೀಠದಲ್ಲಿರಿಸಿ, ಸ್ನಾನಕಾರ್ಯದಲ್ಲಿ ಶುದ್ಧೋದಕ ಗಳಿಂದ ಆ ಲಿಂಗವನ್ನು ತೊಳೆದು ಹಾಗೆಯೇ ಪಂಚಗವ್ಯಗಳಿಂದ ಅಭಿಷೇಕಮಾಡ ಬೇಕು. ಮತ್ತೆ ಮಧುಪರ್ಕವನ್ನು ಕೊಡಬೇಕು. ಆ ಮೇಲೆ ಮೊದಲು ಹಾಲನ್ನು

ಮಧುಪರ್ಕಂ ತತೋ ದದ್ಯಾತ್ಕ್ಷೀರಮಾದೌ ಪ್ರಸೇಚಯೇತ್ ।
ಪಾವಮಾನೇನ ರುದ್ರೇಣ ದಧ್ನಾ ವಾ ತ್ವರಿತೇನ ಚ ॥೨೭॥

ಲಿಂಗಸೂಕ್ತೇನ ಚ ಘೃತಂ ಮಧುನಾಸ್ನಾಪಯೇಚ್ಛಿವಂ ।
ಕದ್ರುದ್ರಾಯೇತಿ ಗೌರೀಶಂ ಸಿತಯಾ ಸ್ನಾಪಯೇಚ್ಛಿವೇ ॥೨೮॥

ಇಮಾರುದ್ರೇತಿಮಂತ್ರೇಣ ನಾರಿಕೇಲಾಂಬುನಾ ತತಃ ।
ತ್ರಿಯಂಬಕೇತಿ ದೇವೇಶಿ ಕದಲೀಫಲಸಾರತಃ ॥೨೯॥

ಯೋವೈ ರುದ್ರೇತಿಮಂತ್ರೇಣ ಪನಸೈರೀಶಮಂತ್ರತಃ ।
ರಸಾಲಸಾರತೋಽಪೀಶಂ ಯಾಃಫಲಿನೀತಿ ಮಂತ್ರತಃ ॥೩೦॥

ಜಂಬೀರಸಾರೈಃ ಸುರಸೈರ್ಲಿಂಗಸೂಕ್ತಕ್ರಮೇಣ ಹಿ ।
ಸಂಸ್ನಾಪ್ಯ ಲಿಪ್ಯ ಪಿಚ್ಛೇನ ಸ್ನಾಪಯೇದುಷ್ಣವಾರಿಣಾ ॥೩೧॥

ತಿಲತೈಲೈರಪಿ ಶಿವಮಭಿಷಿಚ್ಯ ವಿರೂಷಯೇತ್ ।
ಉದ್ವರ್ತನಾಂತರೇ ಸ್ನಾಪ್ಯ ಘರ್ಷಯೇದ್ಬಿಲ್ವಪತ್ರಕೈಃ ॥೩೨॥

---

ಪಾವಮಾನಸೂಕ್ತದಿಂದ ಅಭಿಷೇಕಮಾಡಬೇಕು. ರುದ್ರಮಂತ್ರದಿಂದ ಮೊಸರನ್ನೂ, ಲಿಂಗಸೂಕ್ತದಿಂದ ತುಪ್ಪವನ್ನೂ, ಮಧುಮಂತ್ರದಿಂದ ಜೇನನ್ನೂ 'ಕದ್ರುದ್ರಾಯ' ಎಂಬ ಮಂತ್ರದಿಂದ ಗೌರೀರಮಣನನ್ನು ಕಲ್ಲುಸಕ್ಕರೆಯಿಂದಲೂ ಅಭಿಷೇಕಮಾಡಬೇಕು. ॥೨೬-೨೭-೨೮॥

'ಇಮಾರುದ್ರಾಯ' ಎಂಬ ಮಂತ್ರದಿಂದ ಎಳನೀರನ್ನೂ, 'ತ್ರಿಯಂಬಕ' ಎಂಬ ಮಂತ್ರದಿಂದ ಬಾಳೆಯ ಹಣ್ಣಿನ ರಸವನ್ನೂ, 'ಯೋ ವೈ ರುದ್ರ' ಎಂಬ ಮಂತ್ರದಿಂದ ಹಲಸಿನ ಹಣ್ಣನ್ನೂ, 'ಯಾಃ ಫಲಿನೀ' ಎಂಬ ಮಂತ್ರದಿಂದ ಸಿಹಿಮಾವಿನ ರಸವನ್ನೂ, ಲಿಂಗಸೂಕ್ತಮಂತ್ರದಿಂದ ರಸಭರಿತವಾದ ನಿಂಬೆಯ ಹಣ್ಣಿನ ರಸಧಾರೆಯನ್ನೂ ಅಭಿಷೇಕಮಾಡಿಸಿ, ಅನಂತರ ಪಿಚ್ಛದಿಂದ (ನವಿಲುಗರಿಯ ಕಟ್ಟು) ಚೆನ್ನಾಗಿ ಉಜ್ಜಿ ಬಿಸಿನೀರಿನಿಂದ ಸ್ನಾನಮಾಡಿಸಬೇಕು. ॥೨೯-೩೦-೩೧॥

ಅನಂತರ ಎಳ್ಳೆಣ್ಣೆಯಿಂದ ಶಿವಲಿಂಗಕ್ಕೆ ಅಭಿಷೇಕಮಾಡಿ ಉಜ್ಜಬೇಕು. ಒರಸಿದ ಮೇಲೆ ಮತ್ತೆ ಬಿಸಿನೀರಿನಿಂದ ಸ್ನಾನಮಾಡಿಸಿ ಬಿಲ್ವದಳಗಳಿಂದ ಚೆನ್ನಾಗಿ

ಸ್ನಾಪಯೇದ್ಗಂಧತೋಯೇನ ಕುಶರತ್ನೈರ್ಹಿರಣ್ಯಜೈಃ ।
ತೋಯೈಃ ಸಂಸ್ನಾಪಯೇದೀಶಂ ನಾನಾವಾದಿತ್ರನಿಸ್ವನೈಃ ॥೩೩॥

ಅಸಂಭವೇ ತು ದ್ರವ್ಯಾಣಾಂ ಯಥಾ ವಿಭವಸಂಭವೈಃ ।
ಕೇವಲೈರ್ಮಂತ್ರತೋಯೈರ್ವಾ ಭಕ್ತಿಪೂಜ್ಯೋ ಮಹೇಶ್ವರಃ ॥೩೪॥

ಆಢ್ಯೋ ವಾಪಿ ಮಹಾಸ್ನಾನಂ ಕಾರಯೇನ್ಮಧ್ಯಮೋಽಪಿವಾ ।
ಅಭ್ಯಂಗಂ ವಾ ಮಹಾದೇವಿ ದ್ರವ್ಯೈರೇತೈರ್ಯಥಾಬಲಂ ॥೩೫॥

ಕೃತ್ವಾ ನಿವೇದ್ಯ ಪಶ್ಚಾತ್ತು ಹವಿಃ ಕಿಂಚಿನ್ಮಹೇಶ್ವರೇ ।
ಗೋಶೃಂಗೈರ್ವಾ ತಥಾ ಶಂಖೈರ್ಧಾರಾಪಾತ್ರೇಣ ಸೇಚಯೇತ್ ॥೩೬॥

ಅವಿಚ್ಛಿನ್ನಾಂ ತತ್ರ ಧಾರಾಂ ಲಿಂಗಮೌಲೌ ಪ್ರಕಲ್ಪಯೇತ್ ।
ಅನ್ವಾರಂಭಣಕಂ ಸೂತ್ರಂ ಬಧ್ವಾಂಗುಲ್ಯೋಽಭಿಷೇಚಯೇತ್ ॥೩೭॥

ಏಕವಾರಂ ತ್ರಿವಾರಂ ವಾ ರುದ್ರೈಕಾದಶಕಂ ದ್ವಿಜೈಃ ।
ಸಶಾಂತಿಕಂ ಸಚಮಕಂ ಜಪೇದ್ವೈ ಶಾಂಭವೈರ್ದ್ವಿಜೈಃ ॥೩೮॥

---

ತಿಕ್ಕಬೇಕು. ತರುವಾಯ ಗಂಧೋದಕ, ದರ್ಭೆ, ರತ್ನ, ಸುವರ್ಣಯುಕ್ತಜಲ ಧಾರೆಯಿಂದ ಅನೇಕ ವಾದ್ಯಧ್ವನಿಗಳು ಮೊಳಗುತ್ತಿರುವ ಸಂದರ್ಭದಲ್ಲಿ ಈಶ್ವರನಿಗೆ ಅಭಿಷೇಕಮಾಡಬೇಕು. ॥೩೨-೩೩॥

ಪೂಜಾಸಾಮಗ್ರಿಗಳು ಈರೀತಿ ಒದಗದೇ ಹೋದರೆ ದೊರೆತಷ್ಟು ದ್ರವ್ಯ ದಿಂದಲೋ ಕೇವಲ ಮಂತ್ರಗಳಿಂದಲೋ ಭಕ್ತಿಪೂರ್ವಕವಾಗಿ ನೀರಿನಿಂದಲೋ ಮಹೇ ಶ್ವರನಿಗೆ ಅಭಿಷೇಕ ಮಾಡಬಹುದು ಐಶ್ವರ್ಯವಂತ ಅಥವಾ ಮಧ್ಯದರ್ಜೆಯವನಾಗಲಿ ಈ ಮಹಾಸ್ನಾನವನ್ನು ಮಾಡಿಸಬೇಕು. ಮಹಾದೇವಿಯೇ, ತನ್ನ ಶಕ್ತ್ಯನುಸಾರ ವಾಗಿ ದೊರೆತ ದ್ರವ್ಯಗಳಿಂದ ಅಭ್ಯಂಗವನ್ನು ಮಾಡಿಸಬೇಕು. ಅನಂತರ ಆ ಮಹೇ ಶ್ವರನಿಗೆ ಸ್ವಲ್ಪ ಹವಿಸ್ಸನ್ನು ನಿವೇದನಮಾಡಬೇಕು. ಶಿವನಿಗೆ ಹಸುವಿನ ಕೊಂಬು ಶಂಖ ಮತ್ತು ಧಾರಾಪಾತ್ರೆಗಳಿಂದ ಅಭಿಷೇಕಮಾಡಬಹುದು ॥೩೪-೩೫-೩೬॥

ಲಿಂಗದ ಮೇಲೆ ಅವಿಚ್ಛಿನ್ನವಾದ ಜಲಧಾರೆಯು ಬೀಳುವಂತೆ ಮಾಡಿ, ಅನ್ವಾರಂಭಣಕ ಸೂತ್ರವನ್ನು ಕಟ್ಟಿ ಬೆರಳುಗಳಿಂದ ಅದನ್ನು ಹಿಡಿದು ಅಭಿಷೇಕ ಮಾಡಬೇಕು. ಅಭಿಷೇಕ ಸಮಯದಲ್ಲಿ ಒಂದು, ಮೂರು ಅಥವಾ ಹನ್ನೊಂದು

ಭವಾಯೇತಿ ತಥೈವಾಂತೇ ತರ್ಪಯೇದಷ್ಟನಾಮಭಿಃ ।
ಪ್ರಕ್ಷಾಳ್ಯ ವಾಸಃ ಸಂಶೋಧ್ಯ ಪೀಠೇ ಸ್ಥಾಪ್ಯ ಮಹೇಶ್ವರಂ ॥೩೯॥

ದದ್ಯಾದಾಚಮನಂ ಗಂಧಮುಪವೀತಂ ಚ ಸಾಕ್ಷತಂ ।
ಸುವಸ್ತ್ರಾಭರಣಂ ಗೌರಿ ಭಸ್ಮಪಾಂಡರಮುತ್ತಮಂ ॥೪೦॥

ಅಗರೂದ್ಭವಮೇವೇತಿ ದದ್ಯಾದ್ವೈಶಾಖಮಾಸಿಕಂ ।
ಧೂಪಂ ಘೃತೋದ್ಭವಂ ದೀಪಂ ಹರಿದ್ರಾಕೃಸರಂ ಶಿವೇ ॥೪೧॥

ಗುಡಖಂಡಕೃತಂ ಭಕ್ಷ್ಯಂ ದಧ್ಯನ್ನಂ ಸೋಪದಂಶಕಂ ।
ಬಕುಲೈರ್ಬಿಲ್ವಪತ್ರೈಶ್ಚ ತ್ರಿಶಾಖೈಶ್ಚ ಪ್ರಪೂಜಯೇತ್ ॥೪೨॥

ಭವಾಯೇತ್ಯಷ್ಟನಾಮ್ನೈವ ನಿಧನೇತ್ಯಾದಿಮಂತ್ರತಃ ।
ತಾಂಬೂಲಮುಖವಾಸಾಂತಂ ದದ್ಯಾದ್ದೇವಾಯ ಶೂಲಿನೇ ॥೪೩॥

---

ಬಾರಿ ಶಾಂತಿಪಾಠ, ಚಮಕಮಂತ್ರಗಳೊಡನೆ ರುದ್ರಮಂತ್ರವನ್ನು ಬ್ರಾಹ್ಮಣರು ಜಪಿಸಬೇಕು. ಆಮೇಲೆ ಕೊನೆಯಲ್ಲಿ 'ಭವಾಯ ದೇವಾಯ ನಮಃ' ಮುಂತಾದ ಎಂಟು ನಾಮಗಳನ್ನುಚ್ಚರಿಸಿ ತರ್ಪಣ ಮಾಡಬೇಕು. ಬಟ್ಟೆಯಿಂದ ಚೆನ್ನಾಗಿ ಶಿವಲಿಂಗವನ್ನು ಒರೆಸಿ ಮಹೇಶನನ್ನು ಪೀಠದಲ್ಲಿ ಸ್ಥಾಪಿಸಬೇಕು. ॥೩೭-೩೮-೩೯॥

ದೇವಿ, ಆಚಮನ, ಗಂಧ, ಉಪವೀತ, ಅಕ್ಷತೆ, ಒಳ್ಳೆಯ ವಸ್ತ್ರಾಭರಣಗಳು, ಉತ್ತಮವೂ ಶುಭ್ರವೂ ಆದ ಭಸ್ಮ, ವೈಶಾಖಮಾಸಕ್ಕೆ ತಕ್ಕ ಅಗರುವಿನಧೂಪ, ತುಪ್ಪದ ದೀಪ ಮುಂತಾದವುಗಳನ್ನು ಸಮರ್ಪಿಸಬೇಕು. ಎಲೌ ಈಶ್ವರಿ, ಹುಗ್ಗಿ, ಬೆಲ್ಲದ ಸವಿಯಿಂದ ಮಾಡಿದ ಭಕ್ಷ್ಯ, ಮೊಸರನ್ನ ಇವುಗಳನ್ನು ಉಪ್ಪಿನಕಾಯಿ, ಗೊಜ್ಜು ಮುಂತಾದ ವ್ಯಂಜನಪದಾರ್ಥಗಳೊಡನೆ ನಿವೇದನಮಾಡಬೇಕು. ಅನಂತರ ವಕುಲಪುಷ್ಪ ಮತ್ತು ಮೂರು ದಳದ ಬಿಲ್ವಪತ್ರೆಗಳಿಂದ ಪೂಜೆಮಾಡಬೇಕು. ॥೪೦-೪೧-೪೨॥

'ಭವಾಯ' ಮೊದಲಾದ ಎಂಟು ನಾಮಗಳಿಂದಲೂ, 'ನಿಧನಪತಯೇ ನಮಃ' ಮೊದಲಾದ ಮಂತ್ರಗಳಿಂದಲೂ ಪೂಜಿಸಿ, ತಾಂಬೂಲವನ್ನೂ ಮುಖವಾಸವನ್ನೂ ಮಹಾದೇವನಿಗೆ ಸಮರ್ಪಿಸಬೇಕು. ಅನಂತರ ತುಪ್ಪ ಅಥವಾ ಶ್ರೇಷ್ಠವಾದ ಎಣ್ಣೆಗಳಿಂದ ನೆನಸಿದ ನೂರು ಬತ್ತಿಗಳುಳ್ಳ, ರಥದ ಆಕಾರವುಳ್ಳ ಪಾತ್ರೆ ಮತ್ತು

ನೀರಾಜನಂ ತತೋ ಲಿಂಗಂ ಶತವರ್ತಿಸುಪೂರಿತಂ ।
ಘೃತೈಸ್ತೈಲೈರಪಿ ವರ್ಯೈಃ ರಥಾಕಾರೈರ್ಮನೋಹರೈಃ ॥೪೪॥

ನೀರಾಜನಸುಪಾತ್ರೈಶ್ಚ ವೇಣುವೀಣಾದಿನಿಸ್ವನೈಃ ।
ಶಂಖಕಾಹಲಭೇರೀಣಾಂ ಜಯಶಬ್ದೈಃ ಶ್ರುತೀರಿತೈಃ ॥೪೫॥

ನೀರಾಜ್ಯ ಸ್ರಾಜ್ಯಧೂಪೈಶ್ಚ ದೀಪೈಃ ಕರ್ಪೂರಖಂಡಕೈಃ ।
ಛತ್ರಂ ಚ ಚಾಮರಂ ದೇವಿ ವ್ಯಜನಂ ದರ್ಪಣಂ ತಥಾ ॥೪೬॥

ನಿವೇದಯೇದ್ಯಥಾಜೋಷಮುಪಚಾರಂ ಪೃಥಕ್‌ಪೃಥಕ್ ।
ವೈಶಾಖೇ ನಾಮಭಿರ್ದೇವಿ ಪೂಜನೀಯೋ ಯಥಾಬಲಂ ॥೪೭॥

ಪ್ರದಕ್ಷಿಣನಮಸ್ಕಾರಂ ನರ್ತನಂ ಸ್ತೋತ್ರಕಲ್ಪನಂ ।
ನಾಮ್ನಾಂ ಚ ತೇ ಪ್ರವಕ್ಷ್ಯಾಮಿ ಶತಾಷ್ಟೋತ್ತರಸಂಖ್ಯಯಾ ॥೪೮॥

ಸ್ತೋತ್ರಂ ಚ ತೇ ವಿಶಾಲಾಕ್ಷಿ ವೈಶಾಖೇ ಪ್ರೀತಿದಾಯಕಂ ।
ಯಸ್ತ್ವೇತನ್ನಾಮಭಿರ್ದೇವಿ ವೈಶಾಖೇ ಶ್ರೀದಲೈರ್ಯಜೇತ್ ॥೪೯॥

---

ಮನೋಹರವಾದ ಆರತಿಯ ಪಾತ್ರೆಗಳಲ್ಲಿ, ಕೊಳಲು, ವೀಣೆ, ಶಂಖ, ಕಹಳೆ, ನಗಾರಿ ಮತ್ತು ಕೈಚಪ್ಪಾಳೆಯ ಶಬ್ದಗಳು, ವೇದಮಂತ್ರಘೋಷಗಳೂ ಮೊಳಗುತ್ತಿರುವಾಗ ಶಿವನಿಗೆ ಆರತಿಮಾಡಬೇಕು. ಶ್ರೇಷ್ಠವಾದ ಧೂಪದೀಪಗಳನ್ನು ಸಮರ್ಪಿಸಿದ ನಂತರ ಖಂಡಕರ್ಪೂರದ ಆರತಿಯನ್ನೆತ್ತಿ, ತರುವಾಯ, ಛತ್ರ, ಚಾಮರ, ಬೀಸಣಿಗೆ, ಕನ್ನಡಿ ಮುಂತಾದ ಉಪಚಾರಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಸಾವಧಾನವಾಗಿ ಸಮರ್ಪಣೆಮಾಡಬೇಕು. ||೪೩-೪೪-೪೫-೪೬||

ದೇವಿ, ವೈಶಾಖಮಾಸದಲ್ಲಿ ನನ್ನನ್ನು ನಾಮಕಥನಪೂರ್ವಕವಾಗಿ ತನ್ನ ಶಕ್ತಿಮೀರದೆ ಪೂಜಿಸಬೇಕು. ಅನಂತಪ್ರದಕ್ಷಿಣೆ, ನಮಸ್ಕಾರ, ನಾಟ್ಯ ಮತ್ತು ಸ್ತೋತ್ರರಚನೆಗಳನ್ನು ನಡೆಸಬೇಕು. ವಿಶಾಲವಾದ ಕಣ್ಣುಗಳುಳ್ಳ ಎಲೌ ದೇವಿಯೇ, ವೈಶಾಖಮಾಸದಲ್ಲಿ ಶಿವನಿಗೆ ಪ್ರೀತಿಯನ್ನುಂಟುಮಾಡುವ ಶಿವನ ನೂರೆಂಟು ಹೆಸರುಗಳನ್ನು ಈಗ ಹೇಳುವೆನು ಕೇಳು, ಈ ನಾಮಗಳನ್ನುಚ್ಚರಿಸಿ ವೈಶಾಖಮಾಸದಲ್ಲಿ ಬಿಲ್ವದಳಗಳಿಂದ ನನ್ನನ್ನು ಪೂಜೆಮಾಡುವವನಿಗೆ ಮುಕ್ತಿಯು ಹಸ್ತಗತವಾಗಿಯೇ ಇರುವುದೆಂದು ತಿಳಿ. ||೪೭-೪೮-೪೯||

ತಸ್ಯ ಮುಕ್ತಿಃ ಕರಸ್ಥೈವ ಭವಿಷ್ಯತಿ ಸುಮಧ್ಯಮೇ ।
ಓಂ ಭರ್ಗಾಯ ಭೂತಭವ್ಯಾಯ ಭವರೋಗಹರಾಯ ಚ ॥೫೦॥

ಶರ್ವಾಯ ಸ್ವರ್ಣರೂಪಾಯ ದೂರ್ವಾಪೂಜ್ಯಾಯ ಶಂಭವೇ ।
ಗೋಕರ್ಣಾಯ ಚ ಗೋಪ್ತ್ರೇ ಚ ಶಂಕುಕರ್ಣಾಯ ತೇ ನಮಃ ॥೫೧॥

ವರಾಹಮಥನಾಯೈವ ರೂಕ್ಷಾಯ ದ್ವಿರದಾಯ ಚ ।
ನಮೋಽಪ್ಸರಾಣಾಂ ಪತಯೇ ಗಣಾನಾಂಪತಯೇ ನಮಃ ॥೫೨॥

ಅಹಿಂಸಾಪತಯೇ ಚೈವ ಓಜಸಾಂ ಪತಯೇ ನಮಃ ।
ನಮೋಽಸ್ತ್ವಪರ್ಣಾಪತಯೇ ಹೇಮವರ್ಣಾಯ ವರ್ಣಿನೇ ॥೫೩॥

---

(ಇಲ್ಲಿ ಬಂದಿರುವ ಪದಗಳಿಗೆಲ್ಲಾ ಹಿಂದೆ ಅರ್ಥಬರೆದಿರುವುದರಿಂದಲೂ ಬಂದಿರುವ ನಾಮಗಳೇ ಪುನಃ ಪುನಃ ಬಂದಿರುವುದರಿಂದಲೂ ಮುಂದೆ ಅರ್ಥವನ್ನು ಬರೆದಿಲ್ಲ)

೧. ಓಂ ಭರ್ಗಾಯ ನಮಃ
೨. ಓಂ ಭೂತಭವ್ಯಾಯ ನಮಃ
೩. ಓಂ ಭವರೋಗಹರಾಯ ನಮಃ
೪. ಓಂ ಶರ್ವಾಯ ನಮಃ
೫. ಓಂ ಸ್ವರ್ಣರೂಪಾಯ ನಮಃ
೬. ಓಂ ದೂರ್ವಾಪೂಜ್ಯಾಯ ನಮಃ
೭. ಓಂ ಶಂಭವೇ ನಮಃ
೮. ಓಂ ಗೋಕರ್ಣಾಯ ನಮಃ
೯. ಓಂ ಗೋಪ್ತ್ರೇ ನಮಃ
೧೦. ಓಂ ಶಂಕುಕರ್ಣಾಯ ನಮಃ
೧೧. ಓಂ ವರಾಹಮಥನಾಯ ನಮಃ
೧೨. ಓಂ ರೂಕ್ಷಾಯ ನಮಃ
೧೩. ಓಂ ದ್ವಿರದಾಯ ನಮಃ
೧೪. ಓಂ ಅಪ್ಸರಾಣಾಂ ಪತಯೇ ನಮಃ
೧೫. ಓಂ ಗಣಾನಾಂ ಪತಯೇ ನಮಃ
೧೬. ಓಂ ಅಹಿಂಸಾಪತಯೇ ನಮಃ
೧೭. ಓಂ ಓಜಸಾಂ ಪತಯೇ ನಮಃ
೧೮. ಓಂ ಅಪರ್ಣಾಪತಯೇ ನಮಃ
೧೯. ಓಂ ಹೇಮವರ್ಣಾಯ ನಮಃ
೨೦. ಓಂ ವರ್ಣಿನೇ ನಮಃ
೨೧. ಓಂ ಬಲಾಬಲಸಮೂಹಾಯ ನಮಃ
೨೨. ಓಂ ಅಕ್ಷೋಭ್ಯಕ್ಷೋಭಣಾಯ ನಮಃ
೨೩. ಓಂ ಚಂದ್ರಾಭರಣಭೂಷಾಯ ನಮಃ
೨೪. ಓಂ ಸರ್ವಶೇಷಾಹಿಧಾರಿಣೇ ನಮಃ
೨೫. ಓಂ ದೀಪ್ತಶೃಂಗೈಕಶೃಂಗಾಯ ನಮಃ
೨೬. ಓಂ ವೃಷಭಾಯ ನಮಃ
೨೭. ಓಂ ಕಕುದ್ಮಿನೇ ನಮಃ
೨೮. ಓಂ ಬಿಲ್ವಿನೇ ನಮಃ

ಬಲಾಬಲಸಮೂಹಾಯ ಅಕ್ಷೋಭ್ಯಕ್ಷೋಭಣಾಯ ಚ ।
ಚಂದ್ರಾಭರಣಭೂಷಾಯ ಸರ್ವಶೇಷಾಹಿಧಾರಿಣೇ ॥೫೪॥

ದೀಪ್ತಶೃಂಗೈಕಶೃಂಗಾಯ ವೃಷಭಾಯ ಕಕುದ್ಮಿನೇ ।
ಬಿಲ್ಮಿನೇ ಬಿಲ್ವಪೂಜ್ಯಾಯ ವಿಶಾಖಾಸುಪ್ರಿಯಾಯ ಚ ॥೫೫॥

ಉಗ್ರಾಯ ರುದ್ರರೂಪಾಯ ಧನ್ವನೇ ಧಾವತೇ ನಮಃ ।
ಜ್ಯೋತಿರ್ಗಣಾನಾಂಪತಯೇ ಗ್ರಹಾಧಾರಾಯ ತೇ ನಮಃ ॥೫೬॥

ಅತೀತಾಯ ಭವಿಷ್ಯಾಯ ವರ್ತಮಾನಾಯ ತೇ ನಮಃ ।
ಅಜರಾಯ ನಮಸ್ತುಭ್ಯಂ ತಪಸೇ ವರದಾಯ ಚ ॥೫೭॥

ಸುವರ್ಚಸೇ ಸುವೀರ್ಯಾಯ ಸ್ಮರಗರ್ವಹರಾಯ ಚ ।
ವರದಾಯ ವರೇಣ್ಯಾಯ ಸ್ವರ್ಣವರ್ಣಾಯ ತೇ ನಮಃ ॥೫೮॥

---

೨೯. ಓಂ ಬಿಲ್ವಪೂಜ್ಯಾಯ ನಮಃ
೩೦. ಓಂ ವಿಶಾಖಾಸುಪ್ರಿಯಾಯ ನಮಃ
೩೧. ಓಂ ಉಗ್ರಾಯ ನಮಃ
೩೨. ಓಂ ರುದ್ರರೂಪಾಯ ನಮಃ
೩೩. ಓಂ ಧನ್ವನೇ ನಮಃ
೩೪. ಓಂ ಧಾವತೇ ನಮಃ
೩೫. ಓಂ ಜ್ಯೋತಿರ್ಗಣಾನಾಂಪತಯೇ ನಮಃ
೩೬. ಓಂ ಗ್ರಹಾಧಾರಾಯ ನಮಃ
೩೭. ಓಂ ಅತೀತಾಯ ನಮಃ
೩೮. ಓಂ ಭವಿಷ್ಯಾಯ ನಮಃ
೩೯. ಓಂ ವರ್ತಮಾನಾಯ ನಮಃ
೪೦. ಓಂ ಅಜರಾಯ ನಮಃ
೪೧. ಓಂ ತಪಸೇ ನಮಃ
೪೨. ಓಂ ವರದಾಯ ನಮಃ
೪೩. ಓಂ ಸುವರ್ಚಸೇ ನಮಃ
೪೪. ಓಂ ಸುವೀರ್ಯಾಯ ನಮಃ
೪೫. ಓಂ ಸ್ಮರಗರ್ವಹರಾಯ ನಮಃ
೪೬. ಓಂ ವರದಾಯ ನಮಃ
೪೭. ಓಂ ವರೇಣ್ಯಾಯ ನಮಃ
೪೮. ಓಂ ಸ್ವರ್ಣವರ್ಣಾಯ ನಮಃ
೪೯. ಓಂ ಅರ್ಣವಾಂತನಿವಾಸಾಯ ನಮಃ
೫೦. ಓಂ ದೀಪ್ತಶೂಲಧರಾಯ ನಮಃ
೫೧. ಓಂ ಪುರುಷಾಯ ನಮಃ
೫೨. ಓಂ ಪ್ರಮೇಯಾಯ ನಮಃ
೫೩. ಓಂ ಅಘೋರಾಯ ನಮಃ
೫೪. ಓಂ ಊರ್ಧ್ವಕೇಶಿನೇ ನಮಃ
೫೫. ಓಂ ಜ್ವಾಲಾಮಾಲಾವೃತಾಂಗಾಯ ನಮಃ
೫೬. ಓಂ ಭುಜಂಗಾಭರಣಾಯ ನಮಃ
೫೭. ಓಂ ನರಾಯ ಬಾಹ್ಯಾಯ ನಮಃ

ಆರ್ಣವಾಂತನಿವಾಸಾಯ ದೀಪ್ತಶೂಲಧರಾಯ ಚ ।
ಪುರುಷಾಯ ಪ್ರಮೇಯಾಯ ಅಘೋರಾಯೋರ್ಧ್ವಕೇಶಿನೇ ॥೫೯॥

ಜ್ವಾಲಾಮಾಲಾವೃತಾಂಗಾಯ ಭುಜಂಗಾಭರಣಾಯ ಚ ।
ನರೋ ಬಾಹ್ಯಾಯ ಗುಹ್ಯಾಯ ಸ್ವರ್ಗ್ಯಾಯ ನರಕಾಯ ಚ ॥೬೦॥

ಹರಾಯ ಪರಮೇಶಾಯ ಸ್ಕಂದಗೋಪ್ತ್ರೇ ಸುಧನ್ವಿನೇ ।
ಕನಿಷ್ಠಾಯಾಥ ಜ್ಯೇಷ್ಠಾಯ ಗಷ್ವರೇಷ್ಠಾಯ ಚರ್ಮಿಣೇ ॥೬೧॥

ಮುಂಡಾಯ ಶಿತಿಕಂಠಾಯ ಜಟಿಲಾಯ ಭಗಾಯ ಚ ।
ವ್ಯೋಮಕೇಶಾಯ ಭೀಮಾಯ ವಷ್ಠ್ಯಾಯ ವರಣಾಯ ಚ ॥೬೨॥

ವ್ಯಾಪ್ಯವ್ಯಾಪಕರೂಪಾಯ ಕಾಲಗರ್ವಹರಾಯ ಚ ।
ಮುಂಜಕೇಶಾಯ ಭಾವ್ಯಾಯ ಲಿಂಗಾಧ್ಯಕ್ಷಾಯ ತೇ ನಮಃ ॥೬೩॥

---

೫೮. ಓಂ ಗುಹ್ಯಾಯ ನಮಃ
೫೯. ಓಂ ಸ್ವರ್ಗ್ಯಾಯ ನಮಃ
೬೦. ಓಂ ನರಕಾಯ ನಮಃ
೬೧. ಓಂ ಹರಾಯ ನಮಃ
೬೨. ಓಂ ಪರಮೇಶಾಯ ನಮಃ
೬೩. ಓಂ ಸ್ಕಂದಗೋಪ್ತ್ರೇ ನಮಃ
೬೪. ಓಂ ಸುಧನ್ವಿನೇ ನಮಃ
೬೫. ಓಂ ಕನಿಷ್ಠಾಯ ನಮಃ
೬೬. ಓಂ ಜ್ಯೇಷ್ಠಾಯ ನಮಃ
೬೭. ಓಂ ಗಷ್ವರೇಷ್ಠಾಯ ನಮಃ
೬೮. ಓಂ ಚರ್ಮಿಣೇ ನಮಃ
೬೯. ಓಂ ಮುಂಡಾಯ ನಮಃ
೭೦. ಓಂ ಶಿತಿಕಂಠಾಯ ನಮಃ
೭೧. ಓಂ ಜಟಿಲಾಯ ನಮಃ
೭೨. ಓಂ ಭಗಾಯ ನಮಃ
೭೩. ಓಂ ವ್ಯೋಮಕೇಶಾಯ ನಮಃ
೭೪. ಓಂ ಭೀಮಾಯ ನಮಃ
೭೫. ಓಂ ವಷ್ಠ್ಯಾಯ ನಮಃ
೭೬. ಓಂ ವರಣಾಯ ನಮಃ
೭೭. ಓಂ ವ್ಯಾಪ್ಯವ್ಯಾಪಕರೂಪಾಯ ನಮಃ
೭೮. ಓಂ ಕಾಲಗರ್ವಹರಾಯ ನಮಃ
೭೯. ಓಂ ಮುಂಜಕೇಶಾಯ ನಮಃ
೮೦. ಓಂ ಭಾವ್ಯಾಯ ನಮಃ
೮೧. ಓಂ ಲಿಂಗಾಧ್ಯಕ್ಷಾಯ ನಮಃ
೮೨. ಓಂ ವಂಕವೇ ನಮಃ
೮೩. ಓಂ ನಾಗಕರ್ಣಾಯ ನಮಃ
೮೪. ಓಂ ಬಾಲಶ್ಯಂಕುಧರಾಯ ನಮಃ
೮೫. ಓಂ ಭವಾಯ ನಮಃ
೮೬. ಓಂ ಭಜಮಾನಾಯ ನಮಃ
೮೭. ಓಂ ಯಜಮಾನಾಯ ನಮಃ
೮೮. ಓಂ ಸೂರ್ಯಾಯ ನಮಃ

ವಂಕವೇ ನಾಗಕರ್ಣಾಯ ವಾಲಸ್ಯಂಕುಧರಾಯ ಚ ।
ಭವಾಯ ಭಜಮಾನಾಯ ಯಜಮಾನಾಯ ತೇ ನಮಃ ॥೬೪॥

ಸೂರ್ಯಾಯ ಚಂದ್ರರೂಪಾಯ ವಾಯುವೇ ಸಾಗರಾಯ ಚ ।
ಭೂಧರಾಯಾದಿಮಧ್ಯಾಯ ಜ್ಞಾನಜ್ಞೇಯಾಗಮಾಯ ಚ ॥೬೫॥

ನಿಗಮಾಂತ್ಯೈಕವೇದ್ಯಾಯ ಅಭೇದ್ಯಾಯ ವಪುಷ್ಮತೇ ।
ಭದ್ರದಾಯ ಶರಣ್ಯಾಯ ವರೇಣ್ಯಾಯ ನಮೋನಮಃ ॥೬೬॥

ಅರಣ್ಯಾನಾಂ ಚ ಪತಯೇ ಭೂತಾಧಿಪತಯೇ ನಮಃ ।
ಯಕ್ಷಾಧಿಪತಯೇ ಚೈವ ಯಕ್ಷಾಯಾಥ ಕಪರ್ದಿನೇ ॥೬೭॥

ಏವಂ ನಾಮಾಷ್ಟಶತಕೈಃ ಪೂಜಯೇದ್ಬಿಲ್ವಪಲ್ಲವೈಃ ।
ವೈಶಾಖೇ ದೇವದೇವೇಶಂ ಸ್ತುವೀತ್ಯೈವಂ ಮಹೇಶ್ವರಿ ॥೬೮॥

---

೮೯. ಓಂ ಚಂದ್ರರೂಪಾಯ ನಮಃ
೯೦. ಓಂ ವಾಯುವೇ ನಮಃ
೯೧. ಓಂ ಸಾಗರಾಯ ನಮಃ
೯೨. ಓಂ ಭೂಧರಾಯ ನಮಃ
೯೩. ಓಂ ಆದಿಮಧ್ಯಾಯ ನಮಃ
೯೪. ಓಂ ಜ್ಞಾನಾಯ ನಮಃ
೯೫. ಓಂ ಜ್ಞೇಯಾಯ ನಮಃ
೯೬. ಓಂ ಆಗಮಾಯ ನಮಃ
೯೭. ಓಂ ನಿಗಮಾಂತ್ಯೈಕವೇದ್ಯಾಯ ನಮಃ
೯೮. ಓಂ ಅಭೇದ್ಯಾಯ ನಮಃ
೯೯. ಓಂ ವಪುಷ್ಮತೇ ನಮಃ
೧೦೦. ಓಂ ಭದ್ರದಾಯ ನಮಃ
೧೦೧. ಓಂ ಶರಣ್ಯಾಯ ನಮಃ
೧೦೨. ಓಂ ವರೇಣ್ಯಾಯ ನಮಃ
೧೦೩. ಓಂ ಅರಣ್ಯಾನಾಂ ಪತಯೇ ನಮಃ
೧೦೪. ಓಂ ಭೂತಾಧಿಪತಯೇ ನಮಃ
೧೦೫. ಓಂ ಯಕ್ಷಾಧಿಪತಯೇ ನಮಃ
೧೦೬. ಓಂ ಯಕ್ಷಾಯ ನಮಃ
೧೦೭. ಓಂ ಕಪರ್ದಿನೇ ನಮಃ
೧೦೮. ಶ್ರೀ ಮಹೇಶ್ವರಾಯ ನಮಃ

ಹೀಗೆ ನೂರೆಂಟು ನಾಮಗಳನ್ನುಚ್ಚರಿಸುತ್ತಾ ಬಿಲ್ವದಳಗಳಿಂದ ಪರಶಿವನನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು. ವೈಶಾಖಮಾಸದಲ್ಲಿ ಮಾತ್ರ ಮಹಾದೇವನನ್ನು ಈ ನಾಮಗಳಿಂದ ಸ್ತೋತ್ರಮಾಡಬೇಕು. ॥೫೧-೫೨-೫೩-೫೪-೫೫-೫೬-೫೭-೫೮-೫೯-೬೦-೬೧-೬೨-೬೩-೬೪-೬೫-೬೬-೬೭-೬೮॥

ಯತ್ತೇ ರುದ್ರ ಮಹಾಧನುರ್ಗಿರಿಭುವಾ ಪ್ರಾಗ್ದಕ್ಷಿಣಾ ಚೋತ್ತರಾ
ಪಶ್ಚಾತ್ತಾಸು ನಮಸ್ಕ್ರಿಯಾಸು ವಿಹಿತಾ ವೇದೇಷು ನಿಷ್ಠಾವತಾಂ ।
ವಿಜ್ಯಾ ಸಾ ಭಗವಸ್ಭವೇತ ಸುಹಿತಾ ಇಜ್ಯಾಯುತಾನಾಂ ಫಲಂ
ದದ್ಯಾತ್ತ್ರ್ಯಜ್ಯಮುಪಾಸ್ತವೈರಿಸಕಲಂ ರಾಜ್ಯಂ ಲಭೇತ್ತತ್ಕ್ಷಣಾತ್ ॥೬೯॥

ಶಂಭೋ ಭರ್ಗ ಭವೇಂದುಶೇಖರಮಹಾಗಂಗಾತರಂಗೋಜ್ವಲ
ಲ್ಲೀಲಾಭಂಗತರಂಗಸುಂದರಜಟಾಜೂಟೋತ್ತಮಾಂಗೋಜ್ಜ್ವಲ ।
ಪಾಹೀಶ ಪ್ರಮಥಾಧಿನಾಥ ಗಿರಿಜಾನಾಥಾವ ಮಾಂ ಶಂಕರ
ತ್ರಸ್ತಂ ಮಾಂ ವರಕಾಲಹಸ್ತಸುಮಹಾಪಾಶಾವಬದ್ಧಂ ಹರ ॥೭೦॥

ಹೇ ಶಂಬರಾಂತಕ ಹರ ಪ್ರವರಾಪರೇಶ
ಕಾಶೀಶವಾಸಿತಜಗತ್ಪರಮಾವಕಾಶ ।

---

ಮಹೇಶ್ವರನೇ, ಯಾರು ನಿನ್ನನ್ನು ಆರಾಧಿಸುತ್ತಾ, ವೇದವಚನಗಳಲ್ಲಿ ನಂಬಿಕೆಯಿಟ್ಟು, ನೀನಲ್ಲದೆ ನನಗೆ ಬೇರೊಬ್ಬ ರಕ್ಷಕನೇ ಇಲ್ಲವೆಂದು ಧ್ಯಾನಿಸುವರೋ, ಅಂತಹವರನ್ನು ನಿನ್ನ ಮಹಾಧನುಸ್ಸು ಸರ್ವದಿಕ್ಕುಗಳಲ್ಲಿಯೂ ಕಾಪಾಡುವುದು. ಅಷ್ಟೇ ಅಲ್ಲ. ನಿನ್ನ ಭಕ್ತರಾದವರು ನಿನ್ನನ್ನು ನಮಸ್ಕರಿಸುವಂತೆ ನಿನ್ನ ಆ ಮಹಾ ಧನುಸ್ಸನ್ನೂ ಸರ್ವದಾ ಧ್ಯಾನಮಾಡುತ್ತಿರುವರು. ಅಂತಹ ನಿನ್ನ ಭಕ್ತರು ಸಮಸ್ತ ಯಾಗಗಳ ಫಲವನ್ನೂ ಪಡೆಯುವರಲ್ಲದೆ, ತಮ್ಮ ಶತ್ರುಗಳನ್ನೂ ನಿಗ್ರಹಿಸಿಕೊಂಡು ರಾಜಸುಖವನ್ನು ಅನುಭವಿಸುತ್ತಾ ಆನಂದದಿಂದ ವಾಸಮಾಡುವರು. ॥೬೯॥

ಸುಖೋತ್ಪಾದಕನೆ ! ಮನ್ಮಥ, ಯಮ ಮುಂತಾದವರನ್ನು ಶಿಕ್ಷಿಸಿದವನೂ, ಚಂದ್ರಶೇಖರನೂ, ದೊಡ್ಡ ದೊಡ್ಡ ಅಲೆಗಳ ಹೊಡೆತದಿಂದಲೂ, ಧ್ವನಿಯಿಂದಲೂ ಶೋಭಿಸುವವನೂ, ಜಡೆಗಳ ಸಮೂಹದಿಂದ ಪ್ರಕಾಶಿಸುತ್ತಿರುವ ತಲೆಯುಳ್ಳವನೂ ಪ್ರಮಥಗಣಗಳಿಗೆ ಒಡೆಯನೂ, ಲೋಕಕ್ಕೆ ಈಶ್ವರನೂ, ಗಿರಿಜಾರಮಣನೂ ಆದ ಶಂಕರನೆ, ಯಮನ ಕ್ರೂರವಾದ ದೊಡ್ಡ ಪಾಶಗಳಿಗೆ ಸಿಕ್ಕಿ ಭಯಗೊಂಡಿರುವ ನನ್ನನ್ನು ಈ ಬಂಧನದಿಂದ ಬಿಡಿಸಿ ಪಾರುಮಾಡು. ನನ್ನನ್ನು ರಕ್ಷಿಸು. ಸಂಸಾರ ಸಮುದ್ರದಿಂದ ತೋರಿಬರುವ ಅನಾಹುತಗಳನ್ನು ನಿರ್ಮೂಲಗೊಳಿಸು. ॥೭೦॥

ಶಂಬರಾಸುರನನ್ನು ಸಂಹರಿಸಿದನನೂ, ಪಾಪನಾಶಕನೂ, ಶ್ರೇಷ್ಠನೂ, ಮಹೈಶ್ವರ್ಯಸಂಪನ್ನನೂ, ಕಾಶೀಪಟ್ಟಣದಲ್ಲಿ ನೆಲಸಿ, ಅಲ್ಲಿರುವ ಜನಗಳಿಗೆಲ್ಲಾ

ಚರ್ಮಾಂಬರಾಂತಕಕೆ ಹರ ತ್ರಿಪುರಾಪಮರ್ದ
ಮೂರ್ಧನ್ಯ ಪಾಹಿ ಭಗವನ್ಧೃತಶಂಬರಾಂಕ ॥೨೦॥

ಹೇ ಕಾಲಕಾಲ ಧೃತಶೂಲ ವರಾಹಿಮಾಲ
ಫಾಲೋಜ್ಜ್ವಲಾನಲವಿಶೋಷಿತವಿಷ್ಣುಬಾಲ ।
ನೀಲಾಭಕಂಠಕಲನಾನಿಲ ಪಾಪತೂಲ
ದಾವಾಗ್ನಿಜಾಲ ಭಗವನ್ನವ ಮಾಂ ನಮಸ್ತೇ ॥೨೧॥

ಯಕ್ಷಾಧಿಪಾರ್ಚಿತಪದಾಂಬುಜತ್ರ್ಯಕ್ಷದಕ್ಷ
ಶಿಕ್ಷಾವಿನೋದ ಭಗವಂತ್ಸಮಹೋಕ್ಷವಾಹ ।
ವೀಕ್ಷಾವಿದಗ್ಧಗುರುಚಾಪವರೋರುಕಾಯ
ರಕ್ಷಾಧುನಾ ಪಶುಪತೇ ಹರ ಮಾಂ ಹಿತಾಕ್ಷ ॥೨೨॥

---

ಉತ್ತಮವಾದ ಮುಕ್ತಿಯ ಅವಕಾಶವನ್ನು ಕಲ್ಪಿಸಿಕೊಟ್ಟಿರುವವನೂ, ವ್ಯಾಘ್ರ ಚರ್ಮಾಂಬರವನ್ನು ಧರಿಸಿರುವವನೂ, ಯಮನನ್ನು ನಿಗ್ರಹಿಸಿರುವವನೂ, ತ್ರಿಪುರರನ್ನು ಸಂಹರಿಸಿದವನೂ, ಶಶಾಂಕನೆನಿಸಿದ ಚಂದ್ರನನ್ನೇ ಶಿರದಲ್ಲಿ ಧರಿಸಿರುವವನೂ ಆದ ಭಗವಂತನೆ! ನಮ್ಮನ್ನು ಸಲಹು. ॥೨೦॥

ಎಲೈ ಯಮಾಂತಕನೆ! ಶೂಲಾಯುಧಪಾಣಿಯೆ! ಶ್ರೇಷ್ಠವಾದಸರ್ಪವನ್ನು ಮಾಲೆಮಾಡಿಕೊಂಡಿರುವವನೂ, ಹಣೆಗಣ್ಣಿನಬೆಂಕಿಯಿಂದ ವಿಷ್ಣುವನ್ನು ನಿಗ್ರಹಿಸಿದವನೂ, ನೀಲವರ್ಣದ ವಿಷಕಂಠವುಳ್ಳವನೂ, ಪಾಪರಾಶಿಗಳಿಗೆ ದಾವಾಗ್ನಿಜಾಲದಂತಿರುವವನೂ ಆದ ಭಗವಂತನೆ! ನಿನಗೆ ನಮಸ್ಕಾರಮಾಡುವೆನು, ನನ್ನನ್ನು ಕಾಪಾಡು. ॥೨೧॥

ಯಕ್ಷರಾಜನಾದ ಕುಬೇರನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ, ಮೂರುಕಣ್ಣುಗಳುಳ್ಳವನೂ, ದಕ್ಷಬ್ರಹ್ಮನನ್ನು ಶಿಕ್ಷಿಸುವುದರಲ್ಲಿ ವಿನೋದವುಳ್ಳವನೂ, ಷಡ್ಗುಣಪರಿಪೂರ್ಣನೂ, ದೊಡ್ಡವೃಷಭವನ್ನೇ ವಾಹನವನ್ನಾಗಿಮಾಡಿಕೊಂಡಿರುವವನೂ, ದರ್ಶನಮಾತ್ರದಿಂದ ಮನ್ಮಥನ ದೇಹವನ್ನು ಭಸ್ಮಮಾಡಿದವನೂ, ಸಕಲಜೀವರಾಶಿಗಳಿಗೂ ಒಡೆಯನೂ, ಜಿತೇಂದ್ರಿಯನೂ ಲೋಕರಕ್ಷಕನೂ ಆದ ಭಗವಂತನೆ! ನನ್ನನ್ನು ಕಾಪಾಡು.'' ॥೨೨॥

ಏವಂ ಸಂಸ್ತುತ್ಯ ವೈಶಾಖೇ ದೇವದೇವಂ ಮಹೇಶ್ವರಂ ।
ಏಕಕಾಲಂ ತ್ರಿಕಾಲಂ ವಾ ಪೂಜಯೇಲ್ಲಿಂಗಮೈಶ್ವರಂ ॥೭೪॥

ದದ್ಯಾದ್ಗೋಮಿಥುನಂ ದೇವಿ ಮಾಸಾಂತೇ ಶಾಂಭವೇಷು ತತ್ ।
ಸ ದಕ್ಷಿಣಂ ಸ ವತ್ಸಂ ಚ ವಸ್ತ್ರಾಲಂಕಾರಭೂಷಿತಂ ॥೭೫॥

ಹೋಮಃ ಕಾರ್ಯೋಽತ್ರ ವೈಶಾಖ್ಯಾಂ ಪ್ರಾಗುಕ್ತಕ್ರಮತಃ ಶಿವೇ ।
ನಕ್ತಾಶೀ ಭಸ್ಮನಿಷ್ಠೋಽಥ ಭವೇನ್ಮಾಸಾಂತಮೀಶ್ವರಿ ॥೭೬॥

ವೈಶಾಖ್ಯಾಮಥ ಪೌರ್ಣಮ್ಯಾಂ ಕುರ್ಯ್ಯಾಚ್ಚ ದಧಿಕಂಬಲಂ ।
ಘೃತಕಂಬಲಮಾನೇನ ವಿಧಿಃ ಪ್ರೋಕ್ತಃ ಪುರಾ ಮಯಾ ॥೭೭॥

ಏತತ್ತೇಽಭಿಹಿತಂ ಗೌರಿ ವೈಶಾಖಾರ್ಚನಜಂ ಫಲಂ ।
ಸ್ನಾನಪೂಜನಮೀಶಾನಿ ಗಂಧಪುಷ್ಪಫಲಾರ್ಪಣಂ ॥೭೮॥

ಪಾನೀಯಂ ಪಾನಕಂ ತಸ್ಮಿನ್ಮಾಸಿ ವಿಪ್ರೇಷು ದಾಪಯೇತ್ ।
ಮಮ ಪ್ರೀತ್ಯರ್ಥಮೇವೇಶಿ ತಸ್ಯ ಪುಣ್ಯಫಲಂ ಶೃಣು ॥೭೯॥

---

ಹೀಗೆ ವೈಶಾಖಮಾಸದಲ್ಲಿ ದೇವಾದಿದೇವನಾದ ಮಹೇಶನನ್ನು ಸ್ತೋತ್ರ ಮಾಡಿ, ದಿನವೂ ಒಂದು ಅಥವಾ ಮೂರುಬಾರಿ ಈಶ್ವರನ ಲಿಂಗವನ್ನು ಪೂಜೆ ಮಾಡುತ್ತಿರಬೇಕು. ಅದೇತಿಂಗಳ ಕೊನೆಯಲ್ಲಿ ಶಾಂಭವಶ್ರೇಷ್ಠರಿಗೆ ವಸ್ತ್ರಾಲಂಕಾರ ಗಳಿಂದ ಅಲಂಕರಿಸಲ್ಪಟ್ಟಿರುವ ಒಂದು ಜೊತೆ ಗೋವುಗಳನ್ನು ಕರುವಿನೊಡನೆಯೂ ಉಚಿತವಾದ ದಕ್ಷಿಣೆಗಳೊಡನೆಯೂ ಕೊಟ್ಟು ದಾನಮಾಡಬೇಕು. ॥೭೪-೭೫॥

ಎಲೌ ಪಾರ್ವತಿಯೆ ! ವೈಶಾಖಮಾಸದಲ್ಲಿ ಹಿಂದೆ ಚೈತ್ರಮಾಸದಲ್ಲಿ ಹೇಳಿದ ಕ್ರಮದಂತೆಯೇ ಹೋಮಮಾಡಬೇಕು. ಆತಿಂಗಳಕೊನೆಯುವರೆಗೂ ರಾತ್ರಿಮಾತ್ರ ಭೋಜನಮಾಡುತ್ತಾ, ಭಸ್ಮರುದ್ರಾಕ್ಷಭೂಷಣನಾಗಿರಬೇಕು. ಈ ವೈಶಾಖಮಾಸದ ಹುಣ್ಣಿಮೆಯ ದಿನ ಶಿವಲಿಂಗಕ್ಕೆ ದಧಿಕಂಬಲವನ್ನು ಮಾಡಬೇಕು. ಹಿಂದೆ ಘೃತ ಕಂಬಲವಿಧಿನಿರೂಪಣಸಮಯದಲ್ಲಿ ಈ ದಧಿಕಂಬಲಪ್ರಮಾಣವಿಧಿಯು ಹೇಳಲ್ಪಟ್ಟಿದೆ. ॥೭೬-೭೭॥

ಈ ವೈಶಾಖಮಾಸಪೂಜಾವಿಧಿಯನ್ನೂ ಆ ಮಾಸದಲ್ಲಿಮಾಡುವ ಸ್ನಾನ, ಪೂಜೆ, ಗಂಧ, ಪುಷ್ಪ ಮತ್ತು ಫಲಸಮರ್ಪಣೆಯಫಲವನ್ನೂ ನಿನಗೆ ಇಲ್ಲಿನವರೆಗೆ

ಕಾಂಚನೇನ ವಿಮಾನೇನ ವಂಶಲಕ್ಷಸಮನ್ವಿತಃ ।
ಯಾತಿ ಶಂಭೋಃ ಪರಂಧಾಮ ಸರ್ವಭೋಗಸಮನ್ವಿತಃ ॥೩೦॥

॥ ಈಶ್ವರ ಉವಾಚ ॥

ವಿಶಾಖೇ ವೈಶಾಖೇ ಶಿಖಿವಿಶಿಖನೇತ್ರಾರ್ಚನಪರೋ
ಮಖಾನಾಂ ಸಪ್ತಾನಾಂ ಫಲಸುಖಮವಾಪ್ನೋಽನ್ನತಮುಖಃ ।
ವಿಶಾಖರ್ಕ್ಷೇ ಯೋ ಮಾಂ ಭಜತಿ ದರದುಃಖೋಜ್ಝಿತನರೋ
ನರೋ ಭೂಯಾತ್ಸತ್ಯಂ ಗಿರಿವರಸುತೇ ಮಯ್ಯಭಿಮುಖಃ ॥೩೧॥

ಕೃತಾಂತಾಂತಕಂ ಪೂಜಯಂತೋ ಹೃದಂತಃ
ವಸಂತೇಽಪಿ ಸಂತೋ ವಸಂತ್ಯೇವ ಶಾಂತಾಃ ।
ಉಮಾಕಾಂತನಾಮ್ನೈವ ತೇ ಸಂವದಂತೋ
ಭವಾಸಾರದುಃಖಾಭಿತಾಂತಾಃ ಕಿಯಂತಃ ॥೩೨॥

---

ಹೇಳಿದೆನು. ಇದೂಅಲ್ಲದೆ ಆ ವೈಶಾಖಮಾಸದಲ್ಲಿ ನನ್ನ ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ನೀರು, ಪಾನಕ ಮುಂತಾದ ಪಾನೀಯಗಳನ್ನು ದಾನಮಾಡಬೇಕು. ಇದರಿಂದ ಬರುವ ಪುಣ್ಯಫಲವನ್ನು ಹೇಳುವೆನು ಕೇಳು ; ಹಾಗೆದಾನಮಾಡಿದವನು ಚಿನ್ನದ ವಿಮಾನದಲ್ಲಿ ತನ್ನ ಲಕ್ಷವಂಶದವರೊಡನೆ ಸಮಸ್ತಭೋಗಸಂಪನ್ನನಾಗಿ ಮೆರೆಯುತ್ತಾ ಶಂಭುವಿನ ದಿವ್ಯಧಾಮವನ್ನೈದುವನು. ॥೭೮-೭೯-೮೦॥

ದೇವಿಯೆ ! ಕೇವಲ ಬೇಸಗೆಯೆನಿಸಿ ಹೆಚ್ಚುಶಾಖದಿಂದ ಕೂಡಿದ ವೈಶಾಖ ಮಾಸದಲ್ಲಿ ಅಗ್ನಿನೇತ್ರನಾದ ನನ್ನ ಪೂಜೆಯಲ್ಲಿ ನಿರತನಾದವನು ಏಳುಯಾಗಗಳ ಫಲಗಳಿಂದ ಲಭಿಸುವ ಮುಕ್ತಿಸುಖವನ್ನು ಹೊಂದಿ ದೇವತೆಗಳಿಗೆ ಸದೃಶನಾಗುವನು. ಅದರಲ್ಲಿಯೂ ಪೂರ್ಣಿಮಾದಿವಸ ಬರುವ ವಿಶಾಖಾನಕ್ಷತ್ರದಲ್ಲಿ ನನ್ನನ್ನು ಸೇವಿಸುವವನಂತೂ ಸಕಲ ಕಷ್ಟಗಳಿಂದಲೂ ಪಾರಾಗಿ ಶ್ರೇಷ್ಠಭಕ್ತನೆನಿಸಿ ನನ್ನ ಸಾಯುಜ್ಯವನ್ನೈದುವನು. ಇದರಲ್ಲಿ ಅನುಮಾನವಿಲ್ಲ. ॥೮೧॥

ಮನಸ್ಸಿನಲ್ಲಿ ಯಮಾಂತಕನನ್ನು ಈ ವಸಂತುಋತುವೆನಿಸಿದ ವೈಶಾಖ ಮಾಸದಲ್ಲಿ ಪೂಜಿಸುವವರು ಸರ್ವದಾ ಶಾಂತಚಿತ್ತರಾಗಿ ವಾಸಿಸುವರು. ಉಮಾ ರಮಣನ ಹೆಸರನ್ನೇ ಜಪಮಾಡುವವರಲ್ಲಿ ಸಂಸಾರದ ಅಪಾರ ದುಃಖದಿಂದ ಬಳಲಿ

ವಿಶಾಖಾ ವೈಶಾಖ್ಯಾಂ ಯದಿ ಸುಕೃತಭಾಜೋಽಪಿ ಮನುಜಾ
ದ್ವಿಜಾ ಯೇ ಶಾಖಾಂತಪ್ರಥಿತಪದಪೂಜಾಸು ನಿರತಾಃ ।
ಪರಂಕುರ್ವತ್ಯದ್ಧಾ ಶಿವಕರಮಹಾದಾನಕಲನಾಃ
ಶಿವೇ ದಧ್ನಃ ಪುಣ್ಯಂ ತ್ವಘಹರಮಹೋ ಕಂಬಲಮಮೋ
ಮಮ ಪ್ರೀತ್ಯೈ ಮುಕ್ತ್ಯೈ ಪ್ರಕಟಿತರಭಕ್ತ್ಯೈವ ಸುಜನಾಃ ॥೪೩॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ವೈಶಾಖಮಾಸಾರ್ಚನವಿಧಿ
ನಿರೂಪಣಂ ನಾಮ ಪಂಚದಶೋಽಧ್ಯಾಯಃ

---

ರುವವರು ಎಷ್ಟುಮಂದಿತಾನೇ ಇದ್ದಾರೆ? ಅಂದರೆ ಸಾಂಸಾರಿಕವಾದ ತಾಪವನ್ನು ನಿವಾರಿಸುವುದು ಶಿವಪೂಜೆಯೊಂದೇ ಎಂಬುದರಲ್ಲಿ ಸಂಶಯವಿಲ್ಲ. ॥೮೨॥

ಎಲೌ ಪಾರ್ವತಿಯೆ, ಈ ವೈಶಾಖಮಾಸದಲ್ಲಿ ತಮ್ಮ ತಮ್ಮ ಶಾಖೆಗಳಿಗನುಗುಣವಾಗಿರುವ ರೀತಿಯಲ್ಲಿ ಶಿವನ ದಿವ್ಯಪಾದಪೂಜಾನಿರತರಾಗಿ ಪುಣ್ಯಶಾಲಿಗಳೆನಿಸಿರುವ ಬ್ರಾಹ್ಮಣರು ಮಂಗಳಕರವಾದ ಅನೇಕ ದಾನಕರ್ಮದಲ್ಲಿ ನಿರತರಾಗಿ ತಮ್ಮ ಉತ್ತಮಸ್ಥಿತಿಗೆ ಶ್ರೇಷ್ಠವಾದ ಮಾರ್ಗವನ್ನು ಹುಡುಕಿಕೊಳ್ಳುವರು. ದೇವಿ, ಶಿವಲಿಂಗಕ್ಕೆ ದಧಿಕಂಬಲವನ್ನೇರ್ಪಡಿಸುವವನಿಗೆ ಸಕಲ ಪಾಪಗಳೆಲ್ಲವೂ ನಾಶವಾಗಿ ವಿಶೇಷವಾದ ಪುಣ್ಯವು ವೃದ್ಧಿಯಾಗುವುದು. ಅಲ್ಲದೆ ನನ್ನ ಪ್ರೀತಿಪ್ರಖ್ಯಾತವಾದ ಭಕ್ತಿಯೂ ಮುಕ್ತಿಯೂ ಅಂತಹ ಸಜ್ಜನರಿಗೆ ಉಂಟಾಗುವುದು, ಎಂದು ಶಿವನು ದೇವಿಗೆ ಹೇಳಿದನು. ॥೮೩॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹನ್ನೊಂದನೆಯ ಅಂಶದಲ್ಲಿ ವೈಶಾಖಮಾಸದಲ್ಲಿನ
ಶಿವಪೂಜಾವಿಧಿನಿರೂಪಣೆಯೆಂಬ ಹದಿನೈದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಷೋಡಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಜ್ಯೇಷ್ಠಮಾಸಾರ್ಚನಂ ವಕ್ಷ್ಯೇ ಮತ್ತಸ್ತ್ವಂ ಗಿರಿಜೇ ಶೃಣು ।
ಯತ್ಕೃತ್ವಾ ಮನುಜಃ ಸದ್ಯೋ ಸದ್ಯೋಜಾತಪ್ರಿಯೋ ಭವೇತ್ ॥೧॥

ಜ್ಯೇಷ್ಠೇ ಜ್ಯೇಷ್ಠಂ ಸಮಭ್ಯರ್ಚ್ಯ ವಿಶಿಷ್ಟೋ ಜಾಯತೇ ಶಿವೇ ।
ಸ್ನಾಯಾತ್ಸರಸಿ ನದ್ಯಾಂ ವಾ ಮಾಸಾದೌ ಸ ಶಿವಂ ಸ್ಮರನ್ ॥೨॥

ಅರಜೋ ವಾಸಸೀ ಬಿಭ್ರಂತ್ಸಂಕಲ್ಪ್ಯ ವಿಧಿಪೂರ್ವಕಂ ।
ಕೃತನಿತ್ಯಕ್ರಿಯೋ ಧೀಮಾನ್ಭಸ್ಮಧಾರಣಪೂರ್ವಕಂ ॥೩॥

---

## ಹದಿನಾರನೆಯ ಅಧ್ಯಾಯ

ಎಲೌ ಪಾರ್ವತಿಯೆ, ಇನ್ನು ಜ್ಯೇಷ್ಠಮಾಸದ ಪೂಜಾವಿಧಿಯನ್ನು ಹೇಳುವೆನು ಕೇಳು ; ಇದನ್ನು ಮಾಡುವುದರಿಂದ ಮಾನವನು ಆ ಶಿವನ ಸಂಪೂರ್ಣ ಪ್ರೀತಿಗೆ ಪಾತ್ರನಾಗುವನು. ಈ ಜೇಷ್ಠಮಾಸದಲ್ಲಿ ಮಹಾದೇವನನ್ನು ಪೂಜಿಸಿದವನು ಸರ್ವದಾ ಶ್ರೇಷ್ಠನೆನಿಸುವನು. ಈ ತಿಂಗಳಿನ ಮೊದಲದಿನದಲ್ಲಿ ಸರಸ್ಸು, ನದಿ, ಮುಂತಾದ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿ ಅಲ್ಲಿಯೇ ಶಿವಧ್ಯಾನಮಾಡುತ್ತಾ ಶಿವನನ್ನು ಸ್ಮರಣೆಮಾಡಬೇಕು. ॥೧-೨॥

ಶುಭ್ರವಸ್ತ್ರಗಳನ್ನು ಧರಿಸಿ, ವಿಧಿಪ್ರಕಾರಸಂಕಲ್ಪಮಾಡಿ ಭಸ್ಮೋದ್ಧೂಳನ, "ಅಗ್ನಿರಿತಿಭಸ್ಮ" ಮುಂತಾದ ಮಂತ್ರಗಳಿಂದ ಭಸ್ಮತ್ರಿಪುಂಡ್ರಧಾರಣೆ ಮತ್ತು

ಅಗ್ನಿರಿತ್ಯಾದಿಭಿರ್ಮಂತ್ರೈಸ್ತ್ರಿಪುಂಡ್ರಪರಿಮಂಡಿತಃ ।
ರುದ್ರಾಕ್ಷಧಾರಣಂ ಕುರ್ಯಾತ್ಸರ್ವಾಂಗೇಷು ವಿಧಾನತಃ ॥೪॥

ಪೂಜಾಸ್ಥಾನಂ ಶುಭಂ ದೇವಿ ಗೋಮಯೇನೋಪಲೇಪಿತಂ ।
ಪಿಷ್ಟಚೂರ್ಣೈಃ ಪಂಚವರ್ಣರಂಗವಲ್ಲೀವಿರಾಜಿತಂ ॥೫॥

ಮಂಡಪಂ ಕಾರಯೇತ್ತತ್ರ ಪುಷ್ಪಗಂಧವಿಚಿತ್ರಿತಂ ।
ಕದಲೀಸ್ತಂಭವಿಹಿತಂ ವಿತಾನಮಣಿತೋರಣಂ ॥೬॥

ತನ್ಮಧ್ಯೇ ಚ ಸ್ಥಿತೇ ಪೀಠೇ ಪಟ್ಟವಾಸಃಪ್ರಸಾಧಿತೇ ।
ಲಿಂಗಂ ಮರಕತಂ ತತ್ರ ಸ್ಥಾಪಯೇದನ್ಯಮೇವ ವಾ ॥೭॥

ತ್ರಾಸಾದಿದೋಷರಹಿತಂ ಯದಿ ತುಂಗಂ ನ ದುಷ್ಯತಿ ।
ತದಗ್ರೇ ಸ್ಥಾಪಯೇತ್ಕುಂಭಂ ಹೇಮತಾಮ್ರಜಮೃಣ್ಮಯಂ ॥೮॥

ನದೀತೋಯೇನ ಸಂಪೂರ್ಣಂ ಧೌತಪಲ್ಲವವಕ್ತ್ರಕಂ ।
ತದಗ್ರೇ ಸ್ಥಾಪಯೇದರ್ಘ್ಯಗಂಧಪುಷ್ಪಾಂಬುಪೂರಿತಂ ॥೯॥

---

ಎಲ್ಲಾ ಅಂಗಗಳಲ್ಲಿಯೂ ವಿಧಿಗನುಗುಣವಾಗಿ ರುದ್ರಾಕ್ಷಧಾರಣೆ ಇವುಗಳನ್ನು ಮಾಡಿಕೊಂಡು ವಿಧಿವತ್ತಾಗಿ ತಮ್ಮ ತಮ್ಮ ನಿತ್ಯಕರ್ಮಗಳನ್ನು ನಡೆಸಬೇಕು. ॥೩-೪॥

ಪೂಜೆಮಾಡುವ ಸ್ಥಳವು ಗೋಮಯದಿಂದ ಸಾರಿಸಲ್ಪಟ್ಟು ಶುಭಕರವಾಗಿರಬೇಕು. ಆದೇಸ್ಥಳವನ್ನು ಹಿಟ್ಟು, ಅಥವಾ ಐದುಬಣ್ಣದ ರಂಗವಲ್ಲಿಗಳಿಂದ ಅಲಂಕರಿಸಿರಬೇಕು- ಅಲ್ಲಿ ಹೂವು, ಗಂಧ, ಬಾಳೆಯಕಂಬ, ಮೇಲ್ಕಟ್ಟು, ರತ್ನ ತೋರಣಗಳಿಂದಲಂಕೃತವಾದ ಮಂಟಪವನ್ನು ರಚಿಸಿರಬೇಕು. ॥೫-೬॥

ಆ ಮಂಟಪದ ಮಧ್ಯದಲ್ಲಿ ಪಟ್ಟೆವಸ್ತ್ರಗಳಿಂದ ಅಲಂಕೃತವಾಗಿರುವ ಪೀಠದಲ್ಲಿ ಮರಕತ ಅಥವಾ ಇತರ ಶಿವಲಿಂಗಗಳನ್ನು ಸ್ಥಾಪಿಸಬೇಕು. ಲಿಂಗವು ಭಯಪ್ರದವಾದ ಆಕೃತಿಯೇ ಮುಂತಾದ ದೋಷಗಳಿಲ್ಲದೆ ಎತ್ತರವಾಗಿದ್ದರೂ ದೋಷಭಾಗಿಯಾಗುವುದಿಲ್ಲ. ಆ ಲಿಂಗದ ಮುಂಭಾಗದಲ್ಲಿ ಚಿನ್ನ, ತಾಮ್ರ ಅಥವಾ ಮಣ್ಣಿನ ಕಲಶವೊಂದನ್ನು ಸ್ಥಾಪಿಸಬೇಕು. ॥೭-೮॥

ಆ ಕಲಶವು ನದೀನೀರಿನಿಂದ ಪೂರ್ಣವಾಗಿ, ಬಿಳಿಯ ಚಿಗುರುಗಳಿಂದ ಅಲಂಕೃತವಾಗಿರಬೇಕು. ಆ ಕಲಶದ ಮುಂದೆ ಪೂಜಾರ್ಹವಾದ ಪಾದ್ಯ, ಅರ್ಘ್ಯ

ಪಾದ್ಯಾರ್ಘ್ಯಾಚಮನಂ ಪಾತ್ರಂ ಕಲ್ಪಯೇಚ್ಚ ತದಗ್ರತಃ ।
ಪಂಚಗವ್ಯೋಜ್ವಲಂ ಪಾತ್ರಂ ಶೋಧಿತಂ ಮಂತ್ರಸಂಯುತಂ ॥೧೦॥

ಕಾಪಿಲಂ ವಾ ಯಥಾಜೋಷಂ ಗವ್ಯಂ ಸಂಪಾದ್ಯ ಯತ್ನತಃ ।
ದಧಿಕ್ಷೀರಾಜ್ಯಕುಂಭಾಶ್ಚ ಕ್ಷೌದ್ರಂ ಚಾಪಿ ಸುಶರ್ಕರಾಂ ॥೧೧॥

ಫಲಾನಾಂ ಚ ರಸಂ ದೇವಿ ಯಥಾಸಂಭವಮುತ್ತಮಂ ।
ಸಂಪಾದಯೇಚ್ಚ ಸ್ನಾನಾರ್ಥಂ ಅಭ್ಯಂಗಂ ವಾಪಿ ಕಾರಯೇತ್ ॥೧೨॥

ಯವತಂಡುಲಜಾ ವಾಪಿ ಸತಿಲಾಶ್ಚಾಕ್ಷತಾಃ ಶಿವೇ ।
ಗಂಧಪುಷ್ಪಫಲೈಃ ಪೂರ್ಣಂ ಧೂಪದೀಪಾದ್ಯಲಂಕೃತಂ ॥೧೩॥

ಮನಃ ಪ್ರಸಾದಜನಕಂ ಪೂಜಾಸ್ಥಾನಂ ಪ್ರವಿಶ್ಯ ಚ ।
ಸುದಿನೇ ಶುಭನಕ್ಷತ್ರೇ ಚಂದ್ರತಾರಾಬಲಾನ್ವಿತೇ ॥೧೪॥

ಪ್ರಾಙ್ಮುಖೋದಙ್ಮುಖೋ ವಾಪಿ ಕುಶಚೈಲಾಜಿನಾಸನೇ ।
ಆಚಮ್ಯ ಉಪವಿಶ್ಯೈವ ಸಂಕಲ್ಪ್ಯ ವಿಧಿಪೂರ್ವಕಂ ॥೧೫॥

---

ಮತ್ತು ಆಚಮನೀಯ ಪಾತ್ರೆಗಳನ್ನು ಬೇರೆ ಬೇರೆಯಾಗಿ ಸ್ಥಾಪಿಸಬೇಕು. ಅದರ ಮುಂದೆ ಪಂಚಗವ್ಯದ್ರವ್ಯಗಳಿಂದ ತುಂಬಿರುವ ಪಾತ್ರೆಯನ್ನೂ ಮಂತ್ರಪೂರ್ವಕ ವಾಗಿ ಆಯಾ ಸ್ಥಾನಗಳಲ್ಲಿ ಇರಿಸಬೇಕು. ಕಪಿಲವರ್ಣದ ಹಸುವಿನ ತುಪ್ಪವನ್ನು ಸಾಧ್ಯವಾದಷ್ಟು ಸಂಪಾದಿಸಿ, ಮೊಸರು, ಹಾಲು ಮತ್ತು ತುಪ್ಪಗಳ ಕುಂಭಗಳನ್ನೂ ಜೇನು, ಸಕ್ಕರೆ ಇವುಗಳನ್ನೂ ಸಂಗ್ರಹಿಸಬೇಕು. ದೊರೆತಷ್ಟುಮಟ್ಟಿಗೆ ಉತ್ತಮ ವಾದ ಫಲರಸಗಳನ್ನೂ ಶಿವನ ಅಭಿಷೇಕಕ್ಕಾಗಿ ಸಂಪಾದಿಸಬೇಕು. ಅಥವಾ ಅಭ್ಯಂಗ ಸ್ನಾನವನ್ನೂ ಮಾಡಿಸಬಹುದು. ॥೯-೧೦-೧೧-೧೨॥

ಪಾರ್ವತಿಯೇ, ಯವಧಾನ್ಯ, ಅಕ್ಕಿ ಈ ಧಾನ್ಯಗಳಿಗೆ ಎಳ್ಳು ಬೆರಸಿ ಅಕ್ಷತೆ ಯನ್ನಾಗಿ ಉಪಯೋಗಿಸಬೇಕು. ಗಂಧ, ಪುಷ್ಪ, ಫಲಗಳಿಂದ ಪೂರ್ಣವಾಗಿ, ಧೂಪದೀಪಾದಿಗಳಿಂದಲಂಕೃತವಾಗಿರುವ, ಮನಸ್ಸಿಗೆ ಸಂತೋಷವನ್ನುಂಟುಮಾಡುವ ಪೂಜಾಸ್ಥಾನವನ್ನು ಒಳ್ಳೆಯ ನಕ್ಷತ್ರ ಮತ್ತು ಚಂದ್ರತಾರಾಬಲಯುಕ್ತವಾದ ದಿನ ದಲ್ಲಿ ಪ್ರವೇಶಿಸಿ ದರ್ಭಾಸನ, ಅಥವಾ ಕೃಷ್ಣಾಜಿನಾಸನದಲ್ಲಿ ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತು ವಿಧಿಪೂರ್ವಕವಾಗಿ ಆಚಮನ ಮಾಡ ಬೇಕು. ಅನಂತರ ಆ ಮಾಸನಾಮಪೂರ್ವಕವಾಗಿ ಶಿವಸ್ಮರಣೆಮಾಡಿ ಶಿವನ

ಮಾಸನಾಮ್ನಾ ಶಿವಂ ಸ್ಮೃತ್ವಾ ಶಾಂಭವಾನ್ಭಸ್ಮಭೂಷಿತಾನ್ ।
ಶಿವಾಭಿಷೇಕೇ ವರಯೇಚ್ಛಿವಸ್ಯಾರ್ಚನಮಂತ್ರತಃ ॥೧೬॥

ನಿರ್ಮಾಲ್ಯಮಪನೋದ್ಯೈವ ಚಂಡಾಯ ಗಿರಿಜೇ ತದಾ ।
ಕಲ್ಪಯೇದಾಸನಂ ತತ್ರ ಶಿವಾಯ ವರಮಂತ್ರತಃ ॥೧೭॥

ಧರ್ಮಾಧರ್ಮಸುವೈರಾಗ್ಯಂ ಅನಂತಾಸನಮೇವ ಹಿ ।
ಆಧಾರಶಕ್ತಿಸಹಿತಂ ಭೂತಶುದ್ಧಿಂ ವಿಧಾಯ ಚ ॥೧೮॥

ಉದ್ಬೋಧ್ಯ ಪ್ರಣವೇನೇಶಂ ವಿದ್ಯಾಹೃತ್ಪದ್ಮಕೇಸರೇ ।
ಪಂಚಕೋಶೋಪರಿಷ್ಟಾಚ್ಚ ಧ್ಯಾಯೇದ್ದೇವಮುಮಾಸಖಂ ॥೧೯॥

ಚಾರುಚಾಮೀಕರಪ್ರಖ್ಯಂ ನೀಲಗ್ರೀವಂ ತ್ರಿಶೂಲಿನಂ ।
ಬಾಲೇಂದುಮುಕುಟಂ ಸೋಮಂ ಸರ್ವಾಭರಣಭೂಷಿತಂ ॥೨೦॥

ಧ್ಯಾತ್ವೈವಂ ಸ ಜಪೇದ್ದೀಮಾನ್ಮಂತ್ರಪರ್ಕಂ ಷಡಕ್ಷರಂ ।
ಶತಾಷ್ಟಂ ವಾ ಸಹಸ್ರಂ ವಾ ನಾನ್ಯಚಿತ್ತೋಽದ್ರುತಂ ಶಿವೇ ॥೨೧॥

ಆಧಾರಪಾತ್ರಮಧ್ಯಸ್ಥಂ ಶಂಖಂ ವೈ ದಕ್ಷಿಣಾಕೃತಂ ।
ಸರ್ವಾವರ್ತಾತ್ಕೋಟಿಗುಣಂ ಶಿವಾರ್ಚನವಿಧೌ ವಿದುಃ ॥೨೨॥

---

ಅಭಿಷೇಕಕಾರ್ಯಕ್ಕೆ ಶಿವಾರ್ಚನಮಂತ್ರದಿಂದ ಭಸ್ಮಾಲಂಕೃತರಾದ ಶೈವಬ್ರಾಹ್ಮಣರನ್ನು ವರಣಮಾಡಬೇಕು. ಶಿವನಿರ್ಮಾಲ್ಯವನ್ನು ತೆಗೆದು ಚಂಡೀಶ್ವರನಿಗೆ ಸಮರ್ಪಿಸಿ, ಮುಂದೆ ಹೇಳುವಂತೆ ಪರಶಿವನಿಗೆ ವಿಧಿವತ್ತಾಗಿ ಆಸನವನ್ನು ಕಲ್ಪಿಸಬೇಕು. ||೧೩-೧೪-೧೫-೧೬-೧೭||

ಧರ್ಮಾಧರ್ಮಗಳು, ವೈರಾಗ್ಯ ಮತ್ತು ಅನಂತಾಸನಗಳನ್ನೂ ಆಧಾರಶಕ್ತಿಯೊಡನೆ ಆವಾಹನೆಮಾಡಿ, ಭೂತಶುದ್ಧಿಯನ್ನೂ ಎಸಗಿ, ಪ್ರಣವಮಂತ್ರದಿಂದ ಈಶ್ವರನನ್ನು ಎಚ್ಚರಗೊಳಿಸಿ, ಜ್ಞಾನರೂಪವಾದ ಹೃದಯವೆಂಬ ತಾವರೆಯ ಕೇಸರದಲ್ಲಿ, ಅನ್ನಮಯವೇ ಮುಂತಾದ ಪಂಚಕೋಶಗಳ ಮೇಲ್ಗಡೆ ಉಮಾರಮಣನನ್ನು ಧ್ಯಾನಮಾಡಬೇಕು. ಸುಂದರವಾದ ಚಿನ್ನದಂತೆ ಕಾಂತಿಯುಳ್ಳವನೂ, ವಿಷಭಕ್ಷಣೆಯಿಂದ ಕಪ್ಪುಗೊರಳುಳ್ಳವನೂ, ತ್ರಿಶೂಲಧಾರಿಯೂ, ಬಾಲಚಂದ್ರನಿಂದ ಕೂಡಿದ ಕಿರೀಟವುಳ್ಳವನೂ, ಉಮಾಸಹಿತನೂ, ಸಮಸ್ತ ಆಭರಣಗಳಿಂದ ಅಲಂಕೃತನೂ ಅದ ಮಹಾದೇವನನ್ನು ಸದಾ ಧ್ಯಾನಮಾಡುತ್ತಿರಬೇಕು. ||೧೮-೧೯-೨೦||

ಶಿವಭಕ್ತಿಯುಕ್ತನಾದವನು ಷಡಕ್ಷರದಿವ್ಯಮಂತ್ರವನ್ನು ನೂರೆಂಟು ಅಥವಾ ಸಹಸ್ರ ಸಂಖ್ಯೆಯಲ್ಲಿ ಬೇರೆಡೆ ಆಸಕ್ತವಾಗದ ಮನಸ್ಸುಳ್ಳವನಾಗಿ ಜಪಮಾಡಬೇಕು.

ಪೂಜಯೇಚ್ಚ ಘಟಂ ತತ್ರ ಶಂಖಂ ಪುಷ್ಪೋದಕಾವೃತಂ ।
ಆವಾಹಯೇನ್ಮಹಾದೇವಂ ಹೃದಯಾಲಿಂಗಸಂಸ್ಥಿತಂ ॥೨೩॥

ಪ್ರಸಾದಯೇತ್ತತೋ ಲಿಂಗೇ ನಿಷೀದೇತಿ ಮಹೇಶ್ವರಂ ।
ನಿರೀಕ್ಷಣಂ ಸಂನಿರೋಧಂ ತದಾ ಕುರ್ಯಾದ್ವಿಚಕ್ಷಣಃ ॥೨೪॥

ಪೀಠೇ ಸ್ಥಾಪ್ಯ ಶಿವೇ ಲಿಂಗಂ ಪುಷ್ಪಚ್ಛನ್ನೇ ಸುಧೂಪಿತೇ ।
ಪಾದ್ಯಾರ್ಘ್ಯಾಚಮನಂ ತತ್ರ ದೇಯಂ ದೇವಿ ಷಡಕ್ಷರೈಃ ॥೨೫॥

ವಿಶೋಧ್ಯ ಲಿಂಗಂ ಶುದ್ಧೋದೈಃ ತೈಲೇನ ಸ್ನಾಪಯೇಚ್ಛಿವೇ ।
ಗಂಧಾಸಕ್ತೇನ ತದಾ ಮಧುಪರ್ಕಂ ತು ದಾಪಯೇತ್ ॥೨೬॥

ಪಂಚಗವ್ಯೈಸ್ತತಃ ಸ್ನಾಪ್ಯ ತೃಣೈಃ ಸೂಕ್ಷ್ಮೈಶ್ಚ ಘರ್ಷಯೇತ್ ।
ಕ್ಷೀರೇಣ ಸೇಚಯೇಲ್ಲಿಂಗಂ ಕುಂಭಪಾನಂ ಯಥಾರುಚಿ ॥೨೭॥

---

ಶಿವಪೂಜಾವಿಧಿಯಲ್ಲಿ ಶಿವಾಭಿಷೇಕಕ್ಕೆ ಆಧಾರಪಾತ್ರೆಯ ಮಧ್ಯದಲ್ಲಿರುವ ಬಲಮುರಿ ಶಂಖವು, ಎಡಮುರಿಯ ಶಂಖಕ್ಕಿಂತಲೂ ಕೋಟಿಪಾಲು ಗುಣಾಧಿಕವು. ಕಲಶವನ್ನೂ, ಪುಷ್ಪೋದಕಗಳಿಂದಾವೃತವಾದ ಶಂಖವನ್ನೂ ಪೂಜೆಮಾಡಬೇಕು. ಅನಂತರ ಹೃದಯರೂಪವಾದ ಶಿವಲಿಂಗದಲ್ಲಿ ನೆಲಸಿರುವಂತೆ ಮಹಾದೇವನನ್ನು ಭಕ್ತಿಯಿಂದ ಆವಾಹನೆಮಾಡಬೇಕು. ॥೨೧-೨೨-೨೩॥

ಆಮೇಲೆ ಮುಂದಿರುವ ಶಿವಲಿಂಗದಲ್ಲಿ "ಮಹಾದೇವನೇ ನೀನು ಇಲ್ಲಿ ನೆಲಸು" ಎಂಬುದಾಗಿ ಮಹೇಶ್ವರನನ್ನು ಆವಾಹಿಸಬೇಕು. ನಿರೀಕ್ಷಣ, ಸಂನಿರೋಧ ಗಳನ್ನು ಮಾಡಿ, ಬುದ್ಧಿವಂತನಾದವನು ಹೂಗಳಿಂದ ವ್ಯಾಪ್ತವಾಗಿ ಚೆನ್ನಾಗಿ ಧೂಪಗಳಿಂದ ಸುವಾಸಿತವಾಗಿರುವ ಪೀಠದಲ್ಲಿ, ಶಿವಲಿಂಗವನ್ನು ಸ್ಥಾಪಿಸಿ ಅಲ್ಲಿಯೇ ಪಾದ್ಯ, ಅರ್ಘ್ಯ ಮತ್ತು ಆಚಮನಗಳನ್ನು ಷಡಕ್ಷರಮಂತ್ರದಿಂದ ಮಹೇಶನಿಗೆ ಸಮರ್ಪಿಸಬೇಕು. ಶಿವಲಿಂಗವನ್ನು ಮೊದಲು ಶುದ್ಧೋದಕದಿಂದ ಶುದ್ಧಿಮಾಡಿ ಅನಂತರ ಅದಕ್ಕೆ ತೈಲಾಭಿಷೇಕಮಾಡಬೇಕು. ದಿವ್ಯವಾದ ಗಂಧವನ್ನು ಲೇಪನ ಮಾಡಿ, ಮಧುಪರ್ಕವನ್ನು ಕೊಡಬೇಕು. ॥೨೪-೨೬॥

ಅನಂತರ ಪಂಚಗವ್ಯಗಳಿಂದ ಸ್ನಾನಮಾಡಿಸಿ, ಸೂಕ್ಷ್ಮವಾದ ಮತ್ತು ನಯವಾದ ಗರಿಕೆಯಿಂದ ಶಿವಲಿಂಗವನ್ನು ಉಜ್ಜಬೇಕು. "ಆಪ್ಯೋರಾಜಾನಂ"

ಆಪ್ಯೋ ರಾಜೇತಿಮಂತ್ರೇಣ ದಧಿಕ್ರಾವ್ಣೇತಿ ವೈ ದಧಿ ।
ಘೃತಂ ಮಿಮಿಕ್ಷೇತಿ ಘೃತಂ ಮಧುವಾತೇತಿ ವೈ ಮಧು ॥೨೮॥

ಪಂಚಾಕ್ಷರೇಣ ಚ ಸಿತಾಂ ಯಾಃ ಫಲಿನೀತಿ ಫಲೋದಕಂ ।
ನಾರಿಕೇಲಜಲಂ ಪುಣ್ಯಂ ಕದಲೀಫಲಮಂಡಲಂ ॥೨೯॥

ಪನಸೋರುಮಹಾಕೋಶಾಂಸ್ತಥಾಮ್ರರಸಮುತ್ತಮಂ ।
ಜಂಬೀರೇಕ್ಷುಭವಂ ಸಾರಂ ಕರಯಂತ್ರಪ್ರಪೀಡಿತಂ ॥೩೦॥

ಗಂಧಕರ್ಪೂರಕಸ್ತೂರೀಪಾಟೀರಾಗರುಜಂ ಜಲಂ ।
ಹೇಮರತ್ನಜಲಂ ದೇವಿ ದೇಯಂ ಲಿಂಗಸ್ಯ ಮೂರ್ಧನಿ ॥೩೧॥

ಸ ಕೂರ್ಚಕೇಣ ದರ್ಭಾಗ್ರೈರ್ಭರ್ಗಂ ಸಂಪ್ರೋಕ್ಷ್ಯವಾರಿಣಾ ।
ಬ್ರಹ್ಮಕೂರ್ಚಂ ಹಿ ತದ್ದೇವಿ ಸ್ನಾನಂ ಶತಗುಣಾಧಿಕಂ ॥೩೨॥

---

ಎಂಬ ಮಂತ್ರಪೂರ್ವಕವಾಗಿ ಕುಂಭದಲ್ಲಿ ಸಂಗ್ರಹಿಸಿರುವ ಹಾಲಿನಿಂದ ಶಿವಲಿಂಗಕ್ಕೆ ತನ್ನ ಇಷ್ಟಬಂದಂತೆ ಅಭಿಷೇಕಮಾಡಬೇಕು. ಅನಂತರ 'ದಧಿಕ್ರಾವ್ಣೋ' ಎಂಬ ಮಂತ್ರದಿಂದ ಮೊಸರನ್ನೂ 'ಘೃತಂ ಮಿಮಿಕ್ಷೆ' ಎಂಬ ಮಂತ್ರದಿಂದ ತುಪ್ಪವನ್ನೂ, 'ಮಧುವಾತಾ' ಎಂಬ ಮಂತ್ರದಿಂದ ಜೇನನ್ನೂ, 'ಪಂಚಾಕ್ಷರ' ಮಂತ್ರದಿಂದ ಕಲ್ಲುಸಕ್ಕರೆಯನ್ನೂ, 'ಯಾ ಫಲಿನೀರ್ಯಾಃ' ಎಂಬ ಮಂತ್ರದಿಂದ ಎಳನೀರನ್ನೂ ಅನಂತರ ಪುಣ್ಯಕರವಾದ ಬಾಳೆಹಣ್ಣಿನ ಸಮೂಹವನ್ನು ಅಭಿಷೇಕಮಾಡಬೇಕು. ॥೨೭-೨೮-೨೯॥

ಹಾಗೆಯೇ ದಪ್ಪದಾಗಿರುವ ಹಲಸಿನ ತೊಳೆಗಳು, ಮಾವಿನ ಹಣ್ಣಿನ ಉತ್ತಮವಾದ ರಸ, ನಿಂಬೆರಸ ಮತ್ತು ಕೈಯಂತ್ರದಿಂದ ಹಿಂಡಿ ತೆಗೆದ ಕಬ್ಬಿನ ಹಾಲು, ಗಂಧ, ಕರ್ಪೂರ, ಕಸ್ತೂರೀ, ಚಂದನ ಇವುಗಳ ನೀರು, ಅಲ್ಲದೇ ಚಿನ್ನ, ರತ್ನ ಇವುಗಳಿಂದ ಯುಕ್ತವಾದ ಜಲ ಇವನ್ನು ಶಿವಲಿಂಗದ ತಲೆಯ ಮೇಲೆ ಅಭಿಷೇಕಮಾಡಬೇಕು. ॥೩೦-೩೧॥

ದೇವಿಯೇ, ಬ್ರಹ್ಮಕೂರ್ಚವು ನೂರುಪಾಲು ಗುಣಾಧಿಕವಾದದ್ದರಿಂದ ಕೂರ್ಚಯುಕ್ತವಾದ ದರ್ಭೆಯ ತುದಿಯಿಂದ ಪವಿತ್ರಗಳಾದ ನೀರಿನಲ್ಲಿ ಶಿವಲಿಂಗವನ್ನು ಪ್ರೋಕ್ಷಿಸಬೇಕು. ಹೀಗೆ ಸ್ನಾನವಾದ ಮೇಲೆ ಬಿಸನೀರಿನಿಂದ ಮತ್ತೆ

ಉದ್ವರ್ತನಾಂತರೇ ಸ್ನಾನಂ ಕಾರಯೇದುಷ್ಣವಾರಿಣಾ ।
ಯಥಾಸಂಭವಮೇತೇಷಾಂ ಕಾರ್ಯಂ ಸ್ನಾಪನಮೀಶ್ವರಂ ॥೩೩॥

ದೀಪಾನ್ಪ್ರಜ್ವಾಲಯೇದ್ದೇವಿ ಘೃತಾಕ್ತಾನ್ಧೂಪಗಂಧಿತಾನ್ ।
ಹವಿಸ್ತತ್ರ ಶಿವೇ ಕಿಂಚಿನ್ನಿವೇದ್ಯ ಪ್ರಣವೇನ ತು ॥೩೪॥

ಧಾರಾಪಾತ್ರಸ್ಥತೋಯೇನ ಕಲಶಸ್ಥೇನ ಸೇಚಯೇತ್ ।
ರುದ್ರೈರೇಕಾದಶಗುಣೈರೇಕದ್ವಿತ್ರಿಕ್ರಮಾದ್ದ್ವಿಜೈಃ ॥೩೫॥

ನಾನಾವಾದಿತ್ರಘೋಷೇಣ ಸೇಚಯೇಲ್ಲಿಂಗಮೈಶ್ವರಂ ।
ಭವಾಯೇತಿ ತಥೈವಾಂತೇ ತರ್ಪಯೇದಷ್ಟನಾಮಭಿಃ ॥೩೬॥

ವಿಶೋಧ್ಯ ವಾಸಸಾ ಲಿಂಗಮುತ್ತಮಂಗೈಶ್ಚ ಸುಪೀಠಕೇ ।
ವಸ್ತ್ರೋಪವೀತಂ ಗಂಧಾಢ್ಯಂ ಭಸ್ಮಪಾಂಡರಮುತ್ತಮಂ ॥೩೭॥

ಅಕ್ಷತಾಭರಣಾನೀಶೇ ಸಮರ್ಪ್ಯ ಪರಮೇಶ್ವರೇ ।
ಬಿಲ್ವಮಂದಾರಕಲ್ಹಾರಪುಂಡರೀಕೈಃ ಪ್ರಪೂಜಯೇತ್ ॥೩೮॥

---

ಸ್ನಾನಮಾಡಿಸಬೇಕು. ಈಶ್ವರಿ! ಹಿಂದೆ ಹೇಳಿದ ಪದಾರ್ಥಗಳಲ್ಲಿ ಸಾಧ್ಯವಾಗಿ ದೊರೆಯುವಷ್ಟು ಸಾಮಾನುಗಳಿಂದ ಮಹಾದೇವನಿಗೆ ಅಭಿಷೇಕಮಾಡಬಹುದು. ಎಲ್ಲಕ್ಕೂ ಭಕ್ತಿ ಮುಖ್ಯ. ॥೩೨-೩೩॥

ದೇವಿಯೆ! ಆ ಶಿವಲಿಂಗಕ್ಕೆ ತುಪ್ಪದಿಂದ ನೆನಸಲ್ಪಟ್ಟ, ಧೂಪದಿಂದ ಸುವಾಸಿತ ವಾಗಿರುವ ದೀಪಗಳನ್ನು ಹೊತ್ತಿಸಬೇಕು. ಪ್ರಣವಮಂತ್ರದಿಂದ ಶುದ್ಧವಾದ ಹವಿಸ್ಸನ್ನು ನಿವೇದನಮಾಡಿ, ಧಾರಾಪಾತ್ರೆಗಳು, ಮತ್ತು ಕಲಶಗಳಲ್ಲಿನ ಜಲಗಳಿಂದ ಮತ್ತೆ ಅಭಿಷೇಕಮಾಡಬೇಕು. ಕ್ರಮವಾಗಿ ಬ್ರಾಹ್ಮಣನಾದವನು ಅನೇಕವಾದ್ಯ ಘೋಷಗಳೊಡನೆ, ಒಂದು, ಎರಡು ಮೂರು ಅಥವಾ ಹನ್ನೊಂದುಬಾರಿ ಶ್ರೀ ರುದ್ರಮಂತ್ರಪೂರ್ವಕವಾಗಿ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ॥೩೪-೩೫॥

ಅಭಿಷೇಕಾನಂತರದಲ್ಲಿ 'ಭವಾಯದೇವಾಯ ನಮಃ' ಎಂಬ ಎಂಟು ನಾಮಗಳಿಂದ ಪೂಜಿಸಿ ತರ್ಪಣಕೊಡಬೇಕು. ಅನಂತರ ಶುಭ್ರವಾದ ಬಟ್ಟೆಯಿಂದ ಶಿವಲಿಂಗವನ್ನು ಒರೆಸಿ, ಉತ್ತಮಪೀಠದಲ್ಲಿ ಕೂರಿಸಿ, ವಸ್ತ್ರ, ಉಪವೀತ, ಗಂಧ, ಶುಭ್ರವಾದ ಭಸ್ಮ, ಅಕ್ಷತೆ, ಆಭರಣ ಇವುಗಳನ್ನು ಪರಮೇಶ್ವರನಿಗೆ ಸಮರ್ಪಿಸಿ

ಕೃಷ್ಣಾಗರೂದ್ಭವಂ ಧೂಪಂ ದೇಯಂ ಜ್ಯೇಷ್ಠೇ ವಿಶೇಷತಃ ।
ಘೃತದೀಪಾಸ್ತತೋ ದೇಯಾಃ ಸೋಜ್ವಲಾಸ್ತತ್ರ ಶಂಕರಿ ॥೩೯॥

ತ್ರಿಶಾಖೈರ್ವರಬಿಲ್ವೈಶ್ಚ ಭವಾಯೇತ್ಯಷ್ಟನಾಮಭಿಃ ।
ನಿಧನೇತ್ಯಾದಿಮಂತ್ರೈಶ್ಚ ಪೂಜಯೇತ್ಪರಮೇಶ್ವರಂ ॥೪೦॥

ಕ್ಷೀರಾನ್ನಂ ಘೃತಸಂಯುಕ್ತಂ ಗೋಧೂಮಾಪೂಪಸಂಯುತಂ ।
ಜ್ಯೇಷ್ಠೇ ದೇಯಂ ವಿಶೇಷೇಣ ಜ್ಯೇಷ್ಠದೇವಾಯ ಸಾದರಂ ॥೪೧॥

ಶಾಖೋಪಪನ್ನತತಾಂಬೂಲಮಷ್ಟಕಲ್ಪಸಮನ್ವಿತಂ ।
ಜಾತೀಪತ್ರಫಲೇಧ್ಯಂ ಚ ಶುಷ್ಕಕ್ರಮುಕಖಾದಿರಂ ॥೪೨॥

ನಾಗವಲ್ಲೀದಲೋಪೇತಂ ಶುದ್ಧಚೂರ್ಣಂ ಚ ಸಾಷ್ಟಕಂ ।
ನೀರಾಜಯೇತ್ತತೋ ಲಿಂಗಂ ಶತದೀಪೈರ್ಮನೋಹರೈಃ ॥೪೩॥

---

ಬೇಕು. ತರುವಾಯ ಬಿಲ್ವಪತ್ರೆ, ಪಾರಿಜಾತ, ಕಣಿಗಲೆ, ಮತ್ತು ತಾವರೆಹೂಗಳಿಂದ ಶಿವನನ್ನು ಪೂಜೆಮಾಡಬೇಕು. ॥೩೬-೩೭-೩೮॥

ಶಂಕರಿಯೆ, ಜ್ಯೇಷ್ಠಮಾಸದಲ್ಲಿ ವಿಶೇಷವಾಗಿ ಕೃಷ್ಣಾಗರುವಿನ ಧೂಪವನ್ನೇ ಶಿವನಿಗೆ ಸಮರ್ಪಿಸಬೇಕು, ಅನಂತರ ಪ್ರಜ್ವಲಿಸುತ್ತಿರುವ ತುಪ್ಪದ ದೀಪಗಳನ್ನು ಏಕಾರ್ತಿಯಾಗಿ ಹೊತ್ತಿಸಬೇಕು. ಮೂರುದಳಗಳುಳ್ಳ ಶ್ರೇಷ್ಠವಾದ ಬಿಲ್ವದಳಗಳಿಂದ 'ಭವಾಯ ದೇವಾಯ ನಮಃ' ಎಂಬ ನಾಮಪೂರ್ವಕವಾದ ಶಿವನ ಎಂಟುನಾಮಗಳಿಂದಲೂ, 'ನಿಧನಪತಯೇ ನಮಃ' ಮುಂತಾದ ನಾಮಮಂತ್ರಗಳಿಂದಲೂ ಪರಮೇಶ್ವರನನ್ನು ಪೂಜಿಸಬೇಕು. ಅನಂತರ ಈ ಜ್ಯೇಷ್ಠಮಾಸದಲ್ಲಿ ಮಹಾದೇವನಿಗೆ, ತುಪ್ಪದಿಂದ ಬೆರೆತ ಹಾಲನ್ನವನ್ನು ಗೋಧಿಯ ಭಕ್ಷ್ಯಗಳೊಡನೆ ಆದರದಿಂದ ನಿವೇದನಮಾಡಬೇಕು. ॥೩೯-೪೦-೪೧॥

ಜಾಯಿಕಾಯಿ, ಜಾಪತ್ರೆ, ಏಲಕ್ಕಿ, ಒಣಗಿದ ಅಡಿಕೆ, ಕಾಚು, ವಿಳ್ಳೆದೆಲೆಗಳ ದಳ, ಶುದ್ಧಸುಣ್ಣ, ಸುವಾಸನೆಯರಸ, ಈ ಎಂಟುಪದಾರ್ಥಗಳಿಂದ ಸಿದ್ಧಗೊಳಿಸಿದ ತಾಂಬೂಲವನ್ನು ಶಿವನಿಗೆ ಸಮರ್ಪಿಸಬೇಕು. ಅನಂತರ ಮನೋಹರವಾದ ನೂರು ದೀಪಗಳಿಂದ ಕೂಡಿದ ಆರತಿಯನ್ನು ಕೊಳಲು, ವೀಣೆ, ನಗಾರಿ, ಕಹಳೆ ಮೊದಲಾದ ವಾದ್ಯಧ್ವನಿಯೊಡನೆ ಶಿವಲಿಂಗಕ್ಕೆ ಬೆಳಗಬೇಕು. ॥೪೨-೪೩॥

ವೇಣುವೀಣಾದಿನಿನದೈರ್ಮೃದಂಗಭೇರೀಕಾಹಲಾದಿಭಿಃ ।
ಕರ್ಪೂರಖಂಡಜೈರ್ದೀಪೈರ್ನೀರಾಜ್ಯ ಪರಮೇಶ್ವರಂ ॥೪೪॥

ಛತ್ರಂ ಚ ಚಾಮರಂ ದೇವಿ ವ್ಯಜನಂ ದರ್ಪಣಂ ತಥಾ ।
ಉಪಚಾರಮಶೇಷಂ ಚ ಕೃತ್ವಾ ಚೈವ ಪ್ರದಕ್ಷಿಣಂ ॥೪೫॥

ನಮಸ್ಕಾರಾದಿದಶಕಂ ನರ್ತನಂ ಸ್ತುತಿಪೂರ್ವಕಂ ।
ನಾಮಭಿಃ ಪೂಜಯೇದ್ದೇವಂ ದೇವದೇವಮುಮಾಪತಿಂ ॥೪೬॥

ಸ್ತುತ್ವಾನಯಾ ಸ್ತುವೀತೇಶಂ ಜ್ಯೇಷ್ಠೇ ಶ್ರೇಷ್ಠಗುಣಾನ್ವಿತೇ ।
ನಮೋ ಜ್ಯೇಷ್ಠಾಯ ಕೃಷ್ಣಾಯ ಶಿಪಿವಿಷ್ಟಾಯ ಧಾವತೇ ॥೪೭॥

ನಮಃ ಪುಷ್ಟಿಪ್ರಸಾದಾಯ ಗೋವೃಷಾಯ ಕಕುದ್ಮಿನೇ ।
ಅಭ್ಯುದೀರ್ಣಾಯ ದೀಪ್ತಾಯ ವಜ್ರಹಸ್ತಾಯ ಶಸ್ತ್ರಿಣೇ ॥೪೮॥

ನಮ ಆಶಾವಸಾನಾಯ ಸಹಮಾನಾಯ ಹೇತವೇ ।
ಧ್ವಜಿನೇ ದಂಡಿನೇ ಚೈವ ಬಂಬರಾಯ ಪ್ರಸಾರಿಣೇ ॥೪೯॥

ಉರುಗವ್ಯಾಯ ಕಾವ್ಯಾಯ ಬಭ್ರವೇ ಭ್ರಮತೇ ನಮಃ ।
ನಮೋಸ್ತ್ವಿಷ್ಟಾಯ ಪೂರ್ತಾಯ ಹುತಾಯ ಪ್ರಹುತಾಯ ಚ ॥೫೦॥

ಸಭ್ಯಾಯ ಚ ಸದಸ್ಯಾಯ ಸಭಾಯಾಃ ಪತಯೇ ನಮಃ ।
ಅಹಿಂಸಾಯಾಪ್ಯಲೋಭಾಯ ಪಂಚಾಸ್ಯಾಯ ಸುಧನ್ವಿನೇ ॥೫೧॥

---

ಕರ್ಪೂರಗಳ ಹಲ್ಲೆಗಳಿಂದಲೂ ಬತ್ತಿಯದೀಪಗಳಿಂದಲೂ ಪರಮೇಶ್ವರನಿಗೆ ನೀರಾಜನವನ್ನೆಸಗಿ ಛತ್ರಿ, ಚಾಮರ, ಬೀಸಣಿಗೆ, ಕನ್ನಡಿ, ಮತ್ತು ಇತರ ಸಮಸ್ತ ಉಪಚಾರಗಳನ್ನೂ ಶಿವನಿಗೆ ಅರ್ಪಿಸಬೇಕು. ಅನಂತರ ಪ್ರದಕ್ಷಿಣೆಮಾಡಿ ನಮಸ್ಕಾರಾದಿಯಾಗಿ ಹತ್ತುನರ್ತನಗಳನ್ನು ಸ್ತುತಿಪೂರ್ವಕವಾಗಿ ಮಾಡಬೇಕು. ಆಮೇಲೆ ದೇವಾದಿದೇವನಾದ ಉಮಾರಮಣನನ್ನು ಮುಂದೆ ಹೇಳುವ ನಾಮಗಳಿಂದ ಪೂಜಿಸಬೇಕು. ಎಲೌ ಪಾರ್ವತಿಯೇ, ಶ್ರೇಷ್ಠವಾದ ಗುಣಗಳಿಂದ ಕೂಡಿದ ಈ ಜ್ಯೇಷ್ಠಮಾಸದಲ್ಲಿ ಈಶ್ವರನನ್ನು ಈ ಸ್ತೋತ್ರದಿಂದ ಸರ್ವದಾ ಸ್ತುತಿಸಬೇಕು. ॥೪೪-೪೫-೪೬॥

ತ್ರಿನೇತ್ರಾಯ ಸುಪಾರ್ಶ್ವಾಯ ತುಷ್ಟಾಯ ಉದರಾಯ ಚ ।
ಶಿವಾಯ ಶಾಂತರೂಪಾಯ ಶತಾವರ್ತಾಯ ತೇ ನಮಃ ॥೫೨॥

ಅನ್ನಾಯಯೂಪಸನ್ನ ಪಾಲಾಯ ಆಲವಾಲಾಯ ತೇ ನಮಃ ।
ನಮೋ ಭವಾಯ ರುದ್ರಾಯ ಕದ್ರುದ್ರಾಯ ಪ್ರಚೇತಸೇ ॥೫೩॥

ನಮಸ್ತೇಂದ್ರಿಯ ಹೀನಾಯ ಲೇಲಿಹಾನಾಯ ಸೃಕ್ಕಿಣೇ ।
ವಿಶ್ವಾಯ ವಿಶ್ವರೂಪಾಯವಿಶ್ವತಃ ಶಿರಸೇ ನಮಃ ॥೫೪॥

---

೧. ಓಂ ಜ್ಯೇಷ್ಠಾಯ ನಮಃ
೨. ಓಂ ಹೃಷ್ಟಾಯ ನಮಃ
೩. ಓಂ ಶಿಪಿವಿಷ್ಟಾಯ ನಮಃ
೪. ಓಂ ಧಾವತೇ ನಮಃ
೫. ಓಂ ಪುಷ್ಟಿಪ್ರಸಾದಾಯ ನಮಃ
೬. ಓಂ ಗೋವೃಷಾಯ ನಮಃ
೭. ಓಂ ಕಕುದ್ಮಿನೇ ನಮಃ
೮. ಓಂ ಅಭ್ಯುದೀರ್ಣಾಯ ನಮಃ
೯. ಓಂ ದೀಪ್ತಾಯ ನಮಃ
೧೦. ಓಂ ವಜ್ರಹಸ್ತಾಯ ನಮಃ
೧೧. ಓಂ ಶಸ್ತ್ರಿಣೇ ನಮಃ
೧೨. ಓಂ ಅಶಾವಸಾನಾಯ ನಮಃ
೧೩. ಓಂ ಸಹಮಾನಾಯ ನಮಃ
೧೪. ಓಂ ಹೇತವೇ ನಮಃ
೧೫. ಓಂ ಧ್ವಜಿನೇ ನಮಃ
೧೬. ಓಂ ದಂಡಿನೇ ನಮಃ
೧೭. ಓಂ ಬಂಬರಾಯ ನಮಃ
೧೮. ಓಂ ಪ್ರಸಾರಿಣೇ ನಮಃ
೧೯. ಓಂ ಉರುಗವ್ಯಾಯ ನಮಃ
೨೦. ಓಂ ಕ್ಷಾವ್ಯಾಯ ನಮಃ
೨೧. ಓಂ ಬಭ್ರವೇ ನಮಃ
೨೨. ಓಂ ಭ್ರಮತೇ ನಮಃ
೨೩. ಓಂ ಇಷ್ಟಾಯ ನಮಃ
೨೪. ಓಂ ಪೂರ್ತಾಯ ನಮಃ
೨೫. ಓಂ ಹೃತಾಯ ನಮಃ
೨೬. ಓಂ ಪ್ರಹೃತಾಯ ನಮಃ
೨೭. ಓಂ ಸಭ್ಯಾಯ ನಮಃ
೨೮. ಓಂ ಸದಸ್ಯಾಯ ನಮಃ
೨೯. ಓಂ ಸಭಾಯಾಃ ಪತಯೇ ನಮಃ
೩೦. ಓಂ ಅಹಿಂಸಾಯ ನಮಃ
೩೧. ಓಂ ಅಲೋಭಾಯ ನಮಃ
೩೨. ಓಂ ಸಂಚಾಸ್ಯಾಯ ನಮಃ
೩೩. ಓಂ ಸುಧನ್ವಿನೇ ನಮಃ
೩೪. ಓಂ ತ್ರಿನೇತ್ರಾಯ ನಮಃ
೩೫. ಓಂ ಸುಪಾರ್ಶ್ವಾಯ ನಮಃ
೩೬. ಓಂ ತುಷ್ಟಾಯ ನಮಃ
೩೭. ಓಂ ಉದರಾಯ ನಮಃ
೩೮. ಓಂ ಶಿವಾಯ ನಮಃ
೩೯. ಓಂ ಶಾಂತರೂಪಾಯ ನಮಃ
೪೦. ಓಂ ಶತಾವರ್ತಾಯ ನಮಃ

ಸರ್ವತಃ ಪಾಣಿಪಾದಾಯ ಸರ್ವೇಂದ್ರಿಯವಿಹಾರಿಣೇ ।
ರುದ್ರಾಯ ಪ್ರತಿರೂಪಾಯ ಖಂಡಚಂದ್ರಧರಾಯ ಚ ॥೫೫॥

ವಿಶ್ವೋತ್ಪತ್ತಿವಿನಾಶಾಯ ಷಡೂರ್ಮಿರಹಿತಾಯ ಚ ।
ನಮಃ ಸಿದ್ಧಾಯ ಸಾಧ್ಯಾಯ ಧ್ಯಾಯಮಾನಾಯ ತೇ ನಮಃ ॥೫೬॥

ಮಯೋಭುವೇ ಶಂಭವೇ ಚ ವಿಭವೇ ಪ್ರಭವೇ ನಮಃ ।
ದುಂದುಭ್ಯಾಯಾಹನನ್ಯಾಯ ಶಂಗಾಯಾಥ ಪ್ರಮಾಯ ಚ ॥೫೭॥

---

೪೧. ಓಂ ಅನ್ನಾಯ ನಮಃ
೪೨. ಓಂ ಆಸನ್ನಪಾಲಾಯ ನಮಃ
೪೩. ಓಂ ಆಲವಾಲಾಯ ನಮಃ
೪೪. ಓಂ ಭವಾಯ ನಮಃ
೪೫. ಓಂ ರುದ್ರಾಯ ನಮಃ
೪೬. ಓಂ ಕದ್ರುದ್ರಾಯ ನಮಃ
೪೭. ಓಂ ಪ್ರಚೇತಸೇ ನಮಃ
೪೮. ಓಂ ಇಂದ್ರಿಯ ಹೀನಾಯ ನಮಃ
೪೯. ಓಂ ಲೇಲಿಹಾನಾಯ ನಮಃ
೫೦. ಓಂ ಸೃಕ್ವಿಣೇ ನಮಃ
೫೧. ಓಂ ವಿಶ್ವಾಯ ನಮಃ
೫೨. ಓಂ ವಿಶ್ವರೂಪಾಯ ನಮಃ
೫೩. ಓಂ ವಿಶ್ವತಃ ಶಿರಸೇ ನಮಃ
೫೪. ಓಂ ಸರ್ವತಃ ಪಾಣಿಪಾದಾಯ ನಮಃ
೫೫. ಓಂ ಸರ್ವೇಂದ್ರಿಯವಿಹಾರಿಣೇ ನಮಃ
೫೬. ಓಂ ರುದ್ರಾಯ ನಮಃ
೫೭. ಓಂ ಪ್ರತಿರೂಪಾಯ ನಮಃ
೫೮. ಓಂ ಖಂಡಚಂದ್ರಧರಾಯ ನಮಃ
೫೯. ಓಂ ವಿಶ್ವೋತ್ಪತ್ತಿವಿನಾಶಾಯ ನಮಃ
೬೦. ಓಂ ಷಡೂರ್ಮಿರಹಿತಾಯ ನಮಃ
೬೧. ಓಂ ಸಿದ್ಧಾಯ ನಮಃ
೬೨. ಓಂ ಸಾಧ್ಯಾಯ ನಮಃ
೬೩. ಓಂ ಧ್ಯಾಯಮಾನಾಯ ನಮಃ
೬೪. ಓಂ ಮಯೋಭುವೇ ನಮಃ
೬೫. ಓಂ ಶಂಭವೇ ನಮಃ
೬೬. ಓಂ ವಿಭವೇ ನಮಃ
೬೭. ಓಂ ಪ್ರಭವೇ ನಮಃ
೬೮. ಓಂ ದುಂದುಭ್ಯಾಯ ನಮಃ
೬೯. ಓಂ ಆಹನನ್ಯಾಯ ನಮಃ
೭೦. ಓಂ ಶಂಗಾಯ ನಮಃ
೭೧. ಓಂ ಪ್ರಮಾಯ ನಮಃ
೭೨. ಓಂ ಸುವೀರಾಯ ನಮಃ
೭೩. ಓಂ ಸುಘೋರಾಯ ನಮಃ
೭೪. ಓಂ ಅಕ್ಷೋಭ್ಯಕ್ಷೋಭಣಾಯ ನಮಃ
೭೫. ಓಂ ಸುಪ್ರಜಾಯ ನಮಃ
೭೬. ಓಂ ಸುಮೇಧ್ಯಾಯ ನಮಃ
೭೭. ಓಂ ಸುಧಾಮ್ನೇ ನಮಃ
೭೮. ಓಂ ಅನಂತಚಕ್ಷುಷೇ ನಮಃ

ಸುವೀರಾಯ ಸುಘೋರಾಯ ಅಕ್ಷೋಭ್ಯಕ್ಷೋಭಣಾಯ ಚ ।
ಸುಪ್ರಜಾಯ ಸುಮೇಧ್ಯಾಯ ಸುಧಾಮ್ನೇಽನಂತಚಕ್ಷುಷೇ ॥೫೮॥

ನಮೋ ಬುದ್ಧಾಯ ಶುದ್ಧಾಯ ಬದ್ಧಮೋಕ್ಷಾಯ ತೇ ನಮಃ ।
ನಮಸ್ತೇ ಭೂತಭವ್ಯಾಯ ವರ್ತಮಾನಾಯಶ್ರೀಮತೇ ॥೫೯॥

ನಮೋ ಭವಾಯ ಭದ್ರಾಯ ಘನಘೋಷಾಯ ತೇ ನಮಃ ।
ಪ್ರಪನ್ನಜನರಕ್ಷಾಯ ಭಕ್ತಪಾಪಹರಾಯ ಚ ॥೬೦॥

ಸಾಕೇತವಾಸಗೋಪ್ತ್ಯಾಯ ಯಮಗರ್ವಹರಾಯ ಚ ।
ಭದ್ರಾಯ ರುದ್ರರೂಪಾಯ ತಂದ್ರಾಯ ಚ ನಮೋ ನಮಃ ॥೬೧॥

ನಮಃ ಸ್ಥೂಲಾಯ ಸೂಕ್ಷ್ಮಾಯ ದೃಶ್ಯಾದೃಶ್ಯಾಯ ಗೋಪ್ತ್ರಿಣೇ ।
ವರ್ಷತೇ ಜ್ವಲತೇ ಚೈವ ಗ್ರಸತೇ ಹ್ರಸತೇ ನಮಃ ॥೬೨॥

---

೭೯. ಓಂ ಬುದ್ಧಾಯ ನಮಃ
೮೦. ಓಂ ಶುದ್ಧಾಯ ನಮಃ
೮೧. ಓಂ ಬದ್ಧಮೋಕ್ಷಾಯ ನಮಃ
೮೨. ಓಂ ಭೂತಭವ್ಯಾಯ ನಮಃ
೮೩. ಓಂ ವರ್ತಮಾನಾಯ ನಮಃ
೮೪. ಓಂ ಶ್ರೀಮತೇ ನಮಃ
೮೫. ಓಂ ಭವಾಯ ನಮಃ
೮೬. ಓಂ ಭದ್ರಾಯ ನಮಃ
೮೭. ಓಂ ಘನಘೋಷಾಯ ನಮಃ
೮೮. ಓಂ ಪ್ರಸನ್ನಜನರಕ್ಷಾಯ ನಮಃ
೮೯. ಓಂ ಭಕ್ತಪಾಪಹರಾಯ ನಮಃ
೯೦. ಓಂ ಸಾಕೇತವಾಸಗೋಪ್ತ್ಯಾಯ ನಮಃ
೯೧. ಓಂ ಯಮಗರ್ವಹರಾಯ ನಮಃ
೯೨. ಓಂ ಭದ್ರಾಯ ನಮಃ
೯೩. ಓಂ ರುದ್ರರೂಪಾಯ ನಮಃ
೯೪. ಓಂ ತಂದ್ರಾಯ ನಮಃ
೯೫. ಓಂ ಸ್ಥೂಲಾಯ ನಮಃ
೯೬. ಓಂ ಸೂಕ್ಷ್ಮಾಯ ನಮಃ
೯೭. ಓಂ ದೃಶ್ಯಾದೃಶ್ಯಾಯ ನಮಃ
೯೮. ಓಂ ಗೋಪ್ತ್ರಿಣೇ ನಮಃ
೯೯. ಓಂ ವರ್ಷತೇ ನಮಃ
೧೦೦. ಓಂ ಜ್ವಲತೇ ನಮಃ
೧೦೧. ಓಂ ಗ್ರಸತೇ ನಮಃ
೧೦೨. ಓಂ ಹ್ರಸತೇ ನಮಃ
೧೦೩. ಓಂ ಸುಚಾರುಕೇಶಾಯ ನಮಃ
೧೦೪. ಓಂ ಊರುವಕ್ಷಶ್ಶಿಖಾಯ ನಮಃ
೧೦೫. ಓಂ ಸುವರ್ಣಾಯ ನಮಃ
೧೦೬. ಓಂ ತಪನೀಯನಿಭಾಯ ನಮಃ
೧೦೭. ಓಂ ವಿರೂಪಾಕ್ಷಾಯ ನಮಃ
೧೦೮. ಓಂ ಪ್ರಸನ್ನಾಯ ಸರ್ವರೂಪಾಯ ನಮಃ

ನಮಃ ಸುಚಾರುಕೇಶಾಯ ಊರುವಕ್ಷಃಶ್ಶಿಖಾಯ ಚ ।
ನಮೋನಮಃ ಸುವರ್ಣಾಯ ತಪನೀಯನಿಭಾಯ ಚ ॥೬೩॥

ವಿರೂಪಾಯ ಪ್ರಸನ್ನಾಯ ಸರ್ವರೂಪಾಯ ತೇ ನಮಃ ।
ದೇವಿ ನಾಮಶತಾಷ್ಟೇನ ಪೂಜಯೇಜ್ಜ್ಯೇಷ್ಠಮಾಸಿಕೇ ॥೬೪॥

ಸ್ತುವೀತ್ಯೈವಂ ಮಹಾದೇವಂ ಸ್ತ್ರವ್ಯೇನಾನೇನ ಸರ್ವದಾ ।
ತಸ್ಯಾಹಂ ಪರಮಂ ಪ್ರೀತೋ ದಿಶಾಮಿ ಪರಮಾಂ ಗತಿಂ ॥೬೫॥

ಶಂಭೋ ಭೂಮಿಕಶಾಂಗಸಂಗರಹಿತಾನಂಗಾಂಗಫಾಲಾನಲ
ಜ್ವಾಲಾಪಾಂಗಪತಂಗವತ್ಕೃತ ಮಹಾನೇತ್ರೇ ಶತಾಂಗಪ್ರಭೋ ।
ಭಸ್ಮಾಭ್ಯಂಗ ಕುರಂಗಸಂಗಸುಕರಸ್ಫಾರಸ್ಫುರನ್ಗಾಂಗ ಸ
ಲ್ಲೀಲಾಲೋಲ ಮಹೋತ್ತಮಾಂಗಭಗವಂ ಭಂಗಾವ ಮಾಂ ಸರ್ವದಾ ॥೬೬॥

ವಿಶ್ವೇಶಾನ ದಯಾನಿಧಾನ ಭಗವನ್ಪಾಹೀಶ ಪಂಚಾನನ
ಸ್ವಾಮಿನ್ಪೈತೃಕಕಾನನಪ್ರಿಯವಸ ವ್ಯಾಘ್ರಾಜಿನಾಲಂಕೃತ ।

---

ದೇವಿಯೇ, ಈರೀತಿ ಜ್ಯೇಷ್ಠಮಾಸದಲ್ಲಿ ನನ್ನನ್ನು ಈ ನೂರೆಂಟು ನಾಮಗಳಿಂದ ಪೂಜಿಸಬೇಕು. ॥೪೭-೪೮-೪೯-೫೦-೫೧-೫೨-೫೩-೫೪-೫೫-೫೬-೫೭-೫೮-೫೯-೬೦-೬೧-೬೨-೬೩-೬೪॥

ಪೂಜಾನಂತರ ಮುಂದೆ ಹೇಳುವಂತೆ ಮಹಾದೇವನನ್ನು ಈರೀತಿ ಸ್ತೋತ್ರ ಮಾಡಬೇಕು. ಹಾಗೆಮಾಡುವವನ ವಿಷಯದಲ್ಲಿ ಪ್ರೀತನಾಗಿ ನಾನು ಅವನಿಗೆ ಸದ್ಗತಿಯನ್ನೀಯುವೆನು. ॥೬೫॥

" ಭೂಮಿಯೆಂಬ ರಥದಲ್ಲಿ ಕುಳಿತು ಯುದ್ಧಮಾಡಿದ ಶಂಕರನೆ! ಮನ್ಮಥನನ್ನು ಹಣೆಗಣ್ಣಿನ ಬೆಂಕಿಯ ಜ್ವಾಲೆಯಿಂದ ಪತಂಗದಂತೆ ಧ್ವಂಸಮಾಡಿದ ಮಹಾನೇತ್ರವುಳ್ಳವನೇ, ನೀನು ಭಸ್ಮಲೇಪಿತದೇಹನು. ಕೈಯಲ್ಲಿಜಿಂಕೆಯನ್ನುಹಿಡಿದು ಶೋಭಿಸುವವನು, ವಿಶಾಲವಾಗಿಶೋಭಿಸುವ ಗಂಗಾನದಿಯ ಜಲಧಾರೆಯಿಂದ ಚಂಚಲವಾದ ದೊಡ್ಡತಲೆಯುಳ್ಳವನು. ಸುಖಪ್ರದನು. ಇಂತಹ ಮಹಾಮಹಿಮನಾದ ಭಗವಂತನೆ! ನನ್ನನ್ನು ಯಾವಾಗಲೂ ರಕ್ಷಿಸು. ॥೬೬॥

ಜಗತ್ತಿನೊಡೆಯನೆ! ದಯಾನಿಧಿಯೇ! ಕ್ರೀಡಾದಿಷಡ್ಗುಣಪರಿಪೂರ್ಣನೆ! ಐದುಮುಖವುಳ್ಳ ಈಶನೆ! ಕಾಪಾಡು; ಸ್ವಾಮಿಯೇ! ಪಿತೃವನವಾಸದಲ್ಲಿ ಆಂದರೆ

ದೀನಾನಾಮವನಾಯ ಕಾಲಕಲನಾಹೀನಾಯ ದಾನಾಧಿಕಾ
ದಾನಾಯಾಸ್ತುವತೇ ಸ್ತುತೇ ದೃಶಿ ಸದಾ ಕಾರುಣ್ಯನಾರಾಂನಿಧಿಃ ॥೬೭॥

ಮಯಸ್ಕರ ಸುತಸ್ಕರಪ್ರವರ ಪಾಹಿ ವಿಶ್ವೇಶ್ವರ
ಪ್ರಸೀದ ಪರಮೇಶ್ವರ ತ್ರಿಪುರಮಾರದೇಹಂಕರ ।
ಜಲಂಧರ ಗರಂಧರ ಪ್ರಮುಥದೇಪ ಶಂಭೋ ಹರ
ಪ್ರಸೀದ ದಯಯಾಽಧುನಾ ಶಿವದ ಪಾಹಿ ಗಂಗಾಧರ ॥೬೮॥

ಶರ್ವಸರ್ವದ ಸುಪರ್ವಪೂಜಿತ
ಪರ್ವತೇಶತನಯಾಪ್ರಿಯಪ್ರಭೋ ।
ಕಾಲಗರ್ವಹರ ಖರ್ವವಿಷ್ಣುಹೃತ್
ಕಮಲವಾಸ ಭಗವನ್ಪ್ರಸೀದ ಮಾಂ ॥೬೯॥

---

ಸ್ಮಶಾನದಲ್ಲಿ ಪ್ರೀತಿಯುಳ್ಳವನೆ! ಹುಲಿಯ ಚರ್ಮವನ್ನು ಅಲಂಕರಿಸಿಕೊಂಡಿರುವವನೆ! ಭಕ್ತರಲ್ಲಿ ದೀನರಾದವರನ್ನು ರಕ್ಷಿಸುವುದಕ್ಕೂ, ಯಮನನ್ನು ಧ್ವಂಸಗೊಳಿಸುವುದಕ್ಕೂ, ಅನೇಕವರಗಳನ್ನು ಪಡೆಯುವುದಕ್ಕೂ, ನೀನು ಅನೇಕ ದೇವತೆಗಳಿಂದ ನಾನಾರೀತಿ ಸ್ತುತಿಸಲ್ಪಟ್ಟಿರುವೆ. ಹಾಗೆ ಭಕ್ತಿಯಿಂದ ಸ್ತೋತ್ರಮಾಡಿದವರಲ್ಲಿ ನೀನು ದಯಾಶಾಲಿಯಾಗಿದ್ದು ಅವರ ಸಕಲರಕ್ಷಣೆಯ ಭಾರವನ್ನೂ ಸದಾ ವಹಿಸಿಕೊಂಡಿರುವೆ. ॥೬೭॥

ಸುಖಕರನೂ, ವೇಷಾಂತರಗಳಿಂದ ತಸ್ಕರರೂಪದಲ್ಲಿ ತೋರುವವನೂ ಜಗತ್ಸ್ವಾಮಿಯೂ, ಪರಮೈಶ್ವರ್ಯಸಂಪನ್ನನೂ ತ್ರಿಪುರರನ್ನು ಮನ್ಮಥನಂತೆ ಸುಟ್ಟವನೂ, ಜಲಂಧರನೆಂಬ ರಾಕ್ಷಸನನ್ನು ಧ್ವಂಸಮಾಡಿ ಕಾಲಕೂಟವಿಷವನ್ನು ಕೊರಳಲ್ಲಿರಿಸಿಕೊಂಡಿರುವವನೂ, ದೇವತೆಗಳಲ್ಲಿ ಅಗ್ರಗಣ್ಯನೂ, ಸುಖಕಾರಣನೂ, ಪಾಪನಾಶಕನೂ ಮಂಗಳಪ್ರದನೂ, ಗಂಗಾಧರನೂ ಆದ ಪರಶಿವನೆ! ಪ್ರಸನ್ನನಾಗು ದಯವಿಟ್ಟು ಈಗ ನಮ್ಮನ್ನು ಕಾಪಾಡು. ॥೬೮॥

ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಹಿಂಸಿಸುವನೂ, ಸಮಸ್ತ ಇಷ್ಟಾರ್ಥಗಳನ್ನು ಕೊಡುವವನೂ, ದೇವತೆಗಳಿಂದ ಪೂಜಿಸಲ್ಪಟ್ಟವನೂ, ಪಾರ್ವತೀರಮಣನೂ, ಯಮನ ಅಹಂಕಾರವನ್ನಡಗಿಸಿದವನೂ, ವಾಮನರೂಪಿಯಾದ ವಿಷ್ಣುವಿನ ಹೃದಯಕಮಲವಾಸಿಯೂ, ಭಗವಂತನೂ ಆದ ಪ್ರಭುವೇ! ನನ್ನಲ್ಲಿ ಪ್ರಸನ್ನನಾಗು. ॥೬೯॥

ಭವ ಭವಭಯಹರ ಭೀಮ ಭವಾಂತಕ
ಭಾವಹೃದಂತರ ಸುಂದರವಿಗ್ರಹ ।
ಪಾಹಿ ಶಿವಾವ್ಯಯ ದೇವದಯಾಕರ
ಶಂಕರ ಸುಖಕರ ಶಂಕುರು ಮೇ ॥೨೦॥

ಸ್ತವೇನಾನೇನ ದೇವೇಶಿ ಸ್ತುವೀತ ಪರಮೇಶ್ವರಂ ।
ಜ್ಯೇಷ್ಠೇ ಮಾಸಿ ವಿಶೇಷೇಣ ನಕ್ತಭುಕ್ತೋಽಥ ಹವ್ಯಭುಕ್ ॥೨೧॥

ಏಕವಾರಂ ದ್ವಿವಾರಂ ವಾ ತ್ರಿವಾರಂ ವಾ ಯಜೇಚ್ಛಿವಂ ।
ಜ್ಯೇಷ್ಠಾಯಾಮಥ ಪೌರ್ಣಮ್ಯಾಂ ಹೋಮಃ ಕಾರ್ಯೋ ಯಥಾವಿಧಿ ॥೨೩॥

ದದ್ಯಾದ್ಗೋಮಿಥುನಂ ತೇಭ್ಯೋ ಸವತ್ಸಂ ಚ ಸದಕ್ಷಿಣಾಂ ।
ದೀನಾನಾಥಾನ್ಭೋಜಯಿತ್ವಾ ಸ್ವಯಂ ಭುಂಜೀತ ಬಂಧುಭಿಃ ॥೨೩॥

ಜ್ಯೇಷ್ಠಮಾಸಾರ್ಚನಂ ದೇವಿ ಕಥಿತಂ ತೇ ಸಮಾಹಿತಃ ।
ಯತ್ಕೃತ್ವಾ ಮನುಜಃ ಸದ್ಯೋ ಲಭೇತ್ಫಲಮನುತ್ತಮಂ ॥೨೪॥

---

ಜಗದುತ್ಪತ್ತಿಕಾರಣನೂ, ಸಂಸಾರಭೀತಿಯನ್ನು ಹೋಗಲಾಡಿಸುವವನೂ, ಶತ್ರುಭಯಂಕರನೂ, ಸಂಸಾರಭೀತಿವೈರಿಯೂ, ಶೈವರ ಹೃದಯಮಧ್ಯದಲ್ಲಿ ಸುಂದರ ರೂಪಿನಿಂದ ನೆಲಸಿರುವವನೂ, ಮಂಗಳಸ್ವರೂಪನೂ, ಅಚ್ಯುತನೂ, ದಯಾರ್ಣವನೂ, ಸುಖಕರನೂ ಆದ ಶಂಕರನೆ! ನನಗೆ ಸುಖವನ್ನುಂಟುಮಾಡು." ॥೨೦॥

ಎಲೌ ದೇವೇಶ್ವರಿಯೇ, ಜ್ಯೇಷ್ಠಮಾಸದಲ್ಲಿ ವಿಶೇಷವಾಗಿ ಈ ಸ್ತೋತ್ರದಿಂದ ಪರಮೇಶ್ವರನನ್ನು ಸ್ತೋತ್ರಮಾಡಬೇಕು. ರಾತ್ರಿವೇಳೆ ಮಾತ್ರ ಊಟಮಾಡುತ್ತಾ, ಹವಿಸ್ಸನ್ನು ಭುಜಿಸುತ್ತಾ ಒಂದು, ಎರಡು ಅಥವಾ ಮೂರು ಬಾರಿಯಾದರೂ ಶಿವನನ್ನು ಪೂಜಿಸಬೇಕು. ಜ್ಯೇಷ್ಠಮಾಸದ ಹುಣ್ಣಿಮೆಯ ದಿನ ವಿಧಿಯನ್ನು ಮೀರದೇ ಹೋಮಮಾಡಬೇಕು. ಅನಂತರ ಶೈವರಿಗೆ ಒಂದು ಜೊತೆ ಗೋವುಗಳನ್ನು ಕರು ಮತ್ತು ಉಚಿತವಾದ ದಕ್ಷಿಣೆಯೊಡನೆ ದಾನಮಾಡಬೇಕು. ಆಮೇಲೆ ದೀನರಿಗೂ ಅನಾಥರಿಗೂ ಭೋಜನ ಮಾಡಿಸಿ ತಾನೂ ತನ್ನ ಬಂಧುಗಳೊಡನೆ ಊಟಮಾಡಬೇಕು. ದೇವಿ! ಹೀಗೆ ಜ್ಯೇಷ್ಠಮಾಸಪೂಜೆಯನ್ನು ಸಂಗ್ರಹವಾಗಿ ನಿನಗೆ ಹೇಳಿರುವೆನು. ಇದನ್ನು ಮಾಡಿದ ಮಾನವನು ಕೂಡಲೇ ಉತ್ತಮಫಲವನ್ನು ಪಡೆಯುವನು. ॥೨೧-೨೨-೨೩-೨೪॥

ಶಿವಾಲಯೇ ಲಿಂಗವೌಲೌ ಗ್ರೀಷ್ಮೇ ದದ್ಯಾದ್ಗಲಂತಿಕಾಂ ।
ಮಾಸದ್ವಯಂ ಸುಶೀತೇನ ಗಂಧಿತೇನ ಜಲೇನ ಚ ॥೭೫॥

ಸಛಿದ್ರಂ ಕಾರಯೇತ್ಕುಂಭಂ ಧಾರಯೇತ್ತದಹರ್ನಿಶಂ ।
ಕೃತ್ವೈವಂ ಯಾತಿ ಸದನಂ ಮದನಾಂತಸ್ಯ ಮೇ ಶಿವೇ ॥೭೬॥

ವಂಶಸಾಹಸ್ರಸಹಿತೋ ವಿಮಾನೇನಾರ್ಕರೋಚಿಷಾ ॥೭೭॥

॥ ಈಶ್ವರ ಉವಾಚ ॥

ಸದಾ ಕಾಲಕಾಲಂ ಹೃದಾ ಭಾವಯಂತಃ
ಕೃತಾಂತಾದ್ಭಯಂ ಸಂತ್ಯಜಂತ್ಯೇವ ಸಂತಃ ।
ಮುದಾ ಬಿಲ್ವಪತ್ರೈಃ ಶಿವಂ ಪೂಜಯಂತೋ
ಭಿದಾ ನೈವ ಪಶ್ಯಂತಿ ಲೋಕಂ ಪ್ರಶಾಂತಾಃ ॥೭೮॥

ಜ್ಯೇಷ್ಠೇ ವಿಶಿಷ್ಟಶಿಪಿವಿಷ್ಟಸದೇಷ್ಟಲಿಂಗಂ
ಸಂಪೂಜಕೋಽಷ್ಟಾಕೃತಿವಲ್ಲಭಃ ಸ್ಯಾತ್ ।

---

ಶಿವದೇವಾಲಯದಲ್ಲಿ, ಜ್ಯೇಷ್ಠಆಷಾಢ ಎಂಬ ಎರಡುತಿಂಗಳಿನ ಬೇಸಗೆಯಲ್ಲಿಯೂ ಲಿಂಗದತಲೆಯಮೇಲೆ ತುಂಬಾತಣ್ಣಗಿರುವ ಸುಗಂಧೋದಕದಿಂದ ಧಾರೆಯು ಬೀಳುತ್ತಿರುವಂತೆ ಧಾರಾಪಾತ್ರೆಯನ್ನಿರಿಸಬೇಕು. ಗಡಿಗೆಯಲ್ಲಿ ರಂಧ್ರಗಳನ್ನುಮಾಡಿ ಹಗಲಿರುಳೂ ಅದರಿಂದ ನೀರು ಬೀಳುತ್ತಿರುವಂತೆ ಏರ್ಪಡಿಸಬೇಕು. ಪಾರ್ವತಿಯೇ, ಹೀಗೆ ಮಾಡಿದವನು ಸೂರ್ಯನಂತೆ ಕಾಂತಿಯುಳ್ಳ ವಿಮಾನದಲ್ಲಿಕುಳಿತು ತನ್ನ ಸಹಸ್ರವಂಶೀಕರೊಡನೆ, ಮನ್ಮಥಾಂತಕನಾದ ನನ್ನ ಲೋಕವನ್ನೈದುವನು. ॥೭೫-೭೬-೭೭॥

ಯಾವಾಗಲೂ ಯಮಾಂತಕನಾದ ಶಿವನನ್ನು ಮನಸ್ಸಿನಲ್ಲಿ ಧ್ಯಾನಿಸುವ ಸತ್ಪುರುಷರು ಯಮಭಯವನ್ನು ಸಂಪೂರ್ಣವಾಗಿ ತೊರೆದುಬಿಡುವರು. ಸಂತೋಷವಾಗಿ ಬಿಲ್ವದಳಗಳಿಂದ ಶಿವನನ್ನು ಪೂಜಿಸುವವರು ಈ ಲೋಕದಲ್ಲಿ ಯಾವ ಮನಃಕಷಾಯವನ್ನೂ ಪಡೆಯದೆ ಯಾವಾಗಲೂ ಶಾಂತಚಿತ್ತರಾಗಿಯೇ ಜೀವಿಸುವರು. ॥೭೮॥

ಜ್ಯೇಷ್ಠಮಾಸದಲ್ಲಿ ಶ್ರೇಷ್ಠವಾದ ಶಿವನ ಇಷ್ಟವಾದ ಲಿಂಗವನ್ನು ಯಾವಾಗಲೂ ಪೂಜಿಸುವವನು ಪರಶಿವನ ಪ್ರೀತಿಗೆ ಪಾತ್ರನಾಗುವನು. ದುಷ್ಟ, ಕನಿಷ್ಠ,

ದುಷ್ಟಃ ಕನಿಷ್ಠೋಽಪಿ ಚ ಕುಷ್ಠಿತಾಂಗೋ
ದುಷ್ಟಶ್ಚ ಮದ್ಭಕ್ತತರೋ ವಿಶಿಷ್ಟಃ ||೭೯||

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಜ್ಯೇಷ್ಠಮಾಸಾರ್ಚನವಿಧಿನಿರೂಪಣಂ
ನಾಮ ಷೋಡಶೋಽಧ್ಯಾಯಃ

---

ಮತ್ತು ಕುಷ್ಠರೋಗಿ ಅಥವಾ ಕುಪಿತ ಇವರು ಯಾರು ನನ್ನ ಭಕ್ತರಾಗಿದ್ದರೂ ಅವರು ಶ್ರೇಷ್ಠರೇ ಎನಿಸುವರು. ಇದರಲ್ಲಿ ಸಂಶಯವಿಲ್ಲ ಎಂದು ಶಿವನು ಪಾರ್ವತಿಗೆ ಹೇಳಿದನು. ||೭೯||

ಇಂತು ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಜ್ಯೇಷ್ಠಮಾಸ
ಪೂಜಾವಿಧಿವರ್ಣನೆಯೆಂಬ ನಾಮ ಹದಿನಾರನೆಯ ಅಧ್ಯಾಯವು
ಮುಗಿಯಿತು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಸಪ್ತದಶೋಽಧ್ಯಾಯಃ

|| ಶ್ರೀ ಮಹಾದೇವ ಉವಾಚ ||

ಆಷಾಢಾರ್ಚನಮಾಷಾಢೇ ಪ್ರವಕ್ಷ್ಯಾಮಿ ಶೃಣುಷ್ವ ತತ್ ।
ಯತ್ಕೃತ್ವಾ ಮನುಜಃ ಸದ್ಯೋ ಮಮೇಷ್ಟಗಣಪೋ ಭವೇತ್ ॥೧॥

ಗಣಪೈಶ್ಚ ಪುರಾ ಚೀರ್ಣಂ ವ್ರತಮಾಷಾಢಮಾಸಿಕಂ ।
ಸ್ನಾತ್ವಾ ನದ್ಯಾಂ ಬಹಿರ್ದೇಶೇ ಸರಸ್ಯಪಿ ಚ ಪಾವನೇ ॥೨॥

ಹೃದಿ ಧ್ಯಾತ್ವಾ ಮಹಾದೇವಂ ಮಾಮೀಶಮುಮಯಾ ತ್ವಯಾ ।
ಪ್ರಾಣಾನಾಯಮ್ಯ ಸಂಕಲ್ಪ್ಯ ಭೈರವಾನನುಮಾನ್ಯ ಚ ॥೩॥

---

## ಹದಿನೇಳನೆಯ ಅಧ್ಯಾಯ

ಪಾರ್ವತಿಯೇ, ಈಗ ಆಷಾಢಮಾಸದಲ್ಲಿ ಮಾಡುವ ಶಿವಪೂಜೆಯ ವಿಧಿಯನ್ನು ಹೇಳುವೆನು ಕೇಳು; ಇದರಂತೆ ಶಿವಾರ್ಚನೆ ಮಾಡಿದ ಮನುಜನು ಕೂಡಲೇ ನನ್ನ ಇಷ್ಟವಾದ ಗಣಾಧಿಪತಿಯ ಅಧಿಕಾರವನ್ನು ಪಡೆಯುವನು. ||೧||

ಹಿಂದೆ ಈ ಆಷಾಢಮಾಸದ ವ್ರತವನ್ನು ಈಗ ಇಲ್ಲಿರುವ ಗಣಾಧಿಪತಿಗಳೆಲ್ಲರೂ ಮಾಡಿರುವರು. ನದಿಯಲ್ಲಿ ಅಥವಾ ಪವಿತ್ರವಾದ ಸರಸ್ಸಿನಲ್ಲಿ ಅಥವಾ ಕೊಳದಲ್ಲಿ ಸ್ನಾನಮಾಡಿ ಮನಸ್ಸಿನಲ್ಲಿ ಉಮೆಯೆನಿಸಿದ ನಿನ್ನೊಡನೆ ಮಹಾದೇವನೂ, ಈಶ್ವರನೂ ಎನಿಸಿದ ನನ್ನನ್ನು ಧ್ಯಾನಮಾಡಿ, ಪ್ರಾಣಯಾಮ, ಸಂಕಲ್ಪಗಳನ್ನು ಮಾಡಿಕೊಂಡು ಭೈರವನ ಅನುಮತಿಪಡೆದು, ನೀರಿನಲ್ಲಿರುವ ಏಕಾದಶರುದ್ರರ ಅನುಜ್ಞೆಯನ್ನೂ

ಆಪ್ಲುಸಂಸ್ಥಾಂಭಿವೇ ರುದ್ರಾನನುಜ್ಞಾಪ್ಯ ಮೃದಂ ತತಃ ।
ತಟೇ ಸಂಸ್ಥಾಪ್ಯ ಸಂಸ್ನಾಯೇತ್ತ್ರಿರಾಚಮ್ಯ ಶಿವಂ ಸ್ಮರನ್ ॥೪॥

ಅಬ್ಲಿಂಗೈರ್ವಾರುಣೈರ್ಮಂತ್ರೈಃ ಸ ಪವಿತ್ರಕರಃ ಶುಚಿಃ ।
ಬಿಭೃಯಾದ್ಧೌತವಸನೇ ಪಾದೌ ಪ್ರಕ್ಷಾಲಯೇತ್ತತಃ ॥೫॥

ಅಗ್ನಿರಿತ್ಯಾದಿಭಿರ್ಮಂತ್ರೈಃ ವಿಮೃಜ್ಯಾಂಗಾನಿ ಭಸ್ಮಧೃಕ್ ।
ತ್ರಿಯಾಯುಷೇಣಮಂತ್ರೇಣ ತ್ರಿಪುಂಡ್ರಪರಿಶೋಭಿತಃ ॥೬॥

ತ್ರಿಯಂಬಕೇನ ಮಂತ್ರೇಣ ರುದ್ರಾಕ್ಷಾನ್ಧಾರಯೇತ್ತನೌ ।
ಶಿರೋಲಲಾಟಹೃದಯೇ ಕಂಠಬಾಹ್ವೋಶ್ಚ ಕರ್ಣಯೋಃ ॥೭॥

ದ್ವಾತ್ರಿಂಶತ್ಕಂಠಮೂಲೇ ಚ ಚತ್ವಾರಿಂಶತಿಮಸ್ತಕೇ ।
ಭ್ರುವೋರೇಕಂ ಶಿಖಾಯಾಂ ಚ ಕರ್ಣಯೋಃ ಷಟ್ಪ್ರಕೀರ್ತಿತಾಃ ॥೮॥

ಬಾಹ್ವೋಃ ಷೋಡಶ ದೇವೇಶಿ ಹಸ್ತಯೋರ್ದ್ವಾದಶೈವ ಹಿ ।
ಪುಣ್ಯಾಮಲಕಮಾನೇನ ಮಾಲಾಂ ವಕ್ಷಸಿ ಧಾರಯೇತ್ ॥೯॥

---

ಹೊಂದಿ ಮಣ್ಣನ್ನು ದಡದಲ್ಲಿ ಇರಿಸಿ, ಮೂರುಸಲ ಆಚಮನಮಾಡಿ ಶಿವನನ್ನು ಸ್ಮರಿಸುತ್ತಾ ಸ್ನಾನಮಾಡಬೇಕು. ॥೨-೩-೪॥

ಅಬ್ಲಿಂಗಗಳೆನಿಸಿದ ಮತ್ತು ವಾರುಣಮಂತ್ರಗಳಿಂದ ಸ್ನಾನಮಾಡಿ ಪವಿತ್ರಪಾಣಿಯಾಗಿ ಶುದ್ಧನಾಗಿರುವ ಭಕ್ತನು ಒಗೆದ ಮಡಿಬಟ್ಟೆಗಳನ್ನು ಧರಿಸಬೇಕು. ಅನಂತರ ಪುನಃ ಕಾಲುಗಳನ್ನು ತೊಳೆದುಕೊಂಡು 'ಅಗ್ನಿರಾಯುಷ್ಮಾನ್' ಮುಂತಾದ ಮಂತ್ರಗಳಿಂದ ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿ 'ತ್ರಿಯಾಯುಷ'ಮಂತ್ರದಿಂದ ಭಸ್ಮತ್ರಿಪುಂಡ್ರಪರಿಶೋಭಿತನಾಗಿ, 'ತ್ರಿಯಂಬಕ' ಮಂತ್ರದಿಂದ ತಲೆ, ಹಣೆ, ಹೃದಯ, ಕೊರಳು, ತೋಳು ಮತ್ತು ಕಿವಿಗಳಲ್ಲಿ ರುದ್ರಾಕ್ಷಗಳನ್ನು ಧಾರಣೆ ಮಾಡಬೇಕು. ॥೫-೬-೭॥

ಕಂಠಮೂಲದಲ್ಲಿ ಮೂವತ್ತೆರಡು, ತಲೆಯಲ್ಲಿ ನಲವತ್ತು, ಹುಬ್ಬುಗಳಲ್ಲೊಂದೊಂದು, ಶಿಖೆಯಲ್ಲಿ ಒಂದು, ಎರಡು ಕಿವಿಗಳಲ್ಲಿ ಆರಾರು, ತೋಳುಗಳಲ್ಲಿ ಹದಿನಾರು, ಕೈಗಳಲ್ಲಿ ಹನ್ನೆರಡು ಈ ರೀತಿಯಾಗಿ ಪುಣ್ಯಪ್ರದವಾದ ನೆಲ್ಲಿಯಕಾಯಿನ ಪ್ರಮಾಣದಿಂದಿರುವ ರುದ್ರಾಕ್ಷಮಾಲೆಯನ್ನು ಎದೆಯಲ್ಲಿ ಧರಿಸಬೇಕು. ॥೮-೯॥

ಶತಾಷ್ಟಕಲಿತಾ ಭಕ್ತ್ಯಾ ತದೂರ್ಧ್ವಂ ಚ ಪ್ರಶಸ್ಯತೇ ।
ಜಪಮಾಲಾಂ ತಥಾ ಕುರ್ಯಾತ್ಸಮಾಸ್ಯಾಂ ಲಕ್ಷಣೈರ್ಯುತಾಂ ॥೧೦॥

ಸ್ವರ್ಣೇನ ರಾಜತೇನಾಪಿ ಸೂತ್ರಾಕ್ಷಗ್ರಥಿತಾಂ ಶುಭಾಂ ।
ಅಷ್ಟೋತ್ತರಶತಂ ಕುರ್ಯಾಚ್ಚತುಃಪಂಚಾಶದೇವ ವಾ ॥೧೧॥

ಪಂಚವಿಂಶತಿ ಮಾನಾ ವಾ ತತೋ ಹೀನಾಧಮಾಸ್ಮೃತಾ ।
ಮೋಕ್ಷಾರ್ಥೀ ಪಂಚವಿಂಶತ್ಯಾ ಧನಾರ್ಥೀ ತ್ರಿಂಶತಾ ಜಪೇತ್ ॥೧೨॥

ಪುಷ್ಟ್ಯರ್ಥೀ ಪಂಚವಿಂಶತ್ಯಾ ಪಂಚದಶ್ಯಾಭಿಚಾರಕೇ ।
ಸಪ್ತವಿಂಶತಿರುದ್ರಾಕ್ಷಮಾಲಾಯಾಸ್ತ್ರೀವಶಂಕರಂ ॥೧೩॥

ಏವಂ ಕುರ್ಯಾತ್ಸದಾ ಮಾಲಾಮಾಸ್ಯಮಾಸ್ಯೇನ ಯೋಜಯೇತ್ ।
ಏಕವಕ್ತ್ರಃ ಶಿವಃ ಸಾಕ್ಷಾದ್ಬ್ರಹ್ಮಹತ್ಯಾಂ ವ್ಯಪೋಹತಿ ॥೧೪॥

---

ನೂರೆಂಟು ರುದ್ರಾಕ್ಷಗಳಿಂದ ಯುಕ್ತವಾದ ಜಪಮಾಲೆಯು ಮಧ್ಯಮವು. ಅದಕ್ಕಿಂತಲೂ ಹೆಚ್ಚಿನ ಸಂಖ್ಯೆಯುಳ್ಳದ್ದು ಪ್ರಶಸ್ತವೆನಿಸುವುದು. ಜಪಮಾಲೆಯು ಸಮಾನವಾದ ಮುಖಯುಕ್ತವಾಗಿಯೂ, ಲಕ್ಷಣಪೂರ್ಣವೂ, ಚಿನ್ನ ಅಥವಾ ಬೆಳ್ಳಿಯ ತಂತಿಗಳಿಂದ ಸುತ್ತಲ್ಪಟ್ಟಿರುವುದಾಗಿಯೂ ಇರಬೇಕು. ನೂರೆಂಟು, ಐವತ್ತ ನಾಲ್ಕು, ಇಪ್ಪತ್ತೈದು ಈ ಪ್ರಮಾಣಗಳಲ್ಲಿ ಜಪಸರವು ಮಾಡಲ್ಪಟ್ಟಿರಬೇಕು. ಅದಕ್ಕಿಂತ ಕಡಿಮೆಯಾದುದು ಅಧಮವೆನಿಸಿಕೊಳ್ಳುವುದು. ॥೧೦-೧೧॥

ಮೋಕ್ಷವನ್ನಪೇಕ್ಷಿಸುವವನು ಇಪ್ಪತ್ತೈದು ರುದ್ರಾಕ್ಷಿಗಳುಳ್ಳ ಜಪಸರದಿಂದ ಜಪಿಸಬೇಕು. ಧನಾಪೇಕ್ಷೆಯುಳ್ಳವನು ಮೂವತ್ತರಿಂದಲೂ, ಪುಷ್ಟಿಕಾಮನು ಇಪ್ಪತ್ತೈದರಿಂದಲೂ, ಆಭಿಚಾರಕಕೃತ್ಯಗಳನ್ನೆಸಗುವಾಗ ಹದಿನೈದರಿಂದಲೂ ಜಪ ಮಾಡಬೇಕು. ಇಪ್ಪತ್ತೇಳು ರುದ್ರಾಕ್ಷಗಳುಳ್ಳ ಮಾಲೆಯ ಜಪವು ಸ್ತ್ರೀವಶವನ್ನು ಉಂಟುಮಾಡಿಕೊಡುವುದು. ಹೀಗೆ ಆಯಾ ಉದ್ದೇಶಗಳಿಗನುಗುಣವಾಗಿ ಜಪ ಮಾಲೆಯನ್ನು ಮಾಡಿಸಬೇಕು. ಯಾವಾಗಲೂ ಜಪಮಾಲೆಯನ್ನು ರಚಿಸುವಾಗ ಒಂದರ ಮುಖಕ್ಕೆ ಮತ್ತೊಂದು ಎದುರಾಗಿರುವಂತೆ ಜೋಡಿಸಬೇಕು. ಒಂದು ಮುಖವುಳ್ಳ ರುದ್ರಾಕ್ಷವು ಸಾಕ್ಷಾತ್ತಾದ ಶಿವನೇ ಎಂದರಿಯಬೇಕು. ಇದು ಬ್ರಹ್ಮಹತ್ಯೆಯನ್ನೂ ಸಹ ಹೋಗಲಾಡಿಸುತ್ತದೆ. ॥೧೨-೧೩-೧೪॥

ಅವಧ್ಯತ್ವಂ ಪ್ರತಿಸ್ರೋತಂ ವಹ್ನಿಸ್ತಂಭಂ ಕರೋತಿ ಚ ।
ದ್ವಿವಕ್ತ್ರೋ ಹರಗೌರೀ ಸ್ಯಾತ್ಸ್ವರ್ಣಗೋವಧಪಾಪಹೃತ್ ॥೧೫॥

ತ್ರಿವಕ್ತ್ರೋ ಹ್ಯಗ್ನಿಜನ್ಮಾಥ ಪಾಪರಾಶಿಂ ವಿನಾಶಯೇತ್ ।
ಚತುರ್ವಕ್ತ್ರಃ ಸ್ವಯಂ ಬ್ರಹ್ಮಾ ನರಹತ್ಯಾಂ ವ್ಯಪೋಹತಿ ॥೧೬॥

ಪಂಚವಕ್ತ್ರಸ್ತು ಕಾಲಾಗ್ನಿರಗಮ್ಯಾಭಕ್ಷ್ಯಪಾಪನುತ್ ।
ಷಡ್ವಕ್ತ್ರಸ್ತು ಗುಹೋ ಜ್ಞೇಯೋ ಭ್ರೂಣಹತ್ಯಾದಿ ನಾಶಯೇತ್ ॥೧೭॥

ಸಪ್ತವಕ್ತ್ರಸ್ತ್ವನಂತಃ ಸ್ಯಾತ್ಸ್ವರ್ಣಸ್ತೇಯಾದಿಪಾಪಹೃತ್ ।
ವಿನಾಯಕೋಽಷ್ಟವಕ್ತ್ರಃ ಸ್ಯಾತ್ಸರ್ವಾನೃತವಿನಾಶಕೃತ್ ॥೧೮।

ಭೈರವೋ ನವವಕ್ತ್ರಸ್ತು ಶಿವಸಾಯುಜ್ಯಕಾರಕಃ ।
ದಶವಕ್ತ್ರಃ ಸ್ಮೃತೋ ವಿಷ್ಣುರ್ಭೂತಪ್ರೇತಭಯಾಪಹಃ ॥೧೯॥

---

ಅಲ್ಲದೆ ಪ್ರವಾಹಗಳಲ್ಲಿ ಮರಣವಿಲ್ಲದಿರುವಿಕೆಯನ್ನೂ, ಅಗ್ನಿಸ್ತಂಭನವಿದ್ಯೆಯನ್ನೂ ಮಾಡುವ ಸಾಮರ್ಥ್ಯವುಳ್ಳದ್ದು. ಎರಡು ಮುಖವುಳ್ಳ ರುದ್ರಾಕ್ಷಿಯು ಶಿವ ಮತ್ತು ಗೌರಿಯರ ಸ್ವರೂಪವು. ಇದು ಚಿನ್ನಕದಿಯುವಿಕೆ, ಗೋವಧೆ ಇವುಗಳಿಂದುಂಟಾಗುವ ಪಾಪವನ್ನು ಹೋಗಲಾಡಿಸುವುದು. ಮೂರು ಮುಖದ ರುದ್ರಾಕ್ಷವು ಅಗ್ನಿಜನ್ಮವೆನಿಸಿ ಸಕಲ ಪಾಪರಾಶಿಗಳನ್ನೂ ಹೋಗಲಾಡಿಸುವುದು. ನಾಲ್ಕುಮುಖದ ರುದ್ರಾಕ್ಷವು ಬ್ರಹ್ಮಸ್ವರೂಪವೆನಿಸಿ ಮನುಜಹತ್ಯಾಪಾಪವನ್ನು ಕಳೆಯುವುದು. ಐದು ಮುಖವುಳ್ಳ ರುದ್ರಾಕ್ಷಿಯು ಕಾಲಾಗ್ನಿಸ್ವರೂಪವೆನಿಸಿ, ಗುರುಭಾರ್ಯಾದಿ ಅಗಮ್ಯಾಗಮನ, ಮಾಂಸಾದಿ ಅಭಕ್ಷ್ಯಭಕ್ಷಣರೂಪಪಾಪಗಳನ್ನೆಲ್ಲಾ ತೊಲಗಿಸುವುದು. ಆರುಮುಖದ ರುದ್ರಾಕ್ಷವು ಗುಹಸಂಜ್ಞಕವೆನಿಸಿ, ಭ್ರೂಣಹತ್ಯೆ ಮುಂತಾದ ಪಾತಕಗಳನ್ನು ನಾಶಮಾಡುತ್ತದೆ. ॥೧೫-೧೬-೧೭॥

ಏಳುಮುಖದ ರುದ್ರಾಕ್ಷವು ಅನಂತಸಂಜ್ಞೆಯನ್ನು ಹೊಂದಿ ಚಿನ್ನವನ್ನಪಹರಿಸುವುದೇ ಮುಂತಾದ ಮಹಾಪಾಪಗಳನ್ನು ಹೋಗಲಾಡಿಸುತ್ತದೆ. ಎಂಟು ಮುಖದ ರುದ್ರಾಕ್ಷವು ವಿನಾಯಕಸಂಜ್ಞಕವಾಗಿ ಸಮಸ್ತ ಸುಳ್ಳಾಡಿದ ಪಾಪವನ್ನೂ ನಾಶಮಾಡುವುದು. ಒಂಬತ್ತು ಮುಖವುಳ್ಳ ಭೈರವರುದ್ರಾಕ್ಷವು ಶಿವಸಾಯುಜ್ಯವನ್ನು ಉಂಟುಮಾಡುತ್ತದೆ. ಹತ್ತುಮುಖದ ವಿಷ್ಣುರುದ್ರಾಕ್ಷವು ಭೂತ, ಪ್ರೇತ ಇವುಗಳ ಭಯವನ್ನು ಹೋಗಲಾಡಿಸುವುದು. ಹನ್ನೊಂದು ಮುಖದ ರುದ್ರಸಂಜ್ಞಕ

ಏಕಾದಶಮುಖೋ ರುದ್ರೋ ನಾನಾಯಜ್ಞಫಲಪ್ರದಃ ।
ದ್ವಾದಶಾಸ್ಯೋ ದ್ವಾದಶಾರ್ಕದೇವಕೋ ನಿಂದಕಾಪಹೃತ್ ॥೨೦॥

ತ್ರಯೋದಶಾಸ್ಯಃ ಶ್ರೀಕಂಠಃ ಶೀಘ್ರಂ ಸಂಕುಂಠಯೇದಘಂ ।
ಚತುರ್ದಶಾಸ್ಯೋ ಲೋಕಾತ್ಮಾ ಲೋಕದಾನಫಲಪ್ರದಃ ॥೨೧॥

ಏವಂ ಜ್ಞಾತ್ವಾಸ್ಯ ಮಾಹಾತ್ಮ್ಯಂ ಧಾರಯೇದ್ಭುವಿ ಮಾನವಃ ।
ವಿನಾ ಮಂತ್ರೇಣ ಯೋ ಧತ್ತೇ ರುದ್ರಾಕ್ಷಂ ಭುವಿ ಮಾನವಃ ॥೨೨॥

ಸ ಯಾತಿ ನರಕಂ ಘೋರಂ ಯಾವದಿಂದ್ರಾಶ್ಚತುರ್ದಶ ।
ರುದ್ರಾಕ್ಷಾಮಲದೇಹೇನ ಯತ್ಕೃತಂ ಪುಣ್ಯಸಂಚಯಂ ॥೨೩॥

ತದ್ಭವೇತ್ಕೋಟಿಗುಣಿತಂ ಪಾಪಂ ಚೇನ್ನಶ್ಯತಿ ಕ್ಷಣಾತ್ ।
ಯೋ ದದಾತಿ ದ್ವಿಜೇಭ್ಯಶ್ಚ ರುದ್ರಾಕ್ಷಂ ಭುವಿ ಸನ್ಮುಖಂ ॥೨೪॥

ತಸ್ಯ ಪ್ರೀತೋ ಭವೇದ್ರುದ್ರಃ ಸ್ವಪದಂ ಸಂಪ್ರಯಚ್ಛತಿ ।
ಇತ್ಥಂ ಧಾರ್ಯಂ ಚ ರುದ್ರಾಕ್ಷಾಸ್ಕೃತನಿತ್ಯಕ್ರಿಯೋ ದ್ವಿಜಃ ॥೨೫॥

---

ರುದ್ರಾಕ್ಷವು ದೈವನಿಂದಾಪಾಪವನ್ನು ಹೋಗಲಾಡಿಸುವುದು. ಹದಿಮೂರು ಮುಖದ ಶ್ರೀಕಂಠ ರುದ್ರಾಕ್ಷವು ಜಾಗ್ರತೆಯಾಗಿ ಸಕಲ ಪಾಪವನ್ನೂ ನಿಶ್ಶೇಷವಾಗಿ ಹೋಗಲಾಡಿಸುವುದು. ಹದಿನಾಲ್ಕು ಮುಖದ ಲೋಕಸ್ವರೂಪಾತ್ಮಕ ರುದ್ರಾಕ್ಷವು ಲೋಕದಾನ ಫಲವನ್ನೇ ಕೊಡುವುದು. ಹೀಗೆ ರುದ್ರಾಕ್ಷಗಳ ಫಲಗಳನ್ನೂ ಮಹಿಮೆಯನ್ನೂ ತಿಳಿದು ಮಾನವನು ಅವುಗಳನ್ನು ಧರಿಸಬೇಕು. ॥೧೮-೧೯-೨೦-೨೧॥

ಮಂತ್ರವಿಲ್ಲದೇ ಭೂಮಿಯಲ್ಲಿ ರುದ್ರಾಕ್ಷಧಾರಣೆ ಮಾಡುವ ಮಾನವನು ಹದಿನಾಲ್ಕುಮಂದಿ ಇಂದ್ರರಿರುವ ವರೆಗೂ ಘೋರನರಕವನ್ನೈದುವನು. ರುದ್ರಾಕ್ಷಗಳನ್ನು ಧರಿಸಿದ ನಿರ್ಮಲದೇಹವುಳ್ಳವನು ಮಾಡಿದ ಪುಣ್ಯಸಂಗ್ರಹವು ಕೋಟಿ ಪಾಲು ಹೆಚ್ಚುವುದು. ಪಾಪವೇನಾದರೂ ಅವರಲ್ಲಿದ್ದರೆ ಆ ಕೂಡಲೇ ನಾಶವಾಗಿ ಬಿಡುವುದು. ಭೂಮಿಯಲ್ಲಿ ಪ್ರಶಸ್ತ ಮುಖವುಳ್ಳ ರುದ್ರಾಕ್ಷವನ್ನು ಬ್ರಾಹ್ಮಣರಿಗೆ ದಾನಮಾಡುವವರ ವಿಷಯದಲ್ಲಿ ರುದ್ರನು ಪ್ರೀತನಾಗಿ ತನ್ನ ಸ್ಥಾನವನ್ನೇ ಅವರಿಗೆ ಕೊಡುತ್ತಾನೆ. ಹೀಗೆ ತಿಳಿದು ನಿತ್ಯಕರ್ಮಗಳನ್ನು ಮಾಡಿದನಂತರ ಬ್ರಾಹ್ಮಣನು ರುದ್ರಾಕ್ಷಗಳನ್ನು ಧರಿಸಬೇಕು. ॥೨೨-೨೩-೨೪-೨೫॥

ಕ್ಷತ್ರಿಯೋ ವಾಥ ವೈಶ್ಯೋ ವಾ ಧನಾಢ್ಯೋ ಭಕ್ತಿತತ್ಪರಃ ।
ಪೂಜಾಸ್ಥಾನಂ ತತೋ ಗತ್ವಾ ಉಪಲಿಪ್ತಂ ವಿಚಿತ್ರಿತಂ ॥೨೬॥

ರಂಗವಲ್ಲೀವಿಲಾಸಾಢ್ಯಂ ಪದ್ಮಸ್ವಸ್ತಿಕಚಿತ್ರಿತಂ ।
ಮಂಟಪಂ ಪುಷ್ಪಮಾಲಾಢ್ಯಮಾರಚಯ್ಯ ಸ ಪೀಠಕಂ ॥೨೭॥

ವಿತಾನಶೋಭಿತಾಂತಂ ಚ ಕದಲೀಸ್ತಂಭಶೋಭಿತಂ ।
ತೋರಣೇನ ಸುವಿಸ್ತೀರ್ಣಂ ಧೂಪದೀಪವಿರಾಜಿತಂ ॥೨೮॥

ಆಷಾಢೇ ಮೌಕ್ತಿಕಂ ಲಿಂಗಂ ಪೂಜಯೇದನ್ಯದೇವ ವಾ ।
ಹೇಮರೌಪ್ಯಂ ತಾಮ್ರಜಂ ವಾ ಪೈತ್ತಿಲಂ ಚಾರ್ತಿಕಂ ಶಿವೇ ॥೨೯॥

ಕುಂಭಂ ಸಂಸ್ಥಾಪಯೇದಗ್ರೇ ನದೀತೋಯೈಃ ಪ್ರಪೂರಿತಂ ।
ಪಾದ್ಯಾರ್ಘ್ಯಾಚಮನಂ ಪಾತ್ರಂ ಪುಷ್ಪಾಂಬುಪರಿಪೂರಿತಂ ॥೩೦॥

---

ಈ ರೀತಿಯಾಗಿ ಕ್ಷತ್ರಿಯ ಅಥವಾ ವೈಶ್ಯ ಅಥವಾ ಧನಿಕರು ಭಕ್ತಿಯುಕ್ತರಾಗಿ ರುದ್ರಾಕ್ಷಗಳನ್ನು ಧರಿಸಿ, ಪೂಜಾಸ್ಥಾನಕ್ಕೆ ಹೋಗಬೇಕು. ಆ ಪೂಜಾಸ್ಥಾನವು ಚೆನ್ನಾಗಿ ಸಾರಿಸಲ್ಪಟ್ಟು, ಚಿತ್ರಯುಕ್ತವಾಗಿ, ರಂಗವಲ್ಲಿಯ ಅಲಂಕಾರವುಳ್ಳದ್ದಾಗಿ, ಪದ್ಮ, ಸ್ವಸ್ತಿಕಗಳ ಚಿತ್ರಗಳನ್ನೊಳಗೊಂಡಿರಬೇಕು. ಅಲ್ಲಿಟ್ಟಿರುವ ಮಂಟಪವು ಹೂಮಾಲೆಗಳಿಂದ ಪೀಠದವರೆಗೂ ಅಲಂಕರಿಸಲ್ಪಟ್ಟಿರಬೇಕು. ಮೇಲ್ಗಡೆಯು ಚೌಕಟ್ಟು ಶೋಭಿಸುವಂತೆಯೂ, ಬಾಳೆಯ ಕಂಬಗಳಿಂದ ಶೋಭಿತವಾಗಿಯೂ ವಿಸ್ತಾರವಾದ ತೋರಣದಿಂದ ವಿರಾಜಿಸುತ್ತಲೂ ಇರಬೇಕು. ಅಲ್ಲದೆ ಧೂಪದೀಪ ಗಳಿಂದ ಬೆಳಗುತ್ತಿರಬೇಕು. ಪಾರ್ವತಿ, ಆಷಾಢಮಾಸದಲ್ಲಿ ಮುತ್ತಿನ ಲಿಂಗವನ್ನೋ ಅಥವಾ ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ ಅಥವಾ ಮಣ್ಣಿನ ಲಿಂಗವನ್ನೋ ಪೂಜಿಸಬೇಕು. ||೨೬-೨೭-೨೮-೨೯||

ಆ ಶಿವಲಿಂಗದ ಮುಂದೆ ನದಿಯ ಪವಿತ್ರ ಜಲದಿಂದ ತುಂಬಿದ ಕುಂಭವನ್ನು ಸ್ಥಾಪಿಸಬೇಕು. ಪುಷ್ಪಮಿಶ್ರವಾದ ನೀರಿನಿಂದ ತುಂಬಿದ ಪಾದ್ಯ, ಅರ್ಘ್ಯ ಮತ್ತು ಆಚಮನ ಪಾತ್ರೆಗಳನ್ನೂ ಶಿವನ ಮುಂದಿರಿಸಬೇಕು. ಪಂಚಗವ್ಯ ದ್ರವ್ಯಗಳು (ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರ) ಎಣ್ಣೆ, ಮೊಸರು, ಹಾಲು ತುಪ್ಪ, ಜೇನು, ಪುಣ್ಯಕರವಾದ ಕಲ್ಲುಸಕ್ಕರೆ, ಹಣ್ಣಿನ ರಸಗಳು, ಗಂಧ, ಹೂ

ದಾಪಯೇದರ್ಘ್ಯಪಾತ್ರಂ ಚ ಶಿವಸ್ಯಾಗ್ರೇ ಮಹೇಶ್ವರಿ ।
ಪಂಚಗವ್ಯಂ ತಥಾ ತೈಲಂ ದಧಿಕ್ಷೀರಘೃತಂ ಮಧು ॥೩೧॥

ಸಿತಾಚ ವೈಷ್ಣವೀ ಪುಷ್ಟ್ಯಾ ಫಲಸಾರಂ ವಿಶೇಷತಃ ।
ಗಂಧಪುಷ್ಪಾಣಿ ದಿವ್ಯಾನಿ ಸಂಪಾದ್ಯೋತ್ಪಲಪಾಟಲಂ ॥೩೨॥

ಬಿಲ್ವಪತ್ರಾಣಿ ದಿವ್ಯಾನಿ ಸಂಸ್ಥಾಪ್ಯಾನಿ ವಿಶೇಷತಃ ।
ನಾರಿಕೇಲಜಲಂ ಚೈವ ಕದಲೀಫಲಮಂಡಲಂ ॥೩೩॥

ಪನಸಂ ಚಾಮ್ರಸುರಸಂ ಸುಜಂಬೀರರಸಂ ಶಿವೇ ।
ಗಂಧಚಂದನತೋಯಂ ಚ ರತ್ನಸ್ವರ್ಣಕುಶೋದಕಂ ॥೩೪॥

ಕೂರ್ಚೋದಕಂ ತಥಾ ದೇವಿ ಪಾತ್ರೇಷು ಸ್ಥಾಪಯೇತ್ಪೃಥಕ್ ।
ಸಂಕಲ್ಪ್ಯ ಶಾಂಭವೈಃ ಸಾರ್ಧಂ ಮಾಸಾದೌ ಶಿವಪೂಜನಂ ॥೩೫॥

ದಶಾವರಂ ಶತಾಷ್ಟಂ ವಾ ಸಹಸ್ರಂ ವಾ ಜಪೇತ್ಸುಧೀಃ ।
ಪಂಚಾಕ್ಷರಂ ಪರಂ ಮಂತ್ರಂ ಪ್ರಣವೇನ ಷಡಕ್ಷರಂ ॥೩೬॥

---

ಇವುಗಳನ್ನು ವಿಶೇಷವಾಗಿ ಸಂಗ್ರಹಿಸಿಡಬೇಕು. ನೈದಿಲೆ, ಪಾದರಿ ಮುಂತಾದ ದಿವ್ಯ ಕುಸುಮಗಳು, ಶ್ರೇಷ್ಠವಾದ ಬಿಲ್ವದಳಗಳು ಇವುಗಳನ್ನೂ ವಿಶೇಷವಾಗಿ ಪೂಜೆಗೆ ಸಿದ್ಧಪಡಿಸಿಕೊಳ್ಳಬೇಕು. ॥೩೦-೩೧-೩೨॥

ಎಳನೀರು, ಬಾಳೆಹಣ್ಣಿನ ರಾಶಿ, ಹಲಸಿನತೊಳೆ, ಮಾವಿನಹಣ್ಣಿನ ರಸ, ಒಳ್ಳೆಯ ನಿಂಬೆಹಣ್ಣಿನ ರಸ, ಗಂಧ ಮತ್ತು ಚಂದನಜಲಗಳು, ರತ್ನ, ಚಿನ್ನ ಮತ್ತು ಕುಶೋದಕಗಳು, ಕೂರ್ಚಜಲ, ಇವುಗಳನ್ನೆಲ್ಲಾ ಬೇರೆಬೇರೆ ಪಾತ್ರೆಗಳಲ್ಲಿರಿಸಿ ಕೊಳ್ಳಬೇಕು. ॥೩೩-೩೪॥

ಶೈವರೊಡನೆ ಆ ತಿಂಗಳಿನಪ್ರಾರಂಭದಲ್ಲಿ ಸಂಕಲ್ಪಮಾಡಿ ಶಿವನನ್ನು ಪೂಜಿಸಬೇಕು. ಅನಂತರ ಬುದ್ಧಿವಂತನಾದವನು ಸಾವಿರ, ನೂರೆಂಟು, ಕಡೆಯಪಕ್ಷ ಹತ್ತುಬಾರಿಯಾದರೂ ದಿವ್ಯಪಂಚಾಕ್ಷರ ಮಂತ್ರವನ್ನೋ ಅಥವಾ ಓಂಕಾರಪೂರ್ವಕವಾದ ಷಡಕ್ಷರಮಂತ್ರವನ್ನೋ ಜಪಮಾಡಬೇಕು. ಆ ಆಷಾಢಮಾಸದಲ್ಲಿ ವಿಶೇಷವಾಗಿ ಉದ್ದಿನಕಾಳಿನಿಂದ ಮಿಶ್ರವಾದ ಅಕ್ಷತೆಗಳನ್ನು ತೆಗೆದುಕೊಳ್ಳಬೇಕು. ॥೩೫-೩೬॥

ಸಮಾಷಾಶ್ಚಾಕ್ಷತಾ ಗ್ರಾಹ್ಯಾಸ್ತ್ವಸ್ಮಿನ್ನಾಪಿ ವಿಶೇಷತಃ ।
ಆಧಾರಪೀಠಪೂಜಾಂತಂ ಕೃತ್ವಾ ಸಂಸ್ಥಾಪ್ಯ ಪೀಠಕೇ ॥೩೭॥

ಸ್ನಾಪಯೇದ್ದೇವದೇವೇಶಂ ತ್ರಿನೇತ್ರಂ ನೀಲಸಂಗಲಂ ।
ಚಾರುಚಂದ್ರಕಲಾಮೌಲಿಂ ಸೋಮಂ ಧ್ಯಾತ್ವಾ ಮಹೇಶ್ವರಂ ॥೩೮॥

ಸ್ಥಾಪ್ಯ ಪ್ರೋಕ್ಷ್ಯಾವಗುಂಠ್ಯೈವ ಸಂನಿರೋಧನಿರೀಕ್ಷಣೈಃ ।
ಪಾದ್ಯಾರ್ಘ್ಯಾಚಮನಂ ದತ್ವಾ ಮಧುಪರ್ಕಂ ಚ ನಿರ್ಮಲಂ ॥೩೯॥

ಪಂಚಗವ್ಯೈಸ್ತತಃ ಸ್ನಾಪ್ಯ ಸ್ನಾನಂ ಪಂಚಾಮೃತಂ ತತಃ ।
ಗವ್ಯಮೇವ ಪ್ರಯುಂಜೀತ ಮಾಸಿಮಾಸಿ ಶಿವೇ ಶುಭಂ ॥೪೦॥

ಸ್ನಾನಾಶಕ್ತಸ್ತಥಾಭ್ಯಂಗಮೇತೇಷಾಂ ದೇವಿ ಕಾರಯೇತ್ ।
ಸ್ನಾನಂ ಪಲಶತಂ ಜ್ಞೇಯಮಭ್ಯಂಗಃ ಪಂಚವಿಂಶತಿಃ ॥೪೧॥

ಪಲಾನಾಂ ದ್ವೇ ಸಹಸ್ರೇ ತು ಮಹಾಸ್ನಾನಂ ಪ್ರಕೀರ್ತಿತಂ ।
ಶಿವಸ್ಯ ಸರ್ಪಿಷಾ ಸ್ನಾನಂ ಪ್ರೋಕ್ತಂ ಪಾಪಕ್ಷಯಂಕರಂ ॥೪೨॥

---

ಆಧಾರಶಕ್ತಿಯಿಂದ ಆರಂಭಿಸಿ ಪೀಠದೇವತಾಪೂಜೆಯವರೆಗೂ ಮಾಡಿ, ಪೀಠದಲ್ಲಿ ಶಿವನನ್ನು ಪ್ರತಿಷ್ಠೆಮಾಡಿ, ದೇವದೇವನೂ, ಮುಕ್ಕಣ್ಣನೂ, ನೀಲಕಂಠನೂ, ಸುಂದರವಾದ ಚಂದ್ರಕಲೆಯನ್ನು ಶಿರದಲ್ಲಿಧರಿಸಿರುವವನೂ, ಉಮಾಸಹಿತನೂ ಆದ ಮಹೇಶ್ವರನನ್ನು ಧ್ಯಾನಮಾಡಿ ಆವಾಹಿಸಿದ ನಂತರ, ಸ್ನಾನಮಾಡಿಸಬೇಕು. ಪ್ರೋಕ್ಷಣೆಮಾಡಿ, ಅವಗುಂಠನ (ತೆರೆ ತೆಗೆಯುವುದು) ಸಂನಿರೋಧ, ನಿರೀಕ್ಷಣಗಳನ್ನು ನಡೆಸಬೇಕು. ಅನಂತರ ಪಾದ್ಯ, ಅರ್ಘ್ಯ ಆಚಮನಗಳನ್ನು ಕೊಟ್ಟು ನಿರ್ಮಲವಾದ ಮಧುಪರ್ಕವನ್ನು ಇತ್ತು ಶ್ರೇಷ್ಠವಾದ ಪಂಚಗವ್ಯದ್ರವ್ಯಗಳಿಂದ ಸ್ನಾನಮಾಡಿಸಿ ತರುವಾಯ ಪಂಚಾಮೃತಾಭಿಷೇಕಮಾಡಬೇಕು. ದೇವಿ! ಹೀಗೆ ಪ್ರತಿಯೊಂದು ತಿಂಗಳಲ್ಲಿಯೂ ಮಂಗಳಕರವಾದ ಹಸುವಿನ ಪಂಚಾಮೃತದ್ರವ್ಯಗಳನ್ನೇ ಉಪಯೋಗಿಸಬೇಕು. ॥೩೭-೩೮-೩೯-೪೦॥

ಒಂದುವೇಳೆ ಹೀಗೆ ಸ್ನಾನಮಾಡಿಸಲು ಅಶಕ್ತನಾದರೆ ಅಭ್ಯಂಗವನ್ನಾದರೂ ಮಾಡಿಸಬೇಕು. ಸ್ನಾನವು ನೂರುಪಲಪ್ರಮಾಣವುಳ್ಳದು. ಅಭ್ಯಂಗವು ಇಪ್ಪತ್ತೈದು ಪಲಗಳಿಂದಕೂಡಿರುವುದು. ಮಹಾಸ್ನಾನವು ಎರಡುಸಾವಿರಪಲಪ್ರಮಾಣವಾಗಿರು

ತಾವತಾ ಮಧುನಾ ದಧ್ನಾ ಕ್ಷೀರೇಣ ಸಿತಯಾಪಿ ಚ ।
ಸ್ನಾನೇ ಫಲಾನಾಂ ಪ್ರಮಿತಃ ಸಹಸ್ರಂ ಪರಮಂ ಶಿವೇ ॥೪೩॥

ಅಭ್ಯಂಗೇಷು ಶತಾನ್ಯೇವ ಫಲಾನಿ ಹ್ಯಭಿಷೇಚನೇ ।
ನಾನಾವಾದಿತ್ರಘೋಷೈಶ್ಚ ಸ್ನಾಪಯೇತ್ಪರಮೇಶ್ವರಂ ॥೪೪॥

ತತ್ತನ್ಮಂತ್ರೈಶ್ಚ ರುದ್ರೇಣ ಶ್ರೀಮತ್ಪಂಚಾಕ್ಷರೇಣ ವಾ ।
ಉದ್ವರ್ತನಾಂತರಸ್ನಾನಂ ಕಾರಯೇದ್ಘರ್ಷಯಂಸ್ತೃಣೈಃ ॥೪೫॥

ಸುವಾಸಸಾ ತತಶ್ಛನ್ನೇ ಪೀಠೇ ಸ್ಥಾಪ್ಯ ಮಹೇಶ್ವರಂ ।
ಧೂಪಂ ದೀಪಂ ತತೋ ದತ್ವಾ ನೈವೇದ್ಯಂ ಹವಿರೇವ ಹಿ ॥೪೬॥

ಸಶರ್ಕರಘೃತಂ ದೇವಿ ಸ ತಾಂಬೂಲಮುಮಾಪತೇಃ ।
ಬ್ರಾಹ್ಮಣೈಃ ಸೇಚಯೇಲ್ಲಿಂಗಮವಿಚ್ಛಿನ್ನಾಂಬುಧಾರಯಾ ॥೪೭॥

---

ವುದು. ಪಾರ್ವತಿ! ತುಪ್ಪದಿಂದ ಶಿವನಿಗೆ ಸ್ನಾನಮಾಡಿಸುವುದು ಸಕಲಪಾಪಗಳನ್ನೂ ಪರಿಹರಿಸುವುದು. ॥೪೧-೪೨॥

ಅಷ್ಟೇ ಜೇನು, ಮೊಸರು, ಹಾಲು, ಸಕ್ಕರೆ ಇವುಗಳಿಂದಕೂಡಿದ ಫಲವು ಸಾವಿರಪಲಪ್ರಮಾಣವುಳ್ಳದೆಂದು ಹೇಳಲ್ಪಟ್ಟಿದೆ. ದೇವಿಯೆ! ಅಭ್ಯಂಗದಲ್ಲಿ ನೂರು ಪಲಗಳು ಮಾತ್ರ ಉಕ್ತವಾಗಿವೆ. ಪಾರ್ವತಿ, ಅಭಿಷೇಕಮಾಡುವಾಗ ನಾನಾವಾದ್ಯಗಳಿಂದ ಘೋಷವನ್ನು ಮಾಡಿಸಬೇಕು. ॥೪೩-೪೪॥

ಆಯಾ ಮಂತ್ರಗಳಿಂದಲೂ ಶ್ರೀರುದ್ರ ಮತ್ತು ಶ್ರೀಪಂಚಾಕ್ಷರಮಂತ್ರದಿಂದಲೂ ಅಭಿಷೇಕಮಾಡಿ ಗರಿಕೆಹುಲ್ಲಿನಿಂದ ಉಜ್ಜಿದನಂತರ ಉದ್ವರ್ತನಾನಂತರ ಸ್ನಾನವನ್ನು ಮಾಡಿಸಬೇಕು. ಆಮೇಲೆ ಶುದ್ಧವಾದ ಬಟ್ಟೆಗಳನ್ನು ಅಲಂಕರಿಸಿ, ಮಣಿಪೀಠದಲ್ಲಿ ಮಹೇಶನನ್ನು ಸ್ಥಾಪಿಸಿ, ಧೂಪ, ದೀಪಗಳನ್ನಿಟ್ಟು ನೈವೇದ್ಯ, ಹವಿಸ್ಸು, ಸಕ್ಕರೆಯೊಡಗೂಡಿದ ತುಪ್ಪ, ತಾಂಬೂಲ ಇವುಗಳನ್ನು ಆ ಉಮಾರಮಣನಿಗೆ ಸಮರ್ಪಿಸಬೇಕು. ॥೪೫-೪೬॥

ಶಂಖ, ಹಸುವಿನ ಕೊಂಬು, ಕೂರ್ಚ ಮತ್ತು ಉದ್ಧರಣೆ ಇವುಗಳಲ್ಲಿ ಯಾವುದರಿಂದಲಾದರೂ ಅವಿಚ್ಛಿನ್ನವಾದ ಜಲಧಾರೆಯು ಶಿವಲಿಂಗದ ಮೇಲೆ ಬೀಳುವಂತೆ ಬ್ರಾಹ್ಮಣರಿಂದ ಅಭಿಷೇಕಮಾಡಿಸಬೇಕು. ಶತರುದ್ರಮಂತ್ರವನ್ನು ಆವೃತ್ತಿಮಾಡುತ್ತಾ ಒಂದು, ಎರಡು ಅಥವಾ ಮೂರು ಬಾರಿ ಶಾಂತಿಪಾಠದೊಡನೆ

ಶಂಖೈಃ ಶೃಂಗೈಸ್ತಥಾ ಕೂರ್ಚೈರ್ವರ್ಧನ್ಯಾ ವಾ ಯಥಾಸುಖಂ ।
ಶತರುದ್ರಾವೃತ್ತಿಪರಃ ಏಕದ್ವಿತ್ರಿಃ ಸಶಾಂತಿಕಂ ॥೪೮॥

ಏಕಾದಶಗುಣಂ ವಾಪಿ ಸಶಾಂತಿಚಮಕಾನ್ವಿತಂ ।
ರುದ್ರಸ್ಯಾಂತೇ ಚ ನೈವೇದ್ಯಂ ಪುನಃ ಪುನರತಂದ್ರಿತಃ ॥೪೯॥

ಭವಾಯೇತ್ಯಷ್ಟನಾಮ್ನೇಶಂ ತರ್ಪಯೇತ ಮಹೇಶ್ವರಂ ।
ವಿಶೋಧ್ಯ ವಾಸಸಾ ಲಿಂಗಂ ಪೀಠಂ ಸಂಸ್ಥಾಪ್ಯ ಪೂಜಯೇತ್ ॥೫೦॥

ಉಪವೀತಂ ತಥಾ ಭಸ್ಮವಾಸೋಗಂಧಂ ಚ ಸಾಕ್ಷತಂ ।
ದತ್ವಾಭರಣಪುಷ್ಪಾಣಾಂ ಮಾಲಿಕಾಬಿಲ್ವನಿರ್ಮಿತಃ ॥೫೧॥

ಬಿಲ್ವಪಾಟಲಕಲ್ಹಾರೈಃ ಕುಸುಮ್ಭೈಃ ಪೂಜಯೇಚ್ಛಿವಂ ।
ನಿಧನೇತಿ ಭವಾಯೇತಿ ನಾಮಭಿಃ ಪೂಜಯೇಚ್ಛಿವಂ ॥೫೨॥

ದೀಪಮಾಲಾವಿಶೇಷೇಣ ದೇಯಾ ದೇವೇ ಘೃತಾನ್ವಿತಾ ।
ದೇವದಾರೂದ್ಭವೋ ಧೂಪೋ ದೇಯಸ್ತಸ್ಮಿನ್ವಿಶೇಷತಃ ॥೫೩॥

---

ಹೇಳಬೇಕು. ಹನ್ನೊಂದುಸಲ ಬೇಕಾದರೂ ಶಾಂತಿಪಾಠ ಮತ್ತು ಚಮಕಮಂತ್ರ ಗಳೊಡನೆ ಜಪಮಾಡಬಹುದು. ಒಂದು ಸಾರಿ ರುದ್ರಜಪವು ಮುಗಿದೊಡನೆಯೇ ಪುನಃ ಪುನಃ ಸೋಮಾರಿತನವಿಲ್ಲದೇ ಶಿವನಿಗೆ ನೈವೇದ್ಯವನ್ನು ಸಮರ್ಪಿಸುತ್ತಿರಬೇಕು. ಆಮೇಲೆ 'ಭವಂ ದೇವಂ ತರ್ಪಯಾಮಿ' ಮುಂತಾದ ಶಿವನ ಎಂಟು ನಾಮುಗ ಳಿಂದಲೂ ಮಹೇಶನಿಗೆ ತರ್ಪಣಮಾಡಬೇಕು. ॥೪೭-೪೮-೪೯॥

ತರ್ಪಣಾನಂತರ ಶುದ್ಧವಾದ ಬಟ್ಟೆಯಿಂದ ಶಿವಲಿಂಗವನ್ನು ಚೆನ್ನಾಗಿ ಒರಸಿ, ಪೀಠದಲ್ಲಿರಿಸಿ ಪೂಜಿಸಬೇಕು. ಉಪವೀತ, ಭಸ್ಮ, ವಸ್ತ್ರ, ಗಂಧ, ಅಕ್ಷತೆ, ಆಭರಣ ಇವುಗಳನ್ನು ಸಮರ್ಪಿಸಿ, ಹೂ ಮತ್ತು ಬಿಲ್ವದಳಗಳ ಮಾಲೆಗಳಿಂದ ಅಲಂಕರಿಸಬೇಕು. ಅನಂತರ ಬಿಲ್ವದಳ, ಪಾದರಿ, ಕಣಿಗಲೆ ಈ ಹೂಗಳಿಂದ 'ನಿಧನಪತಯೇ ನಮಃ' ಮುಂತಾದ ನಾಮಮಂತ್ರಗಳಿಂದಲೂ ಮತ್ತು 'ಭವಾಯ ನಮಃ' ಮುಂತಾದ ಅಷ್ಟಶಿವನಾಮಗಳಿಂದಲೂ ಶಿವನಿಗೆ ಪೂಜೆಮಾಡ ಬೇಕು. ॥೫೦-೫೧-೫೨॥

ಶಿವನಿಗೆ ವಿಶೇಷವಾಗಿ ತುಪ್ಪದಿಂದ ಉರಿಯುವ ದೀಪಮಾಲೆಯನ್ನು ಸಮ

ಅಥಕಾನ್ನಂ ಘೃತಾಕ್ತಂ ಚ ಸಗುಡಂ ವಿನಿವೇದಯೇತ್ ।
ಮಾಷಾಪೂಪಾಃ ಪ್ರದೇಯಾ ವೈ ತಾಂಬೂಲಂ ಚ ತತಃಪರಂ ॥೫೪॥

ನೀರಾಜಯೇತ್ತತೋ ಲಿಂಗಂ ತ್ರಿವಾರಂ ಶತದೀಪಕೈಃ ।
ಕರ್ಪೂರಖಂಡಜೈರ್ದೇವಿ ದೀಪಾನುದ್ಬೋಧಯೇಚ್ಛಿವೇ ॥೫೫॥

ವೇಣುವೀಣಾಮೃದಂಗಾದಿ ಶಂಖದುಂದುಭಿಕಾದಿಭಿಃ ।
ಹಂಸಾಭಚಾಮರೇ ಚೈವ ಛತ್ರಂ ಶಶಿನಿಭಂ ಶಿವೇ ॥೫೬॥

ಪತಾಕಾವ್ಯಜನಾದರ್ಶಂ ದೇಯಂ ದೇವಾಯ ಶೂಲಿನೇ ।
ಪ್ರದಕ್ಷಿಣಾತ್ರಯಂ ಕುರ್ಯಾನ್ನಮಸ್ಕಾರಾದಿಪಂಚಕಂ ॥೫೭॥

ಪೂಜಯೇನ್ನಾಮಭಿರ್ದೇವಂ ಬಿಲ್ವಪಾಟಲಪಂಕಜೈಃ ।
ಸ್ತುವೀತ್ಯೈವಂ ಮಹಾದೇವಮಾಷಾಢೇ ಶೃಣು ಪಾರ್ವತಿ ॥೫೮॥

---

ರ್ಪಿಸಬೇಕು. ಆ ಸಮಯದಲ್ಲಿ ದೇವದಾರುಚಕ್ಕೆಯ ಧೂಪವನ್ನು ಹೆಚ್ಚಾಗಿ ಹಾಕಬೇಕು. ಆಷಾಢಮಾಸದಲ್ಲಿ, ತುಪ್ಪ, ಬೆಲ್ಲ ಇವುಗಳಿಂದ ಬೆರೆದ ಬೇಳೆಹುಳಿ ಅನ್ನವನ್ನೂ ಉದ್ದಿನ ಭಕ್ಷ್ಯಗಳನ್ನೂ (ಕಡಬನ್ನೂ) ನಿವೇದನಮಾಡಬೇಕು. ಅನಂತರ ತಾಂಬೂಲವನ್ನು ಸಮರ್ಪಿಸಿ, ನೂರು ದೀಪಗಳಿಂದ ಮೂರುಸಲ ಶಿವಲಿಂಗಕ್ಕೆ ನೀರಾಜನ ಮಾಡಬೇಕು. ಕರ್ಪೂರದ ಗಡ್ಡೆಗಳಿಂದ ದೀಪಗಳನ್ನು ಹೊತ್ತಿಸಿ ನೀರಾಜನವನ್ನು ಬೆಳಗಬೇಕು. ||೫೩-೫೪-೫೫||

ಕೊಳಲು, ವೀಣೆ, ಮೃದಂಗ, ಶಂಖ, ನಗಾರಿ ಮೊದಲಾದ ವಾದ್ಯಧ್ವನಿಗಳೊಡನೆ ನೀರಾಜನವನ್ನೆಸಗಬೇಕು. ಹಂಸದ ಗರಿಗಳ ಬಣ್ಣದ ಚಾಮರಗಳೆರಡು, ಚಂದ್ರವರ್ಣದ ಛತ್ರ, ಪತಾಕೆ, ಬೀಸಣಿಗೆ, ಕನ್ನಡಿ, ಇವುಗಳನ್ನು ಶಿವನಿಗೆ ಸಮರ್ಪಿಸಬೇಕು. ಅನಂತರ ಶಿವಲಿಂಗಕ್ಕೆ ಮೂರು ಪ್ರದಕ್ಷಿಣೆ ಮಾಡಿ ಐದು ನಮಸ್ಕಾರಗಳನ್ನು ಮಾಡಬೇಕು. ತರುವಾಯ ಬಿಲ್ವದಳ, ಪಾದರಿ, ತಾವರೆ ಮುಂತಾದ ಹೂಗಳಿಂದ ಮುಂದೆ ಹೇಳುವ ಶಿವನಾಮಪೂರ್ವಕವಾಗಿ ಪೂಜೆಮಾಡಿ ಆಷಾಢಮಾಸದಲ್ಲಿ ಮುಂದೆ ಹೇಳುವಂತೆ ಶಿವನಾಮಗಳಿಂದ ಪೂಜಿಸಬೇಕು. ಎಲೌ ಪಾರ್ವತಿಯೆ, ಅದರ ಕ್ರಮವನ್ನು ಈಗ ಹೇಳುತ್ತೇನೆ ಕೇಳು. ||೫೬-೫೭-೫೮||

ನಮ ಈಜ್ಯಾಯ ಪೂಜ್ಯಾಯ ಉಪಜೀವ್ಯಾಯ ತೇ ನಮಃ ।
ನಮಃ ಕ್ಷೇತ್ರಾಯ ವೃದ್ಧಾಯ ವತ್ಸಲಾಯ ನಮೋ ನಮಃ ॥೫೯॥

ನಮೋ ಭೂತಾಯ ಭವ್ಯಾಯ ಸವ್ಯಾಸವ್ಯಾಯ ಬಭ್ರವೇ ।
ನಮೋ ವೈ ಪದ್ಮವರ್ಣಾಯ ಮೃತ್ಯುಘ್ನಾಯ ಚ ಮೃತ್ಯವೇ ॥೬೦॥

ನಮೋ ಗೌರಶರೀರಾಯ ಶ್ಯಾಮಾಯಾಲೋಹಿತಾಯ ಚ ।
ಮಹಾಸಂಧ್ಯಾಭ್ರವರ್ಣಾಯ ಚಾರುರೂಪಾಯ ದೀಕ್ಷಿಣೇ ॥೬೧॥

ನಮಃ ಕಮಲಹಸ್ತಾಯ ವಿಶ್ವಗ್ರಾಸಾಯ ಮೇದಿನೇ ।
ಪ್ರಮಾಣಾಯ ಸುರೇಶಾಯ ಅವಧ್ಯಾಯಾಮರಾಯ ಚ ॥೬೨॥

---

೧. ಓಂ ಈಜ್ಯಾಯ ನಮಃ
೨. ಓಂ ಪೂಜ್ಯಾಯ ನಮಃ
೩. ಓಂ ಉಪಜೀವ್ಯಾಯ ನಮಃ
೪. ಓಂ ಕ್ಷೇತ್ರಾಯ ನಮಃ
೫. ಓಂ ವೃದ್ಧಾಯ ನಮಃ
೬. ಓಂ ವತ್ಸಲಾಯ ನಮಃ
೭. ಓಂ ಭೂತಾಯ ನಮಃ
೮. ಓಂ ಭವ್ಯಾಯ ನಮಃ
೯. ಓಂ ಸವ್ಯಾಸವ್ಯಾಯ ನಮಃ
೧೦. ಓಂ ಬಭ್ರವೇ ನಮಃ
೧೧. ಓಂ ಪದ್ಮವರ್ಣಾಯ ನಮಃ
೧೨. ಓಂ ಮೃತ್ಯುಘ್ನಾಯ ನಮಃ
೧೩. ಓಂ ಮೃತ್ಯವೇ ನಮಃ
೧೪. ಓಂ ಗೌರಶರೀರಾಯ ನಮಃ
೧೫. ಓಂ ಶ್ಯಾಮಾಯ ನಮಃ
೧೬. ಓಂ ಆಲೋಹಿತಾಯ ನಮಃ
೧೭. ಓಂ ಮಹಾಸಂಧ್ಯಾಭ್ರವರ್ಣಾಯ ನಮಃ
೧೮. ಓಂ ಚಾರುರೂಪಾಯ ನಮಃ
೧೯. ಓಂ ದೀಕ್ಷಿಣೇ ನಮಃ
೨೦. ಓಂ ಕಮಲಹಸ್ತಾಯ ನಮಃ
೨೧. ಓಂ ವಿಶ್ವಗ್ರಾಸಾಯ ನಮಃ
೨೨. ಓಂ ಮೇದಿನೇ ನಮಃ
೨೩. ಓಂ ಪ್ರಮಾಣಾಯ ನಮಃ
೨೪. ಓಂ ಸುರೇಶಾಯ ನಮಃ
೨೫. ಓಂ ಅವಧ್ಯಾಯ ನಮಃ
೨೬. ಓಂ ಅಮರಾಯ ನಮಃ
೨೭. ಓಂ ರೂಪಾಯ ನಮಃ
೨೮. ಓಂ ರೂಪ್ಯಾಯ ನಮಃ
೨೯. ಓಂ ಶಾಶ್ವತಾಯ ನಮಃ
೩೦. ಓಂ ಅಕ್ಷತಾಯ ನಮಃ
೩೧. ಓಂ ಬೃಹತೇ ನಮಃ
೩೨. ಓಂ ಮಹತೇ ನಮಃ
೩೩. ಓಂ ವಿಭ್ರಾಂತಾಯ ನಮಃ
೩೪. ಓಂ ಕುಶಾಯ ನಮಃ
೩೫. ಓಂ ದುರ್ಗಮಾಯ ನಮಃ

ನಮೋ ರೂಪಾಯ ರೂಪ್ಯಾಯ ಶಾಶ್ವತಾಯಾಕ್ಷತಾಯ ಚ ।
ಬೃಹತೇ ಮಹತೇ ಚೈವ ವಿಭ್ರಾಂತಾಯ ಕುಶಾಯ ಚ ॥೬೩॥

ದುರ್ಗಮಾಯಾಮರೇಶಾಯ ರೋಘಾಯ ಕಪಿಲಾಯ ಚ ।
ಅಪ್ರತರ್ಕ್ಯಶರೀರಾಯ ಬಿಲ್ವಿನೇ ರಭಸಾಯ ಚ ॥೬೪॥

ಸಿಕತ್ಯಾಯ ಪ್ರವಾಹ್ಯಾಯ ರೇಷ್ಮ್ಯಾಯ ಚ ನಮೋ ನಮಃ ।
ಪ್ರಸೃತಾಯ ಪುರಾಣಾಯ ವಾಮದೇವಾಯ ದಂಡಿನೇ ॥೬೫॥

ಸುಮೇಧಸೇ ಕುಲಾಲಾಯ ನಮಸ್ತೇಽಸ್ತು ಶಿಖಂಡಿನೇ ।
ಚಿತ್ರಾಯ ಚಿತ್ರವರ್ಮಾಯ ತ್ರಿನೇತ್ರಾಯ ತ್ರಿಶೂಲಿನೇ ॥೬೬॥

---

೩೬. ಓಂ ಅಮರೇಶಾಯ ನಮಃ
೩೭. ಓಂ ರೋಘಾಯ ನಮಃ
೩೮. ಓಂ ಕಪಿಲಾಯ ನಮಃ
೩೯. ಓಂ ಅಪ್ರತರ್ಕ್ಯಶರೀರಾಯ ನಮಃ
೪೦. ಓಂ ಬಿಲ್ವಿನೇ ನಮಃ
೪೧. ಓಂ ರಭಸಾಯ ನಮಃ
೪೨. ಓಂ ಸಿಕತ್ಯಾಯ ನಮಃ
೪೩. ಓಂ ಪ್ರವಾಹ್ಯಾಯ ನಮಃ
೪೪. ಓಂ ರೇಷ್ಮ್ಯಾಯ ನಮಃ
೪೫. ಓಂ ಪ್ರಸೃತಾಯ ನಮಃ
೪೬. ಓಂ ಪುರಾಣಾಯ ನಮಃ
೪೭. ಓಂ ವಾಮದೇವಾಯ ನಮಃ
೪೮. ಓಂ ದಂಡಿನೇ ನಮಃ
೪೯. ಓಂ ಸುಮೇಧಸೇ ನಮಃ
೫೦. ಓಂ ಕುಲಾಲಾಯ ನಮಃ
೫೧. ಓಂ ಶಿಖಂಡಿನೇ ನಮಃ
೫೨. ಓಂ ಚಿತ್ರಾಯ ನಮಃ
೫೩. ಓಂ ಚಿತ್ರವರ್ಮಾಯ ನಮಃ
೫೪. ಓಂ ತ್ರಿನೇತ್ರಾಯ ನಮಃ
೫೫. ಓಂ ತ್ರಿಶೂಲಿನೇ ನಮಃ
೫೬. ಓಂ ಚೇಕಿತಾನಾಯ ನಮಃ
೫೭. ಓಂ ಕೃಷ್ಣಾಯ ನಮಃ
೫೮. ಓಂ ಸುಹಿತಾಯ ನಮಃ
೫೯. ಓಂ ಹಿತಾಯ ನಮಃ
೬೦. ಓಂ ಕ್ಷಾಂತಾಯ ನಮಃ
೬೧. ಓಂ ದಾಂತಾಯ ನಮಃ
೬೨. ಓಂ ವಜ್ರಸಂಹನನಾಯ ನಮಃ
೬೩. ಓಂ ರಕ್ಷೋಘ್ನಾಯ ನಮಃ
೬೪. ಓಂ ವಿಷಘ್ನಾಯ ನಮಃ
೬೫. ಓಂ ಶಿತಿಕಂಠಾಯ ನಮಃ
೬೬. ಓಂ ಮನ್ಯವೇ ನಮಃ
೬೭. ಓಂ ಸೋಮಾಯ ನಮಃ
೬೮. ಓಂ ರುದ್ರಾಯ ನಮಃ
೬೯. ಓಂ ಸುತಾಮ್ರಾಯ ನಮಃ
೭೦. ಓಂ ಅರುಣಾಯ ನಮಃ
೭೧. ಓಂ ಭರ್ಗಾಯ ನಮಃ

ಚೇಕಿತಾನಾಯ ಕೃಷ್ಣಾಯ ಸುಹಿತಾಯ ಹಿತಾಯ ಚ ।
ನಮಃ ಕ್ಷಾಂತಾಯ ದಾಂತಾಯ ವಜ್ರಸಂಹನನಾಯ ಚ ॥೬೭॥

ರಕ್ಷೋಘ್ನಾಯ ವಿಷಘ್ನಾಯ ಶಿತಿಕಂಠಾಯ ಮನ್ಯವೇ ।
ನಮಃ ಸೋಮನಾಯ ರುದ್ರಾಯ ಸುತಾಮ್ರಾಯಾರುಣಾಯ ಚ ॥೬೮॥

ಭರ್ಗಾಯೋಗ್ರಾಯ ಭೀಮಾಯ ತಿಗ್ಮಾಯುಧಧರಾಯ ಚ ।
ಸುಮೋದಾಯ ಪ್ರಮೋದಾಯ ಮಧುಪ್ರೀತಾಯ ತೇ ನಮಃ ॥೬೯॥

ಪ್ರಾಣಾಯ ಪ್ರಣವೇಶಾಯ ಸುಹಸ್ತಾಯ ಸುವಾಸಸೇ ।
ಭಿಷಜೇ ಮಹತೇ ಚೈವ ದುರ್ಗಾಧ್ಯಕ್ಷಾಯ ಲಿಂಗಿನೇ ॥೭೦॥

---

೭೨. ಓಂ ಉಗ್ರಾಯ ನಮಃ
೭೩. ಓಂ ಭೀಮಾಯ ನಮಃ
೭೪. ಓಂ ತಿಗ್ಮಾಯುಧಧರಾಯ ನಮಃ
೭೫. ಓಂ ಸುಮೋದಾಯ ನಮಃ
೭೬. ಓಂ ಪ್ರಮೋದಾಯ ನಮಃ
೭೭. ಓಂ ಮಧುಪ್ರೀತಾಯ ನಮಃ
೭೮. ಓಂ ಪ್ರಾಣಾಯ ನಮಃ
೭೯. ಓಂ ಪ್ರಣವೇಶಾಯ ನಮಃ
೮೦. ಓಂ ಸುಹಸ್ತಾಯ ನಮಃ
೮೧. ಓಂ ಸುವಾಸಸೇ ನಮಃ
೮೨. ಓಂ ಭಿಷಜೇ ನಮಃ
೮೩. ಓಂ ಮಹತೇ ನಮಃ
೮೪. ಓಂ ದುರ್ಗಾಧ್ಯಕ್ಷಾಯ ನಮಃ
೮೫. ಓಂ ಲಿಂಗಿನೇ ನಮಃ
೮೬. ಓಂ ನಕ್ತಂಚರಾಯ ನಮಃ
೮೭. ಓಂ ಯಕ್ಷಾಯ ನಮಃ
೮೮. ಓಂ ಭಕ್ತಪಾಪಹರಾಯ ನಮಃ
೮೯. ಓಂ ಅನಾಮಯಾಯ ನಮಃ
೯೦. ಓಂ ಶರ್ವಾಯ ನಮಃ
೯೧. ಓಂ ಮಹಾಕಾಲಾಯ ನಮಃ
೯೨. ಓಂ ಧನ್ವಿನೇ ನಮಃ
೯೩. ಓಂ ಪಂಚಾಕ್ಷರಪ್ರಿಯಾಯ ನಮಃ
೯೪. ಓಂ ಮೃಗಾಜಿನಧರಾಯ ನಮಃ
೯೫. ಓಂ ಆಷಾಢಾಯ ನಮಃ
೯೬. ಓಂ ವಿರಾಧಾಯ ನಮಃ
೯೭. ಓಂ ದೂತಾಯಪ್ರಹಿತಾಯನಮಃ
೯೮. ಓಂ ತಮೋಘ್ನಾಯ ನಮಃ
೯೯. ಓಂ ಹಿಮಘ್ನಾಯ ನಮಃ
೧೦೦. ಓಂ ಕ್ರತವೇಋತವೇ ನಮಃ
೧೦೧. ಓಂ ಜ್ಯೋತಿಶ್ಚಕ್ರಜಾಲಾಯ ನಮಃ
೧೦೨. ಓಂ ವಿಶಾಲಾಯಫಾಲಾಯ ನಮಃ
೧೦೩. ಓಂ ಊರ್ಧ್ವರೋಮ್ಣೇ ನಮಃ
೧೦೪. ಓಂ ಮಹಾರೋಮ್ಣೇ ನಮಃ
೧೦೫. ಓಂ ಕೃತ್ತಿವಾಸಾಯ ನಮಃ
೧೦೬. ಓಂ ಮೃಗವ್ಯಾಧಾಯ ನಮಃ
೧೦೭. ಓಂ ದಕ್ಷಾಯ ನಮಃ
೧೦೮. ಓಂ ದಕ್ಷಶಿಕ್ಷಾಯ ನಮಃ

ನಕ್ತಂಚರಾಯ ಯುಕ್ತಾಯ ಭಕ್ತಪಾಪಹರಾಯ ಚ ।
ಅನಾಮಯಾಯ ಶರ್ವಾಯ ಮಹಾಕಾಲಾಯ ಧನ್ವಿನೇ ॥೭೧॥

ಪಂಚಾಕ್ಷರಪ್ರಿಯಾಯಾಥ ಮೃಗಾಜಿನಧರಾಯ ಚ ।
ಆಷಾಢಾಯ ವಿರಾಧಾಯ ದೂತಾಯ ಪ್ರಹಿತಾಯ ಚ ॥೭೨॥

ತಮೋಘ್ನಾಯ ಹಿಮಘ್ನಾಯ ಕ್ರತವೇ ಋತವೇ ನಮಃ ।
ಜ್ಯೋತ್ಸ್ನಾಜಾಲಾಯ ಫಾಲಾಯ ವಿಶಾಲಾಯ ನಮೋ ನಮಃ ॥೭೩॥

ಊರ್ಧ್ವರೋಮ್ಣೇ ಮಹಾರೋಮ್ಣೇ ಕೃತ್ತಿವಾಸಾಯ ತೇ ನಮಃ ।
ಮೃಗವ್ಯಾಧಾಯ ದಕ್ಷಾಯ ದಕ್ಷಶಿಕ್ಷಾಯ ತೇ ನಮಃ ॥೭೪॥

ಇತ್ಯೇತನ್ನಾಮಭಿಃ ಪೂಜ್ಯೋ ಜ್ಯೇಷ್ಠದೇವೋ ಮಹೇಶ್ವರಃ ।
ಸ್ತವೇನಾನೇನ ದೇವೇಶಮಾಷಾಢೇ ಸಂಸ್ತುವೀತ ಮಾಂ ॥೭೫॥

ಸಾಮಿಸೋಮಶಕಲಾಮಲಮೌಲೇ
ಸೋಮಹೇಮಮಯದಿವ್ಯಶುಭಾಂಗ ।
ವ್ಯೋಮಕೇಶ ಜನಕಾಮ ಮಹೇಶ
ಪಾಹಿ ಮಾಮಖಿಲದುಃಖಸಮೂಹಾತ್ ॥೭೬॥

ವಾಮದೇವ ವರಸಾಮಜಚರ್ಮ
ಸ್ಫಾರಶೋಭಿಕುಸುಮಾಂಗ ಮಹೇಶ ।

---

ದೇವಿಯೇ, ಈ ರೀತಿಯಾದ ನನ್ನ ನಾಮಗಳಿಂದ ಜೇಷ್ಠಮಾಸದಲ್ಲಿ ಶಿವಲಿಂಗವನ್ನು ಪೂಜಿಸಬೇಕು. ನಾಮ ಪೂಜೆಯಾದ ನಂತರ ಮುಂದೆ ಹೇಳುವ ಈ ಸ್ತೋತ್ರದಿಂದ ನನ್ನನ್ನು ಸ್ತುತಿಸಬೇಕು. ೫೯-೬೦-೬೧-೬೨-೬೩-೬೪-೬೫-೬೬-೬೭-೬೮-೬೯-೭೦-೭೧-೭೨-೭೩-೭೪-೭೫||

ಅರ್ಧಚಂದ್ರ ಕಲೆಯಿಂದ ಪರಿಪೂತವಾದ ತಲೆಯುಳ್ಳವನೆ! ಉಮಾಸಹಿತನೆ! ಸುವರ್ಣಮಯವಾದ ದಿವ್ಯಮಂಗಳ ದೇಹವುಳ್ಳವನೆ! ಅಂತರಿಕ್ಷವನ್ನೇ ಕೇಶವನ್ನಾಗಿ ಧರಿಸಿರುವವನೆ! ಜನಗಳ ಇಷ್ಟಾರ್ಥಗಳನ್ನು ಸಲ್ಲಿಸುವವನೆ! ಮಹೇಶನೆ! ನನ್ನನ್ನು ಸಮಸ್ತ ದುಃಖರಾಶಿಗಳಿಂದಲೂ ಉದ್ಧಾರಮಾಡು. ||೭೬||

ಪಾರ್ವತಿಯೇ, ಶ್ರೇಷ್ಠವಾದ ಆನೆಯ ಚರ್ಮವನ್ನು ಅಂಬರವನ್ನಾಗಿ ಧರಿಸಿ

ಧೂಮವಾಹವಹನೋತ್ತಮ ಶಂಭೋ
ವ್ಯೋಮಧಾಮ ಭಗವನ್ನವ ಮಾಂ ತ್ವಂ ॥೨೭॥

ಶಂಭೋ ಬಾಲಮೃಗಾಂಕಶೇಖರಮಹಾಸರ್ಪಾಂಗಮಾಲೋಜ್ವಲ
ತ್ಕಂದರ್ಪಾಂತಕಶರ್ವಸರ್ವಗವಿಭೋ ದೂರ್ವಾದಲಾರ್ಚ್ಯಾಂಘ್ರಿಕ ।
ವೇದಾನಾಂಹಿತಪಾಲ ದರಧೃಕ್ಪೂತಾಂಗಸಂಗಾತುಲ
ಲೀಲಾಗಾಂಗಸುತುಂಗಭಂಗ ಪರಮಾಸಂಗಾಂಗ ಸಂಗಾವ ಮಾಂ ॥೨೮॥

ವಿಶ್ವೋತ್ಪತ್ತಿವಿನಾಶಸಂಸ್ಥಿತಿ ಜಗತ್ತತ್ಕಾರ್ಯತತ್ಕಾರಣಂ
ಜೀವೇಶಾಶ್ರಯಭೇದಭಾನಮಖಿಲಂ ಯನ್ನಾಮರೂಪಾತ್ಮಕಂ ।
ಕಾಲಾನಲ್ಪವಿಕಲ್ಪಶಿಲ್ಪಸುಮಹಾಸಂಕಲ್ಪಕಲ್ಪಾಂತಕಂ
ತ್ವಯ್ಯಾನಂದಪಯೋಧರಾಂಬುಲಹರೀವಿದ್ಯೋತತೇ ಕೇವಲಂ ॥೨೯॥

---

ವಿಶಾಲವಾಗಿ ಶೋಭಿಸುತ್ತಿರುವ ಕುಸುಮದಂತೆ ಸುಕುಮಾರವಾದ ದೇಹವುಳ್ಳವನೆ! ಮಹೇಶನೆ! ಧೂಮವಾಹನೆನಿಸಿದ ಅಗ್ನಿಯನ್ನು ಶಿರದಲ್ಲಿ ಧರಿಸಿರುವವನೆ, ಸುಖ ಪ್ರದನೆ! ಅಂತರಿಕ್ಷವಾಸಿಯೇ! ಭಗವಂತನೆ! ನನ್ನನ್ನು ನೀನು ಕಾಪಾಡು. ೨೭॥

ಬಾಲಚಂದ್ರಶೇಖರನೆ! ದೊಡ್ಡಸರ್ಪ ಮಾಲೆಯಿಂದ ಶೋಭಿಸುತ್ತಿರುವವನೆ! ಮನ್ಮಥಾಂತಕನೇ! ಪ್ರಳಯದಲ್ಲಿ ಸಕಲ ಪ್ರಾಣಿಗಳನ್ನು ಹಿಂಸಿಸುವವನೆ! ಸರ್ವವ್ಯಾಪಿಯೆ! ವಿಭುವೆ! ಗರಿಕೆಗಳಿಂದ ಪೂಜಿಸಲು ಯೋಗ್ಯವಾದ ಚರಣ ವುಳ್ಳವನೆ! ಸಕಲ ವೇದರಾಶಿಗಳನ್ನೂ ಪಾಲಿಸಿದವನೆ! ಕಾಲಕೂಟವಿಷವನ್ನು ಧರಿಸಿರುವವನೆ! ಪವಿತ್ರವಾದ ಅವಯವ ಸಂಬಂಧವುಳ್ಳವನೆ! ದೊಡ್ಡ ಅಲೆಗ ಳಿಂದ ಕೂಡಿದ ಗಂಗಾನದಿಯನ್ನು ಲೀಲೆಯಿಂದ ಮುಡಿಯಲ್ಲಿ ಧರಿಸಿರುವವನೆ! ಮನ್ಮಥನನ್ನು ಧ್ವಂಸಮಾಡಿರುವ ಶಂಭುವೆ! ನನ್ನನ್ನು ಕಾಪಾಡು. ॥೨೮॥

ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ ಕಾರಣನೂ, ಈ ಜಗತ್ತಿಗೆ ಕಾರ್ಯ ಕಾರಣ ರೂಪಗಳೆರಡೂ ಆಗಿರುವವನೂ, ಜೀವ ಈಶ್ವರ, ರೂಪವಾದ ಆಶ್ರಯ ಭೇದ ವನ್ನು ಪ್ರಕಾಶಪಡಿಸುವವನೂ, ಆದ ಯಾವನ ನಾಮ ರೂಪಗಳೇ ಸಮಸ್ತವೂ ಆಗಿರುವುವೋ, ಕಾಲಪುರುಷನ ಅಪರಿಮಿತವಾದ ವಿಕಲ್ಪಗಳುಳ್ಳ ಶಿಲ್ಪಗಳಲ್ಲಿ ಸ್ಥಿರವಾದ

ವಿಷ್ಣುಬ್ರಹ್ಮಹರಾ ಸುರಾನರವರಾ ಯೇ ಭಾಸುರಾ ಭೂಸುರಾ
ಸಂಜಾತಸ್ಥಿತಿನಾಶಮಧ್ಯಪತಿತಾ ಭ್ರಾಂತಾಶ್ಚ ಸಂಸಾರಿಣಃ ।
ವಿಶ್ವಾಧೀಶ್ವರ ಶಂಕರ ತ್ರಿಭುವನಾಪಾರೋರುದುಃಖಾರ್ತಿಹ
ನ್ಕಾಲಾತೀತ ಮಹೇಶ್ವರಾವ ಭಗವನ್ವಿಶ್ವಂ ಚ ವಿಶ್ವಾಧಿಕೆ ॥೮೦॥

ಇತಿ ಸ್ತುತ್ವಾ ತ್ರಿಕಾಲಂ ವಾ ಪೂಜಾಂತೇ ವಾ ಮಹೇಶ್ವರಂ ।
ಆಷಾಢ್ಯಾಮಥ ಪೌರ್ಣಮ್ಯಾಂ ಹೋಮಃ ಕಾರ್ಯೋ ದ್ವಿಜೈಃ ಸಹ॥೮೧॥

ದತ್ವಾ ಗೋಮಿಥುನಂ ದೇವಿ ಸವತ್ಸಾಂ ಚ ಸ ದಕ್ಷಿಣಾಂ ।
ನಕ್ತಾಶನೀ ಭವೇನ್ಮಾಸಂ ಬ್ರಾಹ್ಮಣೈಃ ಪಾರಣಾಂತತಃ ॥೮೨॥

ಏವಮಾಷಾಢಪೂಜಾಂಗೋ ಆಷಾಢಃ ಪ್ರೀತಿಮಾನ್ಭವೇತ್ ।
ಚಂದ್ರಾಭಯಾನೈರ್ಯಾತ್ಯಂತೇ ಮಮ ಲೋಕಂ ಸನಾತನಂ ॥೮೩॥

---

ಮಹಾಸಂಕಲ್ಪಗಳೆಂಬ ಕಲ್ಪಗಳಿಗೆ ಅಂತಕಪ್ರಾಯನೂ ಆದ ನಿನ್ನ ಆನಂದ ವಾರಿಧಿಯ ಜಲಪ್ರವಾಹಗಳೇ ನನಗೆ ಸದಾ ಪ್ರಕಾಶಿಸುತ್ತಿರಲಿ. ॥೭೯॥

ವಿಷ್ಣು, ಬ್ರಹ್ಮ, ರುದ್ರ, ಮುಂತಾದ ದೇವತೆಗಳೂ, ಮನುಜವರ್ಯರೂ, ತೇಜಸ್ವಿಗಳಾದ ಬ್ರಾಹ್ಮಣರೂ, ಸೃಷ್ಟಿ, ಸ್ಥಿತಿ, ಸಂಹಾರ ರೂಪವಾದ ಈ ನಿನ್ನ ಮಾಯಾಮಧ್ಯದಲ್ಲಿ ಬಿದ್ದು ಸಂಸಾರಿಗಳಾಗಿ ಭ್ರಾಂತರಾಗಿರುವರು. ಎಲೈ ಜಗದೀಶ್ವರನೆ! ಮಂಗಳಕರನೆ! ಮೂರುಲೋಕಗಳ ಅಪಾರ ದುಃಖಗಳನ್ನೂ ಹೋಗಲಾಡಿಸುವವನೆ! ಕಾಲವನ್ನು ಮೀರಿದ ಮಹೇಶ್ವರನೆ! ಜಗಚ್ಛ್ರೇಷ್ಠನಾದ ಭಗವಂತನೆ! ಈ ಜಗತ್ತನ್ನೆಲ್ಲಾ ಕಾಪಾಡು. ॥೮೦॥

ದೇವಿ! ಮೂರು ಸಂಧ್ಯಾಕಾಲಗಳಲ್ಲಿಯೂ ಅಥವಾ ಪೂಜೆಯ ಕೊನೆಯಲ್ಲಿಯೋ ಮಹೇಶ್ವರನನ್ನು ಹೀಗೆ ಸ್ತುತಿಸಿ, ಆಷಾಢಮಾಸದ ಹುಣ್ಣಿಮೆಯ ದಿನ ಬ್ರಾಹ್ಮಣರೊಂದಿಗೆ ಹೋಮಮಾಡಬೇಕು. ವಿಪ್ರರಿಗೆ ಕರು ಮತ್ತು ಉಚಿತ ದಕ್ಷಿಣೆ ಇವುಗಳೊಡನೆ ಒಂದು ಗೋಮಿಥುನವನ್ನು ದಾನಮಾಡಿ, ಬ್ರಾಹ್ಮಣರಿಂದ ಪಾರಣೆಯಾಗುವವರೆಗೂ ರಾತ್ರಿಯವೇಳೆಯೇ ಊಟಮಾಡುತ್ತಿರಬೇಕು. ಹೀಗೆ ಆಷಾಢಮಾಸದ ಪೂಜೆಯಿಂದ ಶಿವನು ಪ್ರೀತನಾಗುತ್ತಾನೆ. ಅನಂತರ ಅವನು ಚಂದ್ರಕಾಂತಿಯುಳ್ಳ ವಿಮಾನಗಳಿಂದ ಶ್ರೇಷ್ಠವಾದ ನನ್ನ ಲೋಕವನ್ನು ಸೇರುವನು. ॥೮೧-೮೨-೮೩॥

ಆಷಾಢಮಾಷಾಢಪದೇಽರ್ಚ್ಯ ಲಿಂಗೇ
ಮೃದುದೃಢಂ ಯೋಽಭಿಭವೇದ್ರಿಪುಂ ಸಃ ।
ಪರಿದೃಢೋ ವೈ ಭವತೀ ಗಣೌಘೆ
ಗಣ್ಯೋಽಥ ತತ್ಪುಣ್ಯಮುಮೇ ಸುಬಾಢಂ ॥೪೪॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಆಷಾಢಮಾಸಾರ್ಚನವಿಧಾನಂ
ನಾಮ ಸಪ್ತದಶೋಽಧ್ಯಾಯಃ

---

ಪಾರ್ವತಿಯೇ! ಆನ್ನಾಢಮಾಸದಲ್ಲಿ ಶಿವಲಿಂಗರೂಪಿಯಾದ ಶಿವನ ಪಾದಗಳನ್ನು ಪೂಜಿಸಿದವನು, ಮೃದು, ಅಥವಾ ಒರಟಾದ ಸಕಲ ರೀತಿಯ ಶತ್ರುಗಳನ್ನೂ ತಿರಸ್ಕರಿಸುವನು, ಅಲ್ಲದೇ ತಾನೂ ದೃಢನಾಗಿ ಗಣಗಳ ಗುಂಪಿನಿಂದ ಗಣ್ಯನೆನಿಸಿ ಕೊಳ್ಳುವನು. ಉಮೆಯೆ! ಆನ್ನಾಢಮಾಸದಲ್ಲಿ ಪೂಜಾಪುಣ್ಯವು ವಿಶೇಷವಾದು ದೆಂದು ತಿಳಿಯೆಂದು ಶಿವನು ಪಾರ್ವತಿಗೆ ಹೇಳಿದನು. ॥೪೪॥

ಇಂತು ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಆಷಾಢಮಾಸ
ಪೂಜಾವಿಧಾನ ವರ್ಣನೆಯೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಅಷ್ಟಾದಶೋಽಧ್ಯಾಯಃ

|| ಈಶ್ವರ ಉವಾಚ ||

ಶ್ರಾವಣಾರ್ಚನಮೀಶಾನಿ ಶೃಣು ಶ್ರವಣಭೂಷಣಂ ।
ಯಸ್ಮಿನ್ಸಂಪೂಜಿತೋ ದೇವಿ ಭಗವಾನಿಂದುಭೂಷಣಃ ॥೧॥

ದದಾತಿ ಕಾಮಾನ್ವಿಪುಲಾಂಸ್ತದ್ವಿಧಿಂ ಶೃಣು ಸಾದರಂ ।
ಬ್ರಹ್ಮವಿಷ್ಣ್ವಾದಯೋ ದೇವಾಃ ಶ್ರಾವಣೇಽರ್ಚ್ಯ ಮಹೇಶ್ವರಂ ॥೨॥

ಲೇಭಿರೇ ಪರಮಾಂ ಸಿದ್ಧಿಂ ಮುನಯೋ ಗಣಪಾ ಮಮ ।
ಪುಣ್ಯಪುಣ್ಯೋಽಹ್ಯಯಂ ಮಾಸಃ ಗಣಪುಣ್ಯೋ ಮಹೇಶ್ವರಿ ॥೩॥

---

## ಹದಿನೆಂಟನೆಯ ಅಧ್ಯಾಯ

ಎಲೌ ಈಶ್ವರಿಯೇ, ಕಿವಿಗೆ ಅಲಂಕಾರಪ್ರಾಯವೆನಿಸಿರುವ ಶ್ರಾವಣಮಾಸದ ಪೂಜಾವಿಧಾನವನ್ನು ಹೇಳುತ್ತೇನೆ ಕೇಳು ; ಈ ಮಾಸದಲ್ಲಿ ಪೂಜಿಸಲ್ಪಟ್ಟ ಚಂದ್ರ ಭೂಷಣನಾದ ಭಗವಂತನು ವಿಪುಲವಾದ ಇಷ್ಟಾರ್ಥಗಳನ್ನು ಭಕ್ತರಿಗೆ ನೀಡುವನು. ಅಂತಹ ಶ್ರೇಷ್ಠನಾದ ಪೂಜಾ ವಿಧಿಯನ್ನು ಈಗ ತಿಳಿಸುವೆನು. ಆದರವಿಟ್ಟು ಲಾಲಿಸು ; ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು ಶ್ರಾವಣಮಾಸದಲ್ಲಿ ಮಹೇಶನನ್ನು ಪೂಜಿಸಿ ಉತ್ತಮವಾದ ಸಿದ್ಧಿಯನ್ನು ಪಡೆದಿದ್ದಾರೆ. ಇದರಂತೆಯೆ ಅನೇಕ ಮುನಿಗಳೂ ಗಣಾಧಿಪತಿಗಳೂ ಸಿದ್ಧಿ ಹೊಂದಿರುವರು. ||೧-೩||

ಈ ಶ್ರಾವಣಮಾಸವು ಪುಣ್ಯಕರವಸ್ತುಗಳಲ್ಲಿ ಪ್ರಥಮವೆನಿಸಿದುದು. ಅಲ್ಲದೆ ಶಿವಗಣತ್ವವನ್ನುಂಟುಮಾಡುವ ಫಲವುಳ್ಳದ್ದು. ಶ್ರಾವಣಮಾಸದ ಪ್ರಾರಂಭದಲ್ಲಿ

ಮಾಸಾದೌ ಶ್ರಾವಣೇ ದೇವಿ ನದ್ಯಾಂ ಸರಸಿ ವಾ ಶಿವೇ ।
ಧ್ಯಾತ್ವಾ ಮಾಂ ಪ್ರಯತಃ ಸ್ನಾತ್ವಾ ತ್ರಿರಾಚಮ್ಯ ಶುಚಿಃ ಸ್ವಯಂ ॥೪॥

ಸಪವಿತ್ರಕರಃ ಶಾಂತೋ ಸಂಕಲ್ಪ್ಯ ವಿಧಿಪೂರ್ವಕಂ ।
ಪಟ್ಟಾಂಶುಕಪರಿಧಾನೋ ಭಸ್ಮರುದ್ರಾಕ್ಷಭೂಷಣಃ ॥೫॥

ಕೃತನಿತ್ಯಕ್ರಿಯೋ ದೇವಿ ಪ್ರಾತರ್ಹುತಹುತಾಶನಃ ।
ವೈತಾನಂ ವಾ ತಥಾ ಗುಹ್ಯಂ ವಿತಾನಾಲಂಕೃತಂ ಶುಭಂ ॥೬॥

ವರಿವಸ್ಯಾಗೃಹಂ ಶಂಭೋರುಪಲಿಪ್ತಂ ಸುಶೋಭನಂ ।
ಪಂಚವರ್ಣೈಃ ಪದ್ಮದಲೈಃ ಸ್ವಸ್ತಿಕಾದಿ ವಿಚಿತ್ರಿತಂ ॥೭॥

ಪುಷ್ಪಗಂಧಾದಿವಸಿತಂ ತೋರಣಾದ್ಯೈರಲಂಕೃತಂ ।
ತನ್ಮಧ್ಯೇ ಸಂಸ್ಥಿತೇ ಪೀಠೇ ಲಿಂಗಂ ನೀಲವಿನಿರ್ಮಿತಂ ॥೮॥

ಹೇಮರೌಪ್ಯೋದ್ಭವಂ ದೇವಿ ಸ್ಫಾಟಿಕಂ ವಾ ಯಥಾರುಚಿ ।
ನದೀತೋಯೇನ ಸಂಪೂರ್ಣಂ ಧೌತಕುಂಭಂ ನಿವೇಶಯೇತ್ ॥೯॥

---

ನದಿ, ಕೊಳ ಮುಂತಾದ ಜಲಾಶಯಗಳಲ್ಲಿ ನನಗೆ ಧ್ಯಾನಪೂರ್ವಕವಾಗಿ ನಿಯಮದಿಂದ ಸ್ನಾನಮಾಡಿಸಿ ಮೂರುಬಾರಿ ಆಚಮನ ಮಾಡಿ ಶುಚಿಯಾಗಿ ಪವಿತ್ರವನ್ನು ಧರಿಸಿ, ಶಾಂತಮನಸ್ಸಿನಿಂದ ಪಟ್ಟೆವಸ್ತ್ರವನ್ನು ಧರಿಸಿ, ಭಸ್ಮರುದ್ರಾಕ್ಷಗಳನ್ನಲಂಕರಿಸಿಕೊಂಡು ವಿಧಿಪೂರ್ವಕವಾಗಿ ಸಂಕಲ್ಪ ಮಾಡಬೇಕು. ॥೩-೪-೫॥

ತಮ್ಮ ತಮ್ಮ ನಿತ್ಯಕರ್ಮಗಳನ್ನೆಸಗಿ, ಪ್ರಾತಃಕಾಲ ಅಗ್ನಿಯಲ್ಲಿ ಹೋಮ ಮಾಡಿ, ಉತ್ತಮವಾದ ಮೇಲ್ಕಟ್ಟುಗಳಿಂದ ಅಲಂಕರಿಸಲ್ಪಟ್ಟ ವಿಧಿವತ್ತಾಗಿ ಗೋಮಯಾದಿಗಳಿಂದ ಸಾರಿಸಲ್ಪಟ್ಟ, ಮನೋಹರವಾಗಿಯೂ ಐದುಬಣ್ಣದ ಪದ್ಮದಳಗಳಿಂದಲೂ, ಸ್ವಸ್ತಿಕಾದಿ ಚಿಹ್ನೆಗಳಿಂದಲೂ ಚಿತ್ರಿಸಲ್ಪಟ್ಟ ಹೂಗಂಧಗಳಿಂದಲೂ ಸುವಾಸಿತವಾಗಿ, ತೋರಣಾದಿಗಳಿಂದ ಸಿಂಗರಿಸಲ್ಪಟ್ಟಿರುವ ಮಹೇಶನ ಪೂಜಾಗೃಹವನ್ನು ಹೊಕ್ಕು ಆ ಗೃಹದ ಮಧ್ಯದಲ್ಲಿಟ್ಟಿರುವ ಪೀಠದಲ್ಲಿ, ನೀಲಮಣಿಯ ಲಿಂಗವನ್ನೋ ಅಥವಾ ಸಾಧ್ಯವಿಲ್ಲದಿದ್ದಲ್ಲಿ ಚಿನ್ನದ, ಬೆಳ್ಳಿಯ, ಸ್ಫಟಿಕಲಿಂಗಗಳನ್ನೋ ತನ್ನ ಶಕ್ತ್ಯನುಸಾರ ಸ್ಥಾಪಿಸಬೇಕು. ಅದರ ಮುಂದೆ ಹೊಳೆಯ ನೀರಿನಿಂದ ಪೂರ್ಣವಾಗಿರುವ ಶ್ವೇತಕುಂಭವನ್ನಿರಿಸಬೇಕು. ॥೬-೭-೮-೯॥

ಪಾದ್ಯಾರ್ಘ್ಯಾಚಮನೀಯಾನಿ ಪಾತ್ರಾಣ್ಯಗ್ರೇ ನಿಧಾಯ ಚ ।
ಸ ಪುಷ್ಪಾಂಬುನಿ ದೇವೇಶಿ ಪಂಚಗವ್ಯಾನಿ ಸಾದರಂ ॥೧೦॥

ಪಂಚಾಮೃತಾನಿ ಸರ್ವಾಣಿ ಸಂಪಾದ್ಯ ಚ ಯಥಾಬಲಂ ।
ಗಂಧಪುಷ್ಪಫಲಾದೀನಿ ಧೂಪದೀಪಾನಿ ಶಂಕರಿ ॥೧೧॥

ಬಿಲ್ವದ್ರೋಣಾರ್ಕಮಂದಾರಕುಟಜಾನಿ ಪ್ರಸಾದಯೇತ್ ।
ವರಯೇಚ್ಛಾಂಭವಾಂಸ್ತತ್ರ ಭಸ್ಮರುದ್ರಾಕ್ಷಭೂಷಣಾನ್ ॥೧೨॥

ಶ್ರಾವಣೇ ಶಿವಪೂಜಾರ್ಥಂ ಸ್ವಯಮಾಚಮ್ಯ ವಾಗ್ಯತಃ ।
ಪ್ರಾಙ್ಮುಖೋದಙ್ಮುಖೋವಾಪಿ ಚೇಲಾಜಿನಕುಶಾಸನೇ ॥೧೩॥

ಪಂಚಾಕ್ಷರಂ ಜಪೇತ್ತತ್ರ ಶತಾಷ್ಟಂ ಚ ಸಹಸ್ರಕಂ ।
ಧ್ಯಾಯೇದ್ದೇವಂ ವಿರೂಪಾಕ್ಷಂ ನೀಲಕಂಠಮುಮಾಸಖಂ ॥೧೪॥

ವರದಾಭಯಹಸ್ತಂ ಚ ಮೃಗಟಂಕಧರಂ ಶಿವಂ ।
ತ್ರಿಪುಂಡ್ರವಿಲಸತ್ಫಾಲಂ ಚಂದ್ರರೇಖಾವಿರಾಜಿತಂ ॥೧೫॥

---

ಅನಂತರ ಮುಂದುಗಡೆ ಪಾದ್ಯ, ಅರ್ಘ್ಯ, ಮತ್ತು ಆಚಮನೀಯ ಪಾತ್ರೆಗಳನ್ನು ಇರಿಸಿ, ಪುಷ್ಪಮಿಶ್ರವಾದ ನೀರನ್ನೂ ಪಂಚಗವ್ಯ ದ್ರವ್ಯಗಳನ್ನೂ, ಸಕಲ ಪಂಚಾಮೃತ ಪದಾರ್ಥಗಳನ್ನೂ ತನ್ನ ಶಕ್ತ್ಯನುಸಾರ ಸಂಪಾದಿಸಿಕೊಂಡು, ಗಂಧ, ಹೂ, ಹಣ್ಣು ಮುಂತಾದವುಗಳನ್ನೂ, ಧೂಪ ದೀಪಗಳನ್ನೂ ಬಿಲ್ವದಳ, ಕಂಚುವಾಳ, ಎಕ್ಕ, ಪಾರಿಜಾತೆ, ಗಿಡಮಲ್ಲಿಗೆ ಈ ಹೂಗಳನ್ನೂ ಪೂಜೆಗಾಗಿ ಸಿದ್ಧಮಾಡಿಟ್ಟುಕೊಳ್ಳಬೇಕು. ॥೧೦-೧೧॥

ಈ ಶ್ರಾವಣಮಾಸದಲ್ಲಿ ಶಿವಪೂಜೆಗೋಸ್ಕರ ಭಸ್ಮರುದ್ರಾಕ್ಷಾಲಂಕೃತರಾದ ಶೈವರನ್ನು ವರಣಮಾಡಬೇಕು. ತಾನೂ ಆಚಮನ ಮಾಡಿ ಮೌನವುಳ್ಳವನಾಗಿ ಪೂರ್ವ, ಅಥವಾ ಉತ್ತರದಿಕ್ಕಿಗಭಿಮುಖವಾಗಿ ಧಾವಳಿ, ಅಥವಾ ಕೃಷ್ಣಾಜಿನ ದರ್ಭಾಸನಗಳಲ್ಲಿ ಕುಳಿತುಕೊಂಡು ಸಾವಿರ, ಅಥವಾ ನೂರೆಂಟು ಸಂಖ್ಯೆಯಲ್ಲಿ ಶಿವಪಂಚಾಕ್ಷರಮಂತ್ರಗಳನ್ನು ಜಪಮಾಡಬೇಕು. ೧೨-೧೩॥

ಜಪಾನಂತರ ಮೂರುಕಣ್ಣುಗಳುಳ್ಳವನೂ, ಕಪ್ಪುಕೊರಳುಳ್ಳವನೂ, ಉಮಾಸಹಚಾರಿಯೂ, ವರದ ಮತ್ತು ಅಭಯ ಹಸ್ತಗಳುಳ್ಳವನೂ ಇನ್ನೆರಡು ಕೈಯಲ್ಲಿ

ಅಂಗಾದಿನ್ಯಾಸಮಾರಭ್ಯ ಪೀಠಪೂಜಾಂ ಪ್ರಕಾರಯೇತ್ ।
ಭೂತಶುದ್ಧಿಂ ವಿಧಾಯಾದೌ ಪಾತ್ರಾಣ್ಯಭ್ಯರ್ಚಯೇತ್ಕ್ರಮಾತ್ ॥೧೬॥

ಕುಂಭಂ ಸ ಪಲ್ಲವಮುಖಂ ಶಂಖಂ ಚ ತದನಂತರಂ ।
ಪುಷ್ಪಾಂಬುಪೂರಿತಂ ದೇವಿ ಮಾತೃಕಾಕ್ಷರವಿದ್ಯಯಾ ॥೧೭॥

ಗಂಧಪುಷ್ಪಫಲಾದೀನಾಂ ದೋಷ್ಯದೋಷನಿವಾರಣಂ ।
ಭಸ್ಮತ್ರಿಯಂಬಕೇನೇಶಿ ದೇಯಂ ಪಾತ್ರೇಷು ಶೋಧನಂ ॥೧೮॥

ಕ್ರಿಮಿಕೇಶಾದಿದುಷ್ಟಾನಾಂ ದೃಷ್ಟಾದೃಷ್ಟಕ್ರಿಯಾಚ್ಛಿದೇ ।
ಆವಾಹಯೇತ್ತತೋ ಲಿಂಗೇ ದೇವಂ ವೈ ಮೂಲಮಂತ್ರತಃ ॥೧೯॥

ಗಾಯತ್ರ್ಯಾ ವಾ ಮಹೇಶಸ್ಯ ಸ್ಥಾಪ್ಯ ಪೀಠೇ ಸಮಂತ್ರಕಂ ।
ನಿರೋಧನಂ ಚೈವ ಸಾನ್ನಿಧ್ಯಂ ಪ್ರಸಾದನನಿರೀಕ್ಷಣಂ ॥೨೦॥

---

ಜಿಂಕೆ ಮತ್ತು ಟಂಕಗಳನ್ನು ಧರಿಸಿರುವವನೂ ಭಸ್ಮತ್ರಿಪುಂಡ್ರಗಳಿಂದ ಶೋಭಿಸುತ್ತಿರುವ ಹಣೆಯುಳ್ಳವನೂ, ಚಂದ್ರರೇಖೆಯಿಂದ ಶೋಭಿಸುವ ತಲೆಯುಳ್ಳವನೂ ಆದ ಮಹೇಶ್ವರನನ್ನು ಧ್ಯಾನಮಾಡಬೇಕು. ಅನಂತರ ಅಂಗನ್ಯಾಸವೇ ಮೊದಲಾಗಿ ಪೀಠ ಪೂಜೆಯವರೆಗೂ ಪೂಜೆಯನ್ನು ನೆರವೇರಿಸಿ, ಮೊದಲು ಭೂತಶುದ್ಧಿಯನ್ನು ಮಾಡಿ ಕ್ರಮವಾಗಿ ಎಲ್ಲಾ ಪಾತ್ರೆಗಳನ್ನೂ ಪೂಜಿಸಬೇಕು. ॥೧೪-೧೫-೧೬॥

ಮಾವಿನ ಚಿಗುರುಗಳಿಂದ ಅಲಂಕೃತವಾಗಿರುವ ಕಲಶವನ್ನೂ, ಶಂಖವನ್ನೂ, ಪುಷ್ಪೋದಕಗಳಿಂದ ಪೂರ್ಣಮಾಡಿ ಮಾತೃಕಾಕ್ಷರ ವಿದ್ಯೆಯಿಂದ (ಶಿವಪಂಚಾಕ್ಷರದಿಂದ) ಪೂಜೆಮಾಡಬೇಕು. ಗಂಧ, ಹೂವು, ಮುಂತಾದವುಗಳ ದೋಷವನ್ನು ಹೋಗಲಾಡಿಸುವ ಶುದ್ಧಿಕರವಾದ ಭಸ್ಮವನ್ನು ತ್ರಿಯಂಬಕಮಂತ್ರದಿಂದ ಪಾತ್ರೆಗಳಲ್ಲಿ ಹಾಕಬೇಕು. ಇದರಿಂದ ಕ್ರಿಮಿಗಳು, ಕೂದಲು, ಮೊದಲಾದ ಕಣ್ಣಿಗೆ ಕಾಣುವ ಮತ್ತು ಕಾಣದಿರುವ ಪದಾರ್ಥಗಳ ಸಂಬಂಧವಿದ್ದರೂ ಎಲ್ಲವೂ ನಾಶವಾಗುವುದು. ತರುವಾಯ ಶಿವಲಿಂಗದಲ್ಲಿ ಮಹಾದೇವನನ್ನು ಶಿವಪಂಚಾಕ್ಷರ ಮೂಲಮಂತ್ರದಿಂದ ಆವಾಹನೆ ಮಾಡಬೇಕು. ॥೧೭-೧೮-೧೯॥

ಅಥವಾ ಗಾಯತ್ರೀ ಮಂತ್ರದಿಂದಲಾದರೂ ಮಹೇಶ್ವರನನ್ನು ಪೀಠದಲ್ಲಿ ಸ್ಥಾಪಿಸಿ, ಮಂತ್ರಪೂರ್ವಕವಾಗಿ ನಿರೋಧನ, ಸನ್ನಿಧಾನ, ಪ್ರಸಾದನ, ನಿರೀಕ್ಷಣ

ಶಂರ್ಮ್ಯಾಲ್ಲಿಂಗೇ ತತೋ ದೇಯಂ ಪಾದ್ಯಾರ್ಘ್ಯಾಚಮನಂ ಕ್ರಮಾತ್ ।
ಮಧುಪರ್ಕಂ ತತೋ ದೇವಿ ಪಂಚಗವ್ಯಂ ತತಃ ಪರಂ ॥೨೧॥

ಕ್ಷೀರೇಣ ಸ್ನಾಪಯೇದ್ದೇವಂ ದಧ್ನಾ ಚಾಜ್ಯೇನ ವೈ ಶಿವೇ ।
ಮಧುನಾ ಸಿತಯಾ ವಾಪಿ ದ್ರೋಣಮಾನೇನ ಸೇಚಯೇತ್ ॥೨೨॥

ನಾರಿಕೇಲಜಲೈಶ್ಚೈವ ರಂಭಾಪನಸಸಂಭವೈಃ ।
ಇಕ್ಷುಜಂಬೀರಸಾರೇಣ ಹಿರಣ್ಯಕುಶತೋಯತಃ ॥೨೩॥

ಪುಷ್ಪಾಂಬುಭಿರ್ಗಂಧತೋಯೈಃ ಕೂರ್ಚೋದೇ ಪ್ರಣವೇನ ಚ ।
ಸ್ನಾಪಯೇದ್ದೇವದೇವೇಶಂ ನಾನಾವಾದಿತ್ರನಿಸ್ವನೈಃ ॥೨೪॥

ಧೂಪಶ್ಚಾಗರುಸಾರೋತ್ಥೋ ದೇಯಸ್ತಸ್ಮಿನ್ಮಹೇಶ್ವರೇ ।
ಘೃತದೀಪಾಂಸ್ತತೋ ದದ್ಯಾದ್ಧವಿಃ ಕಿಂಚಿನ್ನಿವೇದಯೇತ್ ॥೨೫॥

ತಾಂಬೂಲಂ ಚ ತತೋ ದತ್ವಾ ಸ್ನಾನವೇದ್ಯಾಂ ನಿಧಾಯ ಚ ।
ಸಶಾಂತಿಚಮಕೋಪೇತೋ ಜಪ್ಯೋ ರುದ್ರೋ ದ್ವಿಜೈಃ ಸಹ ॥೨೬॥

---

ಗಳನ್ನು ನಡೆಸಬೇಕು. ಆಮೇಲೆ ಶಿವಲಿಂಗದಲ್ಲಿ ಕ್ರಮವಾಗಿ ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕಗಳನ್ನು ಕೊಡಬೇಕು. ಅನಂತರ ಪಂಚಗವ್ಯವನ್ನು ಸಮರ್ಪಿಸಿ ಮಹಾದೇವನಿಗೆ ಹಾಲು, ಮೊಸರು, ತುಪ್ಪ, ಮತ್ತು ಸಕ್ಕರೆ ಇವುಗಳನ್ನು ಒಂದು ಬಳ್ಳ ಪ್ರಮಾಣದಲ್ಲಿ ಅಭಿಷೇಕಮಾಡಬೇಕು. ॥೨೦-೨೧-೨೨॥

ಎಳನೀರುಗಳಿಂದಲೂ, ಬಾಳೆ, ಹಲಸು ಈ ಹಣ್ಣುಗಳಿಂದಲೂ, ಕಬ್ಬಿನ ಹಾಲು, ನಿಂಬೇಹಣ್ಣಿನ ರಸ, ಸುವರ್ಣೋದಕ, ಕುಶೋದಕ, ಪುಷ್ಪಜಲ, ಗಂಧವಾರಿ, ಕೂರ್ಚೋದಕ ಇವುಗಳಿಂದ ಓಂಕಾರಪೂರ್ವಕವಾಗಿ ಅನೇಕ ವಾದ್ಯಧ್ವನಿಗಳೊಡನೆ ದೇವದೇವೇಶ್ವರನಿಗೆ ಅಭಿಷೇಕ ಮಾಡಬೇಕು. ॥೨೩-೨೪॥

ಈ ಶ್ರಾವಣಮಾಸದಲ್ಲಿ ಮಹೇಶ್ವರನಿಗೆ ಅಗರುಸಾರಧೂಪವನ್ನು ಹಾಕಬೇಕು. ಅನಂತರ ತುಪ್ಪದ ದೀಪಗಳನ್ನು ಹೊತ್ತಿಸಿ, ಕೊಂಚ ಹವಿಸ್ಸನ್ನು ನಿವೇದನಮಾಡಬೇಕು. ಆಮೇಲೆ ತಾಂಬೂಲವನ್ನು ಸಮರ್ಪಿಸಿ, ಸ್ನಾನವೇದಿಕೆಯಲ್ಲಿರಿಸಬೇಕು. ಹಾಗೆಯೇ ಶಾಂತಿಪಾಠ, ಚಮಕಗಳೊಡಗೂಡಿದ ರುದ್ರಮಂತ್ರವನ್ನು ಬ್ರಾಹ್ಮಣರೊಡನೆ ಜಪಮಾಡಬೇಕು. ॥೨೫-೨೬॥

ಶಿವಾಭಿಷೇಕೇ ದೇವೀಶಿ ಶಾಂಭವೈರ್ಬ್ರಾಹ್ಮಣೈಃ ಸಹ ।
ಏಕಾದಶವರೋರುದ್ರೋ ಏಕತ್ರಿಪರೋಽಥವಾ ॥೨೭॥

ಭವಾಯೇತ್ಯಷ್ಟನಾಮಾಂತೇ ತರ್ಪಣಂ ಸ್ಯಾತ್ಸಕೂರ್ಚಕಂ ।
ವಿಮೃಜ್ಯ ವಾಸಸಾ ಲಿಂಗಂ ಪೀಠೇ ಸಂಸ್ಥಾಪ್ಯ ಮಂತ್ರಕಂ ॥೨೮॥

ಅಶೂನ್ಯಮಸ್ತಕಂ ಲಿಂಗಂ ಕುರ್ಯಾತ್ಪುಷ್ಪಂ ತು ಸಂಕ್ಷಿಪೇತ್ ।
ಉಪವೀತಂ ತಥಾ ವಾಸೋ ಗಂಧಭಸ್ಮ ಚ ಸಾಕ್ಷತಂ ॥೨೯॥

ಯವಗೋಧೂಮ ಮಿಶ್ರಾವಾ ತಂಡುಲಾಖಂಡಸಂಭವಾಃ ।
ದೇಯಾಸ್ತತೋ ಮಹಾದೇವಿ ರತ್ನಾಭರಣಮುತ್ತಮಂ ॥೩೦॥

ಸ್ವರ್ಣಬಿಲ್ವದಲಾನ್ಯಷ್ಟೌ ದೇಯಾನಿ ಚ ವಿಶೇಷತಃ ।
ನ ಪರ್ಯುಷಿತದೋಷೋ ನೈ ಸ್ವರ್ಣರತ್ನಸುಮೇಷು ವೈ ॥೩೧॥

ಪುನಃ ಪ್ರಕ್ಷಾಲ್ಯ ಸುಜಲೈರ್ಗ್ರಾಹ್ಯಾಣಿ ವರಬಿಲ್ವವತ್ ।
ಬಿಲ್ವಮಂದಾರಕುಸುಮೈಃ ಕುಟಜೈಃ ಶ್ರಾವಣೇಽರ್ಚಯೇತ್ ॥೩೨॥

---

ಎಲೌ ದೇವೇಶ್ವರಿಯೇ, ಶಿವಾಭಿಷೇಕಮಾಡುವಾಗ ಯಜಮಾನನು ಶೈವ ದ್ವಿಜರೊಡನೆ ಹನ್ನೊಂದು, ಮೂರು, ಎರಡು, ಅಥವಾ ಒಂದುಬಾರಿಯಾದರೂ ರುದ್ರಮಂತ್ರವನ್ನು ಜಪಮಾಡಬೇಕು. ಅಭಿಷೇಕವಾದ ನಂತರ 'ಭವಾಯ' ಎಂಬ ಶಿವನ ಎಂಟುನಾಮಪೂರ್ವಕವಾಗಿ ಕೂರ್ಚದೊಡನೆ ತರ್ಪಣಕೊಡಬೇಕು. ಆಮೇಲೆ ಶಿವಲಿಂಗವನ್ನು ಬಟ್ಟೆಯಿಂದ ಒರೆಸಿ, ಮಂತ್ರಪೂರ್ವಕವಾಗಿ ಪೀಠದಲ್ಲಿ ಸ್ಥಾಪಿಸಬೇಕು. ಶಿವಲಿಂಗದ ತಲೆಯನ್ನು ಶೂನ್ಯವಾಗಿಮಾಡದೆ ಅದರ ಮೇಲೆ ಹೂವನ್ನಿಡಬೇಕು. ॥೨೭-೨೮॥

ಯಜ್ಞೋಪವೀತ, ವಸ್ತ್ರ, ಗಂಧ, ಭಸ್ಮ, ಯವಧಾನ್ಯ ಮತ್ತು ಗೋಧಿ ಬೆರೆದ, ಅಥವಾ ತುಂಡಾಗದ ಅಕ್ಕಿಯಕಾಳಿನ ಅಕ್ಷತೆಗಳನ್ನು ಸಮರ್ಪಿಸಬೇಕು. ಉತ್ತಮವಾದ ರತ್ನಾಭರಣವನ್ನೂ ಎಂಟು ಚಿನ್ನದ ಬಿಲ್ವದಳಗಳನ್ನೂ, ವಿಶೇಷವಾಗಿ ಅರ್ಪಿಸಬೇಕು. ಚಿನ್ನ ಮತ್ತು ರತ್ನಗಳ ಪುಷ್ಪಗಳಲ್ಲಿ ಮಾತ್ರ ಹಳೆಯದೆಂಬ ದೋಷವಿರುವುದಿಲ್ಲ. ಒಂದುಸಾರಿ ಪೂಜೆಮಾಡಿದ್ದನ್ನೇ ಪುನಃ ಪುನಃ ಪೂಜಿಸುತ್ತಿರಬಹುದು. ॥೨೯-೩೦-೩೧॥

ಅಗರುಶ್ಚ ತತೋ ಧೂಪೋ ದೇಯೋ ದೀಪೋ ಘೃತಾಪ್ಲುತಃ ।
ತಿಲಾನಾಂ ಕೃಸರಂ ದೇಯಂ ಅಪೂಪಂ ಘೃತಪಾಚಿತಂ ॥೩೩॥

ಗುಡಖಂಡಂ ಚ ಸಘೃತಂ ಸೋಪದಂಶಂ ನಿವೇದಯೇತ್ ।
ತಾಂಬೂಲಂ ಫಲಜಾಲಂ ಚ ನಿವೇದ್ಯೇಕ್ಷುಸ್ತಖಂಡಕಂ ॥೩೪॥

ದೀಪಾನಾಮಾವಲಿಂ ಕುರ್ಯಾತ್ಸಹಸ್ರಂ ಶತಮೇವ ವಾ ।
ನೀರಾಜಯೇತ್ತತೋ ಲಿಂಗಂ ದೀಪೈಃ ಕರ್ಪೂರಖಂಡಜೈಃ ॥೩೫॥

ಪ್ರದಕ್ಷಿಣಾತ್ರಯಂ ಕೃತ್ವಾ ನಮಸ್ಕಾರಂ ಚ ಪಂಚಕಂ ।
ಕುರ್ಯಾದ್ಭಕ್ತಿಪ್ರವಣಧೀಃ ಶಿವಾಯ ವಿಧಿಪೂರ್ವಕಂ ॥೩೬॥

ಪೌರಾಣೈರ್ವೈದಿಕೈಃ ಸ್ತೋತ್ರೈಃ ಸ್ತುವೀತೈವಂ ಮಹೇಶ್ವರಂ ।
ನಾಮ್ನಾಂ ಶತಾಷ್ಟಕೇನೇಶಂ ಪೂಜಯೇತ ಸ್ತುವೀತ ಚ ॥೩೭॥

---

ಪೂಜಾನಂತರ ಅವುಗಳನ್ನು ಪುನಃ ಶುದ್ಧೋದಕದಿಂದ ಚೆನ್ನಾಗಿ ತೊಳೆದು ಶ್ರೇಷ್ಠವಾದ ಬಿಲ್ವದಳಗಳಂತೆಯೇ ಮತ್ತೆ ಪೂಜಿಸಬಹುದು. ಶ್ರಾವಣಮಾಸದಲ್ಲಿ ಬಿಲ್ವ, ಮಂದಾರ, ಗಿಡಮಲ್ಲಿಗೆ ಈ ಹೂಗಳಿಂದ ಪೂಜೆಮಾಡಬೇಕು. ಆಮೇಲೆ ಅಗರುವಿನ ಧೂಪವನ್ನೂ ತುಪ್ಪದದೀಪವನ್ನೂ ನಿವೇದಿಸಬೇಕು. ಎಳ್ಳಿನಚಿಗಳಿ, ತುಪ್ಪದಿಂದಮಾಡಿದ ಅಪೂಪ, ತುಪ್ಪಮಿಶ್ರಿತವಾದ ಬೆಲ್ಲದಚೂರು ಮತ್ತು ನಂಚಿಕೊಳ್ಳುವಪದಾರ್ಥಗಳನ್ನು ಶಿವನಿಗೆ ನಿವೇದನಮಾಡಬೇಕು. ಆಮೇಲೆ ತಾಂಬೂಲ, ಹಣ್ಣುಗಳಸಮೂಹ, ಕಬ್ಬಿನತುಂಡುಗಳನ್ನು ನಿವೇದಿಸಬೇಕು. ॥೩೨-೩೩-೩೪॥

ಹಾಗೆಯೇ ಸಾವಿರ, ಅಥವಾ ನೂರು ದೀಪಗಳ ಮಾಲೆಗಳನ್ನು ಹೊತ್ತಿಸಿ, ಆನಂತರ ಕರ್ಪೂರ ಖಂಡಗಳ ದೀಪಗಳಿಂದ ಶಿವಲಿಂಗಕ್ಕೆ ನೀರಾಜನಮಾಡಬೇಕು. ಆರತಿಯು ಆದ ಮೇಲೆ ಮೂರು ಪ್ರದಕ್ಷಿಣೆ ಮತ್ತು ಐದುನಮಸ್ಕಾರಗಳನ್ನು ಭಕ್ತಿ ಪೂರ್ಣಮನಸ್ಸಿನಿಂದ ಮಾಡಬೇಕು. ॥೩೫-೩೬॥

ಪುರಾಣ, ಮತ್ತು ವೇದ ಪ್ರತಿಪಾದ್ಯವಾದ ಸ್ತೋತ್ರಗಳಿಂದ ಮಹೇಶನನ್ನು ಮುಂದೆ ಹೇಳುವಂತೆ ಸ್ತುತಿಸಬೇಕು. ಅಲ್ಲದೆ ಮುಂದೆ ಹೇಳುವ ನೂರೆಂಟು ನಾಮಗಳಿಂದ ಈಶ್ವರನನ್ನು ಅರ್ಚನೆಮಾಡಿ ಧ್ಯಾನಿಸಬೇಕು. ಕೊನೆಯಲ್ಲಿ ಛತ್ರ ಚಾಮರ, ಬೀಸಣಿಗೆ, ಕನ್ನಡಿ, ಇವುಗಳನ್ನು ಶಿವನಿಗೆ ಸಮರ್ಪಿಸಿ ಬಿಲ್ವದಳಗಳೇ ಮುಂತಾದವುಗಳಿಂದ ಈಶ್ವರನನ್ನು ಪೂಜಿಸಬೇಕು. ॥೩೭-೩೮॥

ಛತ್ರಂ ಚ ಚಾಮರಂ ದೇವಿ ವ್ಯಜನಾದರ್ಶಕೇ ಶಿವೇ ।
ದತ್ವಾ ದೇವಾಯ ಬಿಲ್ವಾದ್ಯೈಃ ಪೂಜಯೇಲ್ಲಿಂಗಮೈಶ್ವರಂ ॥೩೮॥

ವಿಶ್ವೇಶ್ವರಾಯ ವಿಶ್ವಾಯ ಹರಾಯ ಪ್ರಥಮಾಯ ಚ ।
ಪೂಷ್ಣೋದಂತವಿನಾಶಾಯ ಭಗನೇತ್ರಾಂತಕಾಯ ಚ ॥೩೯॥

ಸುರಥಾಯ ಸುಪಥ್ಯಾಯ ಮನ್ಮಥಾಂತಕರಾಯ ಚ ।
ಮಹಿಮ್ನಾನಾಯ ತೀಕ್ಷ್ಣಾಯ ಆರ್ದ್ರಚರ್ಮಧರಾಯ ಚ ॥೪೦॥

ಸ್ಮಶಾನರತಿನಿತ್ಯಾಯ ನಮಸ್ತೇ ಕುಲಧಾರಿಣೇ ।
ಬರ್ಹಿರ್ಬರ್ಹಾವಸಾನಾಯ ಘನಾಯ ಬಹುಗರ್ಜತೇ ॥೪೧॥

ಕಾವ್ಯಪೂಜ್ಯಾಯ ದೃಪ್ತಾಯ ಸುಪ್ತಾಯ ಚ ಪಿನಾಕಿನೇ ।
ಪರಾವರಾಯ ನಿತ್ಯಾಯ ಸತ್ಯಧರ್ಮಾಯ ತೇ ನಮಃ ॥೪೨॥

---

೧. ಓಂ ವಿಶ್ವೇಶ್ವರಾಯ ನಮಃ
೨. ಓಂ ವಿಶ್ವಾಯ ನಮಃ
೩. ಓಂ ಹರಾಯ ನಮಃ
೪. ಓಂ ಪ್ರಥಮಾಯ ನಮಃ
೫. ಓಂ ಪೂಷ್ಣೋದಂತವಿನಾಶಾಯ ನಮಃ
೬. ಓಂ ಭಗನೇತ್ರಾಂತಕಾಯ ನಮಃ
೭. ಓಂ ಸುರಥಾಯ ನಮಃ
೮. ಓಂ ಸುಪಥ್ಯಾಯ ನಮಃ
೯. ಓಂ ಮನ್ಮಥಾಂತಕರಾಯ ನಮಃ
೧೦. ಓಂ ಮಹಿಮ್ನೇ ನಮಃ
೧೧. ಓಂ ತೀಕ್ಷ್ಣಾಯ ನಮಃ
೧೨. ಓಂ ಆರ್ದ್ರಚರ್ಮಧರಾಯ ನಮಃ
೧೩. ಓಂ ಸ್ಮಶಾನರತಿನಿತ್ಯಾಯ ನಮಃ
೧೪. ಓಂ ಕುಲಧಾರಿಣೇ ನಮಃ
೧೫. ಓಂ ಬರ್ಹಿರ್ಬರ್ಹಾವಸಾನಾಯ ನಮಃ
೧೬. ಓಂ ಘನಾಯ ನಮಃ
೧೭. ಓಂ ಬಹುಗರ್ಜತೇ ನಮಃ
೧೮. ಓಂ ಕಾವ್ಯಪೂಜ್ಯಾಯ ನಮಃ
೧೯. ಓಂ ದೃಪ್ತಾಯ ನಮಃ
೨೦. ಓಂ ಸುಪ್ತಾಯ ನಮಃ
೨೧. ಓಂ ಪಿನಾಕಿನೇ ನಮಃ
೨೨. ಓಂ ಪರಾವರಾಯ ನಮಃ
೨೩ ಓಂ ನಿತ್ಯಾಯ ನಮಃ
೨೪. ಓಂ ಸತ್ಯಧರ್ಮಾಯ ನಮಃ
೨೫. ಓಂ ಮಹಾಧ್ವರೇಶಾಯ ನಮಃ
೨೬. ಓಂ ತಂಡುನೃತ್ಯಪ್ರಿಯಾಯ ನಮಃ
೨೭. ಓಂ ವಿಭೀಷಣಾಯ ನಮಃ
೨೮. ಓಂ ಭೀಮಾಯ ನಮಃ

ನಮೋ ಮಹಾಧ್ವರೇಶಾಯ ತಂಡುನೃತ್ಯಪ್ರಿಯಾಯ ಚ ।
ವಿಭೀಷಣಾಯ ಭೀಮಾಯ ಭಗಪ್ರಮಥನಾಯ ಚ ॥೪೩॥

ಸಿದ್ಧಸಂಘಾತಗೀತಾಯ ಮಹಾಶೇಷಾಂಗದಾಯ ಚ ।
ನಮೋ ಮುಕ್ತಾಟ್ಟಹಾಸಾಯ ಕ್ಷ್ವೇಳಿತಾಸ್ಫೋಟಿತಾಯ ಚ ॥೪೪॥

ನರ್ದತೇ ಕೂರ್ದತೇ ಚೈವ ನಮಃ ಪ್ರಮುದಿತಾತ್ಮನೇ ।
ನಮೋ ಮೃಡಾಯ ಶ್ವಸತೇ ಧಾವತೇ ವಿಷ್ಟಿತಾಯ ಚ ॥೪೫॥

ಧ್ಯಾಯತೇ ಜೃಂಭತೇ ಚೈವ ರವಯೋ ದ್ರವತೇ ನಮಃ ।
ವಲತೇ ಕ್ರೀಡತೇ ಚೈವ ಲಂಬೋದರಶರೀರಿಣೇ ॥೪೬॥

ಪಿಶಂಗಶ್ಮಶ್ರುಕೇಶಾಯ ಅರುಣಾಯಾಕ್ಷಯಾಯ ಚ ।
ನಮೋ ವಿಕೃತವೇಷಾಯ ಮುಂಡಮಾಲಾಧರಾಯ ಚ ॥೪೭॥

---

೨೯. ಓಂ ಭಗಪ್ರಮಥನಾಯ ನಮಃ
೩೦. ಓಂ ಸಿದ್ಧಸಂಘಾತಗೀತಾಯ ನಮಃ
೩೧. ಓಂ ಮಹಾಶೇಷಾಂಗದಾಯ ನಮಃ
೩೨. ಓಂ ಮುಕ್ತಾಟ್ಟಹಾಸಾಯ ನಮಃ
೩೩. ಓಂ ಕ್ಷ್ವೇಲಿತಾಸ್ಫೋಟಿತಾಯ ನಮಃ
೩೪. ಓಂ ನರ್ದತೇ ನಮಃ
೩೫. ಓಂ ಕೂರ್ದತೇ ನಮಃ
೩೬. ಓಂ ಪ್ರಮುದಿತಾತ್ಮನೇ ನಮಃ
೩೭. ಓಂ ಮೃಡಾಯ ನಮಃ
೩೮. ಓಂ ಶ್ವಸತೇ ನಮಃ
೩೯. ಓಂ ಧಾವತೇ ನಮಃ
೪೦. ಓಂ ವಿಷ್ಟಿತಾಯ ನಮಃ
೪೧. ಓಂ ಧ್ಯಾಯತೇ ನಮಃ
೪೨. ಓಂ ಜೃಂಭತೇ ನಮಃ
೪೩. ಓಂ ರವಯೇ ನಮಃ
೪೪. ಓಂ ದ್ರವತೇ ನಮಃ
೪೫. ಓಂ ವಲತೇ ನಮಃ
೪೬. ಓಂ ಕ್ರೀಡತೇ ನಮಃ
೪೭. ಓಂ ಲಂಬೋದರಶರೀರಿಣೇ ನಮಃ
೪೮. ಓಂ ಪಿಶಂಗಶ್ಮಶ್ರುಕೇಶಾಯ ನಮಃ
೪೯. ಓಂ ಅರುಣಾಯ ನಮಃ
೫೦. ಓಂ ಅಕ್ಷಯಾಯ ನಮಃ
೫೧. ಓಂ ವಿಕೃತವೇಷಾಯ ನಮಃ
೫೨. ಓಂ ಮುಂಡಮಾಲಾಧರಾಯ ನಮಃ
೫೩. ಓಂ ಉನ್ಮತ್ತವೇಷಾಯ ನಮಃ
೫೪. ಓಂ ಕಿಂಕಿಣೀಕಟಯೇ ನಮಃ
೫೫. ಓಂ ಅಮರ್ಷಣಾಯ ನಮಃ
೫೬. ಓಂ ಕ್ರೂರಾಯ ನಮಃ
೫೭. ಓಂ ವಿಷ್ಣುಬಾಣಧರಾಯ ನಮಃ
೫೮. ಓಂ ನೃಸಿಂಹಾಂತ್ರವಸನಾಯ ನಮಃ

ನಮ ಉನ್ಮತ್ತವೇಷಾಯ ಕಿಂಕಿಣೀಕಟಯೇ ನಮಃ ।
ಆಮರ್ಷಣಾಯ ಕ್ರೂರಾಯ ವಿಷ್ಣುಬಾಣಧರಾಯ ಚ ॥೪೮॥

ನೃಸಿಂಹಾಂತ್ರವಸಾನಾಯ ಕ್ರೋಡದಂಷ್ಟ್ರವಿದಾರಿಣೇ ।
ಗಜದಂತ ಗದಾಯಾಥ ಗೋಚಿನಾಂಬರವಾಸಿನೇ ॥೪೯॥

ತರುಣಾಯ ಶರಣ್ಯಾಯ ಅರಣ್ಯಪತಯೇ ನಮಃ ।
ಅಪ್ರಮೇಯಾಯ ದೀಪ್ತಾಯ ನಿರ್ಗುಣಾಯ ಗುಣಾಯ ಚ ॥೫೦॥

ವಾದ್ಯಪ್ರಿಯಾಯ ವಾದ್ಯಾಯ ಚೂಡಾಮಣಿಧರಾಯ ಚ ।
ನಮಸ್ತ್ರೋತ್ರಾಯ ಚಿಂತ್ಯಾಯ ಯೋಗಿಧ್ಯೇಯಾಯ ಶಂಭವೇ ॥೫೧॥

ನಮೋ ವೇದಾಂತವೇದ್ಯಾಯ ಭವವೈದ್ಯಾಯ ಭೂತಯೇ ।
ಓಜಸೇ ತೇಜಸೇ ಚೈವ ಭ್ರಾಜತೇ ಗ್ರಸತೇ ನಮಃ ॥೫೨॥

---

೫೯. ಓಂ ಕ್ರೋಡದಂಷ್ಟ್ರವಿದಾರಿಣೇ ನಮಃ
೬೦. ಓಂ ಗಜದಂತಗದಾಯ ನಮಃ
೬೧. ಓಂ ಗೋಚಿನಾಂಬರವಾಸಿನೇ ನಮಃ
೬೨. ಓಂ ತರುಣಾಯ ನಮಃ
೬೩. ಓಂ ಶರಣ್ಯಾಯ ನಮಃ
೬೪. ಓಂ ಅರಣ್ಯಪತಯೇ ನಮಃ
೬೫. ಓಂ ಅಪ್ರಮೇಯಾಯ ನಮಃ
೬೬. ಓಂ ದೀಪ್ತಾಯ ನಮಃ
೬೭. ಓಂ ನಿರ್ಗುಣಾಯ ನಮಃ
೬೮. ಓಂ ಗುಣಾಯ ನಮಃ
೬೯. ಓಂ ವಾದ್ಯಪ್ರಿಯಾಯ ನಮಃ
೭೦. ಓಂ ವಾದ್ಯಾಯ ನಮಃ
೭೧. ಓಂ ಚೂಡಾಮಣಿಧರಾಯ ನಮಃ
೭೨. ಓಂ ಸ್ತೋತ್ರಾಯ ನಮಃ
೭೩. ಓಂ ಚಿಂತ್ಯಾಯ ನಮಃ
೭೪. ಓಂ ಯೋಗಿಧ್ಯೇಯಾಯ ನಮಃ
೭೫. ಓಂ ಶಂಭವೇ ನಮಃ
೭೬. ಓಂ ವೇದಾಂತವೇದ್ಯಾಯ ನಮಃ
೭೭. ಓಂ ಭವವೈದ್ಯಾಯ ನಮಃ
೭೮. ಓಂ ಭೂತಯೇ ನಮಃ
೭೯. ಓಂ ಓಜಸೇ ನಮಃ
೮೦. ಓಂ ತೇಜಸೇ ನಮಃ
೮೧. ಓಂ ಭ್ರಾಜಸೇ ನಮಃ
೮೨. ಓಂ ಗ್ರಸತೇ ನಮಃ

(ಮುಂದಿನ ೨೬ ನಾಮಾವಳಿಗಳು ಗ್ರಂಥದಲ್ಲಿಲ್ಲ? ಅಷ್ಟೋತ್ತರಶತನಾಮಾವಳಿಗಳೇ ಎಲ್ಲೆಲ್ಲಿಯೂ ಪ್ರಸಿದ್ಧವಾಗಿದೆ. ಆದರೂ ಮೂಲಗ್ರಂಥದಲ್ಲಿ ಮಾತ್ರ ಕೇವಲ ಎಂಭತ್ತೆರಡು ನಾಮಗಳೇ ತೋರಿಬರುತ್ತಿವೆ.)

ಏವಂ ವೈ ಶ್ರಾವಣೇ ಪೂಜ್ಯೋ ಬಿಲ್ವೈರ್ನಾಮಶತಾಷ್ಟಕೈಃ ।
ಸ್ತವಂ ಪಾಪಹರಂ ಸ್ತುತ್ವಾ ಮಾಸಿ ದೇವಂ ಪ್ರಸಾದಯೇತ್ ॥೫೩॥

ಗಂಗಾಧರಾಂಧಕಹರ ತ್ರಿಪುರಾವಮರ್ದ
ವೇದೌಘವೇದ್ಯ ಭಗವನ್ಭವರೋಗವೈದ್ಯ ।
ಆದ್ಯಸ್ತ್ವಮೇವ ಶಶಿಮೌಲಿವಿಶಾಲಶೀರ್ಷ
ಪೂಷೋಜ್ಜ್ವಲದ್ರದವಿನಾಶನ ಪಾಹಿ ದೀನಂ ॥೫೪॥

ವಿಶ್ವಾಧಿಕ ಪ್ರಮಥನಾಥ ಉಮಾಸನಾಥ
ಮನ್ನಾಥ ಮನ್ಮಥಹರಾಂತಕ ಕಾಲಕಾಲ ।
ಶೂಲಪ್ರಭೋಜ್ಜ್ವಲ ಶರಾವರಕಾರ್ಮುಕಜ್ಯಾ
ಪಾಣೇ ಭಗಾಕ್ಷಿಮಥನಾವ ಪಿನಾಕಪಾಣೇ ॥೫೫॥

---

ಎಲೌ ಪಾರ್ವತಿಯೆ! ಶ್ರಾವಣಮಾಸದಲ್ಲಿ ಈರೀತಿ ಬಿಲ್ವದಳಗಳಿಂದ ಈ ನೂರೆಂಟುನಾಮಪೂರ್ವಕವಾಗಿ ಶಿವನನ್ನು ಪೂಜಿಸಬೇಕು. ಈ ಮಾಸದಲ್ಲಿ ಪಾಪನಾಶಕವಾದ ಶಿವಸ್ತುತಿಯನ್ನು ಈರೀತಿ ಪಠನಮಾಡಿ ಮಹಾದೇವನನ್ನು ಪ್ರಸನ್ನಗೊಳಿಸಿಕೊಳ್ಳಬೇಕು. ||೩೯-೪೦-೪೧-೪೨-೪೩-೪೪-೪೫-೪೬-೪೭-೪೮-೪೯-೫೦-೫೧-೫೨-೫೩||

ಗಂಗೆಯನ್ನು ಮುಡಿಯಲ್ಲಿಧರಿಸಿರುವವನೆ! ಅಂಧಕಾಸುರ ಶತ್ರುವೆ! ತ್ರಿಪುರರನ್ನು ಧ್ವಂಸಮಾಡಿದವನೆ! ವೇದರಾಶಿಗಳಿಂದ ತಿಳಿಯಲ್ಪಡುವವನೆ! ಕ್ರೀಡಾದಿ ಷಡ್ಗುಣಪರಿಪೂರ್ಣನೆ! ಸಂಸಾರವೆಂಬ ರೋಗಕ್ಕೆ ವೈದ್ಯನೆನಿಸಿರುವವನೆ! ಚಂದ್ರಮೌಳಿಯೆ! ವಿಶಾಲವಾದ ತಲೆಯುಳ್ಳವನೆ! ಸೂರ್ಯನಂತೆ ಜ್ವಲಿಸುತ್ತಿದ್ದ ಗಜಾಸುರನ ಉಜ್ವಲವಾದ ದಂತವನ್ನು ನಾಶಪಡಿಸಿದ ಸ್ವಾಮಿಯೆ! ನೀನೇ ಆದಿಪುರುಷನು. ದೇವ! ದೀನನಾದ ನನ್ನನ್ನು ಕಾಪಾಡು. ||೫೪||

ಜಗಚ್ಛ್ರೇಷ್ಠನೆ, ಪ್ರಮಥಗಣಗಳಿಗೆ ಒಡೆಯನೆ, ಉಮಾರಮಣನೆ, ನನ್ನ ಪ್ರಭುವೇ, ಮನ್ಮಥನನ್ನು ನಾಶಪಡಿಸಿದವನೆ, ಯಮಾಂತಕನೆ, ಶೂಲಕಾಂತಿಯಿಂದ ಉಜ್ಜ್ವಲವಾಗಿರುವ ಕೈಯುಳ್ಳವನೆ, ಬಾಣ ಮತ್ತು ಉತ್ತಮವಾದ ಬಿಲ್ಲಿನ ಹೆದೆಯನ್ನು ಕೈಗಳಲ್ಲಿ ಹಿಡಿದಿರುವವನೇ, ಭಗಾಸುರನ ನೇತ್ರವನ್ನು ಕಿತ್ತವನೇ,

ಗೌರೀಪತೇ ಶಶಿಕಲಾಮಲಚಾರುಮೌಲೇ
ವೃಂದಾರವೃಂದಮುಕುಟಾರ್ಚಿತಪಾದಪದ್ಮ।
ಪದ್ಮಾಕ್ಷಪೂಜಿತ ಪದಾಂಬುಜಕಾಲಮೂಲ
ನಿರ್ವಾಪಣಾಂಧಕಹರಾವ ಸದೈವ ಮಾಂ ತ್ವಂ ॥೫೬॥

ಶೇಷಾಹಿಭೂಷ ವರಯೋಷಕೃತಾರ್ಧಕಾಯ
ಪೋಷಾಖಿಲಾಮಲಜಗತ್ಪರಿಪೋಷ ಶಂಭೋ।
ವೇಷಾಯ ತೇ ಕಿಲ ಜಗತ್ಕಲನಾವಿಶೇಷೋ
ಕಾಷಾಯವಸ್ತ್ರಪರಿಧಾನ ನಮೋ ನಮಸ್ತೇ ॥೫೭॥

ಅಲಿಂಗಸ್ತ್ವಮಾತ್ಮಾ ಕಥಂ ಲಿಂಗಸಂಸ್ಥಃ
ಸ್ಫುಲಿಂಗೋಪಮಂ ತ್ವತ್ತ ಏವ ಪ್ರಸೂತಂ।

---

ಪಿನಾಕವೆಂಬ ದೊಡ್ಡ ಬಿಲ್ಲನ್ನು ಕೈಯಲ್ಲಿ ಹಿಡಿದಿರುವ ಶಂಕರನೆ, ನಮ್ಮನ್ನು ಕಾಪಾಡು. ॥೫೫॥

ಗೌರೀರಮಣನೆ, ಚಂದ್ರಕಲೆಗಳಿಂದ ಮನೋಹರವಾಗಿ ಶೋಭಿಸುವ ನಿರ್ಮಲ ಮೌಳಿಯುಳ್ಳವನೆ, ದೇವತಾಸಮೂಹಗಳ ಕಿರೀಟಗಳಿಂದ ಪೂಜಿಸಲ್ಪಟ್ಟ ಪಾದ ಕಮಲವುಳ್ಳವನೆ, ವಿಷ್ಣುವಿನಿಂದ ಪೂಜಿತವಾದ ಅಡಿದಾವರೆಯುಳ್ಳವನೆ, ಯಮನನ್ನು ಪಾದದಿಂದ ನಿಗ್ರಹಿಸಿ, ಅಂಧಕಾಸುರನನ್ನು ಧ್ವಂಸಮಾಡಿದ ಶಿವನೆ, ಯಾವಾಗಲೂ ನನ್ನನ್ನು ಕಾಪಾಡು. ॥೫೬॥

ಆದಿಶೇಷನನ್ನೇ ಭೂಷಣವನ್ನಾಗಿ ಮಾಡಿಕೊಂಡಿರುವವನೆ, ದಿವ್ಯನಾರೀ ಮಣಿಯಾದ ಪಾರ್ವತೀದೇವಿಯನ್ನು ಅರ್ಧದೇಹವನ್ನಾಗಿ ಧರಿಸಿರುವವನೆ, ಸಮಸ್ತ ಪ್ರಪಂಚವನ್ನು ಪೋಷಿಸುವವನೆ, ನಿರ್ಮಲವಾದ ವೇದಪ್ರತಿಪಾದ್ಯನೆ, ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಜಗತ್ತಿನ ವ್ಯಾಪಾರವನ್ನು ನಡೆಸಲು ವೇಷ ಧಾರಣೆಮಾಡುವವನೆ, ಕಾಷಾಯವಸ್ತ್ರವನ್ನು ಧರಿಸಿರುವ ದೇವದೇವನೆ! ನಿನಗೆ ನಮೋನಮಃ. ॥೫೭॥

ದೇವ, ಸಕಲ ಕಾರಣರಹಿತನಾದ ನೀನು ಹೇಗೆ ಶಿವಲಿಂಗದಲ್ಲಿ ಅಡಗಿರುವೆ? ಅಗ್ನಿಕೊಂಡದ ಸಾಮ್ಯವು ಲೋಕಕ್ಕೆ ನಿನ್ನಿಂದಲೇ ಉಂಟಾಯಿತು. ನಶ್ವರವಾದ ಈ

ಜಗನ್ನಶ್ವರಂ ಶಶ್ವದೇವಂ ವಿಚಿತ್ರಂ
ಪ್ರಸೀದ ಪ್ರಸೀದ ಪ್ರಭೋ ಚಂದ್ರಚೂಡ ॥೫೮॥

ಏವಂ ವೈ ಶ್ರಾವಣೇ ಮಾಸಿ ಪೂಜ್ಯ ಸ್ತುತ್ವಾ ಮಹೇಶ್ವರಂ।
ದದ್ಯಾದ್ಗೋಮಿಥುನಂ ಶ್ವೇತಂ ಸವತ್ಸಂ ದಕ್ಷಿಣಾನ್ವಿತಂ ॥೫೯॥

ಶಾಂಭವೇಭ್ಯೋ ಹುನೇದ್ಧೋಮಂ ಪೌರ್ಣಮ್ಯಾಂ ಭೋಜಯೇ
ದ್ದ್ವಿಜಾನ್।
ಸ್ವಯಂ ಭುಂಜೀತ ವಿಭವಂ ಸೂಪಾಪೂಪೈರ್ಮನೋಹರೈಃ ॥೬೦॥

ಪ್ರಸಾದ್ಯ ದೇವಮೀಶಾನಂ ಮಾಸಾಂತಂ ನಕ್ತಭೋಜನಂ।
ಏವಂ ಯಃ ಶ್ರಾವಣಂ ಮಾಸಂ ಯಾಪಯೇತ್ಪೂಜಯಾ ಮಮ ॥೬೧॥

ಸ ಕಿಂಕಿಣೀಯುತೈರ್ಯಾನೈಃ ಪುಷ್ಪಗಂಧಸುಶೋಭಿತೈಃ।
ರುದ್ರಾಣೀರುದ್ರಗಣಪೈರ್ಗೀತವಾದಿತ್ರನಿಸ್ವನೈಃ ॥೬೨॥

---

ಪ್ರಪಂಚವು ನಿನ್ನ ಲೀಲೆಯಿಂದಲೇ ಪದೇ ಪದೇ ವಿಚಿತ್ರವಾಗಿ ತೋರುತ್ತಿರುವುದು. ಎಲೈ ಚಂದ್ರಶೇಖರನೇ, ಪ್ರಭುವೇ, ಪ್ರಸನ್ನನಾಗು. ॥೫೮॥

ಈ ರೀತಿ ಶ್ರಾವಣಮಾಸದಲ್ಲಿ ಮಹೇಶ್ವರನನ್ನು ಪೂಜಿಸಿ, ಸ್ತೋತ್ರಮಾಡಿ, ಬಿಳಿಯ ಬಣ್ಣದ ಗೋಮಿಥುನವನ್ನೂ ಕರುವಿನೊಡನೆ ಉಚಿತ ದಕ್ಷಿಣಾಪೂರ್ವಕವಾಗಿ ಶೈವರಿಗೆ ದಾನಮಾಡಬೇಕು. ಅನಂತರ ಹುಣ್ಣಿಮೆಯ ದಿನ ಹೋಮಮಾಡಿ ಬ್ರಾಹ್ಮಣರಿಗೆ ಭೋಜನಮಾಡಿಸಿ, ತಾನೂ ತನ್ನ ಯೋಗ್ಯತಾನುಸಾರ ತೊವ್ವೆ, ಮನೋಹರವಾದ ಅಪೂಪಾದಿಭಕ್ಷ್ಯಗಳನ್ನು ಭುಂಜಿಸಬೇಕು. ॥೫೯-೬೦॥

ಹೀಗೆ ಶಿವದೇವನನ್ನು ಸಂತೋಷಪಡಿಸಿ, ಒಂದು ತಿಂಗಳ ಕೊನೆಯವರೆಗೂ ರಾತ್ರಿ ಭೋಜನಮಾಡುತ್ತಾ ಶ್ರಾವಣಮಾಸವನ್ನೆಲ್ಲಾ ನನ್ನ ಪೂಜೆಯಿಂದ ಕಳೆಯುವವನು ಗೆಜ್ಜೆಗಳಿಂದ ಧ್ವನಿಗೈಯುತ್ತಾ, ಹೂಗಂಧಗಳಿಂದ ಚೆನ್ನಾಗಿ ಶೋಭಿತವಾಗಿರುವ ವಿಮಾನದಲ್ಲಿ ರುದ್ರಾಣೀದೇವತೆಗಳು ಮತ್ತು ರುದ್ರಗಣಾಧಿಪತಿಗಳೊಡನೆ ಸೇವಿಸುತ್ತಾ ಸಂಗೀತವಾದ್ಯ ಮುಂತಾದ ಧ್ವನಿಗಳೊಡನೆ ಆನಂದಿಸುತ್ತಾ ತನ್ನ ಸಾವಿರ ವಂಶೀಕರೊಡನೆ ಈ ದೇಹಪರಿತ್ಯಾಗಾನಂತರದಲ್ಲಿ ಕೈಲಾಸವನ್ನು ಸೇರುವನು. ॥೬೧-೬೨॥

ಯಾತಿ ವಂಶಸಹಸ್ರೇಣ ದೇಹಾಂತೇ ಶಂಕರಾಲಯಂ ।
ನಿತ್ಯಂ ನಕ್ತಾಶನೋ ಭಕ್ತೋ ಕುರ್ಯಾದಸ್ಮಿನ್ವಿಶೇಷತಃ ॥೬೩॥

ಸೋಮವಾರೇಷು ವಾಽಶಕ್ತೋ ಕುರ್ಯಾನ್ಮಲ್ಲಿಂಗಪೂಜನಂ ।
ಸ್ವಯಂ ವಾ ಶಾಂಭವೈಃ ಸಾರ್ಧಂ ಭಸ್ಮರುದ್ರಾಕ್ಷಧಾರಿಭಿಃ ॥೬೪॥

ಕೃತೇ ರತ್ನಮಯಂ ಲಿಂಗಂ ತ್ರೇತಾಯಾಂ ಹೇಮಸಂಭವಂ ।
ದ್ವಾಪರೇ ಪಾರದಂ ಶ್ರೇಷ್ಠಂ ಪಾರ್ಥಿವಂ ತು ಕಲೌ ಯುಗೇ ॥೬೫॥

ನಿತ್ಯಂ ಪಾರ್ಥಿವಲಿಂಗಾರ್ಚಾ ವಿಶಿಷ್ಟಾ ಸರ್ವಕಾಮದಾ ।
ಕಿಂ ಪುನಃ ಶ್ರಾವಣೇ ಮಾಸಿ ಸೋಮವಾರೇಷು ಕಿಂ ಪುನಃ ॥೬೬॥

ತತ್ರಾಪಿ ಪಾರ್ಥಿವಂ ದೇವಿ ಕ್ಷಿಪ್ರಂ ಸಿದ್ಧಿಪ್ರದಾಯಕಂ ।
ಪಾರ್ಥಿವೇನ ತು ಲಿಂಗೇನ ಬಹವಃ ಸಿದ್ಧಿಮಾಗತಾಃ ॥೬೭॥

ಚತುರಂಗುಲಮಾನೇನ ಕಾರ್ಯಂ ಲಿಂಗಂ ಮಹೇಶ್ವರಿ ।
ಮೃದಾಹರಣಸಂಘಟ್ಟಪ್ರತಿಷ್ಠಾರ್ಚ್ಯಾ ವಿಸರ್ಜನಂ ॥೬೮॥

---

ನಿತ್ಯವೂ ರಾತ್ರಿ ಭೋಜನಮಾಡುತ್ತಾ ಈ ಶ್ರಾವಣಮಾಸದಲ್ಲಿ ನನ್ನ ಪೂಜೆಯನ್ನು ನೆರವೇರಿಸಬೇಕು. ನಿತ್ಯಪೂಜೆಮಾಡಲು ಶಕ್ತಿಯಿಲ್ಲದಿದ್ದಲ್ಲಿ ಸೋಮವಾರದ ದಿನಗಳಲ್ಲಾದರೂ ನನ್ನ ಲಿಂಗಪೂಜೆಮಾಡಬೇಕು. ಈ ಪೂಜೆಯನ್ನು ತಾನೇ ಮಾಡಬಹುದು. ಇಲ್ಲದಿದ್ದಲ್ಲಿ ಭಸ್ಮರುದ್ರಾಕ್ಷಧಾರಿಗಳಾದ ಶಾಂಭವರೊಡನೆ ಕಲೆತು ಅವರಿಂದ ಮಾಡಿಸಬಹುದು. ದೇವಿ, ಕೃತಯುಗದಲ್ಲಿ ರತ್ನಲಿಂಗವೂ, ತ್ರೇತಾಯುಗದಲ್ಲಿ ಸುವರ್ಣಲಿಂಗವೂ, ದ್ವಾಪರಯುಗದಲ್ಲಿ ಪಾದರಸದ ಲಿಂಗವೂ ಕಲಿಯುಗದಲ್ಲಿ ಪಾರ್ಥಿವಲಿಂಗವೂ, ಪೂಜೆಗೆ ಶ್ರೇಷ್ಠವಾಗಿರುವುವು. ॥೬೩-೬೪-೬೫॥

ನಿತ್ಯವೂ ಪಾರ್ಥಿವಲಿಂಗಪೂಜೆಯು ಶ್ರೇಷ್ಠವೂ ಸಕಲ ಇಷ್ಟಾರ್ಥಪ್ರದವೂ ಆಗಿರುವಾಗ ಶ್ರಾವಣಮಾಸ ಅದರಲ್ಲೂ ಸೋಮವಾರಗಳಲ್ಲಿನ ಲಿಂಗಪೂಜೆಯ ಫಲವನ್ನೆಂತು ಹೇಳಲು ಸಾಧ್ಯ! ದೇವಿ, ಆ ಶಿವಲಿಂಗಗಳಲ್ಲಿಯೂ ಪಾರ್ಥಿವಲಿಂಗವು ಶೀಘ್ರವಾಗಿ ಸಿದ್ಧಿಯನ್ನುಂಟುಮಾಡುವುದು. ಈ ಪಾರ್ಥಿವಲಿಂಗಾರ್ಚನೆಯಿಂದ ಬಹುಮಂದಿ ಸಿದ್ಧಿಪಡೆದಿರುವರು. ॥೬೬-೬೭॥

ಈ ಪಾರ್ಥಿವಲಿಂಗವನ್ನು ನಾಲ್ಕಂಗುಲಪ್ರಮಾಣದಲ್ಲಿ ಮಾಡಿಸಬೇಕು.

ಕ್ರಮೋಽಯಂ ಪಾರ್ಥಿವೇ ದೇವಿ ಭವಾಯೇತ್ಯಷ್ಟನಾಮಭಿಃ ।
ಶಾಂಭವೈರೇವ ತತ್ಕಾರ್ಯಂ ಭಸ್ಮರುದ್ರಾಕ್ಷಧಾರಿಭಿಃ ॥೬೯॥

ಪಂಚಾಕ್ಷರಜಪಾಸಕ್ತೈರ್ವಿಪ್ರೈರ್ವೇದವಿದಾಂ ವರೈಃ ।
ನಾನ್ಯಪುಂಡ್ರಧರೈರ್ದೇವಿ ಪೂಜನಂ ಚೇತ್ಕೃತಂ ಮಮ ॥೭೦॥

ಕರ್ತಾ ಕಾರಯಿತಾ ವಾಪಿ ನ ಫಲಂ ಸಮ್ಯಗಾಪ್ನುಯಾತ್ ।
ವಿನಾ ಭಸ್ಮತ್ರಿಪುಂಡ್ರೇಣ ವಿನಾ ರುದ್ರಾಕ್ಷಮಾಲಯಾ ॥೭೧॥

ಪೂಜಿತೋಽಪಿ ಮಹಾದೇವಃ ಪ್ರಸಾದಂ ನ ಕರಿಷ್ಯತಿ ।
ತಸ್ಮಾಲ್ಲಿಂಗಾರ್ಚನಂ ದೇವಿ ವೈದಿಕೈರೇವ ಕಾರಯೇತ್ ॥೭೨॥

ಮೃಲ್ಲಿಂಗಪಾರ್ಥಿವಂ ಲಕ್ಷಂ ಭುಕ್ತಿಮುಕ್ತಿಕರಂ ಪರಂ ।
ಲಿಂಗಾನಾಮಯುತಂ ದೇವಿ ಮಹಾರಾಜಭಯಂ ಹರೇತ್ ॥೭೩॥

---

ಇದರ ರಚನೆಯಲ್ಲಿ ಮಣ್ಣುತರುವುದು, ಚೆನ್ನಾಗಿ ಮಣ್ಣುಕುಟ್ಟಿ ಗಟ್ಟಿಮಾಡುವುದು, ಲಿಂಗರಚನೆ, ಅದರ ಪ್ರತಿಷ್ಠೆ, ಅನಂತರ ಪೂಜೆ, ತರುವಾಯ ವಿಸರ್ಜನೆ ಈ ಕ್ರಮವು ಭವಾಯ ನಮಃ ಎಂಬ ಶಿವನ ಎಂಟು ನಾಮಪೂರ್ವಕವಾಗಿ ನಡೆಯಬೇಕು. ದೇವಿ, ಈ ವ್ರತವು ಭಸ್ಮರುದ್ರಾಕ್ಷಧಾರಿಗಳೂ, ಶಿವಪಂಚಾಕ್ಷರಜಪಾಸಕ್ತರೂ, ವೇದವನ್ನರಿತವರಲ್ಲಿ ಅಗ್ರಗಣ್ಯರೂ, ಆದ ಶೈವದ್ವಿಜರಿಂದಲೇ ನಡೆಸಲ್ಪಡಬೇಕು. ಬೇರೆ ತ್ರಿಪುಂಡ್ರಗಳನ್ನು ಧರಿಸಿದವರಿಂದ ಒಂದುವೇಳೆ ನನ್ನ ಪೂಜೆಯು ಮಾಡಲ್ಪಟ್ಟಿದ್ದೇ ಆದರೆ, ಕರ್ತೃವೂ, ಮಾಡಿಸುವವನೂ, ಇವರಿಬ್ಬರಲ್ಲಿ ಯಾರೂ ಸರಿಯಾದ ಫಲವನ್ನು ಪಡೆಯುವುದಿಲ್ಲ. ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಮಾಲಾ ಧಾರಣೆಯಿಲ್ಲದೇ ಪೂಜಿಸಲ್ಪಟ್ಟರೂ ಆ ಮಹಾದೇವನು ಅನುಗ್ರಹಮಾಡುವುದಿಲ್ಲ. ದೇವಿ, ಆದ್ದರಿಂದ ಶಿವಲಿಂಗಪೂಜೆಯನ್ನು ಶೈವಧರ್ಮಪರರಾದ ವೈದಿಕರಿಂದಲೇ ಮಾಡಿಸಬೇಕು. ॥೬೮-೬೯-೭೦-೭೧-೭೨॥

ಶ್ರೇಷ್ಠವಾದ ಲಕ್ಷಪಾರ್ಥಿವಲಿಂಗಾರ್ಚನೆಯು ಭೋಗಮೋಕ್ಷಪ್ರದಾಯಕವು. ಹತ್ತುಸಾವಿರ ಶಿವಲಿಂಗಗಳ ಪೂಜೆಯು ಮಹಾರಾಜಭೀತಿಯನ್ನೂ ಹೋಗಲಾಡಿಸುವುದು. ವಿದ್ಯಾರ್ಥಿಯಾದವನು ಸಾವಿರಲಿಂಗಗಳನ್ನೂ, ಧನಾರ್ಥಿಯು ಐನೂರು ಲಿಂಗಗಳನ್ನೂ, ಪುತ್ರಾರ್ಥಿಯು, ಒಂದೂವರೆಸಾವಿರ ಲಿಂಗಗಳನ್ನೂ,

ವಿದ್ಯಾರ್ಥೀ ಲಿಂಗಸಾಹಸ್ರಂ ಧನಾರ್ಥೀ ಚೇತ್ತದರ್ಧಕಂ ।
ಪುತ್ರಾರ್ಥೀ ಸಾರ್ಧಸಾಹಸ್ರಂ ಕನ್ಯಾರ್ಥೀ ಚ ಶತತ್ರಯಂ ॥೭೪॥

ವಿದ್ವಾನ್ ಲಿಂಗಾಯುತಂ ಕುರ್ಯಾತ್ಸರ್ವಪಾಪಹರಂ ಶಿವೇ ।
ರಾಜ್ಯಾರ್ಥೀ ಚ ಜಯಾರ್ಥೀ ಚ ಕಾರಯೇದಯುತತ್ರಯಂ ॥೭೫॥

ಕಾಂತಾರ್ಥೀ ಪಂಚಸಾಹಸ್ರಂ ದ್ರವ್ಯಾರ್ಥೀ ಚ ತದರ್ಧಕಂ ।
ಮೋಕ್ಷಾರ್ಥೀ ಕೋಟಿಸಂಖ್ಯಾಕಂ ವಿನಾ ಜ್ಞಾನೇನ ತಲ್ಲಭೇತ್ ॥೭೬॥

ಭೂಮಿಕಾಮಃ ಸಹಸ್ರಾಣಿ ರೂಪಾರ್ಥೀ ತ್ರಿಸಹಸ್ರಕಂ ।
ಸುಹೃತ್ಕಾಮಸ್ತ್ರಿಸಾಹಸ್ರಂ ವಸ್ತ್ರಾರ್ಥೀ ಚ ಶತಾಷ್ಟಕಂ ॥೭೭॥

ಮಾರಣಾರ್ಥೀ ಚ ಶತ್ರೂಣಾಂ ಸಪ್ತಸಾಹಸ್ರಮುತ್ತಮಂ ।
ನೀಲಪುಷ್ಪೈರ್ಯಜೇಲ್ಲಿಂಗಂ ಶ್ವೇತೈರ್ಮೋಕ್ಷಮವಾಪ್ನುಯಾತ್ ॥೭೮॥

ಸರ್ವಕಾಮೋ ತು ರಕ್ತಾನಿ ಬಂಧುಕಾದೀನಿ ಪೂಜಯೇತ್ ।
ವಶ್ಯಾಕರ್ಷಣವಿದ್ವೇಷೇ ಸಹಸ್ರಂ ಕ್ರಮತೋಽರ್ಚಯೇತ್ ॥೭೯॥

---

ಕನ್ಯಾರ್ಥಿಯು ಮೂನ್ನೂರು ಲಿಂಗಗಳನ್ನೂ, ವಿದ್ವಾಂಸನು, ಹತ್ತುಸಹಸ್ರಲಿಂಗಗಳನ್ನೂ ಪೂಜಿಸಿದರೆ ಅವರ ಸಕಲ ಇಷ್ಟವೂ ನೆರವೇರುವುದು. ಪಾರ್ವತಿ, ರಾಜ್ಯವನ್ನೂ ಮತ್ತು ಜಯವನ್ನೂ ಅಪೇಕ್ಷಿಸುವವರು ಮೂವತ್ತುಸಾವಿರ ಲಿಂಗಗಳನ್ನು ಅರ್ಚನೆಮಾಡಬೇಕು. ಪತ್ನೀಕಾಮನು, ಐದುಸಾವಿರ, ದ್ರವ್ಯಾರ್ಥಿಯು ಎರಡೂವರೆ ಸಾವಿರ, ಮೋಕ್ಷಾಪೇಕ್ಷೆಯುಳ್ಳವನು ಕೋಟಿಸಂಖ್ಯಾಕ ಲಿಂಗಗಳನ್ನೂ ಪೂಜಿಸಿದರೆ ಜ್ಞಾನವಿಲ್ಲದಿದ್ದರೂ ಆ ಫಲವನ್ನು ಹೊಂದುವರು. ॥೭೩-೭೪-೭೫-೭೬॥

ಭೂಮಿಯನ್ನಪೇಕ್ಷಿಸುವವನು ಸಾವಿರ ಶಿವಲಿಂಗಾರ್ಚನೆಮಾಡಬೇಕು. ಸೌಂದರ್ಯಾಪೇಕ್ಷೆಯುಳ್ಳವನು ಮೂರುಸಾವಿರ ಲಿಂಗಗಳನ್ನೂ, ಮಿತ್ರಕಾಮನೆಯುಳ್ಳವನು ಮೂರುಸಾವಿರ ಲಿಂಗಗಳನ್ನೂ, ವಸ್ತ್ರವನ್ನಪೇಕ್ಷಿಸುವವನು ಎಂಟನೂರನ್ನೂ, ಶತ್ರುಗಳನ್ನು ಕೊಲ್ಲಬೇಕೆಂದು ಬಯಸುವವನು ಏಳುಸಾವಿರ ಲಿಂಗಗಳನ್ನು ಕಪ್ಪು ಹೂಗಳಿಂದಲೂ ಅರ್ಚನೆಮಾಡಿದವನೂ ಇಷ್ಟಸಿದ್ಧಿ ಪಡೆಯುವನು. ॥೭೭-೭೮॥

ಸಕಲ ಮನೋರಥಗಳನ್ನೂ ಬಯಸುವವನು ಕೆಂಪು ಬಿಂದಿಗೆ ಹೂಗಳನ್ನು ಪೂಜೆಮಾಡಬೇಕು. ವಶೀಕರಣ, ಆಕರ್ಷಣ ಮತ್ತು ದ್ವೇಷಗಳನ್ನು ಸಾಧಿಸು

ದೇಶಂ ಕಾಲಂ ಬಲಂ ಜ್ಞಾತ್ವಾ ಕುರ್ಯಾತ್ಪಾರ್ಥಿವಲಿಂಗಪೂಜನಂ ।
ಶ್ರಾವಣೇ ತು ಮಹಾದೇವಿ ಕ್ಷಿಪ್ರಂ ಸಿದ್ಧಿಪ್ರದಾಯಕಂ ॥೪೦॥

ನಿಷ್ಕಂ ನಿಷ್ಕಾರ್ಧಮೇವೇತಿ ದದ್ಯಾದ್ಬ್ರಾಹ್ಮಣದಕ್ಷಿಣಾಂ ।
ದರಿದ್ರೋಽಪಿ ತಥಾಢ್ಯೋ ವಾ ಗಾವೋ ದೇಯಾಃ ಸವತ್ಸಕಾಃ ॥೪೧॥

ತತ್ತನ್ಮಾನಾನುಸಾರೇಣ ತರ್ಪಣಂ ಹೋಮಭೋಜನಂ ।
ಬ್ರಾಹ್ಮಣಾನಾಂ ವಿಶೇಷೇಣ ಏಷ ಪ್ರೋಕ್ತೋ ವಿಧಿಃ ಶಿವೇ ॥೪೨॥

ಪವಿತ್ರಾರೋಪಣಂ ಕುರ್ಯಾಚ್ಛ್ರಾವಣ್ಯಾಂ ಕಾರ್ತಿಕೇ ತಥಾ ।
ಹೇಮರೌಪ್ಯೈಸ್ತಥಾ ಕ್ಷೌಮೈಃ ಕಾರ್ಪಾಸೈಃ ಶತಗ್ರಂಥಿತೈಃ ॥೪೩॥

ಪವಿತ್ರಾಣಿ ತ್ರಿರಾವೃತ್ಯ ಕಾರಿತಾನಿ ಮಹೇಶ್ವರಿ ।
ಉತ್ತಮಂ ತು ಶತಗ್ರಂಥಿರ್ಮಧ್ಯಮಂ ದಶಗ್ರಂಥಿಕಂ ॥೪೪॥

---

ವವನು ಕ್ರಮವಾಗಿ ಸಾವಿರ ಶಿವಲಿಂಗಾರ್ಚನೆ ಮಾಡಬೇಕು. ದೇಶ, ಕಾಲ, ಶಕ್ತಿ ಇವುಗಳನ್ನು ತಿಳಿದು ಪಾರ್ಥಿವಲಿಂಗಪೂಜೆಯನ್ನು ಮಾಡಬೇಕು. ಎಲೌ ಮಹಾದೇವಿಯೆ, ಶ್ರಾವಣಮಾಸದಲ್ಲಿ ಮಾಡುವ ಈ ಶಿವಪೂಜೆಯು ಜಾಗ್ರತೆಯಾಗಿ ಸಿದ್ಧಿಯನ್ನುಂಟುಮಾಡುವುದು. ॥೩೯-೪೦॥

ದೇವೇಶ್ವರಿಯೆ, ಒಂದು ಅಥವಾ ಅರ್ಧನಿಷ್ಕ(ಸುವರ್ಣನಾಣ್ಯ)ವನ್ನು ಬ್ರಾಹ್ಮಣರಿಗೆದಕ್ಷಿಣೆಯಾಗಿ ಕೊಡಬೇಕು. ಬಡವ ಅಥವಾ ಐಶ್ವರ್ಯವಂತ ಯಾರಾದರೂ ಸರಿಯೇ ಕರುವಿನೊಡನೆ ಹಸುವನ್ನು ದಾನಮಾಡಬೇಕು. ಆಯಾ ಪ್ರಮಾಣವನ್ನನುಸರಿಸಿ, ತರ್ಪಣ, ಹೋಮ ಮತ್ತು ಬ್ರಾಹ್ಮಣಭೋಜನಮಾಡಿಸಬೇಕು. ಎಲೌ ಪಾರ್ವತಿಯೇ, ಈ ವಿಧಿಯು ವಿಶೇಷವಾಗಿ ಬ್ರಾಹ್ಮಣರಿಗೆ ಹೇಳಲ್ಪಟ್ಟಿದೆ ॥೪೧-೪೨॥

ಶ್ರಾವಣ ಮತ್ತು ಕಾರ್ತಿಕಮಾಸಗಳಲ್ಲಿ ಪವಿತ್ರಗ್ರಂಥಿಗಳುಳ್ಳ ಸರವನ್ನು ಅರ್ಪಿಸಬೇಕು. ಚಿನ್ನ, ಬೆಳ್ಳಿ, ರೇಷ್ಮೆ ಅಥವಾ ಹತ್ತಿ ಇವುಗಳಿಂದ ನಿರ್ಮಿತವಾದ ನೂರು ಗಂಟುಗಳಿಂದ ಕೂಡಿರುವಂತೆ ಮೂರು ಮಡಿಕೆಗಳಿಂದ ಮಾಡಿದ ಪವಿತ್ರಗಳನ್ನು ಮಾಡಿಸಿ ಶಿವನಿಗೆ ಸಮರ್ಪಿಸಬೇಕು. ನೂರುಗಂಟುಗಳುಳ್ಳ ಪವಿತ್ರವು ಉತ್ತಮವಾದುದು. ಹತ್ತುಗಂಟುಗಳುಳ್ಳದ್ದು ಮಧ್ಯಮವು. ಪವಿತ್ರವು, ಮೂರುಗಂಟುಗಳಿಂದಲಾದರೂ ಕೂಡಿರಬೇಕು. ಅದಕ್ಕಿಂತ ಕಡಿಮೆಯಾದುದನ್ನು ಶಿವನಿಗೆ ಸಮರ್ಪಿಸಬಾರದು. ॥೪೩-೪೪॥

ತ್ರಿಗ್ರಂಥಿರ್ವಾ ನ್ಯೂನಮತೋ ನ ದೇಯಂ ಶಂಕರಾಯ ತು ।
ಪ್ರಲಂಬತೋ ಜಾನುಮಾತ್ರಂ ಕುರ್ಯಾಲ್ಲಿಂಗೇ ಶಿವೇ ತದಾ ॥೮೫॥

ಸಂಪೂಜ್ಯ ಚ ಪವಿತ್ರಾಣಿ ರೋಪಯೇಚ್ಛ್ರಾವಣೇ ಶಿವೇ ।
ಪವಿತ್ರಾಣಿ ಶಿವೇ ದತ್ವಾ ಪವಿತ್ರೋ ಜಾಯತೇ ಭುವಿ ॥೮೬॥

ತ್ರಿನೇತ್ರಪ್ರಿಯ ಏವ ಸ್ಯಾಚ್ಛ್ರಾವಣ್ಯಾಂ ಶಂಕರಾರ್ಚನಾತ್ ॥೮೭॥

॥ ಶ್ರೀ ಸ್ಕಂದ ಉವಾಚ ॥

ಯಃ ಶ್ರಾವಣೇ ಕಿಲ ಸುಪಾರ್ವಣಚೂಷಣಸ್ಯ
ಲಿಂಗಾನಿ ಪಾರ್ಥಿವಮಯಾನಿ ಚ ಸೋಮವಾರೇ ।
ತ್ರ್ಯಕ್ಷೇಕ್ಷಣಪ್ರಥಿತದೋಷಹರೇಽಪಿ ಮಾಸಿ
ನಕ್ತಾಶನೋ ಯದಿ ಭವೇತ ಸ ಪಾಪಮುಕ್ತಃ ॥೮೮॥

ಪವಿತ್ರಾಣಿ ಚಿತ್ರಾಣಿ ದತ್ವಾ ತ್ರಿನೇತ್ರೇ
ವಿಚಿತ್ರಾಣಿ ಪಾಪಾನಿ ನಾಶಂ ಪ್ರಯಾಂತಿ ।
ಸಪುತ್ರೈಃ ಕಲತ್ರೈರ್ಯುತಃ ಸರ್ವಸತ್ರೈಃ
ಫಲಂ ಯಚ್ಚ ತಚ್ಚಾಪ್ನುತೇ ದೇವಿ ಸತ್ಯಂ ॥೮೯॥

---

ಎಲೌ ಪಾರ್ವತಿಯೆ, ಮಂಡಿಯವರೆಗೂ ಜೋಲಾಡುವಂತೆ ಶಿವಲಿಂಗಕ್ಕೆ ಪವಿತ್ರಗಳನ್ನು ಮಾಡಿಸಬೇಕು. ಪವಿತ್ರಗಳನ್ನು ಪೂಜಿಸಿ, ಶಿವಲಿಂಗಕ್ಕೆ ಶ್ರಾವಣ ಮಾಸದಲ್ಲಿಯೇ ಹಾಕಬೇಕು. ಶಿವನಿಗೆ ಪವಿತ್ರಗಳನ್ನು ಸಮರ್ಪಿಸಿದ ಮಾನವನು ಭೂಮಿಯಲ್ಲಿ ಪವಿತ್ರನಾಗುವನು. ಶ್ರಾವಣಮಾಸದಲ್ಲಿ ಮಾಡುವ ಶಂಕರನ ಪೂಜೆಯಿಂದ ಶಿವನ ಪ್ರೀತಿಪಾತ್ರನಾಗುವನು. ॥೮೫-೮೬ ೮೭॥

ಯಾವನು, ಶ್ರಾವಣಮಾಸದಲ್ಲಿ ಸೋಮವಾರದ ದಿನ ಚಂದ್ರಾಭರಣನಾದ ಮಹೇಶನ ಪಾರ್ಥಿವಲಿಂಗಗಳನ್ನು ಪೂಜಿಸುವನೋ, ಅಲ್ಲದೇ ಶಿವಪೂಜೆಯಿಂದ ಪ್ರಸಿದ್ಧ ಪಾಪಗಳನ್ನೂ ನಾಶಮಾಡುವ ಈ ಶ್ರಾವಣಮಾಸದಲ್ಲಿ ಯಾವನು ಶಿವ ಪ್ರೀತಿಗಾಗಿ ರಾತ್ರಿ ಭೋಜನಮಾಡುವನೋ ಅವನು ಪಾಪರಹಿತನಾಗುವನು. ॥೮೮॥

ದೇವಿ, ಮಹೇಶನಿಗೆ ಚಿತ್ರವರ್ಣದ ಪವಿತ್ರಗಳನ್ನು ಸಮರ್ಪಿಸಿದರೆ ವಿಚಿತ್ರ ವಾದ ಪಾಪಗಳೂ ನಾಶವಾಗುವುವು. ಅವನು ತನ್ನ ಪತ್ನೀಪುತ್ರರೊಡನೆ ಸಮಸ್ತ ಯಾಗಗಳ ಫಲಗಳನ್ನೂ ಪಡೆಯುವನು. ಇದು ಸತ್ಯವು. ॥೮೯॥

ಯಃ ಶ್ರಾವಣೇ ಶಶಿವಿಭೂಷಣತುಂಗಲಿಂಗಂ
ತ್ಯಕ್ತೇಷಣೋಽರ್ಚತಿ ನರೋ ಧಿಷಣೋಪಮಾನಃ ।
ಸ್ನಾತ್ವಾ ಶಿವೇ ತ್ರಿಷವಣಂ ನಿಶಿ ಸೋಮವಾರೇ
ತನ್ಮಾಸಿ ಶಂಕರಗಣೋ ಭವಿತಾಗ್ರಗಣ್ಯಃ ॥೯೦॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶ್ರಾವಣಮಾಸಾರ್ಚನವಿಧಿ
ನಿರೂಪಣಂ ನಾಮ ಅಷ್ಟಾದಶೋಽಧ್ಯಾಯಃ

---

ಪಾರ್ವತಿಯೆ, ಶ್ರಾವಣಮಾಸದಲ್ಲಿ ಇತರ ವಿಷಯಾಪೇಕ್ಷೆಗಳನ್ನು ತೊರೆದು, ಯಾವ ಮಾನವನು ಶಿವನ ಎತ್ತರವಾದ ಲಿಂಗವನ್ನು ಪೂಜಿಸುವನೋ ಅವನು ದೇವಗುರುವಾದ ಬೃಹಸ್ಪತಿಗೆ ಸಮಾನನೆನಿಸುವನು. ಆ ತಿಂಗಳಲ್ಲಿ ಸೋಮವಾರ ಮೂರು ಸಂಧ್ಯಾಕಾಲಗಳಲ್ಲಿಯೂ ಸ್ನಾನಮಾಡಿ ರಾತ್ರಿಹೊತ್ತು ಶಿವಲಿಂಗಾರ್ಚನೆ ಮಾಡುವವನು ಶಿವನ ಗಣತ್ವವನ್ನು ಪಡೆದು ಅನಂತರ ಅವರಲ್ಲಿಯೂ ಅಗ್ರಗಣ್ಯನೆನಿಸುವನು. ಎಂದು ಶಿವನು ಪಾರ್ವತಿಗೆ ಹೇಳಿದ್ದನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೯೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ
ಶ್ರಾವಣಮಾಸಪೂಜಾವಿಧಿನಿರೂಪಣವೆಂಬ ಹದಿನೆಂಟನೆಯ ಅಧ್ಯಾಯವು
ಮುಗಿದುದು.

— ❧ —

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕೋನವಿಂಶೋಽಧ್ಯಾಯಃ

॥ ಶ್ರೀ ಮಹಾದೇವ ಉವಾಚ ॥

ರುದ್ರಂ ಭಾದ್ರಪದೇ ಪೂಜ್ಯ ಭದ್ರಾಣಿ ಲಭತೇ ಶಿವೇ ।
ನ ದರಿದ್ರೋ ಭವೇಜ್ಜಂತುರ್ವಿಭವೇ ಸತಿ ಸ ಕ್ವಚಿತ್ ॥೧॥

ಮಾಸಾದೌ ದೇವಿ ಸಂಕಲ್ಪ್ಯ ಸ್ನಾಯಾತ್ತೀರ್ಥೇ ಬಹಿರ್ಜಲೇ ।
ನದೀನದತಟಾಕೇಷು ವಾಪೀಕೂಪೇಷು ವಾ ಶಿವೇ ॥೨॥

ತ್ರಿರಾಚಮ್ಯ ಶುಚಿಃ ಶಾಂತೋ ಉಮಾಕಾಂತಂ ಹೃದಿ ಸ್ಮರನ್ ।
ಸಪವಿತ್ರಕರೋ ಮೌನೀ ಪ್ರಾಣಾನಾಯಮ್ಯ ವಾಗ್ಯತಃ ॥೩॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮೋದ್ಧೂಳನತತ್ಪರಃ ।
ತ್ರಿಪುಂಡ್ರಂ ರಚಯೇದ್ಭಕ್ತ್ಯಾ ಶಿರೋಬಾಹುಲಲಾಟಕೇ ॥೪॥

---

## ಹತ್ತೊಂಬತ್ತನೆಯ ಅಧ್ಯಾಯ

ಸ್ವಲ್ಪ ಐಶ್ವರ್ಯವಿದ್ದರೂ ಭಾದ್ರಪದಮಾಸದಲ್ಲಿ ಶಿವನನ್ನು ಪೂಜಿಸಿದವನು ಸಮಸ್ತಸನ್ಮಂಗಳಗಳನ್ನೂ ಹೊಂದುವನಲ್ಲದೆ ಎಂದಿಗೂ ಬಡತನವನ್ನೇ ಪಡೆಯುವುದಿಲ್ಲ. ಆ ತಿಂಗಳ ಪ್ರಾರಂಭದಲ್ಲಿ ಸಂಕಲ್ಪಮಾಡಿಕೊಂಡು, ಊರಿನ ಹೊರಗಿರುವ ನದಿ, ನದ, ಕೆರೆ, ಕೊಳ ಮತ್ತು ಬಾವಿಯ ನೀರಿನಲ್ಲಿ ಸ್ನಾನಮಾಡಬೇಕು. ಸ್ನಾನಾನಂತರ ಮೂರುಸಲ ಆಚಮನಮಾಡಿ ಶಾಂತಮನಸ್ಸಿನಿಂದ ಶಿವನನ್ನು ಹೃದಯದಲ್ಲಿ ಧ್ಯಾನಿಸುತ್ತಾ ಪವಿತ್ರಪಾಣಿಯಾಗಿ ಮೌನದಿಂದ ನಿಯಮಪೂರ್ವಕ

ರುದ್ರಾಕ್ಷಾನ್ಧಾರಯೇದ್ಭಕ್ತ್ಯಾ ಕಂಠೇ ಕರ್ಣಗಲೋರಸಿ ।
ನಿತ್ಯಕರ್ಮ ವಿಧಾಯಾದೌ ಸಂಕಲ್ಪ್ಯ ನಿಯಮವ್ರತೀ ॥೫॥

ಪೂಜಾರ್ಚನಾರ್ಥಂ ವರಯೇದ್ಬ್ರಾಹ್ಮಣಾನ್ ಶಾಂಭವಾಂಛಿವೇ ।
ವೇದಾಗಮಪುರಾಣಜ್ಞಾಂಛಾಂತಾನ್ದಾಂತಾನ್ಜಿತೇಂದ್ರಿಯಾನ್ ॥೬॥

ಭಸ್ಮರುದ್ರಾಕ್ಷಮಾಲಾಢ್ಯಾನ್ವರಯೇದ್ವೇದಪಾರಗಾನ್ ।
ತೈಃ ಸಾಕಂ ಮಂಡಪಂ ಶಂಭೋಃ ಕುರ್ಯಾತ್ಪುಷ್ಪವಿರಾಜಿತಂ ॥೭॥

ವಿತಾನಾಸ್ತರಣೋಪೇತಂ ಘೃತದೀಪವಿರಾಜಿತಂ ।
ಭೂಮೌ ಚೈವೋಪಲಿಪ್ತಾಯಾಂ ರಂಗವಲ್ಯಾಯುತಂ ತಥಾ ॥೮॥

---

ವಾಗಿ ಸಂಕಲ್ಪಮಾಡಿ "ಅಗ್ನಿರಿತಿಭಸ್ಮ" ಮುಂತಾದ ಮಂತ್ರಗಳಿಂದ ಭಸ್ಮೋದ್ಧೂಳನಮಾಡಿಕೊಂಡು ಭಕ್ತಿಪೂರ್ವಕರಾಗಿ ತಲೆ, ತೋಳು, ಹಣೆ ಈ ಅಂಗಗಳಲ್ಲಿ ಭಸ್ಮತ್ರಿಪುಂಡ್ರಧಾರಣೆಮಾಡಬೇಕು. ॥೧-೨-೩-೪॥

ಅನಂತರ, ಕೊರಳು, ಕಿವಿ, ಎದೆ ಈ ಭಾಗಗಳಲ್ಲಿ ರುದ್ರಾಕ್ಷಗಳನ್ನು ಭಕ್ತಿಯಿಂದ ಧರಿಸಬೇಕು. ಯಜಮಾನನು ತನ್ನ ನಿತ್ಯಕರ್ಮಗಳನ್ನು ಮೊದಲು ಮುಗಿಸಿಕೊಂಡು ಸಂಕಲ್ಪಮಾಡಿ, ನಿಯಮವ್ರತವುಳ್ಳವನಾಗಿ ಆ ತಿಂಗಳಿನ ಶಿವಪೂಜಾಕಾರ್ಯವನ್ನು ನಡೆಸುವುದಕ್ಕೋಸ್ಕರ ವೇದ, ಆಗಮ, ಪುರಾಣಗಳನ್ನರಿತು, ಶಾಂತಸ್ವಭಾವದವರೂ, ಮನಸ್ಸನ್ನು ಗೆದ್ದವರೂ, ಜಿತೇಂದ್ರಿಯರೂ, ಭಸ್ಮರುದ್ರಾಕ್ಷಧಾರಿಗಳೂ, ವೇದಪಾರಂಗತರೂ ಆದ ಶೈವಬ್ರಾಹ್ಮಣರನ್ನು ವರಣ ಮಾಡಬೇಕು. ॥೫-೬॥

ಅವರೊಡನೆ ಸೇರಿ, ಹೂಗಳಿಂದ ವಿರಾಜಿಸುತ್ತ, ವಿತಾನ (ಮೇಲ್ಚಪ್ಪರ) ಆಸ್ತರಣ, ಸುತ್ತಲೂ ಕಟ್ಟುವ ಚಪ್ಪರಗಳಿಂದ ಕೂಡಿದ ಶಿವನ ಪೂಜಾಮಂಟಪವನ್ನು ಮಾಡಿಸಬೇಕು. ಆ ಮಂಟಪವು ತುಪ್ಪದ ದೀಪಗಳಿಂದ ವಿರಾಜಿಸುತ್ತಿರಬೇಕು. ಸಾರಿಸಿದ ನೆಲದ ಮೇಲೆ ರಂಗವಲ್ಯಾದಿಗಳಿಂದ ಹಸೆಗಳನ್ನು ಬರೆಯಿಸಿ, ಬಾಳೆಯ ಕಂಬಗಳು, ಸುಂದರವಾದ ಕನ್ನಡಿ ಮುಂತಾದವುಗಳಿಂದ ಅಲಂಕರಿಸಬೇಕು. ॥೭-೮॥

ಕದಲೀಸ್ತಂಭಯುಕ್ತಂ ಚ ರಮ್ಯಾದರ್ಶನಿಚಿತ್ರಿತಂ ।
ತದಗ್ರೇ ಸ್ಥಾಪಯೇತ್ಕುಂಭಂ ಸೌವರ್ಣಂ ಮೃನ್ಮಯಂ ತು ವಾ ॥೯॥

ತಾಮ್ರಂ ವಾ ಪೈತ್ತಲಂ ದೇವಿ ಆಮ್ರಪಲ್ಲವ ಪತ್ರಕಂ ।
ನದೀನದಾಹೃತೈಸ್ತೋಯೈಃ ಪೂರಿತಂ ಶೋಧಿತಂ ನವಂ ॥೧೦॥

ಸಾಮಾನ್ಯಾರ್ಘ್ಯವಿಶೇಷಾರ್ಘ್ಯಫಲಪುಷ್ಪಾಂಬುಪೂರಿತಾ ।
ಪಾದ್ಯಾರ್ಘ್ಯಾಚಮನಂ ಪಾತ್ರಂ ಕಲ್ಪಯೇಚ್ಚ ತದಗ್ರತಃ ॥೧೧॥

ಪುಷ್ಪಾಂಬುಪೂರಿತಾನ್ಯೇವ ಗಂಧಯುಕ್ತಾನಿ ತಾನ್ಯಪಿ ।
ಪಂಚಗವ್ಯಂ ಚ ಗಂಧೋದಂ ಮಧುಪರ್ಕಂ ತಥೈವ ಚ ॥೧೨॥

ಪಿಧಾನಪಾತ್ರಸಹಿತಂ ಪಂಚಗವ್ಯಾನಿ ಸಾದರಂ ।
ಕ್ಷೀರಂ ದಧಿಘೃತಂ ಶುದ್ಧಂ ಕ್ಷೌದ್ರಂ ಶರ್ಕರಯಾನ್ವಿತಂ ॥೧೩॥

ನಾರಿಕೇಲಾಂಬುರಂಭಾದಿಫಲಂ ಪನಸಮೇವ ಚ ।
ಇಕ್ಷುಜಂಬೀರಸಾರಾಣಿ ಕಲ್ಪಯೇಚ್ಚ ಪೃಥಕ್ ಪೃಥಕ್ ॥೧೪॥

---

ಆ ಮಂಟಪದ ಮುಂದೆ ಚಿನ್ನ, ಮಣ್ಣು, ತಾಮ್ರ, ಹಿತ್ತಾಳೆ ಇವುಗಳಲ್ಲಿ ತನ್ನ ಯೋಗ್ಯತಾನುಸಾರ ಸರಿಹೋಗುವ ಕುಂಭವನ್ನು ಮಾವಿನ ಚಿಗುರೆಲೆಗಳಿಂದ ಅಲಂಕರಿಸಿ, ಚೆನ್ನಾಗಿ ಶೋಧಿಸಿದ ನದಿ, ನದ ಮುಂತಾದ ಜಲಾಶಯಗಳಿಂದ ತಂದ ಹೊಸ ನೀರಿನಿಂದ ತುಂಬಬೇಕು. ಸಾಮಾನ್ಯಾರ್ಘ್ಯ ಮತ್ತು ವಿಶೇಷಾರ್ಘ್ಯಗಳಿಗೋಸ್ಕರ ಹಣ್ಣು, ಹೂವುಗಳಿಂದ ಮಿಶ್ರವಾದ ಜಲವನ್ನು ಬೇರೆ ಪಾತ್ರೆಗಳಲ್ಲಿ ಸಿದ್ಧಪಡಿಸಿ, ಪಾದ್ಯ, ಅರ್ಘ್ಯ ಮತ್ತು ಆಚಮನಪಾತ್ರೆಗಳನ್ನು ಅದರ ಮುಂದೆ ಇರಿಸಬೇಕು. ॥೯-೧೦-೧೧॥

ಹೂಗಳಿಂದ ಬೆರೆತ ನೀರಿಗೆ ಸುಗಂಧವನ್ನು ಬೆರೆಸಿ ಅದನ್ನೂ ಸಿದ್ಧಪಡಿಸಿಡಬೇಕು. ಪಂಚಗವ್ಯದ್ರವ್ಯ, ಗಂಧೋದಕ, ಮಧುಪರ್ಕ ಇವುಗಳನ್ನೂ, ಮುಚ್ಚುವ ಪಾತ್ರೆಗಳೊಡನೆ ಪಂಚಗವ್ಯಗಳನ್ನೂ ಆದರದಿಂದ ಸಿದ್ಧಪಡಿಸಬೇಕು. ಹಾಲು, ಮೊಸರು, ತುಪ್ಪ, ಶುದ್ಧವಾದ ಜೇನು, ಸಕ್ಕರೆ, ಎಳನೀರು, ಬಾಳೆಯೇ ಮೊದಲಾದ ಹಣ್ಣುಗಳು, ಹಲಸಿನತೊಳೆ, ಕಬ್ಬಿನಹಾಲು, ನಿಂಬೇಹಣ್ಣಿನರಸ ಇವುಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಸಿದ್ಧಪಡಿಸಿಟ್ಟುಕೊಳ್ಳಬೇಕು. ॥೧೨-೧೩-೧೪॥

ಕುಶರತ್ನೋದಹೇಮೋದಂ ಗಂಧಕರ್ಪೂರಜಂ ಜಲಂ ।
ಪಾಟಲೋತ್ಪಲಮಿಶ್ರಾಂಬುಪೂರಿತಂ ಕಲಶಂ ಶಿವೇ ॥೧೫॥

ಕುರ್ಯಾಚ್ಛೈವಾಭಿಷೇಕಾರ್ಥಂ ಶೋಧಿತಂ ಗಂಧವಾಸಿತಂ ।
ಬ್ರಹ್ಮಕೂರ್ಚೋದಕಂ ಗ್ರಾಹ್ಯಂ ಶಂಖಮಧ್ಯಾಂಬು ಶಂಕರಿ ॥೧೬॥

ಗೋಮೇದಸಂಭವಂ ಲಿಂಗಂ ಸ್ಥಾಪಯೇದನ್ಯದೇವ ವಾ ।
ಮಂಡಪೇ ಸ್ಥಾಪ್ಯ ತಲ್ಲಿಂಗಂ ಪ್ರಾಣಾಯಾಮೇನ ಶೋಧಯೇತ್ ॥೧೭॥

ಸ್ವದೇಹಂ ಚ ತತೋ ಮಂತ್ರಂ ಜಪಿತ್ವಾಥ ಷಡಕ್ಷರಂ ।
ಶತಂ ಸಹಸ್ರಂ ದೇವೇಶಿ ಧ್ಯಾಯೇದ್ದೇವಂ ಮಹೇಶ್ವರಂ ॥೧೮॥

ಚಾರುಚಂದ್ರೋಜ್ಜ್ವಲತ್ಕಾಂತಿಂ ಜಟಾಮುಕುಟಶೋಭಿತಂ ।
ಗಂಗಾಚಂದ್ರಕಲಾಮೌಲಿಂ ತ್ರಿನೇತ್ರಂ ನೀಲಕಂಧರಂ ॥೧೯॥

ಸೋಮಸ್ಕಂದಧರಂ ಧ್ಯಾಯೇದ್ದೇವದೇವಂ ಮಹೇಶ್ವರಂ ।
ಪಶ್ಚಾದಾಧಾರಪೀಠಾಂತಂ ಕೃತ್ವಾರ್ಚನಮುಮೇ ತದಾ ॥೨೦॥

---

ಕುಶೋದಕ, ರತ್ನೋದಕ, ಸುವರ್ಣೋದಕ, ಗಂಧಕರ್ಪೂರಮಿಶ್ರವಾದ ಜಲ, ಪಾದರಿ, ನೈದಿಲೆಗಳಿಂದ ಬೆರೆತ ನೀರು, ಇವುಗಳಿಂದ ಪೂರ್ಣವಾದ ಕಲಶಗಳನ್ನು ಅಲ್ಲಿರಿಸಬೇಕು. ಶಿವನ ಅಭಿಷೇಕಕ್ಕೋಸ್ಕರ, ಶೋಧಿಸಿದ ಸುಗಂಧಭರಿತವಾದ ಬ್ರಹ್ಮಕೂರ್ಚೋದಕವನ್ನೂ, ಶಂಖಮಧ್ಯಗತವಾದ ತೀರ್ಥವನ್ನೂ ಸಿದ್ಧಪಡಿಸಿಟ್ಟುಕೊಳ್ಳಬೇಕು. ॥೧೫-೧೬॥

ಗೋಮೇದಕಲಿಂಗ ಅಥವಾ ದೊರೆಯದಿದ್ದಲ್ಲಿ ಬೇರೆ ಯಾವುದಾದರೂ ಶಿವಲಿಂಗವನ್ನು ಆ ಮಂಟಪದಲ್ಲಿ ಸ್ಥಾಪಿಸಿ, ಪ್ರಾಣಾಯಾಮದಿಂದ ತನ್ನ ದೇಹವನ್ನು ಮೊದಲು ಶುದ್ಧಪಡಿಸಬೇಕು. ಅನಂತರ ಷಡಕ್ಷರಮಂತ್ರವನ್ನು ನೂರು ಅಥವಾ ಸಾವಿರಬಾರಿ ಜಪಿಸಿ ಆ ಮೇಲೆ ಮಹಾದೇವನನ್ನು ಧ್ಯಾನಮಾಡಬೇಕು. ॥೧೭-೧೮॥

ಮನೋಹರನಾದ ಚಂದ್ರಕಲೆಗಳಿಂದ ಉಜ್ಜ್ವಲವಾದ ಕಾಂತಿಯುಳ್ಳವನೂ, ಜಡೆಯೆಂಬ ಕಿರೀಟವನ್ನು ಧರಿಸಿ ಶೋಭಿಸುತ್ತಿರುವವನೂ, ಗಂಗೆ ಮತ್ತು ಚಂದ್ರಕಲೆಗಳನ್ನು ತಲೆಯನ್ನು ಧರಿಸಿರುವವನೂ, ಮೂರು ಕಣ್ಣುಳ್ಳವನೂ, ನೀಲಕಂಠನೂ, ಪಾರ್ವತಿ ಮತ್ತು ಕುಮಾರಸ್ವಾಮಿಯರೊಡನೆ ಕುಳಿತಿರುವವನೂ ಆದ

ಭೂಶುದ್ಧಿಂ ಭೂತಶುದ್ಧಿಂ ಚ ಕೃತ್ವಾ ಸ್ವಾತ್ಮತನುಂ ಶಿವೇ ।
ಶೈವೀಮೇವ ತತೋ ಧ್ಯಾಯೇತ್ ಷಡೂರ್ಮಿರಹಿತಂ ತದಾ ॥೨೧॥

ಹೃತ್ಪದ್ಮಕೋಶಾದುತ್ಥಾಯ ಜ್ಞಾನನಾಲೇನ ಶಂಕರಂ ।
ಸನ್ಯಸಾಸಾಪುಟೇನೇಶಿ ಸಪುಷ್ಪಾಂಬುಕರೇಣ ಹಿ ॥೨೨॥

ಲಿಂಗಮೌಲೌ ನ್ಯಸೇತ್ಪುಷ್ಪಂ ಪ್ರಣವೇನೈವ ಕೇವಲಂ ।
ಅವಗುಂಠ್ಯ ಚ ಸರ್ವಾನ್ಯಸಂನಿರೀಕ್ಷಣಪೂರ್ವಕಂ ॥೨೩॥

ಪೀಠೇ ಸ್ಥಾನವರೇ ಲಿಂಗಂ ಸ್ಥಾಪ್ಯ ಪಂಚಾಕ್ಷರೇಣ ಹಿ ।
ಆವಾಹ್ಯ ದೇವಂ ಪಂಚಾರ್ಘ್ಯಂ ದಾಪಯೇನ್ಮಧುಪರ್ಕಕಂ ॥೨೪॥

ಪಾದ್ಯಮಾಚಮನಂ ಚಾರ್ಘ್ಯಂ ಆವಾಹನನಿರೀಕ್ಷಣಂ ।
ಏತತ್ಪಂಚಾರ್ಘ್ಯಮಿತ್ಯಾಹುಶ್ಚಂದನಾಗರುನಾದಿತಂ ॥೨೫॥

---

ಮಹೇಶ್ವರನನ್ನು ಧ್ಯಾನಮಾಡಬೇಕು. ಅನಂತರ ಎಲೌ ಪಾರ್ವತಿಯೆ, ಆಧಾರಶಕ್ತಿಯಿಂದ ಪೀಠದವರೆಗೂ ಪೂಜೆಮಾಡಿ ಭೂಶುದ್ಧಿ ಭೂತಶುದ್ಧಿಗಳನ್ನೆಸಗಿ ತನ್ನ ದೇಹವನ್ನು ಶುದ್ಧಿಗೊಳಿಸಿ, ಅನಂತರ ಅರಿಷಡ್ವರ್ಗಸಂಬಂಧವಿಲ್ಲದ ಶೈವೀತನುವನ್ನು ಧ್ಯಾನಮಾಡಬೇಕು. ॥೧೯-೨೦-೨೧॥

ಎಡಮೂಗಿನ ಹೊಳ್ಳೆಯಿಂದ ಶ್ವಾಸವನ್ನು ತೆಗೆದುಕೊಂಡು, ಜ್ಞಾನನಾಳಗಳ ಮೂಲಕವಾಗಿ ಆ ಉಸಿರನ್ನು ಹೃದಯವೆಂಬ ತಾವರೆಯ ಮೊಗ್ಗಿನಲ್ಲಿ ಸ್ಥಾಪಿಸಿ ಅಲ್ಲಿ ಶಂಕರನನ್ನು ಧ್ಯಾನಿಸಿ ಬಲ ಹೊಳ್ಳೆಯಿಂದ ಬಿಡಬೇಕು. ಅನಂತರ ಹೂ, ನೀರುಗಳಿಂದ ಕೂಡಿದ ಕೈಯಿಂದ ಶಿವಲಿಂಗದ ಸಮೀಪವನ್ನೈದಿ ಓಂಕಾರಮಂತ್ರ ಪೂರ್ವಕವಾಗಿ ಆ ಹೂವನ್ನು ಶಿವಲಿಂಗದ ತಲೆಯಮೇಲಿರಿಸಬೇಕು. ಆದಿಶೇಷನನ್ನುಳಿದು ಬಾಕಿ ಯಾರೂ ನೋಡದಂತೆ ಮರೆಮಾಡಿ ಉತ್ತಮಸ್ಥಾನರೂಪವಾದ ಪೀಠದಲ್ಲಿ ಶಿವಲಿಂಗವನ್ನು ಶಿವಪಂಚಾಕ್ಷರಮಂತ್ರಪೂರ್ವಕವಾಗಿ ಸ್ಥಾಪಿಸಬೇಕು. ಅನಂತರ ಮಹಾದೇವನನ್ನು ಆವಾಹನೆಮಾಡಿ ಐದು ರೀತಿಯಲ್ಲಿ ಅರ್ಘ್ಯಗಳನ್ನು ಕೊಟ್ಟು ಮಧುಪರ್ಕವನ್ನೂ ಸಮರ್ಪಿಸಬೇಕು. ॥೨೨-೨೩-೨೪॥

ದೇವಿ! ಪಾದ್ಯ, ಆಚಮನ, ಅರ್ಘ್ಯ, ಆವಾಹನೆ, ನಿರೀಕ್ಷಣೆ ಇವೈದನ್ನೂ ಪಂಚಾರ್ಘ್ಯಗಳೆಂದು ಹೇಳುವರು. ಚಂದನ, ಅಗರು ಧೂಪದಿಂದ ಹೊಗೆಹಾಕಿದ

ಮಧುಪರ್ಕಂ ತತೋ ದದ್ಯಾತ್ಪಂಚಗವ್ಯಮನಂತರಂ ।
ಕ್ಷೀರಾಭಿಷೇಕಂ ಚ ತತೋ ಗಂಧೋದಕಕುಶೋದಕೈಃ ॥೨೬॥

ಸ್ವರ್ಣರತ್ನೋದಕೈರ್ದೇವಿ ಸಿತಯಾ ಚ ತತಃ ಪರಂ ॥
ನಾರಿಕೇಲಾಂಬುಸಲಿಲೈಃ ಕದಲೀಫಲಸಂಚಲೈಃ ॥೨೭॥

ಪನಸೈಶ್ಚ ಮಹಾಕೋಶೈಃ ರಸಾಲರಸಕೈಸ್ತತಃ ।
ಜಂಬೀರಸಾರೈಶ್ಚ ತತೋ ಗಂಧೋದಕಕುಶೋದಕೈಃ ॥೨೮॥

ಸ್ವರ್ಣರತ್ನೋದಕೈರ್ದೇವಿ ತತ್ತಲ್ಲಿಂಗೈಶ್ಚ ಮಂತ್ರಕೈಃ ।
ತತಃ ಶುದ್ಧೋದಕಂ ದೇವಿ ಸೇಚಯೇದ್ರುದ್ರಸಂಖ್ಯಯಾ ॥೨೯॥

ಮಧ್ಯೇ ನಿವೇದ್ಯ ಹವಿಷಾ ಧೂಪದೀಪಂ ಪ್ರದಾಪಯೇತ್ ।
ಸಶಾಂತಿಕಃ ಸಚಮಕೋ ಜಪ್ಯೋ ರುದ್ರಾಕ್ಷಸಂಖ್ಯಯಾ ॥೩೦॥

ಏಕಾವೃತ್ಯಾ ತ್ರಿವೃತ್ಯಾ ವಾ ದ್ವಿರಾವೃತ್ಯಾಪಿ ಶಂಕರಿ ।
ಬ್ರಾಹ್ಮಣೈಃ ಶಾಂಭವೈಃ ಸಾರ್ಧಂ ಸ್ವಯಂ ಭಕ್ತ್ಯಾ ಮಹೇಶ್ವರಂ॥೩೧॥

---

ನಂತರ ಮಧುಪರ್ಕವನ್ನು ಕೊಡಬೇಕು. ಆಮೇಲೆ ಪಂಚಗವ್ಯವನ್ನು ಸಮರ್ಪಿಸಬೇಕು. ಆಮೇಲೆ ಕ್ಷೀರಾಭಿಷೇಕಮಾಡಿ, ಅನಂತರ ಗಂಧೋದಕ, ಕುಶೋದಕಗಳಿಂದಲೂ, ಸುವರ್ಣೋದಕ, ರತ್ನೋದಕಗಳಿಂದಲೂ ಅಭಿಷೇಕಮಾಡಬೇಕು. ಆಮೇಲೆ ಸಕ್ಕರೆ, ಎಳನೀರು, ಶುದ್ಧಜಲ, ಬಾಳೇ ಮುಂತಾದ ಹಣ್ಣುಗಳ ಸಮೂಹ, ದೊಡ್ಡ ಹಲಸಿನತೊಳೆಗಳು, ಸಿಹಿಮಾವಿನರಸ, ನಿಂಬೆಯ ಹಣ್ಣಿನರಸ, ಗಂಧೋದಕ, ಕುಶೋದಕ, ಸ್ವರ್ಣೋದಕ, ರತ್ನೋದಕಗಳಿಂದಲೂ ಆಯಾ ಲಿಂಗಗಳಿಗನುಗುಣವಾಗಿ ಮಂತ್ರಪೂರ್ವಕವಾಗಿ ಅಭಿಷೇಕಮಾಡಬೇಕು. ದೇವಿ! ಅನಂತರ ರುದ್ರಗಳ ಸಂಖ್ಯಾನುಗುಣವಾಗಿ ಶುದ್ಧ ನೀರಿನಿಂದ ಶಿವಲಿಂಗಕ್ಕೆ ಅಭಿಷೇಕ ಮಾಡಬೇಕು. ||೨೫-೨೬-೨೭-೨೮-೨೯||

ಅಭಿಷೇಕಮಧ್ಯದಲ್ಲಿ ಹವಿಸ್ಸನ್ನು ನಿವೇದನಮಾಡಿ, ಧೂಪದೀಪಾದಿಗಳನ್ನು ಸಮರ್ಪಿಸಬೇಕು. ಶಾಂತಿಪಾಠಸಮೇತವಾದ ರುದ್ರಮಂತ್ರವನ್ನು ರುದ್ರಾಕ್ಷಸಂಖ್ಯಾನುಗುಣವಾಗಿ ಒಂದು, ಎರಡು, ಮೂರು ಬಾರಿಯಾದರೂ ಶಂಭುಭಕ್ತರಾದ ಬ್ರಾಹ್ಮಣರೊಡನೆ ತಾನೂ ಭಕ್ತಿಯಿಂದ ಜಪಮಾಡಬೇಕು. ಆಮೇಲೆ ತುಪ್ಪದ

ಘೃತದೀಪಾಂತ್ಸಮುದ್ಬೋಧ್ಯ ಧೂಪಧೂಮಮನೋಹರಂ ।
ನಾನಾವಾದಿತ್ರನಿರ್ಘೋಷೈರ್ಗೀತವೀಣಾರವೈಃ ಶಿವೇ ॥೩೨॥

ಭವಾಯೇತ್ಯಷ್ಟನಾಮ್ನಾಂತೇ ತರ್ಪಯೇತ್ಸಕುಶಂ ತತಃ ।
ಉದ್ವರ್ತಯೇತ್ಸುವಸ್ತ್ರೇಣ ಪೀಠೇ ಸ್ಥಾಪ್ಯ ಮಹೇಶ್ವರಂ ॥೩೩॥

ಯಜ್ಞೋಪವೀತಂ ಗಂಧಂ ಚ ಪಾಂಡರಂ ಭಸ್ಮಕೇವಲಂ ।
ತಂಡುಲಂ ಚಣಕೈರ್ಯುಕ್ತಂ ತಸ್ಮಿನ್ಮಾಸ್ಯರ್ಚಯೇಚ್ಛಿವೇ ॥೩೪॥

ವಸ್ತ್ರಾಭರಣಜಾಲಾನಿ ಪ್ರಣವೇನೈವ ದಾಪಯೇತ್ ।
ಬಿಲ್ವಪತ್ರಂ ಪದ್ಮಪುಷ್ಪಂ ಕರವೀರಾಣಿ ಪೂಜಯೇತ್ ॥೩೫॥

ಕನಕಂ ಚ ಕದಂಬಂ ಚ ಪೂಜಯೇನ್ನಿಧನಾಖ್ಯಯಾ ।
ಭವಾಯೇತಿ ಮಹಾದೇವಿ ಧೂಪಂ ದದ್ಯಾನ್ಮನಃ ಶಿಲಾಂ ॥೩೬॥

ಘೃತಾಕ್ತಂ ಚ ತತೋ ದೀಪಂ ದದ್ಯಾನ್ಮಂತ್ರೇಣ ಕೇವಲಂ ।
ಅಥಕಾನ್ನಂ ಚ ಸಘೃತಂ ಸಶರ್ಕರಮುಮಾಪತೇಃ ॥೩೭॥

---

ದೀಪಗಳನ್ನು ಚೆನ್ನಾಗಿ ಹೊತ್ತಿಸಿ, ಮನೋಹರವಾದ ಧೂಪವನ್ನು ಹಾಕಿ, ನಾನಾ ವಾದ್ಯಧ್ವನಿಗಳೊಡನೆಯೂ, ಸಂಗೀತ ಮತ್ತು ವೀಣಾನಾದಗಳೊಡನೆಯೂ, 'ಭವಂ ದೇವಂ ತರ್ಪಯಾಮಿ' ಮುಂತಾದ ಶಿವನ ಎಂಟು ನಾಮಗಳನ್ನೂ ಉಚ್ಚರಿಸಿ ಕುಶೋದಕದಿಂದ ತರ್ಪಣಮಾಡಬೇಕು. ಅನಂತರ ಒಳ್ಳೆಯ ಬಟ್ಟೆಯಿಂದ ಚೆನ್ನಾಗಿ ಒರೆಸಿ,ಪೀಠದಲ್ಲಿ ಮಹೇಶ್ವರನನ್ನು ಪೀಠದಲ್ಲಿ ಸ್ಥಾಪಿಸಬೇಕು. ॥೩೦-೩೧-೩೧-೩೩॥

ಅನಂತರ ಯಜ್ಞೋಪವೀತ, ಗಂಧ, ಶುಭ್ರವಾದ ಭಸ್ಮ, ಕಡಲೆ ಬೆರೆದ ಅಕ್ಕಿ ಇವುಗಳಿಂದ ಆ ಭಾದ್ರಪದಮಾಸದಲ್ಲಿ ಪೂಜಿಸಬೇಕು. ವಸ್ತ್ರ, ಆಭರಣ ಇವುಗಳ ಸಮೂಹವನ್ನು ಓಂಕಾರಮಂತ್ರದಿಂದಲೇ ಶಿವನಿಗೆ ಸಮರ್ಪಿಸಬೇಕು. ಬಿಲ್ವಪತ್ರೆ, ತಾವರೆಹೂ, ಕಣಿಗಲೆಹೂ ಇವುಗಳಿಂದ ಶಿವನಿಗೆ ಪೂಜೆಮಾಡಬೇಕು. ॥೩೪-೩೫॥

ನಿಧನಪತಯೇ ನಮಃ ಎಂಬ ಶಿವನಾಮಮಂತ್ರಗಳಿಂದ ಕನಕಪುಷ್ಪವನ್ನೂ ಕದಂಬಕುಸುಮವನ್ನೂ ಪೂಜೆಮಾಡಬೇಕು. ಭವಾಯ ನಮಃ ಎಂಬುದಾಗಿ ಶಿವನಿಗೆ ಮಣಿಶಿಲೆಯ ಧೂಪವನ್ನು ಹಾಕಬೇಕು. ಅನಂತರ ತುಪ್ಪದಿಂದ ನೆನಸಿದ

ಅಪೂಪಾನ್ಯಪಿ ದೇಯಾನಿ ಪಾಚಿತಾನಿ ಘೃತೇನ ತು ।
ಗುಡಖಂಡಯುತಾನೀಶೇ ಸೋಪದಂಶಯುತಂ ಶಿವೇ ॥೩೮॥

ತಾಂಬೂಲಂ ಚ ತತೋ ದದ್ಯಾನ್ಮುಖವಾಸಂ ತತಃ ಪರಂ ।
ನೀರಾಜಯೇತ್ತತೋ ಲಿಂಗಂ ವೇದಘೋಷಪುರಸ್ಸರಂ ॥೩೯॥

ಏಕಾರ್ತಿಕ್ಯಾದಿಪುರುಷಗಜವಾಜಿವೃಷಾಕೃತಿಃ ।
ರಥಾಕೃತಿಶತೈರ್ದೀಪೈರ್ನೀರಾಜ್ಯ ಘಟದೀಪತಃ ॥೪೦॥

ಬೃಹತ್ಸಾಮೇತಿ ಮಂತ್ರೇಣ ರಕ್ಷಾಬಂಧಂ ವಿಧಾಯ ಚ ।
ಪಂಚಾರ್ತಿಕ್ಯಂ ಚ ಮುಕ್ತಾರ್ತಿಂ ಕೃತ್ವಾ ಕರ್ಪೂರಖಂಡತಾಂ ॥೪೧॥

ಪಶ್ಚಾಚ್ಛತ್ರಂ ಚಾಮರಂ ಚ ವ್ಯಜನಾದರ್ಶಕಂ ಶಿವೇ ।
ದೇಯಂ ಶಿವಾಯ ವಾದಿತ್ರನಿನದಂ ಶಂಖಕಾಹಲಂ ॥೪೨॥

---

ದೀಪವನ್ನು ಮಂತ್ರಪೂರ್ವಕವಾಗಿ ಏಕಾರ್ತಿಯಾಗಿ ಬೆಳಗಬೇಕು. ತೊಗರಿಯ ಬೇಳೆಯಿಂದ ಕೂಡಿದ ಅನ್ನವನ್ನೂ, ತುಪ್ಪ, ಸಕ್ಕರೆಗಳೊಡನೆ ಬೆರಸಿದ ನಿವೇದನವನ್ನೂ ಶಿವನಿಗೆ ಅರ್ಪಿಸಬೇಕು. ॥೩೬-೩೭॥

ತುಪ್ಪದಲ್ಲಿ ಬೇಯಿಸಿದ ಅಪೂಪಗಳನ್ನೂ ಶಿವನಿಗೆ ಬೆಲ್ಲದ ತುಂಡು, ನೆಂಚಿಕೊಳ್ಳುವ ಸಾಮಗ್ರಿಗಳೊಡನೆ ನಿವೇದಿಸಬೇಕು. ತಾಂಬೂಲವನ್ನೂ ಮುಖವಾಸವನ್ನೂ ಸಮರ್ಪಿಸಿ ತರುವಾಯ ವೇದಘೋಷಗಳೊಡನೆ ಶಿವಲಿಂಗಕ್ಕೆ ನೀರಾಜನವನ್ನೆಸಗಬೇಕು. ॥೩೮-೩೯॥

ಏಕಾರ್ತಿಯೇ ಮೊದಲಾಗಿ ಪುರುಷ, ಗಜ, ಕುದುರೆ, ವೃಷಭ, ರಥ ಇವುಗಳ ಆಕಾರಗಳುಳ್ಳ ನೂರು ಆರತಿತಟ್ಟೆಗಳಿಂದ ನೀರಾಜನಮಾಡಿ ಅನಂತರ ಕುಂಭಾರತಿಯನ್ನು ಎತ್ತಬೇಕು. ' ಬೃಹತ್ಸಾಮಕ್ಷತ್ರಭೃದ್ವೃದ್ಧವೃಷ್ಣಿಯಂ 'ಎಂಬ ಮಂತ್ರದಿಂದ ರಕ್ಷಾಬಂಧನವನ್ನೆಸಗಿ, ಪಂಚಾರ್ತಿ, ವೃಷಭಾರ್ತಿಗಳನ್ನು ಮಾಡಿ, ಕೊನೆಯಲ್ಲಿ ಕರ್ಪೂರಾರತಿಯನ್ನೂ ಮಾಡಿದಮೇಲೆ, ಛತ್ರಿ, ಚಾಮರ, ಬೀಸಣಿಗೆ, ಕನ್ನಡಿ ಇವುಗಳ ಉಪಚಾರವನ್ನು ನೆರವೇರಿಸಿ ಶಂಖ, ಕಹಳೆ ಮುಂತಾದ ವಾದ್ಯಧ್ವನಿಯಿಂದ ಪರಶಿವನನ್ನು ಸೇವಿಸಬೇಕು. ॥೪೦-೪೧-೪೨॥

ದುಂದುಭೀವೇಣುವೀಣಾದ್ಯಂ ಸ್ತ್ರೀಣಾಂ ನಾಟ್ಯಂ ತತಃ ಪರಂ ।
ಪ್ರದಕ್ಷಿಣಂ ಪ್ರಣಾಮಾದಿ ತತಸ್ಸ್ತವನನರ್ತನಂ ॥೪೩॥

ಏವಂ ಕುರ್ಯಾತ್ಸದಾ ದೇವಿ ಮುಗುಟಾಗಮಚೋದಿತಂ ।
ವಕ್ಷ್ಯಾಮಿ ನಾಮಾಷ್ಟಶತಂ ತೇನೈವಾರ್ಚ್ಯೋ ಮಹೇಶ್ವರಃ ॥೪೪॥

ಪುಣ್ಯೇ ಭಾದ್ರಪದೇ ಮಾಸಿ ಸ್ತವಂ ಚಾಪಿ ವದಾಮಿ ತೇ ।
ಓಂ ರುದ್ರಾಯ ಭದ್ರರೂಪಾಯ ಕದ್ರುದ್ರಾಯ ಪ್ರಚೇತಸೇ ॥೪೫॥

ಓಂ ಹಿರಣ್ಯಾಯ ಶರಣ್ಯಾಯ ಅರಣ್ಯಾಯ ನಮೋನಮಃ ।
ವರೇಣ್ಯಾಯಾದಿಮಧ್ಯಾಂತರಹಿತಾಯ ಗಣಾಯ ಚ ॥೪೬॥

ಪ್ರಭಾಸಾಯ ಸುಭಾಸಾಯ ಗಂಧಗರ್ಭಾಯ ಭೂತಯೇ ।
ಲೋಕಧಾತ್ರೇ ವಿಧಾತ್ರೇ ಚ ಪಾತ್ರೇ ನೇತ್ರೇ ಪವಿತ್ರಿಣೇ ॥೪೭॥

ಕುಂಡಲೀಶಫಣಾರತ್ನಕುಂಡಲಾಯ ನಮೋನಮಃ ।
ಚಂಡತಾಂಡವರೂಪಾಯ ಖಂಡಾಖಂಡಾಯ ಮುಂಡಿನೇ ॥೪೮॥

ದಂಡಿನೇ ಖಂಡಿನೇ ಚೈವ ಖಡ್ಗಮಾಂಸಾದನಾಯ ಚ ।
ಭೂಮಿಪಾದಾಯ ದ್ಯೋಮೂರ್ಧ್ನೇ ಸಿದ್ಧಿರೂಪಾಯ ಶೂಲಿನೇ ॥೪೯॥

ಭಸ್ಮಾಭ್ಯಕ್ತಾಯ ಭದ್ರಾಯ ಭೀಮಾಯ ಭಯಹೇತವೇ ।
ವೈಶಂತಾಯ ಚ ಶಾಂತಾಯ ಶಮೀಪುಷ್ಪಪ್ರಿಯಾಯ ಚ ॥೫೦॥

---

ನಗಾರಿ, ಕೊಳಲು, ವೀಣೆ ಮುಂತಾದ ವಾದ್ಯಧ್ವನಿಯನ್ನೂ ಸ್ತ್ರೀಯರ ನರ್ತನವನ್ನೂ, ಪ್ರದಕ್ಷಿಣೆ, ನಮಸ್ಕಾರಪೂರ್ವಕವಾದ ಸ್ತೋತ್ರ, ನಾಟ್ಯಗಳನ್ನೂ ಯಾವಾಗಲೂ ಮಾಡಬೇಕು. ದೇವಿ, ಮುಗುಟಾಗಮಪ್ರೋಕ್ತವಾದ ನೂರೆಂಟು ನಾಮಗಳನ್ನು ತಿಳಿಸುವೆನು ಕೇಳು ; ಪುಣ್ಯಕರವಾದ ಈ ಭಾದ್ರಪದಮಾಸದಲ್ಲಿ ಇದರಿಂದಲೇ ಮಹೇಶನನ್ನು ಪೂಜಿಸಬೇಕು. ಪಾರ್ವತಿಯೆ, ಈ ಮಾಸದಲ್ಲಿ ಮಾಡಬೇಕಾದ ಸ್ತುತಿಯನ್ನು ನಿನಗೆ ಈಗ ಹೇಳುತ್ತೇನೆ ಕೇಳೆಂದು ಶಿವನು ಪಾರ್ವತಿಗಿಂತೆಂದನು. ॥೪೩-೪೪॥

ನಮಃ ಕಾಟ್ಯಾಯ ನೀಪ್ಯಾಯ ಕೂಪ್ಯಾಯ ಪರಮಾತ್ಮನೇ ।
ನಕ್ತಂಚರಾಯ ಕುಲ್ಯಾಯ ಕುಲಾಲಪತಯೇ ನಮಃ ॥೫೧॥

ಸಂಗ್ರಹೀತ್ರೇ ಪ್ರಸಾದಾಯ ಪದ್ಮಮಾಲಾಧರಾಯ ಚ ।
ಅಧಿಷ್ಠಾನಾಯ ಜ್ಯೇಷ್ಠಾಯ ನಿಷ್ಠಾಯ ಪ್ರಥಯಿಷ್ಣವೇ ॥೫೨॥

ಪುರಾಣಾಯ ಪರಾಣಾಯ ಕರುಣಾಯ ನಮೋನಮಃ ।
ತಾರಾನಾಥಧರಾಯಾಥ ಜಗತ್ಕೃತ್ತಿಧರಾಯ ತೇ ॥೫೩॥

---

೧ ಓಂ ರುದ್ರಾಯ ನಮಃ
೨ ಓಂ ಭದ್ರರೂಪಾಯ ನಮಃ
೩ ಓಂ ಕದ್ರುದ್ರಾಯ ನಮಃ
೪ ಓಂ ಪ್ರಚೇತಸೇ ನಮಃ
೫ ಓಂ ಹಿರಣ್ಯಾಯ ನಮಃ
೬ ಓಂ ಶರಣ್ಯಾಯ ನಮಃ
೭ ಓಂ ಅರಣ್ಯಾಯ ನಮಃ
೮ ಓಂ ವರೇಣ್ಯಾಯ ನಮಃ
೯ ಓಂ ಆದಿಮಧ್ಯಾಂತರಹಿತಾಯ ನಮಃ
೧೦ ಓಂ ಗಣಾಯ ನಮಃ
೧೧ ಓಂ ಪ್ರಭಾಸಾಯ ನಮಃ
೧೨ ಓಂ ಸುಭಾಸಾಯ ನಮಃ
೧೩ ಓಂ ಗಂಧಗರ್ಭಾಯ ನಮಃ
೧೪ ಓಂ ಭೂತಯೇ ನಮಃ
೧೫ ಓಂ ಲೋಕಧಾತ್ರೇ ನಮಃ
೧೬ ಓಂ ವಿಧಾತ್ರೇ ನಮಃ
೧೭ ಓಂ ಪಾತ್ರೇ ನಮಃ
೧೮ ಓಂ ನೇತ್ರೇ ನಮಃ
೧೯ ಓಂ ಪವಿತ್ರಿಣೇ ನಮಃ
೨೦ ಓಂ ಕುಂಡಲೀಶಫಣಾರತ್ನಕುಂಡಲಾಯ ನಮಃ
೨೧ ಓಂ ಚಂಡತಾಂಡವರೂಪಾಯ ನಮಃ
೨೨ ಓಂ ಖಂಡಾಖಂಡಾಯ ನಮಃ
೨೩ ಓಂ ಮುಂಡಿನೇ ನಮಃ
೨೪ ಓಂ ದಂಡಿನೇ ನಮಃ
೨೫ ಓಂ ಖಂಡಿನೇ ನಮಃ
೨೬ ಓಂ ಖಡ್ಗಮಾಂಸಾದನಾಯ
೨೭ ಓಂ ಭೂಮಿಪಬದಾಯ ನಮಃ
೨೮ ಓಂ ದ್ಯೋಮೂರ್ಧ್ನೇ ನಮಃ
೨೯ ಓಂ ಸಿದ್ಧಿರೂಪಾಯ ನಮಃ
೩೦ ಓಂ ಶೂಲಿನೇ ನಮಃ
೩೧ ಓಂ ಭಸ್ಮಾಭ್ಯಕ್ತಾಯ ನಮಃ
೩೨ ಓಂ ಭದ್ರಾಯ ನಮಃ
೩೩ ಓಂ ಭೀಮಾಯ ನಮಃ
೩೪ ಓಂ ಭಯಹೇತವೇ ನಮಃ
೩೫ ಓಂ ವೈಶಂತಾಯ ನಮಃ
೩೬ ಓಂ ಶಾಂತಾಯ ನಮಃ
೩೭ ಓಂ ಶಮೀಪುಷ್ಪಪ್ರಿಯಾಯ ನಮಃ

ಪಾದುಕಾಪದ್ಮಪಾದಾಯ ನಾಗಹಂಸಕಧಾರಿಣೇ ।
ಗಿರಿಶಾಯ ಗಿರೀಶಾಯ ಮಹಾಕೈಲಾಸವಾಸಿನೇ ॥೫೪॥

ಶ್ವಸತೇ ಗ್ರಸತೇ ಚೈವ ಧಾವತೇ ವಸತೇ ನಮಃ ।
ನಮೋ ದಂಷ್ಟ್ರಾಕರಾಲಾಯ ಕರವಾಲಕರಾಯ ಚ ॥೫೫॥

---

೩೮ ಓಂ ಕಾಟ್ಯಾಯ ನಮಃ
೩೯ ಓಂ ನೀಪ್ಯಾಯ ನಮಃ
೪೦ ಓಂ ಕೂಪ್ಯಾಯ ನಮಃ
೪೧ ಓಂ ಪರಮಾತ್ಮನೇ ನಮಃ
೪೨ ಓಂ ನಕ್ತಂಚರಾಯ ನಮಃ
೪೩ ಓಂ ಕುಲ್ಯಾಯ ನಮಃ
೪೪ ಓಂ ಕುಲಾಲಪತಯೇ ನಮಃ
೪೫ ಓಂ ಸಂಗ್ರಹೀತ್ರೇ ನಮಃ
೪೬ ಓಂ ಪ್ರಸಾದಾಯ ನಮಃ
೪೭ ಓಂ ಪದ್ಮಮಾಲಾಧರಾಯ ನಮಃ
೪೮ ಓಂ ಅಧಿಷ್ಠಾನಾಯ ನಮಃ
೪೯ ಓಂ ಜ್ಯೇಷ್ಠಾಯ ನಮಃ
೫೦ ಓಂ ನಿಷ್ಠಾಯ ನಮಃ
೫೧ ಓಂ ಪ್ರಥಯಿಷ್ಣವೇ ನಮಃ
೫೨ ಓಂ ಪುರಾಣಾಯ ನಮಃ
೫೩ ಓಂ ಪರಾಯ ನಮಃ
೫೪ ಓಂ ಕರುಣಾಯ ನಮಃ
೫೫ ಓಂ ತಾರಾನಾಥಧರಾಯ ನಮಃ
೫೬ ಓಂ ಜಗತ್ಕೃತ್ತಿಧರಾಯ ನಮಃ
೫೭ ಓಂ ಪಾದುಕಾಪದ್ಮಪಾದಾಯ ನಮಃ
೫೮ ಓಂ ನಾಗಹಂಸಕಧಾರಿಣೇ ನಮಃ
೫೯ ಓಂ ಗಿರಿಶಾಯ ನಮಃ
೬೦ ಓಂ ಗಿರೀಶಾಯ ನಮಃ
೬೧ ಓಂ ಮಹಾಕೈಲಾಸವಾಸಿನೇ ನಮಃ
೬೨ ಓಂ ಶ್ವಸತೇ ನಮಃ
೬೩ ಓಂ ಗ್ರಸತೇ ನಮಃ
೬೪ ಓಂ ಧಾವತೇ ನಮಃ
೬೫ ಓಂ ವಸತೇ ನಮಃ
೬೬ ಓಂ ದಂಷ್ಟ್ರಾಕರಾಲಾಯ ನಮಃ
೬೭ ಓಂ ಕರವಾಲಕರಾಯ ನಮಃ
೬೮ ಓಂ ವ್ಯಕ್ತಾವ್ಯಕ್ತಾಯ ನಮಃ
೬೯ ಓಂ ಮುಕ್ತಾಯ ನಮಃ
೭೦ ಓಂ ಭುಕ್ತಿಮುಕ್ತಿಪ್ರದಾಯಿನೇ ನಮಃ
೭೧ ಓಂ ಪಶೂನಾಂ ಪತಯೇ ನಮಃ
೭೨ ಓಂ ವಿದ್ಯುತಾಯ ನಮಃ
೭೩ ಓಂ ಬಲಾಯ ನಮಃ
೭೪ ಓಂ ಬಲಪ್ರಮಥನಾಯ ನಮಃ
೭೫ ಓಂ ಬಾಲಪಾಲಾಯ ನಮಃ
೭೬ ಓಂ ಶೂಲಿನೇ ನಮಃ
೭೭ ಓಂ ಕಾವ್ಯಾಯ ನಮಃ
೭೮ ಭವ್ಯರೂಪಾಯ ನಮಃ
೭೯ ಭಾವಾಭಾವರತಾಯ ನಮಃ

(ಉಳಿದ ನಾಮಗಳು ಮೂಲಗ್ರಂಥದಲ್ಲಿ ಉಕ್ತವಾಗಿಲ್ಲ).

ಬಲಪ್ರಮಥನಾಯೈವ ಬಾಲಪಾಲಾಯ ಶೂಲಿನೇ ।
ಕಾಮ್ಯಾಯ ಭವ್ಯರೂಪಾಯ ಭಾವಾಭಾವರತಾಯ ಚ ॥೫೬॥

ವ್ಯಕ್ತಾವ್ಯಕ್ತಾಯ ಮುಕ್ತಾಯ ಭುಕ್ತಿಮುಕ್ತಿಪ್ರದಾಯಿನೇ ।
ಪಶೂನಾಂ ಪತಯೇ ಚೈವ ವಿದ್ಯುತಾಯ ಬಲಾಯ ಚ ॥೫೭॥

ಏವಂ ನಾಮಶತಾಷ್ಟೇನ ಪೂಜ್ಯೋ ಭಾದ್ರಪದೇ ಶಿವಃ ।
ಬಿಲ್ವಪತ್ರೈಃ ಕೋಕನದೈಃ ಪುಂಡರೀಕವಿಶೇಷತಃ ॥೫೮॥

ಸ್ತವಮೇತತ್ಪ್ರಯುಂಜೀತ ಭಾವೋ ಭಕ್ತಿಯುತೋ ಭವೇತ್ ॥೫೯॥

ಸುಪರ್ವಗಂಧರ್ವ ಸುಪೂಜಿತಾಯ
ನಿಸರ್ಗಸರ್ಗಾದಿವಿಧಾನಕಾರಿಣೇ ।
ಭರ್ಗಾಯ ಶರ್ವಾಯ ಚ ಸರ್ವಗಾಯ
ನಮೋ ನಮಸ್ತೇಽಂತಕಗರ್ವಹಾರಿಣೇ ॥೬೦॥

ಗುರುವಹಭೋಜನಮೌಳಿಪ್ರಿಯ
ಶಂಕರಪುರಹರ ಶಂಕುರು ಮೇ ।

---

ಪಾರ್ವತಿ, ಈ ರೀತಿ ಭಾದ್ರಪದಮಾಸದಲ್ಲಿ ನೂರೆಂಟು ನಾಮಗಳಿಂದ ಶಿವನನ್ನು ಪೂಜಿಸಬೇಕು. ಬಿಲ್ವಪತ್ರೆ, ಕೆಂದಾವರೆ ಅಥವಾ ತಾವರೆ ಹೂಗಳ ಜಾತಿಗಳಿಂದ ಶಿವನನ್ನು ಪೂಜಿಸಬೇಕು. ಅನಂತರ ಶೈವನು ಭಕ್ತಿಯುಕ್ತನಾಗಿ ಮುಂದೆ ಹೇಳುವ ಸ್ತೋತ್ರವನ್ನು ಪ್ರಯೋಗಿಸಬೇಕು. ॥೪೫-೪೬-೪೭-೪೮-೪೯-೫೦-೫೧-೫೨-೫೩-೫೪-೫೫-೫೬-೫೭-೫೮-೫೯॥

ದೇವಗಂಧರ್ವರಿಂದ ಚೆನ್ನಾಗಿ ಪೂಜಿಸಲ್ಪಟ್ಟಿರುವವನೂ, ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಕಾರಿಯೂ, ಮನ್ಮಥ ಮತ್ತು ಯಮ ಇವರನ್ನು ನಿಗ್ರಹಿಸಿದವನೂ, ಪ್ರಳಯಕಾಲದಲ್ಲಿ ಚರಾಚರಾತ್ಮಕವಾದ ಜಗತ್ತನ್ನು ಸಂಹರಿಸಿದವನೂ, ಸರ್ವವ್ಯಾಪಿಯೂ, ಯಮನ ಅಹಂಕಾರವನ್ನು ಮುರಿದವನೂ ಆದ ನಿನಗೆ ನಮಸ್ಕಾರ ಮಾಡುವೆನು. ॥೬೦॥

ತ್ರಿಪುರಾಂತಕನೂ, ಮಂಗಳಕರನೂ, ಉನ್ನತವಾದ ವೃಷಭಕ್ಕೆ ರಾಜನೂ, ಶಿವಲಿಂಗದಲ್ಲಿ ಯಾವಾಗಲೂ ಪ್ರಜ್ವಲಿಸುತ್ತಿರುವವನೂ, ಈ ಸಂಸಾರಜನ್ಯವಾದ ಭಯ

ತುಂಗವೃಷಾಧಿಪ ಲಿಂಗಸದೋಜ್ವಲ
ಭವಭವ ಭಯಹರ ಕುರು ಕರುಣಾಂ ॥೬೧॥

ಕಾಲಕಾಲ ಸುತಮಾಲಕಂಠಜ
ಜ್ವಾಲಕೀಲಗರಲಾಶನ ಶಂಭೋ ।
ವ್ಯಾಲಮಾಲ ಸುಕಂಕಣಪಾಣಯೇ
ಕೋಲದಂತಹರಣಾಯ ನಮಸ್ತೇ ॥೬೨॥

ಫಾಲನೇತ್ರಸುಪವಿತ್ರವರಾಂಗೋ-
ದ್ಧಾರಪಾತ್ರ ಧೃತಗಾಂಗರಯತ್ರ ।
ಪದ್ಮಮಿತ್ರಕೃತನೇತ್ರಕಲತ್ರಾ
ರ್ಧಾರ್ಧಗಾತ್ರ ಪರಿಪಾಹಿ ಗಿರಿತ್ರ ॥೬೩॥

ಅಂಡಖಂಡನಿಧಿಮುಂಡವರಾಂಡೋ-
ದ್ಭಾಂಡಷಂಡನಿಧಿಮುಂಡಕರಂಡ ।

---

ವನ್ನು ಹೋಗಲಾಡಿಸುವವನೂ, ಆದ ಮಹೇಶನೆ, ನನಗೆ ಮಂಗಳವನ್ನುಂಟು ಮಾಡು. ನನ್ನಲ್ಲಿ ದಯೆತೋರಿ ಸಂಸಾರಭೀತಿಯನ್ನು ಹೋಗಲಾಡಿಸು. ॥೬೧॥

ಯಮಾಂತಕನೂ, ಕಪ್ಪುಕಂಠವುಳ್ಳವನಾಗಿ ಆ ವಿಷಜ್ವಾಲೆಯಿಂದ ಯುಕ್ತನಾಗಿರುವವನೂ, ಕಾಲಕೂಟವಿಷವನ್ನು ಭಕ್ಷಿಸಿದವನೂ, ಶಂಭುವೂ, ಸರ್ಪಮಾಲೆಯನ್ನು ಧರಿಸಿರುವವನೂ, ಅಲ್ಲದೇ ಶ್ರೇಷ್ಠಸರ್ಪವನ್ನು ಕಂಕಣವನ್ನಾಗಿ ಧರಿಸಿರುವವನೂ ಆದ ನಿನಗೆ ನಮಸ್ಕಾರ. ॥೬೨॥

ಹಣೆಯಲ್ಲಿ ಕಣ್ಣುಳ್ಳವನೆ, ಪವಿತ್ರರಾದ ದಿವ್ಯದೇಹವುಳ್ಳ ಭಕ್ತರನ್ನು ಉದ್ಧಾರ ಮಾಡುವವನೆ, ಗಂಗೆಯನ್ನು ಮುಡಿಯಲ್ಲಿ ತಾಳಿರುವವನೆ, ವಿಷ್ಣುನೇತ್ರದಿಂದ ಪೂಜಿಸಲ್ಪಟ್ಟವನೇ, ಅರ್ಧನಾರೀಶ್ವರನೆ, ಗಿರಿಗಳನ್ನು ರಕ್ಷಿಸಿದವನೆ, ನನ್ನನ್ನು ಕಾಪಾಡು. ॥೬೩॥

ಬ್ರಹ್ಮಾಂಡವನ್ನೂ ಪ್ರಳಯಕಾಲದಲ್ಲಿ ನಾಶಮಾಡುವವನೇ, ಬ್ರಹ್ಮನ ಮುಂಡವನ್ನು ಬೇರ್ಪಡಿಸಿ, ರುಂಡಮಾಲೆಯನ್ನು ಧರಿಸಿರುವವನೆ, ದಿವ್ಯದೇಹದಿಂದ

ಕುಂಡಲೀಕೃತ ಕುಟ್ಮಲಗಂಡ
ಖಾಂಡಕೋಶಕಲಿತಾಖಿಲಪಾಲ ॥೬೪॥

ಏವಂ ಸ್ತುವನ್ಭಾದ್ರಪದೇ ಭದ್ರಾಣಿ ಲಭತೇ ನರಃ ।
ದತ್ವಾ ಶಾಂಭವವರ್ಯಾಯ ಕೃಷ್ಣಾಗೋಮಿಥುನಂ ಶಿವೇ ॥೬೫॥

ಸದಕ್ಷಿಣಂ ಸವತ್ಸಂ ಚ ಕೃತ್ವಾ ಹೋಮಂ ವಿಧಾನತಃ ।
ಮಾಸಂ ನಕ್ತಾಶನೋ ಭೂಯಾಚ್ಛಿವಭಕ್ತೋ ಜಿತೇಂದ್ರಿಯಃ ॥೬೬॥

ಮಾಸಾಂತೇ ಭಾದ್ರಪೌರ್ಣಮ್ಯಾಮೇವಂ ಪೂಜ್ಯ ಮಹೇಶ್ವರಂ ।
ಸ್ವಯಂ ಭುಂಜೀತ ಸಹಿತೋ ಬಾಂಧವೈರ್ಬಂಧಮುಕ್ತಯೇ ॥೬೭॥

ಏವಂ ಭಾದ್ರಪದೇ ಮಾಸಿ ಸಂಪೂಜ್ಯ ಪರಮೇಶ್ವರಂ ।
ಯಾತ್ಯಂತೇ ವಂಶಸಾಹಸ್ರೈರ್ವಂಶ್ಯೈರ್ಯಾನೈರ್ಮನೋಹರೈಃ ॥೬೮॥

---

ಶೋಭಿಸುವವನೆ, ಬ್ರಹ್ಮಕಪಾಲವನ್ನೇ ಕೈಯ್ಯಲ್ಲಿ ಹಿಡಿದು ಅದನ್ನು ಒಂದು ಪಾತ್ರೆಯಂತೆ ಮಾಡಿರುವವನೇ, ಸರ್ಪರಾಜನನ್ನೇ ಕುಂಡಲವನ್ನಾಗಿ ಮಾಡಿಕೊಂಡೂ, ಹಾರವಾಗಿಯೂ ಗಂಡಸ್ಥಳದಲ್ಲಿ ಧರಿಸಿರುವವನೇ, ಬ್ರಹ್ಮಾಂಡಗರ್ಭದಲ್ಲಡಗಿರುವ ಸಮಸ್ತಪ್ರಾಣಿಗಳನ್ನೂ ಸಂರಕ್ಷಿಸುವವನೆ, ನನ್ನನ್ನು ಕಾಪಾಡು. ॥೬೪॥

ದೇವಿ, ಈರೀತಿ ಭಾದ್ರಪದಮಾಸದಲ್ಲಿ ಶಿವನನ್ನು ಸ್ತುತಿಸಿ, ಮಾನವನು ಶುಭಫಲಗಳನ್ನು ಹೊಂದುವನು. ಶಂಭುಭಕ್ತನಿಗೆ ಕಪ್ಪುಬಣ್ಣದ ಒಂದು ಜೊತೆ (ಮಿಥುನ) ಗೋವುಗಳನ್ನು ಕರುವಿನೊಡನೆ ಉಚಿತವಾದ ದಕ್ಷಿಣೆಯೊಡನೆ ದಾನ ಮಾಡಿ ವಿಧಿಪ್ರಕಾರ ಹೋಮವನ್ನಾಚರಿಸಿ ಆ ಶಿವಭಕ್ತನು ಜಿತೇಂದ್ರಿಯನಾಗಿ ಒಂದು ತಿಂಗಳು ರಾತ್ರಿ ಭೋಜನ ನಿಯಮದಿಂದಿರಬೇಕು. ॥೬೫-೬೬॥

ಎಲೌ ಪಾರ್ವತಿಯೆ, ತಿಂಗಳ ಕೊನೆಯಲ್ಲಿ ಅಂದರೆ ಭಾದ್ರಪದಮಾಸದ ಹುಣ್ಣಿಮೆಯಲ್ಲಿ ಮಹೇಶನನ್ನು ಪೂಜಿಸಿ, ಸಂಸಾರಬಂಧನವನ್ನು ಹೋಗಲಾಡಿಸುವುದಕ್ಕೋಸ್ಕರ ತನ್ನ ನೆಂಟರಿಷ್ಟರೊಡನೆ ತಾನೂ ಊಟಮಾಡಬೇಕು. ಹೀಗೆ ಭಾದ್ರಪದಮಾಸದಲ್ಲಿ ಪರಮೇಶ್ವರನನ್ನು ಪೂಜಿಸಿದವನು ಕೊನೆಯಲ್ಲಿ ತನ್ನ ಸಾವಿರ ವಂಶೀಕರೊಡನೆ ಮನೋಹರಗಳಾದ ವಿಮಾನಗಳಲ್ಲಿ ಕುಳಿತು, ಸಂಗೀತ ಮತ್ತು ವಾದ್ಯಧ್ವನಿಗಳೊಡನೆ, ಕೊಳೆಯಿಲ್ಲದ ಬಟ್ಟೆಗಳನ್ನು ಧರಿಸಿ, ಗಂಧಚಂದನಮಾಲೆ

ಗೀತವಾದಿತ್ರನಿನದೈಃ ವಿರಜೋಂಬರವಾಸಸಾ ।
ಗಂಧಚಂದನಮಾಲ್ಯಾದಿವ್ಯಸ್ರಗನುಲೇಪನಃ ॥೬೯॥

ದೋಧೂಯಮಾನಚಮರೈರ್ವೀಜಿತೋ ವ್ಯಜನಾದಿಭಿಃ ।
ವಿಹಾಯೈವಂ ಸದಾ ಭಾರ್ಯಂ ಯಾತಿ ಮತ್ಸದನಂ ಶಿವೇ ॥೭೦॥

ತತ್ರ ಮೇ ಗಣಸ್ತೈಃ ಸಾರ್ಧಂ ಮೋದತೇ ಕಾಲಮಕ್ಷಯಂ ॥೭೧॥

॥ ಶ್ರೀ ಸ್ಕಂದ ಉವಾಚ ॥

ಯೋ ಭದ್ರದೇ ಭಾದ್ರಪದೇ ಸಮರ್ಚ್ಯ
ರುದ್ರಂ ದರಿದ್ರೋ ನ ಸ ಜಾತು ಭೂಯಾತ್ ।
ಸುವೀರಭದ್ರಾದಿಸಮರ್ಚಿತಃ ಸ್ಯಾ
ದ್ಭದ್ರಾಣಿಸರ್ವಾಣಿ ಲಭೇದತಂದ್ರಃ ॥೭೨॥

ಉಮಾಕಾಂತಂ ಶಾಂತೋ ಭಜತಿ ಭವತಾಂತೋ ದ್ವಿಜಗಣೋ
ಕೃತಾಂತಾದ್ಭಾ ಭೀತಃ ಶ್ರುತಿಶಿರಸಿ ಭಾತಂ ಯಮಧನಃ ।
ವಸಂತೇ ಹೇಮಂತೇ ಕುಸುಮಿತದಿನಾಂತೇಽರ್ಚತಿ ಶಿವಂ
ಅಹೋ ವರ್ಷಾಸ್ವಿಷ್ಟಂ ಭಜತಿ ವರಭಾಗ್ಯೈಶ್ಚ ನಿಪುಣಃ ॥೭೩॥

---

ಗಳಿಂದಲಂಕೃತನಾಗಿ ಚಾಮರಗಳಿಂದಲೂ ಬೀಸಣಿಗೆಗಳಿಂದಲೂ ಬೀಸಿಸಿಕೊಳ್ಳುತ್ತಾ, ನನ್ನ ಕೈಲಾಸಲೋಕವನ್ನು ಸೇರಿ, ಅಲ್ಲಿ ಅನೇಕ ಕಾಲಗಳವರೆಗೆ ನನ್ನ ಗಣಾಧಿಪತಿಗಳೊಡನೆ ಶಾಶ್ವತವಾದ ಸುಖವನ್ನನುಭವಿಸುತ್ತಾ ಆನಂದದಿಂದ ವಿಹರಿಸುವನೆಂದು ಪಾರ್ವತಿಗೆ ಶಿವನು ಹೇಳಿದನು. ॥೬೭-೬೮-೬೯-೭೦-೭೧॥

ಅಯ್ಯ ಜೈಗೀಷವ್ಯ ಮುನಿಯೆ, ಮಂಗಳಪ್ರದವಾದ ಈ ಭಾದ್ರಪದಮಾಸದಲ್ಲಿ ರುದ್ರನನ್ನು ಪೂಜಿಸುವವನು ಯಾವಾಗಲೂ ಬಡವನಾಗಲಾರನು. ಶ್ರೇಷ್ಠರಾದ ವೀರಭದ್ರನೇ ಮೊದಲಾದ ಗಣಗಳಿಂದ ಪೂಜಿಸಲ್ಪಟ್ಟವನಾಗಿ ಆಲಸ್ಯವಿಲ್ಲದೇ ಸಮಸ್ತ ಮಂಗಳಫಲಗಳನ್ನೂ ಹೊಂದುವನು. ॥೭೨॥

ಈ ಸಂಸಾರದಿಂದ ಭೀತರಾಗಿ, ಯಮನಿಗೆ ಹೆದರಿ, ಶಾಂತಮನದಿಂದ ವೇದಾಂತದಲ್ಲಿ ಪ್ರತಿಪಾದಿತನಾಗಿರುವ ಮಹೇಶನನ್ನು ಜಿತೇಂದ್ರಿಯನಾಗಿ ವಸಂತಋತು, ಹೇಮಂತಋತು, ಅರಳಿದ ಹೂಗಳಿಂದ ಶೋಭಿಸುವ ಇತರ ಕಾಲಗಳು, ಅಲ್ಲದೇ

**ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಭಾದ್ರಪದಮಾಸಾರ್ಚನವಿಧಾನ ನಿರೂಪಣಂ ನಾಮೈಕೋನವಿಂಶೋಽಧ್ಯಾಯಃ**

---

ವರ್ಷಾಕಾಲಗಳಲ್ಲಿ ಪ್ರದೋಷಸಮಯದಲ್ಲಿ ಪೂಜಿಸುವ ಬ್ರಾಹ್ಮಣಸಮೂಹವು ಶ್ರೇಷ್ಠವಾದ ಐಶ್ವರ್ಯವನ್ನು ಪಡೆದು ಸುಖಿಸುವನೆಂದು ಶಿವನು ಪಾರ್ವತಿಗೆ ಹೇಳಿದುದನ್ನು ಸ್ಕಂದನು ಜೈಗೀಷವ್ಯನಿಗೆ ಅರುಹಿದನು. ||೭೩||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಭಾದ್ರಪದಮಾಸ ಪೂಜಾವಿಧಾನವರ್ಣನೆಯೆಂಬ ಹತ್ತೊಂಬತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ವಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಶಿವೇಽಶ್ವಯುಜಮಾಸಸ್ಯ ವಕ್ಷ್ಯೇ ಪೂಜಾವಿಧಿಂ ಶೃಣು ।
ಯತ್ಕೃತ್ವಾ ಮನುಜಃ ಸಿದ್ಧಿಂ ಗಾಣಾಪತ್ಯಂ ಸ ವಿಂದತಿ ॥೧॥

ಶಿವಸ್ನಾನವಿಧಿಂ ವಕ್ಷ್ಯೇ ಬ್ರಾಹ್ಮಣಾನಾಂ ಹಿತಾಯ ವೈ ।
ಸರ್ವಪಾಪಹರಂ ಸಾಕ್ಷಾನ್ಮಯೈವ ಕಥಿತಂ ಪುರಾ ॥೨॥

ಅನೇನ ವಿಧಿನಾ ಸ್ನಾತ್ವಾ ಯಃ ಸಕೃತ್ಪೂಜ್ಯ ಶಂಕರಂ ।
ಬ್ರಹ್ಮಕೂರ್ಚಂ ಚ ಪೀತ್ವಾ ತು ಸರ್ವಪಾಪೈಃ ಪ್ರಮುಚ್ಯತೇ ॥೩॥

---

## ಇಪ್ಪತ್ತನೆಯ ಅಧ್ಯಾಯ

ಗೌರಿಯೆ, ಆಚರಿಸಿದ ಮಾತ್ರದಿಂದಲೇ ಮಾನವನು ಗಣಾಧಿಪತಿಪದವಿಯನ್ನು ಪಡೆಯುವ ಆಶ್ವಯುಜಮಾಸದ ಪೂಜಾವಿಧಿಯನ್ನು ಹೇಳುತ್ತೇನೆ ಕೇಳು. ಬ್ರಹ್ಮವಿದ್ಯಾವಂತರ ಹಿತಕ್ಕಾಗಿ ಸಕಲ ಪಾಪಗಳನ್ನೂ ನಾಶಮಾಡುವ ಹಿಂದೆ ನನ್ನಿಂದ ಹೇಳಲ್ಪಟ್ಟಿರುವ ಶಿವಸ್ನಾನವಿಧಿಯನ್ನು ಹೇಳಿರುವೆನು. ಈ ವಿಧಿ ಪ್ರಕಾರ ಸ್ನಾನಮಾಡಿ ಒಂದು ಸಲ ಶಿವನನ್ನು ಪೂಜಿಸಿ ಬ್ರಹ್ಮಕೂರ್ಚಜಲವನ್ನು ಪಾನಮಾಡಿದವನು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ. ॥೧-೨-೩॥

ತ್ರಿಧಾ ಸ್ನಾನಂ ಸಮಾಖ್ಯಾತಂ ಸ್ಮೃತಿಭಿಃ ಶ್ರುತಿಭಿಃ ಶಿವೇ ।
ಹಿತಾಯ ಶಾಂಭವಾನಾಂ ಚ ತಥೈವಾಶ್ರಮಿಣಾಂ ಶಿವೇ ॥೪॥

ವಾರುಣಂ ಪುರತಃ ಕೃತ್ವಾ ನದೀನದತಟಾಕಕೇ ।
ಅಬ್ಲಿಂಗೈರ್ವಾರುಣೈರ್ಮಂತ್ರೈರೌದ್ರೈರ್ವಾ ಶಿವತತ್ಪರಃ ॥೫॥

ಅಗ್ನಿರಿತ್ಯಾದಿನಾ ದೇಹಂ ಪರಿಮೃಜ್ಯ ಸುಭಸ್ಮನಾ ।
ತದಾಗ್ನೇಯಂ ಸಮಾಖ್ಯಾತಂ ಸರ್ವಪಾಪವಿಶೋಧಕಂ ॥೬॥

ಧೃತತ್ರಿಪುಂಡ್ರರುದ್ರಾಕ್ಷಸ್ತತ್ತನ್ಮಂತ್ರೇಣ ಮಂತ್ರವಿತ್ ।
ಮಾಸನಾಮ ಚ ಸಂಕಲ್ಪ್ಯ ಸ ಕುಶಾಂಜಲಿರೀಶ್ವರಂ ॥೭॥

ಭಾವಯುಕ್ತೋ ಭವಂ ಸ್ಮೃತ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಸ್ನಾತ್ವಾಪಿ ಭಾವದುಷ್ಟಶ್ಚೇನ್ನ ಸ ಶುಧ್ಯತಿ ಸರ್ವದಾ ॥೮॥

ಭಾವಶುದ್ಧಶ್ಚರೇತ್ಸರ್ವಂ ಸರ್ವಂ ನಿತ್ಯಂ ಚ ಕಾಮಿಕಂ ।
ನೃಣಾಂ ಹಿ ಚಿತ್ತಕಮಲಮಪ್ರಬುದ್ಧಂ ಭವೇದ್ಯದಾ ॥೯॥

---

ಪಾರ್ವತಿಯೆ, ಶಂಭುಭಕ್ತರ ಮತ್ತು ಆಶ್ರಮಸ್ವೀಕರಿಸಿದವರ ಹಿತಕ್ಕೋಸ್ಕರ ಶ್ರುತಿ, ಸ್ಮೃತಿಗಳಲ್ಲಿ ಸ್ನಾನವು ಮೂರು ವಿಧವಾಗಿ ಹೇಳಲ್ಪಟ್ಟಿದೆ. ಹೊಳೆ, ಮಡು, ಕೆರೆ ಇವುಗಳಲ್ಲಿ ಪಶ್ಚಿಮಾಭಿಮುಖವಾಗಿ ನಿಂತು ಅಬ್ಲಿಂಗಮಂತ್ರ, ವಾರುಣ ಮಂತ್ರ ಮತ್ತು ರುದ್ರಮಂತ್ರಗಳಿಂದ ಶಿವತತ್ಪರನಾಗಿ, 'ಅಗ್ನಿರಾಯುಷ್ಮಾನ್' ಮುಂತಾದ ಮಂತ್ರಗಳಿಂದ ಭಸ್ಮವನ್ನು ತೆಗೆದುಕೊಂಡು ದೇಹಕ್ಕೆ ಲೇಪಿಸಿಕೊಳ್ಳಬೇಕು. ಅದು ಸಕಲ ಪಾಪಸಿದ್ಧಿಕರವಾದ ಆಗ್ನೇಯಸ್ನಾನವೆಂದು ಹೇಳಲ್ಪಟ್ಟಿದೆ. ॥೪-೫-೬॥

ಮಂತ್ರಜ್ಞನಾದವನು ಆಯಾ ಮಂತ್ರಪುರಸ್ಸರವಾಗಿ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಧರಿಸಿ, ಕುಶವನ್ನು ಬೊಗಸೆಯಲ್ಲಿಟ್ಟುಕೊಂಡು ಮಾಸನಾಮವನ್ನೂ ಸಂಕಲ್ಪಮಾಡಿ, ಭಕ್ತಿಪೂರ್ವಕವಾಗಿ ಶಿವನನ್ನು ಸ್ಮರಿಸಿದರೆ ಸಕಲಪಾತಕಗಳಿಂದಲೂ ಬಿಡುಗಡೆಹೊಂದುವನು. ಭಾವದೋಷವಿದ್ದು ಸ್ನಾನಮಾಡಿದರೂ ಸಹ ಅವನು ಯಾವಾಗಲೂ ಶುದ್ಧನೆನಿಸಲಾರನು. ॥೭-೮॥

ಶುದ್ಧಮನಸ್ಸಿನಿಂದ ಸಕಲ, ನಿತ್ಯ ಮತ್ತು ಕಾಮ್ಯಕರ್ಮಗಳನ್ನೂ ಮಾಡ

ಪ್ರಸುಪ್ತಂ ತಮಸಾ ಜ್ಞಾನಂ ಭಾನೋರ್ಭಾಸಾ ತದಾ ಶುಚಿಃ ।
ಮೃಚ್ಛಕೃತ್ತಿಲಪುಷ್ಪಂ ಚ ಸ್ನಾನಾರ್ಥಂ ಭಸಿತಂ ಸಿತಂ ॥೧೦॥

ಆನೀಯ ತೀರೇ ನಿಕ್ಷಿಪ್ಯ ಸ್ನಾನತೀರ್ಥೇ ಕುಶಾಂಸ್ತಥಾ ।
ಪ್ರಕ್ಷಾಳ್ಯ ಹಸ್ತಪಾದೌ ಚ ತ್ರಿರಾಚಮ್ಯ ಶುಚಿರ್ದ್ವಿಜಃ ॥೧೧॥

ಪಂಚಗವ್ಯೈಸ್ತತಃ ಸ್ನಾತ್ವಾ ಕೂರ್ಚೋದೇನಾಪಿ ಶಂಕರಿ ।
ಉದ್ಧೃತಾಸೀತಿ ಮಂತ್ರೇಣ ಪುನರ್ದೇಹಂ ವಿಶೋಧಯೇತ್ ॥೧೨॥

ಗಂಧದ್ವಾರೇತಿ ಮಂತ್ರೇಣ ಕಪಿಲಾಗೋಮಯಂ ಶುಭಂ ।
ಲೇಪಯೇತ್ಸರ್ವಗಾತ್ರೇಷು ಅಂಗಾದಂಗೇತ್ಯೃಚಾ ಶಿವೇ ॥೧೩॥

ಪುನರಾಚಮ್ಯ ವಿಧಿವದಭಿಮಂತ್ರ್ಯ ನದೀಜಲಂ ।
ತೀರ್ಥಪಾಲಾಂಸ್ತತೋ ರುದ್ರಾನನುಜ್ಞಾಪ್ಯಾಥಮರ್ಷಣಃ ॥೧೪॥

---

ಬಹುದು. ಮಾನವರ ಹೃದಯಕಮಲವು ವಿಕಾಸಹೊಂದದಿರುವಾಗ ಅಜ್ಞಾನದಿಂದ ಜ್ಞಾನವು ಮುಚ್ಚಲ್ಪಟ್ಟಿರುವಾಗ, ಸೂರ್ಯಕಿರಣಗಳಿಂದ ಕತ್ತಲೆಯು ಹೋಗುವಂತೆ ಜ್ಞಾನದಿಂದ ಅಜ್ಞಾನವು ಅಳಿದು ಮಾನವನ ಚಿತ್ತಕಮಲವು ಶುಚಿಯಾಗುವುದು. ಆಗ ಮಣ್ಣು, ಸಗಣಿ, ಎಳ್ಳು, ಹೂ, ಶುಭ್ರವಾದ ಭಸ್ಮ, ಮತ್ತು ದರ್ಭೆಗಳನ್ನು ತಂದು, ಸ್ನಾನತೀರ್ಥದಲ್ಲಿ ಇರಿಸಿ, ಕೈಕಾಲುಗಳನ್ನು ತೊಳೆದುಕೊಂಡು, ಮೂರು ಆಚಮನಮಾಡಿ ಶುದ್ಧನಾಗಿ ದ್ವಿಜನು, ಪಂಚಗವ್ಯ, ಶುದ್ಧೋದಕ, ಮತ್ತು ಕೂರ್ಚೋದಕಗಳಿಂದ ಸ್ನಾನಮಾಡಿ, 'ಉದ್ಧೃತಾಸಿ ವರಾಹೇಣ' ಎಂಬ ಮಂತ್ರದಿಂದ ದೇಹವನ್ನು ಪುನಃ ಶುದ್ಧಿಪಡಿಸಿಕೊಳ್ಳಬೇಕು. ॥೯-೧೦-೧೧-೧೨॥

ದೇವಿ, 'ಗಂಧದ್ವಾರಾಂ' ಎಂಬ ಮಂತ್ರದಿಂದ ಕಪಿಲೆಯ ಶುಭಕರವಾದ ಸಗಣಿಯನ್ನು 'ಅಂಗಾದಂಗಾತ್ಸಂಭವಸಿ ಹೃದಯಾದಧಿಜಾಯಸೆ' ಎಂಬ ಋಙ್ಮಂತ್ರದಿಂದ ಅವಯುವಗಳಿಗೆಲ್ಲಾ ಲೇಪನಮಾಡಿಕೊಳ್ಳಬೇಕು. ಪುನಃ ಆಚಮನ ಮಾಡಿ, ವಿಧಿಪ್ರಕಾರ ನದಿಯ ನೀರನ್ನು ಅಭಿಮಂತ್ರಿಸಿ ತೀರ್ಥಪಾಲಕರನ್ನೂ, ರುದ್ರರನ್ನೂ ಪೂಜಿಸಿ, ಅವರನುಜ್ಞೆಪಡೆದು ನಂತರ 'ಯೇ ತೀರ್ಥಾನಿ' ಎಂಬ ಮಂತ್ರದಿಂದ ಪುನಃ ಸ್ನಾನಮಾಡಿದವನು ಪವಿತ್ರನಾಗುವನು. ॥೧೩-೧೪॥

ಯೇ ತೀರ್ಥಾನೀತಿ ಮಂತ್ರೇಣ ಸ್ನಾತಃ ಪೂತೋ ಭವೇಚ್ಛಿವೇ ।
ಏವಂ ಸ್ನಾತ್ವಾ ಯಥಾನ್ಯಾಯಂ ಕೃತನಿತ್ಯಕ್ರಿಯೋ ದ್ವಿಜಃ ॥೧೫॥

ಭಸ್ಮ ಧೃತ್ವಾ ಚ ಜಪ್ತ್ವಾ ಚ ಹುತ್ವಾ ದೇವಾನ್ಪಿತೄಂಸ್ತಥಾ ।
ತರ್ಪಯಿತ್ವಾ ಪ್ರವಿಶ್ಯಾಂತಃ ಗೃಹೇ ಮಂಟಪಮುತ್ತಮಂ ॥೧೬॥

ಕಾರಯೇತ್ಪುಷ್ಪಮಾಲಾಢ್ಯಂ ಘೋಲೇಪನಪುರಃಸರಂ ।
ರಂಗವಲ್ಲೀವಿಚಿತ್ರಾಢ್ಯಂ ಪದ್ಮಸಾರೇಣ ಮಂಡಿತಂ ॥೧೭॥

ಬ್ರಾಹ್ಮಣಾನ್ವರಯೇದ್ದೇವಿ ಶಾಂಭವಾನ್ವೇದಪಾರಗಾನ್ ।
ಪ್ರಾಣಾಯಾಮತ್ರಯಂ ಕೃತ್ವಾ ಧ್ಯಾಯೇದ್ದೇವಂ ತ್ರಿಯಂಬಕಂ ॥೧೮॥

ಪಂಚವಕ್ತ್ರಂ ದಶಭುಜಂ ಶುದ್ಧಸ್ಫಟಿಕಸಂನಿಭಂ ।
ಸರ್ವಾಭರಣಸಂಯುಕ್ತಂ ಚಿತ್ರಾಂಬರವಿಭೂಷಿತಂ ॥೧೯॥

ಸೋಮಂ ಸೋಮಾವತಂಸಂ ಚ ತ್ರಿನೇತ್ರಂ ನೀಲಕಂಧರಂ ।
ಶಿವಸಾರೂಪ್ಯಮಾಪ್ಯಾಥ ಚಹನಾಪ್ಲಾವನಾದಿಭಿಃ ॥೨೦॥

---

ಹೀಗೆ ವಿಧಿವತ್ತಾಗಿ ಸ್ನಾನಮಾಡಿ, ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಬ್ರಾಹ್ಮಣನು ಭಸ್ಮಧಾರಣೆಮಾಡಿ ಶಿವಮಂತ್ರಗಳನ್ನು ಜಪಿಸಿ, ಹೋಮಮಾಡಿ, ದೇವತೆಗಳಿಗೂ ಪಿತೃಗಳಿಗೂ ತರ್ಪಣಮಾಡಿದನಂತರ ಮನೆಯೊಳಗೆ ಪ್ರವೇಶಿಸಿ, ಉತ್ತಮವಾದ ಮಂಟಪವನ್ನು ಮಾಡಿಸಬೇಕು. ಆ ಮಂಟಪವು ಹೂಮಾಲೆಗಳಿಂದಲಂಕೃತವಾಗಿ ಚೆನ್ನಾಗಿ ಸಾರಿಸಲ್ಪಟ್ಟು, ರಂಗವಲ್ಲಿಯ ಚಿತ್ರಗಳಿಂದ ಪೂರ್ಣವಾಗಿ ಪದ್ಮದಳಾದಿಗಳಿಂದ ಮಂಡಿತವಾಗಿರಬೇಕು. ॥೧೫-೧೬-೧೭॥

ಆಮೇಲೆ ವೇದಪಾರಂಗತರಾದ ಶೈವದ್ವಿಜರನ್ನು ಮಂತ್ರಪಾರಾಯಣಕ್ಕಾಗಿ ವರಣಮಾಡಬೇಕು. ಮೂರು ಪ್ರಾಣಾಯಾಮಗಳನ್ನು ಮಾಡಿ ಅನಂತರ ಐದು ಮುಖ, ಹತ್ತುತೋಳುಗಳುಳ್ಳವನಾಗಿ, ಶುದ್ಧವಾದ ಸ್ಫಟಿಕಸಮಾನ ಕಾಂತಿಯಿಂದ ಯುಕ್ತವಾಗಿ, ಸಕಲ ಆಭರಣಗಳಿಂದಲೂ ಶೋಭಿಸುತ್ತಾ ಚಿತ್ರವಸ್ತ್ರಗಳಿಂದಲಂಕರಿಸಲ್ಪಟ್ಟಿರುವ ಉಮಾರಮಣನೂ, ಚಂದ್ರಶೇಖರನೂ, ಮೂರು ಕಣ್ಣುಳ್ಳವನೂ,

ಶೈವೀಂ ತನೂಂ ಸಮಾಸ್ಥಾಯ ಪೂಜಯೇಲ್ಲಿಂಗಮೈಶ್ವರಂ ।
ದೇಹಶುದ್ಧಿಂ ಚ ಕೃತ್ವೈನಂ ಕಲಾನ್ಯಾಸಂ ನ್ಯಸೇತ್ಕ್ರಮಾತ್ ॥೨೧॥

ಸರ್ವಾದ್ಯಂ ಪ್ರಣವಂ ಮಂತ್ರಂ ಶಿವರೂಪಪ್ರಕಾಶಕಂ ।
ತೇನಾದ್ಯೇನ ಶಿವಾಯೇತಿ ಜಪ್ಯೋ ಮಂತ್ರಃ ಷಡಕ್ಷರಃ ॥೨೨॥

ಸಹಸ್ರಪರಮೋ ನಿತ್ಯಂ ಶತಾಷ್ಟಕೃತಸಂಖ್ಯಯಾ ।
ಪಂಚವಿಂಶದಥಾಕ್ಷೇಣ ಕೃತಾಮಾಲಾ ಜಪೇ ವರಾ ॥೨೩॥

ಜಪ್ತ್ವಾ ಮಂತ್ರೀ ಯಥಾನ್ಯಾಯಂ ಧ್ಯಾತ್ವಾ ದೇವಂ ಮಹೇಶ್ವರಂ ।
ಸೇಚಯೇದರ್ಚನಾಸ್ಥಾನಂ ಗಂಧಚಂದನವಾರಿಣಾ ॥೨೪॥

ದ್ರವ್ಯಾಣಿ ಸಾಧಯೇತ್ಪಶ್ಚಾತ್ಕ್ಷಾಳನಪ್ರೋಕ್ಷಣಾದಿಭಿಃ ।
ಸ್ಥಾಪಯೇದ್ವಿಧಿನಾಧೀಮಾನವಗುಂತ್ಯ ಯಥಾವಿಧಿ ॥೨೫॥

---

ಕಪ್ಪು ಕಂಠವುಳ್ಳವನೂ ಆದ ಮಹಾದೇವನನ್ನು ಧ್ಯಾನಮಾಡಬೇಕು. ಅನಂತರ ದಹನ, ಆಪ್ಲಾವನಾದಿಗಳಿಂದ ಶಿವಸಾರೂಪ್ಯವನ್ನು ಹೊಂದಿ, ಅನಂತರ ಶೈವದೇಹ ಸಂಪನ್ನರಾಗಿ ತರುವಾಯ ಶಿವಲಿಂಗವನ್ನು ಪೂಜೆಮಾಡಬೇಕು. ದೇಹಶುದ್ಧಿಮಾಡಿಕೊಂಡಮೇಲೆ ಈರೀತಿ ಕಲಾನ್ಯಾಸವನ್ನು ಕ್ರಮವಾಗಿಮಾಡಬೇಕು. ॥೧೮-೧೯-೨೦-೨೧॥

ಎಲ್ಲದರಲ್ಲೂ ಆದಿಯಾದ ಪ್ರಣವಮಂತ್ರವು ಶಿವಸ್ವರೂಪವನ್ನು ಪ್ರಕಾಶಪಡಿಸುವುದು. ಅಂಥ ಓಂಕಾರಾದಿಯಾದ ನಮಃಶಿವಾಯ ಎಂಬ ಷಡಕ್ಷರಮಂತ್ರವನ್ನು ಜಪಿಸಬೇಕು. ಜಪಮಾಡುವಾಗ ಸಾವಿರ ರುದ್ರಾಕ್ಷಗಳುಳ್ಳಮಾಲೆಯು ಶ್ರೇಷ್ಠವು. ನೂರೆಂಟುರುದ್ರಾಕ್ಷಗಳುಳ್ಳದ್ದು ಮಧ್ಯಮವು. ಇಪ್ಪತ್ತೈದುರುದ್ರಾಕ್ಷಗಳಿಂದ ರಚಿತವಾದ ಮಾಲೆಯು ಸಾಮಾನ್ಯವು. ಈ ಮೂರು ಮಾಲೆಗಳೂ ಜಪಮಾಡಲು ಶ್ರೇಷ್ಠವಾದವುಗಳು. ॥೨೨-೨೩॥

ಮಂತ್ರಜ್ಞನು ನ್ಯಾಯವರಿತು ಜಪಮಾಡಿ, ಮಹಾದೇವನನ್ನು ಧ್ಯಾನಿಸಿ, ಪೂಜಾಸ್ಥಾನವನ್ನು ಗಂಧ, ಚಂದನಗಳಿಂದ ಮಿಶ್ರವಾದ ನೀರಿನಿಂದ ಪ್ರೋಕ್ಷಿಸಬೇಕು. ಅನಂತರ ತೊಳೆಯುವುದು, ಪ್ರೋಕ್ಷಿಸುವುದು ಮುಂತಾದವುಗಳಿಂದ ದ್ರವ್ಯಗಳನ್ನು ಸಿದ್ಧಪಡಿಸಿಟ್ಟುಕೊಂಡು, ಬುದ್ಧಿವಂತನಾದವನು ವಿಧಿಪ್ರಕಾರ ತೆರೆ ಹಾಕಿ ಶಿವಲಿಂಗವನ್ನು ಸ್ಥಾಪಿಸಬೇಕು. ॥೨೪-೨೫॥

ಶೃಂಗಶಂಖಾನಿ ಶಾಖಾನಿ ಪರ್ಣಪದ್ಮಪುಟಾನಿ ಚ ।
ಹೇಮರೌಪ್ಯಾದಿತಾಮ್ರಾಣಿ ಕಾಂಸ್ಯಪೈತ್ತಲಕಾನ್ಯಪಿ ॥೨೬॥

ಪ್ರಶಸ್ತಾನಿ ಶಿವಾರ್ಚಾದೌ ಕ್ಷಾಳಿತಾನ್ಯಥಕಲ್ಕಿತಃ ।
ದರ್ಭೈರಾಚ್ಛಾದಿತಭುವಿ ಸ್ಥಾಪ್ಯ ಪಾತ್ರಾಣಿ ಸರ್ವತಃ ॥೨೭॥

ಕ್ಷಾಳನಂ ಪ್ರೋಕ್ಷಣಂ ಚೈವ ಪ್ರಣವೇನ ವಿಧೀಯತೇ ।
ಪ್ರೋಕ್ಷಣೀಂ ಚಾರ್ಘ್ಯಪಾತ್ರಂ ಚ ಪಾದ್ಯಪಾತ್ರಮನುಕ್ರಮಾತ್॥೨೮॥

ತಥಾರ್ಘ್ಯಾಚಮನಾರ್ಥಾಯ ಪಾತ್ರಮೇಕಂ ಪ್ರಸಾದಯೇತ್ ।
ತೇಷು ತೇಷ್ವಥ ಸರ್ವೇಷು ಕ್ಷಿಪೇತ್ತೋಯಂ ಸ ಪುಷ್ಪಕಂ ॥೨೯॥

ಪ್ರಣವೇನ ಕ್ಷಿಪೇತ್ತೇಷು ದ್ರವ್ಯಮಾಲೋಕ್ಯ ಬುದ್ಧಿಮಾನ್ ।
ಉಶೀರಂ ಚಂದನಂ ಚೈವ ಪಾದ್ಯೇ ತು ಪರಿಕಲ್ಪಯೇತ್ ॥೩೦॥

ಜಾತೀ ತಕ್ಕೋಲಕರ್ಪೂರಫಲಮೂಲತಮಾಲಕಾಃ ।
ಚೂರ್ಣಯಿತ್ವಾಥ ಸಂಶೋಧ್ಯ ಕ್ಷಿಪೇದಾಚಮನೀಯಕೇ ॥೩೧॥

---

ಕೊಂಬು, ಶಂಖ, ಮರದತುಂಡಿನದು, ಎಲೆಯದೊನ್ನೆಗಳು, ತಾವರೆಲೆಯ ದೊನ್ನೆ, ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ, ಈ ಲೋಹಪದಾರ್ಥಗಳು ಸಗಣಿಯಿಂದ ಕೊಳಯಲ್ಪಟ್ಟಿದ್ದರೆ, ಶಿವಪೂಜೆಯೇ ಮೊದಲಾದವುಗಳಲ್ಲಿ ಶ್ರೇಷ್ಠ ಗಳೆನಿಸುವುವು. ದರ್ಭೆಗಳಿಂದ ಹರಡಲ್ಪಟ್ಟ ನೆಲದಮೇಲೆ ಪಾತ್ರೆಗಳನ್ನೆಲ್ಲಾ ಎಲ್ಲಾ ಕಡೆಯಲ್ಲಿಯೂ ಇಟ್ಟು, ಓಂಕಾರಮಂತ್ರದಿಂದ ಆ ಪಾತ್ರೆಗಳ, ಕ್ಷಾಳನ, ಪ್ರೋಕ್ಷಣ, ಇವುಗಳನ್ನುಮಾಡಬೇಕು. ॥೨೬-೨೭॥

ಪ್ರೋಕ್ಷಣೀಪಾತ್ರೆ, ಅರ್ಘ್ಯಪಾತ್ರೆ, ಮತ್ತು ಪಾದ್ಯದಪಾತ್ರೆಯನ್ನು ಕ್ರಮ ವಾಗಿ, ಪ್ರೋಕ್ಷಿಸಬೇಕು. ಹಾಗೆಯೇ ಅರ್ಘ್ಯ, ಮತ್ತು ಆಚಮನಗಳಿಗೋಸ್ಕರ ಒಂದು ಪಾತ್ರೆಯನ್ನು ಸಿದ್ಧಪಡಿಸಿಟ್ಟುಕೊಳ್ಳಬೇಕು. ಅವುಗಳಲ್ಲೆಲ್ಲಾ ಹೂಮಿಶ್ರವಾದ ನೀರನ್ನುಹಾಕಬೇಕು. ಆಯಾಪದಾರ್ಥಗಳನ್ನು ನೋಡಿ ಪ್ರಣವಮಂತ್ರದಿಂದ ದ್ರವ್ಯವನ್ನು ಅವುಗಳಲ್ಲಿ ಹಾಕಬೇಕು. ಪಾದ್ಯಪಾತ್ರೆಯಲ್ಲಿ ಲಾಮಂಚ ಮತ್ತು ಚಂದನಗಳನ್ನು ಹಾಕಬೇಕು. ॥೨೮-೨೯-೩೦॥

ಜಾಜಿ, ತಕ್ಕೋಲ, ಕರ್ಪೂರ, ಹಣ್ಣು, ಗೆಡ್ಡೆ, ಹೊಂಗೆ, ಇವುಗಳನ್ನು

ಏವಂ ಸರ್ವೇಷು ಪಾತ್ರೇಷು ಶಂಖೇ ಚಾಪಿ ವಿಶೇಷತಃ ।
ಸಕುಂಕುಮಂ ಚ ಕರ್ಪೂರಂ ಪಾಟಲೋತ್ಪಲಕಾನಿ ಚ ॥೩೨॥

ಅಭಿಷೇಚನಿಕೇ ಕುಂಭೇ ದಾಪಯೇಚ್ಛೋಧಿತೇ ಜಲೇ ।
ಕುಶಾಗ್ರಾಣ್ಯಕ್ಷತಾಂಶ್ಚೈವ ಯವವ್ರೀಹಿತಿಲಾನಿ ಚ ॥೩೩॥

ಆಜ್ಯಸಿದ್ಧಾರ್ಥಪುಷ್ಪಾಢ್ಯಃ ಅರ್ಘ್ಯೋಽಷ್ಟಾಂಗಃ ಪ್ರಕೀರ್ತಿತಃ ।
ಗಂಧಪುಷ್ಪಾಕ್ಷತಾದಿನಿ ನವಾನ್ಯೇವ ಪ್ರಸಾಧಯೇತ್ ॥೩೪॥

ಸರ್ವಪಾತ್ರೇಷು ಭಸಿತಂ ದಾಪಯೇತ್ಪ್ರಣವೇನ ತು ।
ಪಂಚಗವ್ಯಮಯಂ ಪಾತ್ರಂ ಶೋಧಯೇತ್ಪಂಚಮಂತ್ರಕೈಃ ॥೩೫॥

ಸದ್ಯಾದಿಭಿಃ ಸಮಭ್ಯರ್ಚ್ಯ ಕುಂಭಂ ಪೂಜ್ಯ ಸಶಂಖಕಂ ।
ಮಧುಪರ್ಕಕಪಾತ್ರಂ ಚ ಸೇಚಯೇದ್ದಧಿಕ್ಷೌದ್ರತಃ ॥೩೬॥

ಪಿಧಾನಮಥ ಚೋದ್ಧೃತ್ಯ ದೇಯಂ ಲಿಂಗೇ ವಿಶೇಷತಃ ।
ಆಶ್ವಯುಜ್ಯಾಂ ಶಿವೇ ಲಿಂಗಂ ಮಾಣಿಕ್ಯಂ ಹೇಮಸಂಭವಂ ॥೩೭॥

---

ಪುಡಿಮಾಡಿ, ಆಚಮನೀಯಪಾತ್ರೆಯಲ್ಲಿ ಶೋಧಿಸಿ ಹಾಕಬೇಕು. ಹೀಗೆಯೇ ಎಲ್ಲಾ ಕುಂಭಗಳಲ್ಲಿಯೂ ವಿಶೇಷವಾಗಿ ಶಂಖದಲ್ಲಿಯೂ ಕುಂಕುಮ, ಕರ್ಪೂರ, ಪಾದರಿ, ನೈದಿಲೆ ಇವುಗಳನ್ನು ಹಾಕಬೇಕು. ಶಿವೆ! ಅಭಿಷೇಕಮಾಡುವ ಕಲಶದ ನೀರನ್ನು ಶೋಧಿಸಿ, ಅದರಲ್ಲಿಯೂ ಈ ಪದಾರ್ಥಗಳನ್ನು ಹಾಕಬೇಕು. ॥೩೧-೩೨॥

ದರ್ಭೆಯ ಅಗ್ರಗಳು, ಅಕ್ಷತೆ, ಯವ, ಬತ್ತ, ಎಳ್ಳು, ತುಪ್ಪ, ಬಿಳಿಸಾಸುವೆ, ಮತ್ತು ಪುಷ್ಪಗಳಿಂದ ಯುಕ್ತವಾದ ಅರ್ಘ್ಯವು ಅಷ್ಟಾಂಗಾರ್ಘ್ಯವೆನಿಸುವುದು. ಗಂಧ, ಹೂ ಮತ್ತು ಅಕ್ಷತೆಗಳನ್ನು ಹೊಸದನ್ನೇ ಪೂಜಿಸಬೇಕು. ಎಲ್ಲಾ ಪಾತ್ರೆಗಳಲ್ಲಿಯೂ ಓಂಕಾರಮಂತ್ರದಿಂದ ಭಸ್ಮವನ್ನು ಹಾಕಬೇಕು. ಅನಂತರ ಪಂಚಗವ್ಯದ ಪಾತ್ರೆಯನ್ನು ಸದ್ಯೋಜಾತಾದಿ ಐದು ಮಂತ್ರಗಳಿಂದ ಶೋಧಿಸಬೇಕು. ಕಲಶ ಮತ್ತು ಶಂಖಗಳನ್ನು ಪೂಜಿಸಿ ಮಧುಪರ್ಕದ ಪಾತ್ರೆಯನ್ನು ಮೊಸರು, ಜೇನು ಇವುಗಳಿಂದ ಲೇಪಿಸಬೇಕು. ॥೩೩-೩೪-೩೫-೩೬॥

ಮುಚ್ಚಿದ್ದನ್ನು ತೆಗೆದು ಅನಂತರ ಶಿವಲಿಂಗಕ್ಕೆ ಅದನ್ನು ವಿಶೇಷವಾಗಿ ಸುವರ್ಪಿಸಬೇಕು. ಆಶ್ವಯುಜಮಾಸದಲ್ಲಿ ಮಾಣಿಕ್ಯ ಅಥವಾ ಚಿನ್ನದ ಲಿಂಗವನ್ನು

ತತ್ಪೀಠೇ ಸ್ಥಾಪ್ಯ ವಿಧಿವತ್ಪೀಠಪೂಜಾಕ್ರಮೇಣ ತು ।
ಪಾದ್ಯಮಾಚಮನೀಯಾಂಶ್ಚ ದತ್ವಾ ಚೈವ ಯಥಾಕ್ರಮಂ ॥೩೮॥

ಮಧುಪರ್ಕಂ ಪಂಚಗವ್ಯಂ ಗಾಯತ್ರ್ಯಾ ಪ್ರತಿಪಾದಯೇತ್ ।
ಕ್ಷೀರೇಣ ದಧ್ನಾ ಚಾಜ್ಯೇನ ಮಧುನಾ ಸಿತಯಾ ತಥಾ ॥೩೯॥

ನಾರಿಕೇಲಾಂಬುಭಿಶ್ಚೈವ ಕದಲೀಪನಸೇಕ್ಷುಜೈಃ ।
ಜಂಬೀರನೀರೈರ್ಗಂಧೈಶ್ಚ ಹೇಮರತ್ನಜಲೈಸ್ತಥಾ ॥೪೦॥

ಸದ್ಯೋಜಾತಾದಿಮಂತ್ರೈಶ್ಚ ಸಹ ಗಾಯತ್ರಿತೋಽಪಿ ವಾ ।
ದದ್ಯಾಲ್ಲಿಂಗೇ ತತೋ ಧೂಪಂ ದೀಪಂ ನೈವೇದ್ಯಮುತ್ತಮಂ ॥೪೧॥

ಋಗ್ರುದ್ರೈರ್ವಾರುಣೈರ್ಮಂತ್ರೈಸ್ತಥಾವ್ಯೋರಾಜಸಾಮಭಿಃ ।
ಸ್ನಾಪಯೇದ್ರುದ್ರಸಂಖ್ಯಾತಸ್ತ್ರಿರಾವೃತ್ಯಾಪಿ ವಾ ದ್ವಿಜೈಃ ॥೪೨॥

ತೂರ್ಯಘೋಷೈರ್ವೇದಘೋಷೈರ್ರುದ್ರಂ ಸ್ನಾಪ್ಯ ಜಲಾದಿಭಿಃ ।
ಭವಾಯೇತ್ಯಷ್ಟನಾಮ್ನೈವ ತರ್ಪಯೇಚ್ಚ ಸಕೂರ್ಚಕಂ ॥೪೩॥

---

ವಿಧಿಪ್ರಕಾರ ಪೀಠದಲ್ಲಿ ಸ್ಥಾಪಿಸಿ, ಪೀಠಪೂಜಾಕ್ರಮದಿಂದ ಅರ್ಚಿಸಿ, ಪಾದ್ಯ, ಆಚಮನೀಯಗಳನ್ನು ಕ್ರಮವಾಗಿ ಕೊಟ್ಟು ಮಧುಪರ್ಕ, ಪಂಚಗವ್ಯಗಳನ್ನು ಗಾಯತ್ರೀಮಂತ್ರದಿಂದ ಸಮರ್ಪಿಸಬೇಕು. ॥೩೭-೩೮॥

ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ, ಎಳನೀರು, ಬಾಳೆ, ಹಲಸು ಈ ಹಣ್ಣುಗಳು, ಕಬ್ಬಿನ ಹಾಲು, ನಿಂಬೇರಸ, ಗಂಧ, ಸುವರ್ಣೋದಕ, ರತ್ನೋದಕಗಳನ್ನು ಸದ್ಯೋಜಾತಾದಿಮಂತ್ರಗಳಿಂದಲೂ, ಗಾಯತ್ರೀಮಂತ್ರದಿಂದಲೂ ಅಭಿಷೇಕಮಾಡಿ, ಶಿವಲಿಂಗಕ್ಕೆ ಧೂಪದೀಪಗಳನ್ನಿಟ್ಟು ಉತ್ತಮವಾದ ನೈವೇದ್ಯವನ್ನು ಸಮರ್ಪಿಸಬೇಕು. ॥೩೯-೪೦-೪೧॥

ರುದ್ರಸೂಕ್ತದಿಂದಲೂ ರುದ್ರದ ಋಕ್ಕುಗಳಿಂದಲೂ, ವರುಣಮಂತ್ರ ಮತ್ತು 'ಆವ್ಯೋರಾಜಾ' ಎಂಬ ಸಾಮಮಂತ್ರಗಳಿಂದಲೂ ರುದ್ರಸಂಖ್ಯಾನುಗುಣವಾಗಿ ಹನ್ನೊಂದುಬಾರಿ ಅಭಿಷೇಕಮಾಡಬೇಕು. ದೇವಿ, ಕಡೆಯಪಕ್ಷ ಮೂರುಬಾರಿಯಾದರೂ ಬ್ರಾಹ್ಮಣರು ರುದ್ರಾಭಿಷೇಕ ಮಾಡಬೇಕು. ವಾದ್ಯಘೋಷ ಮತ್ತು

ವಾಸಸಾ ಪರಿಮೃಜ್ಯೇಶಂ ಪೀಠೇ ಸ್ಥಾಪ್ಯ ಮಹೇಶ್ವರಂ ।
ಉಪವೀತಂ ಚ ಗಂಧಂ ಚ ದದ್ಯಾನ್ಮುದ್ಗಾಕ್ಷತಂ ನವಂ ॥೪೪॥

ವಸ್ತ್ರಾಭರಣಮುಖ್ಯಾನಿ ಪುಷ್ಪಾಣಿ ಸುರಭೀಣಿ ಚ ।
ಸುಶ್ವೇತಪುಂಡರೀಕಾಣಿ ಬಿಲ್ವಪತ್ರಾಣಿ ಪೂಜಯೇತ್ ॥೪೫॥

ಸೌಗಂಧಿಕಾನಿ ದೇಯಾನಿ ಭವಾಯ ನಿಧನೇತ್ಯಪಿ ।
ದೇವದಾರುಮಯಂ ಧೂಪಂ ದದ್ಯಾತ್ಸಘೃತಮೀಶ್ವರಿ ॥೪೬॥

ದೀಪಾವಲೀಂ ತತೋ ದದ್ಯಾದ್ಗೋಘೃತಾಕ್ತಾಂ ಸುಶೋಭನಾಂ ।
ಗೋಧೂಮಾನ್ನಂ ಪಾಯಸಂ ಚ ಸಾಪೂಪಂ ವಿನಿವೇದಯೇತ್ ॥೪೭॥

ಸಶರ್ಕರಂ ಘೃತಾಕ್ತಂ ಚ ನಾಮ್ನೈರೇತ್ಯೈಃ(?)ಪ್ರಪೂಜಯೇತ್ ।
ನೀರಾಜಯೇತ್ತತೋ ಲಿಂಗಂ ಸುಚಂದ್ರವರಖಂಡಕೈಃ ॥೪೮॥

---

ವೇದಘೋಷಗಳೊಡನೆ ರುದ್ರನಿಗೆ ಜಲಾದಿಗಳಿಂದ ಅಭಿಷೇಕಮಾಡಿದ ಅನಂತರ 'ಭವಂತರ್ಪಯಾಮಿ' ಎಂಬ ಶಿವನ ಎಂಟು ನಾಮೋಚ್ಚಾರಣಪೂರ್ವಕವಾಗಿ ಕೂರ್ಚದೊಡನೆ ಶಿವನಿಗೆ ತರ್ಪಣಕೊಡಬೇಕು. ॥೪೨-೪೩॥

ಅನಂತರ ಬಟ್ಟೆಯಿಂದ ಶಿವಲಿಂಗವನ್ನು ಒರೆಸಿ, ಮಹೇಶನನ್ನು ಪೀಠದಲ್ಲಿರಿಸಿ, ಉಪವೀತ, ಗಂಧ, ಹೆಸರಿನ ಅಕ್ಷತೆ, ಬಟ್ಟೆ, ಆಭರಣ ಮುಂತಾದವುಗಳನ್ನೂ ಸುವಾಸನೆಯ ಹೂಗಳನ್ನೂ, ಬಿಳಿಯ ಅರಳಿದ ತಾವರೆಹೂಗಳು ಮತ್ತು ಬಿಲ್ವಪತ್ರೆಗಳನ್ನೂ ಶಿವನಿಗೆ ಸಮರ್ಪಿಸಬೇಕು. ಆಮೇಲೆ ಶಿವನಿಗೆ 'ನಿಧನಪತಯೇ ನಮಃ' ಎಂಬ ಮಂತ್ರಪುರಸ್ಸರವಾಗಿ ಸೌಗಂಧಿಕಾಪುಷ್ಪಗಳನ್ನು ಪೂಜಿಸಬೇಕು. ಎಲೌ ಪಾರ್ವತಿಯೆ, ತುಪ್ಪದಿಂದ ಬೆರೆದ ದೇವದಾರುಚಕ್ಕೆಯ ಧೂಪವನ್ನು ಶಿವನಿಗೆ ಹಾಕಬೇಕು. ॥೪೪-೪೫-೪೬॥

ಅನಂತರ ತುಪ್ಪದ ಶುಭಕರವಾದ ದೀಪಮಾಲೆಗಳನ್ನು ಹೊತ್ತಿಸಬೇಕು. ಆಮೇಲೆ ಗೋದುಮೆಯ ಅನ್ನ, ಪಾಯಸ, ಅಪೂಪಗಳನ್ನು ಸಕ್ಕರೆ ತುಪ್ಪಗಳೊಡನೆ ಶಿವನಿಗೆ ನಿವೇದನಮಾಡಬೇಕು. ಆ ಮೇಲೆ ಮುಂದೆ ಹೇಳುವ ನಾಮಗಳಿಂದ ಶಿವಲಿಂಗಕ್ಕೆ ಪೂಜೆಮಾಡಿದನಂತರ ದಿವ್ಯವಾದ ಕರ್ಪೂರದ ಗೆಡ್ಡೆಗಳಿಂದ ಆರತಿ

ಛತ್ರಂ ಚ ಚಾಮರಂ ದೇವಿ ವ್ಯಜನಾದರ್ಶಕಂ ತತಃ ।
ಪ್ರದಕ್ಷಿಣಪ್ರಣಾಮಾದಿ ಕಾರಯೇತ್ಸ್ತವಮೀಶ್ವರಿ ॥೪೯॥

ನಾಮಾನಿ ತೇ ಪ್ರವಕ್ಷ್ಯಾಮಿ ದತ್ವಾ ತಾಂಬೂಲಮುತ್ತಮಂ ।
ಪೂಜಯೇದ್ಬಿಲ್ವಕುಸುಮೈಃ ಸ್ತವಮೇನಮುದೀರಯೇತ್ ॥೫೦॥

ಓಂ ತ್ರ್ಯಂಬಕಾಯಾಂಬಿಕಾಭರ್ತ್ರೇ ಶಂಬರಾಂಕಧರಾಯ ಚ ।
ನಮೋ ವನ್ಯಾಯ ಫೇನ್ಯಾಯ ಮಾನ್ಯಾಯ ಚ ನಮೋ ನಮಃ ॥೫೧॥

ನಮೋ ಭವಾಯ ಭವ್ಯಾಯ ಭಾವನಾಯೋದ್ಭವಾಯ ಚ ।
ಅನಂತಬಲವೀರ್ಯಾಯ ಭೂತಾನಾಂ ಪತಯೇ ನಮಃ ॥೫೨॥

ಸಂಹರ್ತ್ರೇ ಚಾಥ ಶರ್ವಾಯ ಅವ್ಯಯಾಯ ವ್ಯಯಾಯ ಚ ।
ಗಂಗಾಸಲಿಲಧಾರಾಯ ಆಧಾರಾಯ ಗುಣಾತ್ಮನೇ ॥೫೩॥

ಕಂದರ್ಪದರ್ಪಘಾತಾಯ ಮಧ್ಯಾಯ ಚ ಸುಶಿಲ್ಪಿನೇ ।
ವಾತಚಕ್ರಪ್ರವೃತ್ತಾಯ ಕ್ರತೂನಾಂ ಪ್ರಭವೇ ನಮಃ ॥೫೪॥

ಕ್ರತುಪೂಜ್ಯಾಯ ಇಜ್ಯಾಯ ಸಜ್ಜಮಾನಾಯ ತೇ ನಮಃ ।
ಶಂಕರಾಯ ವೃಷಾಂಕಾಯ ಗಣಾನಾಂ ಪತಯೇ ನಮಃ ॥೫೫॥

ದಂಡಹಸ್ತಾಯ ಕಾಲಾಯ ಪಾಶಹಸ್ತಾಯ ತೇ ನಮಃ ।
ಸಹಮಾನಾಯ ಶಾಂತಾಯ ಶಕ್ತಪ್ರಹರಣಾಯ ಚ ॥೫೬॥

---

ಯನ್ನು ಬೆಳಗಬೇಕು. ದೇವಿ, ಆ ಮೇಲೆ ಛತ್ರಚಾಮರಗಳು, ಬೀಸಣಿಗೆ, ಕನ್ನಡಿಗಳನ್ನೂ ಸಮರ್ಪಿಸಿ, ಆಮೇಲೆ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಬೇಕು. ಕೊನೆಯಲ್ಲಿ ಈ ರೀತಿ ಸ್ತೋತ್ರಮಾಡಬೇಕು. ಪೂಜಿಸುವ ಶಿವನಾಮಗಳನ್ನು ನಿನಗೆ ಹೇಳುವೆನು ಕೇಳು ; ಉತ್ತಮವಾದ ತಾಂಬೂಲವನ್ನು ಸಮರ್ಪಿಸಿ, ಬಿಲ್ವ ಮತ್ತು ಹೂಗಳಿಂದ ಪೂಜಿಸಿದ ತರುವಾಯ ಈ ಸ್ತೋತ್ರವನ್ನು ಪಠಿಸಬೇಕು. ॥೪೭-೪೮-೪೯-೫೦॥

ತ್ರಯೀಮಯಾಯ ಸತ್ರಾಯ ಸುಹೋತ್ರಾಯ ಕಪರ್ದಿನೇ ।
ವೇದತಂತ್ರಪ್ರಧಾನಾಯ ಶತಜಿಹ್ವಾಯ ವೇಧಸೇ ॥೫೭॥

ಗಾನಪ್ರಿಯಾಯ ತುಷ್ಟಾಯ ವೈದ್ಯುತಾಯ ಪ್ರಭಾವತೇ ।
ಧರಾಧರಾಯ ಪಾರಾಯ ಸುಪಾರಾಯ ರಣಾಯ ಚ ॥೫೮॥

ಜಂಜಪೂಕಾಯ ಧರ್ಮಾಯ ದಂಷ್ಟ್ರಿಣೇ ಘೋಣಿನೇ ನಮಃ ।
ವಿಚಾರಾಯ ಹರಾಯಾಥ ಘೋರಾಯ ಪಶುಪಾಯ ಚ ॥೫೯॥

---

೧ ಓಂ ತ್ರ್ಯಂಬಕಾಯ ನಮಃ
೨ ಓಂ ಅಂಬಿಕಾಭರ್ತ್ರೇ ನಮಃ
೩ ಓಂ ಶಂಬರಾಂಕಧರಾಯ ನಮಃ
೪ ಓಂ ವನ್ಯಾಯ ನಮಃ
೫ ಓಂ ಫೇನ್ಯಾಯ ನಮಃ
೬ ಓಂ ಮಾನ್ಯಾಯ ನಮಃ
೭ ಓಂ ಭವಾಯ ನಮಃ
೮ ಓಂ ಭವ್ಯಾಯ ನಮಃ
೯ ಓಂ ಭಾವನಾಯ ನಮಃ
೧೦ ಓಂ ಉದ್ಭವಾಯ ನಮಃ
೧೧ ಓಂ ಅನಂತಬಲವೀರ್ಯಾಯ ನಮಃ
೧೨ ಓಂ ಭೂತಾನಾಂ ಪತಯೇ ನಮಃ
೧೩ ಓಂ ಸಂಹರ್ತ್ರೇ ನಮಃ
೧೪ ಓಂ ಶರ್ವಾಯ ನಮಃ
೧೫ ಓಂ ಅವ್ಯಯಾಯ ನಮಃ
೧೬ ಓಂ ವ್ಯಯಾಯ ನಮಃ
೧೭ ಓಂ ಗಂಗಾಸಲಿಲಧಾರಾಯ ನಮಃ
೧೮ ಓಂ ಆಧಾರಾಯ ನಮಃ
೧೯ ಓಂ ಗುಣಾತ್ಮನೇ ನಮಃ
೨೦ ಓಂ ಕಂದರ್ಪದರ್ಪಘಾತಾಯ ನಮಃ
೨೧ ಓಂ ಮಧ್ಯಾಯ ನಮಃ
೨೨ ಓಂ ಸುಶಿಲ್ಪಿನೇ ನಮಃ
೨೩ ಓಂ ವಾತಚಕ್ರಪ್ರವೃತ್ತಾಯ ನಮಃ
೨೪ ಓಂ ಕ್ರತೂನಾಂಪ್ರಭವೇ ನಮಃ
೨೫ ಓಂ ಕ್ರತುಪೂಜ್ಯಾಯ ನಮಃ
೨೬ ಓಂ ಇಜ್ಯಾಯ ನಮಃ
೨೭ ಓಂ ಸಜ್ಜಮಾನಾಯ ನಮಃ
೨೮ ಓಂ ಶಂಕರಾಯ ನಮಃ
೨೯ ಓಂ ವೃಷಾಂಕಾಯ ನಮಃ
೩೦ ಓಂ ಗಣಾನಾಂಪತಯೇ ನಮಃ
೩೧ ಓಂ ದಂಡಹಸ್ತಾಯ ನಮಃ
೩೨ ಓಂ ಕಾಲಾಯ ನಮಃ
೩೩ ಓಂ ಪಾಶಹಸ್ತಾಯ ನಮಃ
೩೪ ಓಂ ಸಹಮಾನಾಯ ನಮಃ
೩೫ ಓಂ ಶಾಂತಾಯ ನಮಃ
೩೬ ಓಂ ಶಕ್ರಪ್ರಹರಣಾಯ ನಮಃ
೩೭ ಓಂ ತ್ರಯೀಮಯಾಯ ನಮಃ
೩೮ ಓಂ ಸತ್ರಾಯ ನಮಃ
೩೯ ಓಂ ಸುಹೋತ್ರಾಯ ನಮಃ
೪೦ ಓಂ ಕಪರ್ದಿನೇ ನಮಃ

ಉರಗಾಭರಣಾಯಾಥ ದೂರಗಾಯಾಮರಾಯ ಚ ।
ಕರಂಧಮಾಯ ಧೌಮ್ಯಾಯ ಶರ್ಮವರ್ಮಕರಾಯ ಚ ॥೬೦॥

ಗಹ್ವರೇಷ್ಠಾಯ ಶಿಷ್ಟಾಯ ವಿಶಿಷ್ಟಾಯಾಕ್ಷಮಾಯ ಚ ।
ಉರುಗವ್ಯಾಯ ಭಾವ್ಯಾಯ ಉರ್ವರ್ಯಾಯ ಗರಾಯ ಚ ॥೬೧॥

ಸ್ತವಾಯ ಸ್ತವಮಾನಾಯ ಸ್ತವಪ್ರೀತಾಯ ತೇ ನಮಃ ।
ಜ್ಯೋತಿಷೇ ಶಾಸ್ತ್ರಪಾಲಾಯ ವರ್ಣಾಶ್ರಮರತಾಯ ಚ ॥೬೨॥

---

೪೧ ಓಂ ವೇದತಂತ್ರಪ್ರಧಾನಾಯ ನಮಃ
೪೨ ಓಂ ಶತಜಿಹ್ವಾಯ ನಮಃ
೪೩ ಓಂ ವೇಧಸೇ ನಮಃ
೪೪ ಓಂ ಗಾನಪ್ರಿಯಾಯ ನಮಃ
೪೫ ಓಂ ತುಷ್ಟಾಯ ನಮಃ
೪೬ ಓಂ ವೈದ್ಯುತಾಯ ನಮಃ
೪೭ ಓಂ ಪ್ರಭಾವತೇ ನಮಃ
೪೮ ಓಂ ಧರಾಧರಾಯ ನಮಃ
೪೯ ಓಂ ಪಾರಾಯ ನಮಃ
೫೦ ಓಂ ಸುಪಾರಾಯ ನಮಃ
೫೧ ಓಂ ರಣಾಯ ನಮಃ
೫೨ ಓಂ ಜಂಜಪೂಕಾಯ ನಮಃ
೫೩ ಓಂ ಧರ್ಮಾಯ ನಮಃ
೫೪ ಓಂ ದಂಷ್ಟ್ರಿಣೇ ನಮಃ
೫೫ ಓಂ ಘೋಣಿನೇ ನಮಃ
೫೬ ಓಂ ವಿಚಾರಾಯ ನಮಃ
೫೭ ಓಂ ಹರಾಯ ನಮಃ
೫೮ ಓಂ ಘೋರಾಯ ನಮಃ
೫೯ ಓಂ ಪಶುಪಾಯ ನಮಃ
೬೦ ಓಂ ಉರಗಾಭರಣಾಯ ನಮಃ
೬೧ ಓಂ ದೂರದಾಯ ನಮಃ
೬೨ ಓಂ ಅಮರಾಯ ನಮಃ
೬೩ ಓಂ ಕರಂಧಮಾಯ ನಮಃ
೬೪ ಓಂ ಧೌಮ್ಯಾಯ ನಮಃ
೬೫ ಓಂ ಶರ್ಮವರ್ಮಕರಾಯ ನಮಃ
೬೬ ಓಂ ಗಹ್ವರೇಷ್ಠಾಯ ನಮಃ
೬೭ ಓಂ ಶಿಷ್ಟಾಯ ನಮಃ
೬೮ ಓಂ ವಿಶಿಷ್ಟಾಯ ನಮಃ
೬೯ ಓಂ ಅಕ್ಷಯಾಯ ನಮಃ
೭೦ ಓಂ ಉರುಗವ್ಯಾಯ ನಮಃ
೭೧ ಓಂ ಭಾವ್ಯಾಯ ನಮಃ
೭೨ ಓಂ ಉರ್ವರ್ಯಾಯ ನಮಃ
೭೩ ಓಂ ಗರಾಯ ನಮಃ
೭೪ ಓಂ ಸ್ತವಾಯ ನಮಃ
೭೫ ಓಂ ಸ್ತವಮಾನಾಯ ನಮಃ
೭೬ ಓಂ ಸ್ತವಪ್ರೀತಾಯ ನಮಃ
೭೭ ಓಂ ಜ್ಯೋತಿಷೇ ನಮಃ
೭೮ ಓಂ ಶಾಸ್ತ್ರಪಾಲಾಯ ನಮಃ
೭೯ ಓಂ ವರ್ಣಾಶ್ರಮರತಾಯ ನಮಃ
೮೦ ಓಂ ವರ್ಣಿನೇ ನಮಃ

ವರ್ಣಿನೇ ಗೃಹಸಂಸ್ಥಾಯ ವನ್ಯಸಂನ್ಯಾಸಿನೇ ನಮಃ ।
ಭೇದದೂರಾಯ ಶೂರಾಯ ಕ್ಷಯದ್ವೀರಾಯ ತೇ ನಮಃ ॥೬೩॥

ಭರ್ಗಾಯ ಭಜಮಾನಾಯ ಯಜಮಾನಾತ್ಮನೇ ನಮಃ ।
ಸೋಮಾಯ ಸೋಮಚೂಡಾಯ ಸೋಮಾಸ್ಕಂದಾಯ ತೇ ನಮಃ ॥೬೪॥

ಸ್ಥಿರಸ್ಸ್ಥಾಣುಃ ಪ್ರಭುರ್ಭಾನುಃ ಪ್ರವರೋವರದೋವರಃ ।
ಕಾಮಿನೇ ನೀಲಕಂಠಾಯ ನಿರ್ಮಲಾಯ ಕಪರ್ದಿನೇ ॥೬೫॥

ಭೂತಯೇ ಸ್ವಸ್ತಯೇ ಚೈವ ಪರಸ್ಮಾತ್ಪ್ರಭವೇ ನಮಃ ।
ಶತಾಷ್ಟನಾಮ್ನಾಮೇತೇನ ಪೂಜಯೇದಾಶ್ವಿನೇ ಶಿವೇ ॥೬೬॥

ಜಯ ಜಯ ವಿಜಿತಾದಿಸಂಘಭೂಮ್ನೇ
ಶ್ರುತಿಸೀಮ್ನೇಽಂತಕಹಾರಿಪಾದಧಾಮ್ನೇ ।

---

೮೧ ಓಂ ಗೃಹಸಂಸ್ಥಾಯ ನಮಃ
೮೨ ಓಂ ವನ್ಯಸಂನ್ಯಾಸಿನೇ ನಮಃ
೮೩ ಓಂ ಭೇದದೂರಾಯ ನಮಃ
೮೪ ಓಂ ಶೂರಾಯ ನಮಃ
೮೫ ಓಂ ಕ್ಷಯದ್ವೀರಾಯ ನಮಃ
೮೬ ಓಂ ಭರ್ಗಾಯ ನಮಃ
೮೭ ಓಂ ಭಜಮಾನಾಯ ನಮಃ
೮೮ ಓಂ ಯಜಮಾನಾತ್ಮನೇ ನಮಃ
೮೯ ಓಂ ಸೋಮಾಯ ನಮಃ
೯೦ ಓಂ ಸೋಮಚೂಡಾಯ ನಮಃ
೯೧ ಓಂ ಸೋಮಾಸ್ಕಂಧಾಯ ನಮಃ
೯೨ ಓಂ ಭೂತಯೇ ನಮಃ
೯೩ ಓಂ ಸ್ವಸ್ತಯೇ ನಮಃ
೯೪ ಓಂ ಪರಸ್ಮಾತ್ಪ್ರಭವೇ ನಮಃ
೯೫ ಓಂ ಸ್ಥಿರಾಯ ನಮಃ
೯೬ ಓಂ ಸ್ಥಾಣವೇ ನಮಃ
೯೭ ಓಂ ಪ್ರಭವೇ ನಮಃ
೯೮ ಓಂ ಭಾನವೇ ನಮಃ
೯೯ ಓಂ ಪ್ರವರಾಯ ನಮಃ
೧೦೦ ಓಂ ವರದಾಯ ನಮಃ
೧೦೧ ಓಂ ವರಾಯ ನಮಃ
೧೦೨ ಓಂ ಕಾಮಿನೇ ನಮಃ
೧೦೩ ಓಂ ನೀಲಕಂಠಾಯ ನಮಃ
೧೦೪ ಓಂ ನಿರ್ಮಲಾಯ ನಮಃ
೧೦೫ ಓಂ ಕಪರ್ದಿನೇ ನಮಃ
೧೦೬ ಓಂ ಭರ್ತ್ರೇ ನಮಃ
೧೦೭ ಓಂ ಶಾಂತಾಯ ನಮಃ
೧೦೮ ಓಂ ಪರಮೇಶ್ವರಾಯ ನಮಃ

ಜಯ ಜಯ ಕರವೀರಪುಷ್ಪಮಾಲಾ-
ಕಲಿತಾಕಂಧರ ದಿವ್ಯದೇಹಜನ್ಮನ್ ॥೬೭॥

ಜಯ ಜಯ ತುರಗಾರಿವಾಹನಾಶ
ಜಯ ಜಯ ಉರಗಾದಿವಾಹಪೂಜ್ಯ ।
ಜಯ ಜಯ ತ್ರಿಪುರಾರಯೇ ಪರಾಯ
ಧೃತಸೋಮಾಯ ವರಾಯ ತೇ ನಮೋಽಸ್ತು ॥೬೮॥

ಹರಹರ ಪುರಹನ್ಪಿನಾಕಪಾಣೇ
ಗರಧರ ಶಂಕರ ಚಾರುದೇಹಮೂರ್ತೇ ।
ಪುರಹರ ಭವಹರ ಶಿವತರ ಸುಖಕರ
ಹರಗಂಗಾಧರ ಸಾಂಬ ರುದ್ರ ಪಾಹಿ ॥೬೯॥

---

ಎಲೌ ಪಾರ್ವತಿಯೇ, ಈರೀತಿ ನೂರೆಂಟುನಾಮಗಳಿಂದ ಆಶ್ವಯುಜಮಾಸದಲ್ಲಿ ಪರಶಿವಲಿಂಗವನ್ನು ಪೂಜಿಸಬೇಕು. ಅನಂತರ ಸಿದ್ಧಿಕಾಮನು ಈ ಸ್ತೋತ್ರವನ್ನು ಪಠಿಸಬೇಕು. ॥೫೧-೫೨-೫೩-೫೪-೫೫-೫೬-೫೭-೫೮-೫೯-೬೦-೬೧-೬೨-೬೩-೬೪-೬೫-೬೬॥

ಲೋಕದ ಸಕಲ ಶತ್ರುಸಮೂಹಗಳನ್ನು ಜಯಿಸಿ ಹೆಸರುಪಡೆದಿರುವವನೇ! ವೇದಗಳಿಗೆ ಎಲ್ಲೆಯಂತಿರುವವನೆ! ಯಮನನ್ನು ನಿಗ್ರಹಿಸಿದ ಪಾದಕಮಲವುಳ್ಳವನೇ, ಕಣಗಿಲಹೂಮಾಲೆಯನ್ನಲಂಕರಿಸಿರುವ ಕೊರಳುಳ್ಳವನೇ! ದಿವ್ಯದೇಹವನ್ನು ಧರಿಸಿರುವವನೆ! ನಿನಗೆ ಜಯವಾಗಲಿ. ॥೬೭॥

ಮಹಿಷವಾಹನನೆನಿಸಿದ ಯಮನನ್ನು ನಿಗ್ರಹಿಸಿದವನೇ, ನಿನಗೆ ಜಯವಾಗಲಿ ಗರುಡವಾಹನನಾದ ವಿಷ್ಣುವಿನಿಂದ ಪೂಜಿಸಲ್ಪಡುವವನೆ! ನಿನಗೆ ಜಯವಾಗಲಿ; ತ್ರಿಪುರಾಂತಕನಾದ ಶಿವನಿಗೆ ವಿಜಯವಾಗಲಿ; ಚಂದ್ರನನ್ನು ಶಿರದಲ್ಲಿಧರಿಸಿರುವ ಶ್ರೇಷ್ಠನಾದ ನಿನಗೆ ನಮಸ್ಕಾರಮಾಡುವೆನು. ॥೬೮॥

ತ್ರಿಪುರರನ್ನು ಕೊಂದವನೂ, ಪಿನಾಕವೆಂಬ ಬಿಲ್ಲನ್ನು ಪಾಣಿಯಲ್ಲಿ ಹಿಡಿದಿರುವವನೂ ಆದ ಶಿವನೆ! ವಿಷಕಂಠನೆ! ಸುಂದರವಾದ ದೇಹವುಳ್ಳವನೆ! ತ್ರಿಪುರಾಂತಕನೆ ಸಾಂಸಾರಿಕವಾದ ಬಂಧನವನ್ನು ಕಳೆಯುವವನೆ! ಅತಿಸುಖಸ್ವರೂಪನೆ! ಭಕ್ತರಿಗೆ

ಶಶ್ವತ್ಪ್ರಸೀದ ಪರಮೇಶ್ವರ ಪಂಚವಕ್ತ್ರ
ರುದ್ರ ತ್ರಿನೇತ್ರ ಶಶಿಖಂಡಕಲಾಲಲಾಮ ।
ವಿಶ್ವಾಧಿಕಾಂಧಕ ಹರಪ್ರಮಥೇಶ ಶಂಭೋ
ಪಾಹಿ ಪ್ರಪನ್ನಜಗತಾಂ ಸುನತಾಂ ಮಹೇಶ ॥೭೦॥

ಅಸಮಕುಸುಮಬಾಣತಾತ ಬಾಣಪಾಣೇ
ಹರ ಭೀಮಾಮರಪೂಜ್ಯಪಾದಪದ್ಮ ।
ಶ್ರುತಿವಾಜಿವರಾಂಗಹೇಶಗೀತಕೀರ್ತೆ
ಪ್ರಸಭಂ ಶಂಕರ ಪಾಹಿ ಮಾಂ ದಯಾಕ್ಷ್ಣಾ ॥೭೧॥

ಏವಂ ಸ್ತುವನ್ಪ್ರಯುಂಜೀತ ತಸ್ಮಿನ್ಮಾಸಿ ಮಹೇಶ್ವರಿ ।
ಬ್ರಾಹ್ಮಣಂ ದಾಪಯೇದ್ಗಾರಂ ಸವತ್ಸಂ ಗೋದ್ವಯಂ ಶಿವೇ ॥೭೨॥

---

ಸುಖವನ್ನುಂಟುಮಾಡುವವನೆ! ಗಂಗೆಯನ್ನು ಮುಡಿಯಲ್ಲಿ ಧರಿಸಿರುವವನೆ! ಅಂಬಿಕಾರಮಣನೇ! ಪಾಪನಾಶಕನಾದ ಸ್ವಾಮಿಯೆ! ನನ್ನನ್ನು ಕಾಪಾಡು. ॥೬೯॥

ಐದುಮುಖಗಳಿಂದ ಶೋಭಿಸುವ ಪರಮೇಶ್ವರನೆ! ಬಾರಿಬಾರಿಗೂ ಪ್ರಸನ್ನನಾಗು. ಮುಕ್ಕಣ್ಣನೂ, ಚಂದ್ರಖಂಡವನ್ನು ಮುಡಿಯಲ್ಲಿ ಧರಿಸಿರುವವನೂ ಆದ ರುದ್ರದೇವನೆ, ಜಗಚ್ಛ್ರೇಷ್ಠನೆ, ಅಂಧಕಾಸುರಸೂದನನೆ, ಪ್ರಮಥಗಣಗಳಿಗೊಡೆಯನೆ, ಶಂಭುವೆ, ಎಲೈ ಮಹೇಶ್ವರನೇ, ನಿನಗೆ ವಿನಯದಿಂದ ತಲೆಬಾಗಿ, ಶರಣಾಗತರಾಗಿರುವ ಭಕ್ತರನ್ನು ಕಾಪಾಡು. ॥೭೦॥

ತ್ರಿಪುರದಹನ ಕಾಲದಲ್ಲಿ ವಿಷ್ಣುವನ್ನು ಬಾಣವನ್ನಾಗಿ ಮಾಡಿಕೊಂಡಿದ್ದವನೇ, ವಿರೋಧಿಭಯಂಕರನೆ, ದೇವಪೂಜ್ಯವಾದ ಪಾದಕಮಲಗಳುಳ್ಳವನೆ, ವೇದಗಳೆಂಬ ಕುದುರೆಗಳನ್ನು ಕಟ್ಟಿರುವ ಭೂಮಿಯೆಂಬ ರಥದಲ್ಲಿ ಮಂಡಿಸಿ, ಆ ಕುದುರೆಗಳ ಹೇಷಾಧ್ವನಿಯಿಂದ ಗಾನಮಾಡಲ್ಪಟ್ಟ ಕೀರ್ತಿಯುಳ್ಳವನೇ, ಎಲೈ ಶಂಕರನೇ, ನನ್ನನ್ನು ದಯಾದೃಷ್ಟಿಯಿಂದ ಜಾಗ್ರತೆ ಸಲಹು. ॥೭೧॥

ಮಹೇಶ್ವರಿ! ಈರೀತಿ ಆಶ್ವಯುಜಮಾಸದಲ್ಲಿ ಶಿವಸ್ತೋತ್ರವನ್ನು ಪಠಿಸಬೇಕು. ಹಾಗೆಯೇ ಅದೇ ತಿಂಗಳ ಕೊನೆಯಲ್ಲಿ ಬ್ರಾಹ್ಮಣರನ್ನು ಪೂಜಿಸಿ ಒಂದು ಜೋಡಿ ಹಸುಗಳನ್ನು ಕರುಗಳೊಡನೆ ಉಚಿತವಾದ ದಕ್ಷಿಣೆಗಳಿತ್ತು ದಾನಮಾಡ

ದಕ್ಷಿಣಾದಿಭಿರಭ್ಯರ್ಚ್ಯ ಮಾಸಾಂತೇ ಭೋಕ್ತುಮರ್ಹತಿ ।
ನಿತ್ಯಂ ನಕ್ತಾಶನೋ ಭಕ್ತೋ ಮುಕ್ತ ಏವ ಭವೇದ್ಧ್ರುವಂ ॥೭೩॥

ಆಶ್ವಯುಜ್ಯಾಂ ಪೌರ್ಣಮಾಸ್ಯಾಂ ಹೋಮಃ ಕಾರ್ಯೋ ವಿಶೇಷತಃ ।
ದೀನಾನಾಥಂ ಭೋಜಯಿತ್ವಾ ಸ್ವಯಂ ಭುಂಜೀತ ಬಂಧುಭಿಃ ॥೭೪॥

ಆಶ್ವಯುಜ್ಯಾಂ ಪೌರ್ಣಮಾಯಾಂ ಅಶ್ವಿನ್ಯಾಮನ್ನರಾಶಿಭಿಃ ।
ಸಾಯಮಭ್ಯರ್ಚಯೇಲ್ಲಿಂಗಂ ಸ್ಥಿರಂ ವಾ ಚರಮೇವ ವಾ ॥೭೫॥

ಯಾವತ್ತತ್ಸಿಕ್ಥಮಾನೇನ ಶಿವಲೋಕೇ ಮಹೀಯತೇ ।
ಏವಂ ಯಃ ಕುರುತೇ ಮಾಸಿ ಸೋಽಶ್ವಮೇಧಾಯುತಂ ಲಭೇತ್ ॥೭೬॥

ಸೋಽರ್ಕರಾಜಿತಮಹಾವಿಮಾನೇನ ಸ ವಂಶಕಂ ।
ಯಾತಿ ಮತ್ಸದನಂ ದೇವಿ ಗಣೇಂದ್ರೈರನುಮೋದಿತಃ ॥೭೭॥

ಪೂಜಿತೋ ಬ್ರಹ್ಮವಿಷ್ಣ್ವಾದ್ಯೈಃ ಶಕ್ರಾದ್ಯೈರ್ಮುನಿಭಿಃ ಶಿವೇ ॥೭೮॥

---

ಬೇಕು. ಹೀಗೆ ಮಾಸವ್ರತ ಮಾಡುವವನು ಪ್ರತಿದಿನವೂ ರಾತ್ರಿವೇಳೆ ಮಾತ್ರ ಊಟಮಾಡುತ್ತಿರಬೇಕು. ಹಾಗೆ ನಿತ್ಯವೂ ರಾತ್ರಿ ಭೋಜನಮಾಡುವ ಭಕ್ತನು ನಿಶ್ಚಯವಾಗಿಯೂ ಮುಕ್ತನಾಗಿಯೇಬಿಡುವನು. ಆಶ್ವಯುಜಮಾಸದ ಹುಣ್ಣಿಮೆ ಯಲ್ಲಿ ವಿಶೇಷವಾಗಿ ಹೋಮಮಾಡಬೇಕು. ಆ ದಿನ ದೀನರಿಗೂ ಅನಾಥರಿಗೂ ಭೋಜನಮಾಡಿಸಿ, ಅನಂತರ ತಾನೂ ಬಂಧುಗಳೊಡನೆ ಭೋಜನಮಾಡಬೇಕು. ॥೭೨-೭೩-೭೪॥

ಆಶ್ವಯುಜಮಾಸ ಹುಣ್ಣಿಮೆಯ ದಿನ ಅಶ್ವಿನೀನಕ್ಷತ್ರದಲ್ಲಿ ಸಾಯಂಕಾಲ ಸ್ಥಿರ ಅಥವಾ ಚರಲಿಂಗಗಳನ್ನು ಪೂಜಿಸಿ, ಅನ್ನರಾಶಿಗಳನ್ನು ನಿವೇದನ ಮಾಡುವ ವನು ತಾನು ನಿವೇದಿಸಿರುವ ಅನ್ನದಗಳಿನ ಕಾಳಿನ ಪ್ರಮಾಣಾನುಗುಣವಾಗಿ ಶಿವ ಲೋಕದಲ್ಲಿ ಅಷ್ಟು ವರ್ಷಕಾಲ ಮೆರೆಯುವನು. ಎಲೌ ಪಾರ್ವತಿಯೆ, ಹೀಗೆ ತಿಂಗ ಳಲ್ಲಿ ತಪ್ಪದೇ ವ್ರತಮಾಡುವವನು ಹತ್ತುಸಾವಿರ ಅಶ್ವಮೇಧಯಾಗಗಳ ಫಲವನ್ನು ಹೊಂದುತ್ತಾನೆ. ಅವನು ಕೊನೆಯಲ್ಲಿ ಸೂರ್ಯಕಾಂತಿಯನ್ನು ಮೀರಿರುವ ತೇಜಸ್ಸುಳ್ಳ ವಿಮಾನದಲ್ಲಿ ಮಂಡಿಸಿ ತನ್ನ ವಂಶೀಕರೊಡನೆಯೂ ಗಣಾಧಿಪರಿಂದ ಅನುಮೋದಿಸ ಲ್ಪಟ್ಟು ಬ್ರಹ್ಮ, ವಿಷ್ಣು ಮುಂತಾದವರಿಂದಲೂ ದೇವೇಂದ್ರಾದಿಗಳಿಂದಲೂ ಪೂಜಿ

ಮಾಸೇ ಚಾಶ್ವಯುಜೇ ಪ್ರಸನ್ನಹೃದಯೋ ಯೋಮಾಂ ಸಮುಚ್ಚ್ಯಾದರಾ-
ದಾರಾತ್ಸಂಲಭತೇ ಮದೀಯಮುಗಜೇ ಲೋಕಂ ಸ ಭುಂಜ್ಯಾದರೀನ್ ।
ಸ ಜ್ಯಾಯಾನ್ಭವಿತಾ ಜನೇಷು ಸ ಮಹಾಇಜ್ಯಾಯುತಾನಾಂ ಫಲಂ
ಭುಜ್ಯಾಸ್ತಸ್ಯ ಭವಂತಿ ಭೂಮಿಪತಯಃ ಪ್ರಾಜ್ಯಂ ಸ ರಾಜ್ಯಂ ಲಭೇತ್ ॥೭೯॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಆಶ್ವಯುಜಮಾಸಾರ್ಚನವಿಧಾನ
ನಿರೂಪಣಂ ನಾಮ ವಿಂಶೋಽಧ್ಯಾಯಃ

---

ಸಲ್ಪಡುವನು ಮತ್ತು ಹಾಗೆಯೇ ನನ್ನ ಕೈಲಾಸಲೋಕವನ್ನು ಸಂತೋಷದಿಂದ ಸೇರುವನು. ॥೭೫-೭೬-೭೭-೭೮॥

ಪಾರ್ವತಿಯೆ, ಆಶ್ವಯುಜಮಾಸದಲ್ಲಿ ನಿರ್ಮಲಮನಸ್ಸಿನಿಂದ ನನ್ನನ್ನು ಆದರಪೂರ್ವಕವಾಗಿ ಪೂಜಿಸುವವನು ಶೀಘ್ರದಲ್ಲಿಯೇ ನನ್ನ ಲೋಕವನ್ನು ಸೇರುವನು. ಅವನು ಎಲ್ಲರಿಗಿಂತಲೂ ದೊಡ್ಡವನೆನಿಸಿ ಅನೇಕ ದೊಡ್ಡಯಾಗಗಳ ಫಲವನ್ನು ಅನುಭವಿಸಿ, ಕೊನೆಗೆ ರಾಜನಾಗಿ ಉತ್ತಮ ರಾಜ್ಯಪದವಿಯನ್ನನುಭವಿಸುವನೆಂದು ಶಿವನು ಪಾರ್ವತಿಗೆ ಹೇಳಿದನು. ॥೭೯॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಹನ್ನೊಂದನೆಯ ಅಂಶದಲ್ಲಿ ಆಶ್ವಯುಜಮಾಸ
ಪೂಜಾವಿಧಾನ ವರ್ಣನೆಯೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ವಿಂಶೋಽಧ್ಯಾಯಃ

॥ ಶ್ರೀಮಹಾದೇವ ಉವಾಚ ॥

ಕಾರ್ತಿಕೇಽರ್ಚನಮೀಶಸ್ಯ ಶೃಣು ವಕ್ಷ್ಯೇ ಗಿರೀಂದ್ರಜೇ ।
ಶಿವಾರ್ಚನೇ ವಿಶಿಷ್ಟೋಽಯಂ ಕಾರ್ತಿಕಾರ್ತಿವಿನಾಶಕಃ ॥೧॥

ಊರ್ಜೇ ಗರ್ಜಂತಿ ಪಾಪಾನಿ ಸ್ನಾನದಾನಾರ್ಚನಾದಿಭಿಃ ।
ಪೂಜಯಂತೇ ಮನುಜಾಃ ಸರ್ವೇ ಇತಿ ತರ್ಜಂತಿ ತೇ ಭಟಾಃ ॥೨॥

ಯಾವದ್ಯಾಮಸ್ಯ ಸದನೇ ಮದನಾಂತಕರಾರ್ಚಕಂ ।
ದೃಷ್ಟ್ವಾಪಿ ಪ್ರಪಲಾಯಂತೇ ಸಿಂಹಂ ದೃಷ್ಟ್ವಾ ಮೃಗಾ ಯಥಾ ॥೩॥

---

### ಇಪ್ಪತ್ತೊಂದನೆಯ ಅಧ್ಯಾಯ

ಎಲೌ ಪಾರ್ವತಿಯೆ, ಕಾರ್ತಿಕಮಾಸದ ಶಿವಪೂಜಾವಿಧಿಯನ್ನು ಹೇಳುವೆನು ಕೇಳು; ಮಾನವನು ಮಾಡಿದ ಸಮಸ್ತ ಪಾಪರಾಶಿಯನ್ನು ಹೋಗಲಾಡಿಸುವುದರಲ್ಲಿ ಈ ಮಾಸದ ಶಿವಪೂಜೆಯು ಅತ್ಯಂತ ಶ್ರೇಷ್ಠವೆನಿಸುವುದು. ಈ ತಿಂಗಳಲ್ಲಿ ಅತಿಶಯವಾಗಿ ಸ್ನಾನ, ದಾನ, ಪೂಜಾದಿಗಳನ್ನು ಮಾಡುವುದರಿಂದ ಮಹಾಪಾತಕಗಳೂ ಬೆದರುವುವು. ಈ ವ್ರತಾಚರಣೆಯಿಂದ ಮಾನವರೆಲ್ಲರೂ ಪವಿತ್ರರಾಗುವರೆಂದು ಯಮಭಟರು ಆಗಾಗ ಹೆದರುವರು. ॥೧-೨॥

ಯಮಲೋಕದಲ್ಲಿರುವ ಯಮಭಟರು ಶಿವಪೂಜಕನನ್ನು ನೋಡಿ, ಸಿಂಹವನ್ನು ನೋಡಿದ ಜಿಂಕೆಗಳಂತೆ ಓಡಿಹೋಗುವರು. ಇಂತಹ ವ್ರತವನ್ನಾಚರಿಸು

ಕಾರ್ತಿಕೇ ಮಾಸಿ ಸಂಪ್ರಾಪ್ತೇ ಸ್ನಾನಂ ಕುರ್ಯಾದ್ಬಹಿರ್ಜಲೇ ।
ನದೀತಟಾಕವಾಪೀಷು ಕೂಪೇ ವಾಭಿರುಚಿರ್ಯಥಾ ॥೪॥

ಸಂಕಲ್ಪ್ಯ ನಿಯಮೋಪೇತೋ ದೂರ್ವಾಮೃಚ್ಛಕೃತಾಂಭಸಾ ।
ತ್ರಿರಾಚಮ್ಯ ಶುಚಿಃ ಸ್ನಾತ್ವಾ ದರ್ಭಪಾಣಿಃ ಶಿವಂ ಸ್ಮರನ್ ॥೫॥

ಪ್ರವಿಶ್ಯಾಪ್ಸು ಸಮಂತ್ರೇಣ ವಾರುಣೇನ ವಿಸೃಜ್ಯ ಚ ।
ದೇವಾನೃಷೀನ್ಪಿತೄನ್ದೇವಿ ಸಂತರ್ಪ್ಯ ವಿಧಿಪೂರ್ವಕಂ ॥೬॥

ತೀರವಾಸಃ ಪ್ರಗೃಹ್ಯೈವ ಕ್ಷಾಳಿತಾಂಘ್ರಿಸ್ತ್ರಿರಾಚಮೇತ್ ।
ಧೌತವಾಸಃ ಪರೀಧಾಯ ಭಸ್ಮ ಧೃತ್ವಾ ಯಥಾವಿಧಿ ॥೭॥

ತ್ರಿಪುಂಡ್ರರುದ್ರಾಕ್ಷಧರೋ ಕೃತನಿತ್ಯಕ್ರಿಯೋ ದ್ವಿಜಃ ।
ನವಂ ಸುಪೂರಿತಂ ಕುಂಭಂ ಶೋಧಿತಂ ಚ ನದೀಜಲೈಃ ॥೮॥

ಸುಪಲ್ಲವಮುಖಂ ದೇವಿ ಗೃಹೀತ್ವಾ ಪಾಹಿ ಮಾಂ ವಿಭೋ ।
ಸ್ವಕರಾನೀತಪುಷ್ಪಾಂಬು ಸಾಕ್ಷಾದ್ಗೃಹ್ಣಾತಿ ಶಂಕರಃ ॥೯॥

---

ಮನು ಕಾರ್ತಿಕಮಾಸವು ಪ್ರಾರಂಭವಾಗುತ್ತಲೇ ಊರ ಹೊರಗಿನ ನದಿ, ಕೆರೆ, ಕೊಳ, ಅಥವಾ ಬಾವಿಯ ನೀರಿನಲ್ಲಿ ಇಷ್ಟಬಂದ ಕಡೆ ವಿಧಿವತ್ತಾಗಿ ಸ್ನಾನಮಾಡ ಬೇಕು. ॥೩-೪॥

ನಿಯಮದಿಂದ ಸಂಕಲ್ಪಮಾಡಿ ಗರಿಕೆ, ಮೃತ್ತಿಕೆ, ಸಗಣಿಗಳ ನೀರಿನಿಂದ ಮೂರುಸಲ ಆಚಮನಮಾಡಿ ಶುಚೀಭೂತನಾಗಿ ಸ್ನಾನಮಾಡಿ ದರ್ಭೆಯ ಪವಿತ್ರ ವನ್ನು ಧರಿಸಿ, ಶಿವನನ್ನು ಸ್ಮರಿಸುತ್ತಾ ನೀರಿನಲ್ಲಿ ಪ್ರವೇಶಮಾಡಿ (ವರುಣ) ಮಂತ್ರ ಪೂರ್ವಕವಾಗಿ ಮೈಯುಜ್ಜಿಕೊಂಡು ಸ್ನಾನಮಾಡಿ ದೇವತೆಗಳು, ಪಿತೃಗಳು ಮತ್ತು ಋಷಿಗಳನ್ನು ವಿಧಿಪ್ರಕಾರ ತರ್ಪಣದಿಂದ ತೃಪ್ತಿಪಡಿಸಿ, ದಡದಲ್ಲಿರುವ ಬಟ್ಟೆಗಳನ್ನು ತೆಗೆದುಕೊಂಡು ಕಾಲುತೊಳೆದು ಮೂರುಸಲ ಆಚಮನಮಾಡಬೇಕು. ಅನಂತರ ಒಗೆದ ಬಟ್ಟೆಗಳನ್ನು ಉಟ್ಟು ವಿಧಿಗನುಗುಣವಾಗಿ ಭಸ್ಮಧಾರಣ ಮಾಡಿಕೊಳ್ಳ ಬೇಕು. ॥೫-೬-೭॥

ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಧರಿಸಿ, ನಿತ್ಯಕರ್ಮಗಳನ್ನು ನೆರವೇರಿಸಿ, ವಿಪ್ರನು ಶೋಧಿಸಿದ ನದಿಯ ನೀರಿನಿಂದ ತುಂಬಲ್ಪಟ್ಟಿರುವ ಹೊಸ

ಪರಾನೀತಂ ಭಟಾನೀತಂ ಶೂದ್ರೇಣ ಪಾಪಿನಾ ಹೃತಂ ।
ಕ್ರಯಕ್ರೀತಂ ಭೂಮಿಲಗ್ನಂ ನ ಪ್ರಶಸ್ತಂ ಮಮಾರ್ಚನೇ ॥೧೦॥

ತಸ್ಮಾತ್ಸ್ವಯಂ ವೈ ಕುಸುಮಮಾಹರೇಚ್ಚ ಜಲಂಕುಶಂ ।
ಪೂಜಾಸ್ಥಾನಂ ಪ್ರವಿಶ್ಯಾಥ ಗೋಮಯೇನೋಪಲೇಪಯೇತ್ ॥೧೧॥

ಪಂಚವರ್ಣಕಪಿಷ್ಟೇನ ಪದ್ಮಸ್ವಸ್ತಿಕಚಿಹ್ನಿತಂ ।
ಕುರ್ಯಾಚ್ಚ ಪುಷ್ಪಮಾಲಾಢ್ಯಂ ಮಂಡಪಂ ಫಲಕೈರ್ಯುತಂ ॥೧೨॥

ವಿತಾನಪ್ರಚ್ಛದಪಟ್ಟೈರಲಂಕುರ್ಯಾದ್ಯಥಾಬಲಂ ।
ವರಯೇದ್ಬ್ರಾಹ್ಮಣಾನ್ದೇವಿ ಕೋವಿದಾನಭಿಷೇಚನೇ ॥೧೩॥

---

ಕಲಶಗಳನ್ನು ಚಿಗುರುಗಳಿಂದ ಅಲಂಕರಿಸಿ, ಅದನ್ನು ಹಿಡಿದುಕೊಂಡು, ಪ್ರಭುವೆ! ನನ್ನನ್ನು ಕಾಪಾಡು ಎಂದು ಹೇಳಬೇಕು. ಪೂಜಕನು ತನ್ನ ಕೈಯಿಂದಲೇ ತರಲ್ಪಟ್ಟ ಹೂ ಮತ್ತು ನೀರುಗಳನ್ನು ಶಂಕರನು ತಾನೇ ಸಾಕ್ಷಾತ್ತಾಗಿ ಸ್ವೀಕರಿಸುತ್ತಾನೆ. ||೮-೯||

ಮತ್ತೊಬ್ಬರಿಂದ ತರಲ್ಪಟ್ಟದು, ಸೇವಕರಿಂದ ತರಲ್ಪಟ್ಟದು, ಶೂದ್ರರಿಂದಲಾಗಲಿ, ಇತರ ಪಾಪಕರ್ಮಾಚಾರಿಗಳಿಂದಲಾಗಲೀ ತರಲ್ಪಟ್ಟದು, ಕ್ರಯಕ್ಕೆ ಕೊಂಡುದು, ಮತ್ತು ನೆಲದಮೇಲೆ ಬಿದ್ದುದು, ಈ ಹೂಗಳು ನನ್ನ ಪೂಜೆಗೆ ಶ್ರೇಷ್ಠವಲ್ಲವೆಂದು ತಿಳಿ. ಆದ್ದರಿಂದ ಪೂಜೆಗೆ ಹೂವು, ನೀರು, ದರ್ಭೆ, ಇವುಗಳನ್ನು ತಾನೇ ತೆಗೆದುಕೊಂಡುಬರಬೇಕು. ಅನಂತರ ಪೂಜೆಮಾಡುವ ಪ್ರದೇಶಕ್ಕೆ ಪ್ರವೇಶಿಸಿ, ಸಗಣಿಯಿಂದ ಆಸ್ಥಳವನ್ನು ಚೆನ್ನಾಗಿಸಾರಿಸಬೇಕು. ||೧೦-೧೧||

ಮತ್ತು ಪೂಜಾಸ್ಥಳವನ್ನು ಐದುಬಣ್ಣದ ಹಿಟ್ಟಿನಿಂದ ಪದ್ಮ, ಸ್ವಸ್ತಿಕಗಳನ್ನು ಬರೆದು ಅಲಂಕರಿಸಿ, ಅಲ್ಲಿ ಹಲಗೆಗಳಿಂದ ಮಂಡಪವನ್ನುಮಾಡಿಸಿ, ಅದನ್ನು ಹೂಮಾಲೆಗಳಿಂದಲಂಕರಿಸಿ, ಮೇಲ್ಕಟ್ಟು, ಪರದೆಬಟ್ಟೆ, ಇವುಗಳಿಂದ ಯಥಾಶಕ್ತಿಯಾಗಿ ಅಲಂಕರಿಸಬೇಕು. ಅನಂತರ ಭಸ್ಮಭೂಷಿತರೂ ಶಿವಪೂಜಕರೂ, ವಿದ್ವಾಂಸರೂ ಆದ ಶೈವಬ್ರಾಹ್ಮಣರನ್ನೇ ಈ ಅಭಿಷೇಕಕಾರ್ಯಕ್ಕೆ ವರಣಮಾಡಬೇಕು. ||೧೨-೧೩

ಶಾಂಭವಾನೇವ ಭಸ್ಮಾಂಕಾನ್ಷಂದ್ರಾಂಕಪದಪೂಜಕಾನ್ ।
ಪಾತ್ರಾಣಿ ಕ್ಷಾಳಿತಾನೀಶೇ ಸಂಸ್ಥಾಪ್ಯಕ್ರಮಯೋಗತಃ ॥೧೪॥

ಪ್ರೋಕ್ಷಣೀಂ ಜಲಕುಂಭಂ ಚ ಶಂಖಂ ಧಾರಾಗ್ರಪಾತ್ರಕಂ ।
ಪಾದ್ಯಾಚಮನಾರ್ಘ್ಯಾದಿ ಪಾತ್ರಂ ಚ ಮಧುಪರ್ಕಜಂ ॥೧೫॥

ಕುಶೇಷ್ವಾಸಾದಯೇದ್ದೇವಿ ಧಾತೂನಿ ಚ ಮಹೇಶ್ವರಿ ।
ಗಂಧಪುಷ್ಪೋದಪೂರ್ಣಾನಿ ಕೃತ್ವಾ ಭಸ್ಮಾಭಿಯೋಗತಃ ॥೧೬॥

ಪಂಚಗವ್ಯಂ ಘೃತಂ ಕ್ಷೀರಂ ದಧಿಕ್ಷೌದ್ರಂ ಸಿತಾಮಪಿ ।
ಫಲಸಾರಾಣಿ ಸರ್ವಾಣಿ ಯಥಾಜೋಷಂ ಪ್ರಕಲ್ಪಯೇತ್ ॥೧೭॥

ಯಥಾಲಬ್ಧಾನಿ ಕಾಲೇನ ಪುಷ್ಪಾಣ್ಯಪಿ ಮಹೇಶ್ವರಿ ।
ಧೂಪಶ್ಚಾಗರುಸಾರೇಣ ಕಲ್ಪನೀಯೋ ಘೃತಾನ್ವಿತಃ ॥೧೮॥

ದೀಪಮಾಲಾಕಲ್ಪನೀಯಾ ಘೃತಾಕ್ತಾಷ್ಟಶತೋತ್ತರಾ ।
ಸ್ವಯಮಾಚಮ್ಯ ವಿಧಿವತ್ಪ್ರಾಣಾನಾಯಮ್ಯ ಮಂತ್ರವಿತ್ ॥೧೯॥

---

ಈ ವಿಧವಾದಪೂಜೆಗಾಗಿ ಪಾತ್ರೆಗಳನ್ನು ಚೆನ್ನಾಗಿ ತೊಳೆದು ಕ್ರಮವಾಗಿ ಇರಿಸಬೇಕು. ಪ್ರೋಕ್ಷಣೆ, ಜಲಕುಂಭ, ಶಂಖ, ಧಾರಾಗ್ರಪಾತ್ರೆ, ಪಾದ್ಯ, ಮತ್ತು ಆಚಮನೀಯಪಾತ್ರೆಗಳು, ' ಮಧುಪರ್ಕಪಾತ್ರೆಗಳನ್ನು ಕ್ರಮವಾಗಿ ಸಿದ್ಧಪಡಿಸಬೇಕು. ಇವುಗಳನ್ನೆಲ್ಲಾ ದರ್ಭೆಗಳಮೇಲಿರಿಸಬೇಕು. ಲೋಹಪಾತ್ರೆಗಳನ್ನಂತೂ ದರ್ಭೆಗಳಮೇಲೆಯೇ ಇರಿಸಬೇಕು. ಗಂಧ, ಪುಷ್ಪ, ಮತ್ತು ಜಲ ಇವುಗಳಿಂದ ಪೂರ್ಣವಾದ ಕುಂಭಗಳಲ್ಲಿ ಭಸ್ಮಹಾಕಬೇಕು. ಪಂಚಗವ್ಯ, ತುಪ್ಪ, ಹಾಲು, ಮೊಸರು, ಜೇನುತುಪ್ಪ, ಕಲ್ಲುಸಕ್ಕರೆ, ಹಣ್ಣಿನಸಾರಗಳು, ಇವುಗಳನ್ನೆಲ್ಲಾ ಯಥಾಶಕ್ತಿ ಸಿದ್ಧಪಡಿಸಬೇಕು. ||೧೪-೧೫-೧೬-೧೭||

ಎಲೌ ಮಹೇಶ್ವರಿಯೇ, ಕಾಲಾನುಗುಣವಾಗಿ ದೊರೆತಷ್ಟು ಹೂಗಳನ್ನು ಸಂಗ್ರಹಿಸಬೇಕು. ತುಪ್ಪದಿಂದ ಬೆರೆತ ಅಗರುಚಕ್ಕೆಯಧೂಪವನ್ನು ಹಾಕಬೇಕು. ತುಪ್ಪದಿಂದ ನೆನೆಸಿದ ನೂರೆಂಟು ದೀಪಮಾಲೆಗಳನ್ನು ಇರಿಸಬೇಕು. ತಾನೂ ವಿಧಿಪ್ರಕಾರ ಆಚಮನಮಾಡಿ ಮಂತ್ರಜ್ಞನಾದವನು ಪ್ರಾಣಾಯಾಮವನ್ನು ಮಾಡಿ,

ದೇಶಕಾಲಾದಿ ಸಂಕೀರ್ತ್ಯ ವಿಪ್ರೈರೂರ್ಜ್ಜೈರ್ವಿಶೇಷತಃ ।
ಪ್ರಯತೋ ನಿಯತೋ ಧೀಮಾನ್ಪೂರ್ವಾಂಗಂ ಪರಿಕಲ್ಪಯೇತ್ ॥೨೦॥

ಗಣೇಶಮಾದೌ ಸಂಪೂಜ್ಯ ತತ್ಪಾರ್ಶ್ವೇ ನಂದಿನಂ ಯಜೇತ್ ।
ಚಂಡಂ ಚ ಭೈರವಂ ಚೈವ ನಿರ್ಮಾಲ್ಯಮಪನೋದ್ಯ ಚ ॥೨೧॥

ಕಲ್ಪಯೇದಾಸನಂ ಪಶ್ಚಾದಾಧಾರಾದೀನ್ಯಥಾಕ್ರಮಂ ।
ಅನಂತಧರ್ಮವೈರಾಗ್ಯಂ ಜ್ಞಾನಂ ಪಾಶಂ ತ್ರಿಶೂಲಕಂ ॥೨೨॥

ಕಾರ್ತಿಕೇ ವೈದ್ರುಮಂ ವಾಪಿ ಹೇಮರಾಜತಸಂಭವಂ ।
ಗೃಹೀತ್ವಾ ಸ್ಥಾಪಯೇತ್ಪೀಠೇ ಲಿಂಗಂ ಸಂಶೋಧ್ಯ ಚಾಂಬುಭಿಃ ॥೨೩॥

ಲಿಂಗಮೂರ್ಧ್ನಿ ನ್ಯಸೇತ್ಪುಷ್ಪಂ ಪ್ರಣವೇನೈವ ಶಂಕರಿ ।
ಪಶ್ಚಾತ್ಪಂಚಾಕ್ಷರಂ ಮಂತ್ರಂ ಜಪೇಚ್ಛತಸಹಸ್ರಕಂ ॥೨೪॥

ಧ್ಯಾತ್ವೈವ ದೇವಮೀಶಾನಂ ನೀಲಕಂಠಂ ತ್ರಿಯಂಬಕಂ ।
ಸೋಮಾಸ್ಕಂದಂ ಚಂದ್ರಚೂಡಂ ದಿವ್ಯಸ್ರಕ್ಸುವಿಭೂಷಿತಂ ॥೨೫॥

---

ದೇಶಕಾಲಗಳನ್ನು ಹೇಳಿ, ತೇಜಸ್ವಿಯಾದ ಬ್ರಾಹ್ಮಣರೊಡನೆ ಸೇರಿ, ವಿಶೇಷವಾಗಿ ಜಿತೇಂದ್ರಿಯನಾಗಿ, ನಿಯಮಬದ್ಧನೆನಿಸಿ ಬುದ್ಧಿವಂತಿಕೆಯಿಂದ ಪೂಜೆಯ ಪೂರ್ವಾಂಗವನ್ನು ರಚಿಸಬೇಕು. ॥೧೮-೧೯-೨೦॥

ಮೊದಲು ಗಣಪತಿಯನ್ನು ಪೂಜಿಸಿ, ಅವನ ಪಕ್ಕದಲ್ಲಿಯೇ ನಂದಿಕೇಶ್ವರನನ್ನು ಪೂಜಿಸಬೇಕು. ಹಾಗೆಯೇ ಚಂಡ ಮತ್ತು ಭೈರವರನ್ನೂ ಆರಾಧಿಸಬೇಕು. ಅನಂತರ ನಿರ್ಮಾಲ್ಯವನ್ನು ತೆಗೆದು, ಆಸನವನ್ನು ಕಲ್ಪಿಸಿ, ಕ್ರಮವಾಗಿ ಆಧಾರ ಶಕ್ತ್ಯಾದಿಗಳನ್ನೂ, ಅನಂತ, ಧರ್ಮ, ವೈರಾಗ್ಯ, ಜ್ಞಾನ, ಪಾಶ, ತ್ರಿಶೂಲಗಳನ್ನು ಧ್ಯಾನಿಸಬೇಕು. ಈ ಕಾರ್ತಿಕಮಾಸದಲ್ಲಿ ಹವಳ, ಚಿನ್ನ ಅಥವಾ ಬೆಳ್ಳಿಯ ಲಿಂಗವನ್ನು ತೆಗೆದುಕೊಂಡು ಪೀಠದಲ್ಲಿರಿಸಿ, ನೀರಿನಿಂದ ಲಿಂಗವನ್ನು ಶೋಧಿಸಿ, ಓಂಕಾರ ಮಂತ್ರದಿಂದ ಲಿಂಗದ ತಲೆಯಮೇಲೆ ಹೂವನ್ನಿಡಬೇಕು. ॥೨೧-೨೨-೨೩॥

ಅನಂತರ, ಸಾವಿರ, ಅಥವಾ ನೂರು ಶಿವಪಂಚಾಕ್ಷರಮಂತ್ರಗಳನ್ನು ಜಪ ಮಾಡಬೇಕು. ಈಶಾನನೂ, ಕಪ್ಪುಗೊರಳುಳ್ಳವನೂ, ಮೂರುಕಣ್ಣುಳ್ಳವನೂ, ಸೋಮಾಸ್ಕಂದನೂ, ಚಂದ್ರಶೇಖರನೂ, ದಿವ್ಯ ಹೂಮಾಲೆಯಿಂದಲಂಕೃತನೂ,

ವ್ಯಾಘ್ರಚರ್ಮಪರೀಧಾನಂ ನಾಗಾಭರಣಭೂಷಿತಂ ।
ಭಸ್ಮಾಂಗರಾಗಸುಭಗಂ ಮಂದಸ್ಮಿತಮುಖಾಂಬುಜಂ ॥೨೬॥

ಧ್ಯಾತ್ವಾವಾಹ್ಯ ತತೋ ಲಿಂಗೇ ಹೃತ್ಪದ್ಮಪ್ರಣವೇನ ಹಿ ।
ಸ್ನಾನವೇದ್ಯಾಂ ತತೋ ಪಾದ್ಯಮಾಚಾಮಂ ಚಾರ್ಘ್ಯಮೇವ ಚ ॥೨೭॥

ದದ್ಯಾಚ್ಚ ಮಧುಪರ್ಕಂ ಚ ಪಂಚಗವ್ಯಂ ತತಃ ಪರಂ ।
ಕ್ಷೀರಾಜ್ಯದಧಿಸತ್ಕ್ಷೌದ್ರಂ ಸಿತಯಾ ನಾರಿಲಾಂಬುಭಿಃ ॥೨೮॥

ಅನ್ಯೈಃ ಫಲರಸೈರ್ದೇವಿ ಸ್ನಾಪಯೇಚ್ಛಿವಮಂಬಿಕೇ ।
ಸ್ನಾಪ್ಯ ಮಂಗಲಘೋಷೇಣ ವಾದಿತ್ರರವಯೋಗತಃ ॥೨೯॥

ಉದ್ವರ್ತನಾಂತರೇ ಸ್ನಾಪ್ಯ ಗಂಧರತ್ನಕುಶೋದಕೈಃ ।
ಶಾತಕುಂಭಾಂಬುಭಿರ್ದೇವಿ ಧೂಪದೀಪನಿವೇದನಂ ॥೩೦॥

---

ಹುಲಿಯಚರ್ಮವನ್ನು ಧರಿಸಿರುವವನೂ, ಸರ್ಪಾಭರಣಮಂಡಿತನೂ, ಭಸ್ಮವೆಂಬ ಅಂಗರಾಗದಿಂದ ಮನೋಹರನೂ, ಮಂದಹಾಸಯುಕ್ತವಾದ ಮುಖಕಮಲವುಳ್ಳವನೂ, ಆದ ಮಹೇಶನನ್ನು ಈರೀತಿ ಧ್ಯಾನಿಸಬೇಕು. ॥೨೪-೨೫-೨೬॥

ಧ್ಯಾನಮಾಡಿ, ಹೃದಯಕಮಲವನ್ನು ವಿಕಾಸಗೊಳಿಸಿ ಓಂಕಾರಮಂತ್ರದಿಂದ ಲಿಂಗದಲ್ಲಿ ಮಹಾದೇವನನ್ನು ಆವಾಹನೆಗೊಳಿಸಿ, ಸ್ನಾನವೇದಿಕೆಯಲ್ಲಿ ಪಾದ್ಯ ಆಚಮನೀಯ, ಅರ್ಘ್ಯ, ಮಧುಪರ್ಕ, ಪಂಚಗವ್ಯ ಇವುಗಳನ್ನು ಸಮರ್ಪಿಸಬೇಕು. ಅನಂತರ ಹಾಲು, ತುಪ್ಪ, ಮೊಸರು, ಒಳ್ಳೆಯಜೇನು, ಸಕ್ಕರೆ, ಎಳನೀರು, ಇತರ ಹಣ್ಣಿನರಸಗಳು, ಮುಂತಾದವುಗಳಿಂದ ಅಭಿಷೇಕಮಾಡಬೇಕು, ಎಲೌ ದೇವಿ! ಹೀಗೆ ಅಭಿಷೇಕಮಾಡುವ ಸಮಯದಲ್ಲಿ ಮಂಗಲಘೋಷಗಳೂ, ವಾದ್ಯಧ್ವನಿಗಳೂ ಆಗುತ್ತಿರಬೇಕು. ॥೨೭-೨೮-೨೯॥

ಉಜ್ಜಿದನಂತರ ಗಂಧ, ರತ್ನ ಮತ್ತು ಕುಶೋದಕಗಳಿಂದಲೂ ಸುವರ್ಣ ಅಥವಾ ಬೆಳ್ಳಿಯ ಕಲಶೋದಕಗಳಿಂದಲೂ ಸ್ನಾನಮಾಡಿಸಿ, ಧೂಪ ದೀಪ ನೈವೇದ್ಯಗಳನ್ನು ಸಮರ್ಪಿಸಬೇಕು. ಹೀಗೆ ಸಮರ್ಪಿಸಿದ ನಂತರ ಪೀಠದಲ್ಲಿ ಸ್ಥಾಪಿಸಿ, ರುದ್ರಮಂತ್ರವನ್ನು, ಹನ್ನೊಂದು ಅನುವಾಕಗಳೊಡಗೂಡಿದ ಚಮಕಮಂತ್ರದೊಡನೆ ಆವೃತ್ತಿಮಾಡುತ್ತಾ ಅಭಿಷೇಕಮಾಡಬೇಕು. ಒಂದು, ಎರಡು, ಅಥವಾ ಮೂರುಬಾರಿ

ದತ್ವಾ ಪೀಠೇ ನ್ಯಸೇತ್ಸ್ನಾಪ್ಯ ರುದ್ರಾವೃತ್ಯಾಭಿಷೇಚಯೇತ್ ।
ಏಕಾದಶಾನುವಾಕೇನ ಸ್ವರುದ್ರಚಮಕೇನ ಚ ॥೩೦॥

ಏಕದ್ವಿತ್ರಿವರಂ ವಾಪಿ ಪಂಚಬ್ರಹ್ಮಾಂತಿನೋ ಶಿವೇ ।
ಭವಾಯೇತ್ಯಷ್ಟನಾಮ್ನಾಂತೇ ತರ್ಪಯೇತ್ಸಕುಶೋದಕೈಃ ॥೩೨॥

ಶಂಖೋದಕೇನಾಭಿಷಿಚ್ಯ ಪ್ರವಿಮೃಜ್ಯ ಚ ವಾಸಸಾ ।
ಪೀಠೇ ಸಂಸ್ಥಾಪ್ಯ ವಸ್ತ್ರಂ ಚ ಉಪವೀತಾಕ್ಷತಾದಿಭಿಃ ॥೩೩॥

ಯವಗೋಧೂಮಸಹಿತಾ ಅಕ್ಷತಾಃ ಕಾರ್ತಿಕೇ ಶಿವೇ ।
ಗಂಧಂ ಚಂದನವೃಕ್ಷೋತ್ಥಂ ದೇಯಂ ಶರ್ವಾಯ ಭಸ್ಮಯುಕ್॥೩೪॥

ಬಿಲ್ವಪತ್ರಂ ಚಂಪಕಂ ಚ ನಂದ್ಯಾವರ್ತಾಂಬುಜಂ ಶಿವೇ ।
ದೇಯಂ ತಂ ನಿಧನೇತ್ಯಾದಿ ಪೂಜಯೇತ ಭವಾದಿಭಿಃ ॥೩೫॥

ಬಿಲ್ವತ್ವಗ್ಘೃತಸಂಯುಕ್ತಂ ಧೂಪಂ ದದ್ಯಾಚ್ಚ ಕಾರ್ತಿಕೇ ।
ಘೃತದೀಪಾಃ ಪ್ರದಾತವ್ಯಾ ದೀಪಮಾಲಾಃ ಸಮುಜ್ಜ್ವಲಾಃ ॥೩೬॥

---

ಯಾದರೂ ರುದ್ರಾವೃತ್ತಿ ಮಾಡಬೇಕು. ಪಂಚಬ್ರಹ್ಮಸ್ವರೂಪನಾದ ಶಿವನಲ್ಲಿ ಹೀಗೆ ಅಭಿಷೇಕಮಾಡಿದ ನಂತರ 'ಭವಾಯ' ಎಂಬ ಶಿವನ ಎಂಟು ನಾಮೋಚ್ಚಾರಣ ಪೂರ್ವಕವಾಗಿ ದರ್ಭೋದಕಗಳಿಂದ ತರ್ಪಣಮಾಡಬೇಕು. ॥೩೦-೩೧-೩೨॥

ಶಂಖೋದಕದಿಂದ ಅಭಿಷೇಕಮಾಡಿ, ಬಟ್ಟೆಯಿಂದ ಒರೆಸಿ, ಪೀಠದಲ್ಲಿ ಸ್ಥಾಪಿಸಿ, ವಸ್ತ್ರ, ಉಪವೀತ, ಅಕ್ಷತೆ, ಮುಂತಾದವುಗಳನ್ನು ಸಮರ್ಪಿಸಬೇಕು. ಯವ ಗೋದುವೆಸಮೇತವಾದ ಅಕ್ಷತೆಗಳು, ಕಾರ್ತಿಕಮಾಸದಲ್ಲಿ ಹೇಳಲ್ಪಟ್ಟಿವೆ. ಪಾರ್ವತಿಯೆ! ಚಂದನ ಕೊರಡಿನ ಗಂಧವನ್ನು ಶಿವನಿಗೆ ಭಸ್ಮಸಮೇತವಾಗಿ ಅರ್ಪಿಸಬೇಕು. ॥೩೩-೩೪॥

ಬಿಲ್ವಪತ್ರೆ, ಸಂಪಿಗೆ, ನಂದ್ಯಾವರ್ತ, ಕಮಲ, ಈ ಹೂಗಳನ್ನು "ನಿಧನಪತಯೇ ನಮಃ" "ಭವಾಯ ನಮಃ" ಮುಂತಾದ ನಾಮಗಳಿಂದ ಪೂಜಿಸಬೇಕು. ಬಿಲ್ವವೃಕ್ಷದ ತೊಗಟೆಗೆ ತುಪ್ಪದ ದೀಪಗಳನ್ನೂ, ಪ್ರಜ್ವಲಿಸುವ ದೀಪಮಾಲೆಗಳನ್ನೂ ಜೋಡಿಸಿ ಶಿವನಿಗಾಗಿ ಹೊತ್ತಿಸಬೇಕು. ॥೩೫-೩೬॥

ಸ ಶುಕ್ಲತಿಲಸಂಪೂರ್ಣಂ ಕೃಸರಂ ಘೃತಶರ್ಕರಂ ।
ಘಾರಿಕಾಪೂಪಸಹಿತಂ ದದ್ಯಾನ್ನೈವೇದ್ಯಮೀಶಿತುಃ ॥೩೭॥

ತಾಂಬೂಲಂ ಚ ತತೋ ದದ್ಯಾತ್ಕ್ಷೀರಂ ತತ್ರ ನಿವೇದಯೇತ್ ।
ನೀರಾಜಯೇತ್ತತೋ ಲಿಂಗಂ ತೌರ್ಯತ್ರಿಕರವಾನ್ವಿತಂ ॥೩೮॥

ಶತಾಮಲಕಸಂಪೂರ್ಣಂ ಕೃಸರಂ ಘೃತಶರ್ಕರಂ ।
ಕುರ್ಯಾತ್ಕರ್ಪೂರರಜಂ ಪಶ್ಚಾಚ್ಛತ್ರವ್ಯಜನಮಾಚರೇತ್ ॥೩೯॥

ಆದರ್ಶ ವೇಣುವೀಣಾದಿ ಶಂಖಕಾಹಲದುಂದುಭೀನ್ ।
ಪ್ರದಕ್ಷಿಣಾಪ್ರಣಾಮಾದೀನ್ನರ್ತನಂ ಚ ಮಹೇಶ್ವರಂ ॥೪೦॥

ಕುರ್ಯಾಚ್ಚ ನಾಮಭಿರ್ದೇವಿ ಪೂಜಯೀತ ಸ್ತುವೀತ ಚ ।
ತತ್ರ ನಾಮ್ನಾಂ ಪ್ರವಕ್ಷ್ಯಾಮಿ ಸಂಖ್ಯಾಮಾತ್ರಶತಾಷ್ಟಕಾಂ ॥೪೧॥

---

ಬಿಳಿ ಎಳ್ಳಿನಿಂದ ರಚಿತವಾದ ಚಿಗಳಿ, ತುಪ್ಪ, ಸಕ್ಕರೆ, ಘಾರಿಗೆ, ಒಬ್ಬಟ್ಟು ಇವುಗಳ ನೈವೇದ್ಯವನ್ನು ಈಶ್ವರನಿಗೆ ಸಮರ್ಪಿಸಬೇಕು. ಅನಂತರ ತಾಂಬೂಲವನ್ನೂ, ತರುವಾಯ ಹಾಲನ್ನೂ ನಿವೇದನಮಾಡಬೇಕು. ಆಮೇಲೆ ಮಂಗಳವಾದ್ಯಗಳೊಡನೆ ಶಿವಲಿಂಗಕ್ಕೆ ನೀರಾಜನಮಾಡಬೇಕು. ನೂರು ನೆಲ್ಲಿಕಾಯಿಗಳಿಂದ ಪೂರ್ಣವಾದ ಕೃಸರವನ್ನೂ ತುಪ್ಪ, ಸಕ್ಕರೆ ಇವುಗಳನ್ನೂ ನಿವೇದಿಸಿ ಅನಂತರ ಕರ್ಪೂರಾರತಿಯನ್ನು ಎತ್ತಬೇಕು. ಆಮೇಲೆ ಛತ್ರಿ, ಬೀಸಣಿಗೆ ಇವುಗಳ ಸೇವೆಯನ್ನು ಸಲ್ಲಿಸಬೇಕು. ॥೩೭-೩೮-೩೯॥

ದೇವಿ ! ಕನ್ನಡಿ, ಕೊಳಲು, ವೀಣೆ, ಮೊದಲಾದವುಗಳ ಸೇವೆ ಮತ್ತು ಶಂಖ, ಕಹಳೆ, ನಗಾರಿ ವಾದ್ಯ ಧ್ವನಿಗಳನ್ನು ಮಾಡಿಸಿ, ಪ್ರದಕ್ಷಿಣೆ ನಮಸ್ಕಾರಾದಿಗಳನ್ನೂ ನಾಟ್ಯವನ್ನೂ ಮಹೇಶ್ವರನಿಗೆ ಸಮರ್ಪಿಸಬೇಕು. ಅನಂತರ ಮುಂದೆ ಹೇಳುವ ನಾಮಗಳಿಂದ ಪೂಜಿಸಿ, ಆಮೇಲೆ ಸ್ತುತಿಸಬೇಕು. ಪಾರ್ವತಿ ! ಆ ನೂರೆಂಟು ನಾಮಗಳನ್ನೂ, ಸ್ತೋತ್ರವನ್ನೂ ಹೇಳುತ್ತೇನೆ. ಸಾವಧಾನ ಮನಸ್ಸಿನಿಂದ ಲಾಲಿಸೆಂದು ಶಿವನಿಂತೆಂದನು. ॥೪೦-೪೧॥

ಸ್ತುತಿಂ ಚ ತೇ ಪ್ರವಕ್ಷ್ಯಾಮಿ ಸಮಾಹಿತಮನಾಃ ಶೃಣು ।
ಓಂ ವಿಶ್ವಾಧಿಕಾಯ ವೇದ್ಯಾಯ ವೇದಾಂತ ನಿರತಾಯ ಚ ॥೪೨॥

ಪರಾವರಾಯ ವಾರ್ಯಾಯ ಸರ್ವದಾಯ ಪಿನಾಕಿನೇ ।
ಉಮಾಧವಾಯ ದೇವಾಯ ತಾಮ್ರಾಯಾಥಾರುಣಾಯ ಚ ॥೪೩॥

ಬಭ್ರವೇ ನೀಲಕಂಠಾಯ ಘಟಾಹಸ್ತಾಯ ಶಂಭವೇ ।
ರುದ್ರಾಯಾಮೇಯ ವೀರ್ಯಾಯ ಸರ್ವದಾಯ ಪಿನಾಕಿನೇ ॥೪೪॥

ಜಾತೂಕರ್ಣ್ಯಾಯ ಸೋಮಾಯ ಭವಾಯ ಭವಹೇತವೇ ।
ಉಗ್ರಾಯ ಘೋರರೂಪಾಯ ವಾಮದೇವಾಯ ಮುಂಡಿನೇ ॥೪೫॥

ಖಗಮಾಯಾಶಮಾಯಾಥ ಘನವಾಹಾಯ ವರ್ಚಸೇ ।
ಪಂಚಾನನಾಯ ಪತಯೇ ಯತಯೇವೀತರಾಗಿಣೇ ॥೪೬॥

---

೧ ಓಂ ವಿಶ್ವಾಧಿಕಾಯ ನಮಃ
೨ ಓಂ ವೇದ್ಯಾಯ ನಮಃ
೩ ಓಂ ವೇದಾಂತ ನಿರತಾಯ ನಮಃ
೪ ಓಂ ಪರಾವರಾಯ ನಮಃ
೫ ಓಂ ವಾರ್ಯಾಯ ನಮಃ
೬ ಓಂ ಸರ್ವದಾಯ ನಮಃ
೭ ಓಂ ಪಿನಾಕಿನೇ ನಮಃ
೮ ಓಂ ಉಮಾಧವಾಯ ನಮಃ
೯ ಓಂ ದೇವಾಯ ನಮಃ
೧೦ ಓಂ ತಾಮ್ರಾಯ ನಮಃ
೧೧ ಓಂ ಅರುಣಾಯ ನಮಃ
೧೨ ಓಂ ಬಭ್ರವೇ ನಮಃ
೧೩ ಓಂ ನೀಲಕಂಠಾಯ ನಮಃ
೧೪ ಓಂ ಘಟಾಹಸ್ತಾಯ ನಮಃ
೧೫ ಓಂ ಶಂಭವೇ ನಮಃ
೧೬ ಓಂ ರುದ್ರಾಯ ನಮಃ
೧೭ ಓಂ ಅಮೇಯವೀರ್ಯಾಯ ನಮಃ
೧೮ ಓಂ ಸರ್ವದಾಯ ನಮಃ
೧೯ ಓಂ ಪಿನಾಕಿನೇ ನಮಃ
೨೦ ಓಂ ಜಾತೂಕರ್ಣ್ಯಾಯ ನಮಃ
೨೧ ಓಂ ಸೋಮಾಯ ನಮಃ
೨೨ ಓಂ ಭವಾಯ ನಮಃ
೨೩ ಓಂ ಭವಹೇತವೇ ನಮಃ
೨೪ ಓಂ ಉಗ್ರಾಯ ನಮಃ
೨೫ ಓಂ ಘೋರರೂಪಾಯ ನಮಃ
೨೬ ಓಂ ವಾಮದೇವಾಯ ನಮಃ
೨೭ ಓಂ ಮುಂಡಿನೇ ನಮಃ
೨೮ ಓಂ ಖಗಮಾಯಾಶಮಾಯ ನಮಃ
೨೯ ಓಂ ಘನವಾಹಾಯ ನಮಃ
೩೦ ಓಂ ವರ್ಚಸೇ ನಮಃ

ಚಾಮುರಾಯ ಶರಣ್ಯಾಯ ವಸಾಮಾಂಸಪ್ರಿಯಾಯ ಚ ।
ಪನ್ನಗಾಭರಣಾಯಾಥ ಸನ್ನಗೋರ್ಧ್ವನಿವಾಸಿನೇ ॥೪೭॥

ಆಸನ್ನಜನಪಾಲಾಯ ನೀಲಗ್ರೀವಾಯ ವೇಧಸೇ ।
ಅಮೋಘಬಲವೀರ್ಯಾಯ ಶತಾವರ್ತಾಯ ರಾಗಿಣೇ ॥೪೮॥

ಹಿರಣ್ಯವರವೀರ್ಯಾಯ ರಸೇಂದ್ರವರವೀಜಿನೇ ।
ಧ್ವಜಿನೇ ಗರ್ಜಮಾನಾಯ ಹುಂಕಾರಾಯೋರುತೇಜಸೇ ॥೪೯॥

ತಿಗ್ಮಾಯುಧಾಯ ಯೋಧಾಯ ರಥಾಧಿಪತಯೇ ನಮಃ ।
ಬಿಲ್ವಿನೇ ಬಿಲ್ವಪೂಜ್ಯಾಯ ಪ್ರಸನ್ನಾಯ ಕಪಾಲಿನೇ ॥೫೦॥

ಭಿಕ್ಷವೇ ಯಕ್ಷಪೂಜ್ಯಾಯ ತ್ರ್ಯಕ್ಷಾಯ ಪ್ರಥಮಾಯ ಚ ।
ಉಷ್ಣೀಷಿಣೇ ಮುಕುಟಿನೇ ಗದಾಹಸ್ತಾಯ ವಜ್ರಿಣೇ ॥೫೧॥

---

೩೧ ಓಂ ಪಂಚಾನನಾಯ ನಮಃ
೩೨ ಓಂ ಪತಯೇ ನಮಃ
೩೩ ಓಂ ಯತಯೇ ನಮಃ
೩೪ ಓಂ ವೀತರಾಗಿಣೇ ನಮಃ
೩೫ ಓಂ ಚಾಮುರಾಯ ನಮಃ
೩೬ ಓಂ ಶರಣ್ಯಾಯ ನಮಃ
೩೭ ಓಂ ವಸಾಮಾಂಸಪ್ರಿಯಾಯ ನಮಃ
೩೮ ಓಂ ಪನ್ನಗಾಭರಣಾಯ ನಮಃ
೩೯ ಓಂ ಸನ್ನಗೋರ್ಧ್ವನಿವಾಸಿನೇ ನಮಃ
೪೦ ಓಂ ಆಸನ್ನಜನಪಾಲಾಯ ನಮಃ
೪೧ ಓಂ ನೀಲಗ್ರೀವಾಯ ನಮಃ
೪೨ ಓಂ ವೇಧಸೇ ನಮಃ
೪೩ ಓಂ ಅಮೋಘಬಲವೀರ್ಯಾಯ ನಮಃ
೪೪ ಓಂ ಶತಾವರ್ತಾಯ ನಮಃ
೪೫ ಓಂ ರಾಗಿಣೇ ನಮಃ
೪೬ ಓಂ ಹಿರಣ್ಯವರವೀರ್ಯಾಯ ನಮಃ
೪೭ ಓಂ ರಸೇಂದ್ರವರವೀಜಿನೇ ನಮಃ
೪೮ ಓಂ ಧ್ವಜಿನೇ ನಮಃ
೪೯ ಓಂ ಗರ್ಜಮಾನಾಯ ನಮಃ
೫೦ ಓಂ ಹುಂಕಾರಾಯ ನಮಃ
೫೧ ಓಂ ಉರುತೇಜಸೇ ನಮಃ
೫೨ ಓಂ ತಿಗ್ಮಾಯುಧಾಯ ನಮಃ
೫೩ ಓಂ ಯೋಧಾಯ ನಮಃ
೫೪ ಓಂ ರಥಾಧಿಪತಯೆ ನಮಃ
೫೫ ಓಂ ಬಿಲ್ವಿನೇಬಿಲ್ವಪೂಜ್ಯಾಯ ನಮಃ
೫೬ ಓಂ ಪ್ರಸನ್ನಾಯ ನಮಃ
೫೭ ಓಂ ಕಪಾಲಿನೇ ನಮಃ
೫೮ ಓಂ ಭಿಕ್ಷವೇ ನಮಃ
೫೯ ಓಂ ಯಕ್ಷಪೂಜ್ಯಾಯ ನಮಃ

ಖಡ್ಗಖೇಟಕರಾಯಾಥ ಭಿಷಗ್ವರ್ಯಾಯ ತೇ ನಮಃ ।
ಭರ್ಗಾಯ ಸಹಮಾನಾಯ ಯುಗಾವರ್ತಾಯ ಭಾವಿನೇ ॥೫೨॥

ಜ್ವಲಜ್ಜ್ವಾಲಾಯ ತುಷ್ಟಾಯ ಪುಷ್ಟಹೃಷ್ಟಾಯ ಧೃಷ್ಣವೇ ।
ಗಣಪ್ರಿಯಾಯ ಗದ್ಯಾಯ ಪರ್ಣಶದ್ಯಾಯ ವೈದ್ಯುತೇ ॥೫೩॥

ವಾಮದೇವಾಯ ಜಾತಾಯ ಸದ್ಯೋಜಾತಾಯ ಪಾವಿನೇ ।
ವರ್ಷತೇ ಗ್ರಸತೇ ಚೈವ ಅವರ್ಷ್ಯಾಯ ವಟಾಯ ಚ ॥೫೪॥

ಕಾಟ್ಯಾಯ ಚ ಪ್ರಪಥ್ಯಾಯ ವಾಸ್ತುಪಾಯ ಗರಾದಿನೇ ।
ಬಲಪ್ರಮಥನಾಯಾಥ ಸರ್ವಭೂತದಮಾಯ ಚ ॥೫೫॥

ಕಾಲನಾಶಾಯ ದೇವಾಯ ಫಲಜ್ವಾಲಾಯ ದಂತಿನೇ ।
ಹನಾಹನಾಯ ಪುಣ್ಯಾಯ ಪುಣ್ಯವಾಸಾಯ ತೇ ನಮಃ ॥೫೬॥

---

೬೦ ಓಂ ತ್ರ್ಯಕ್ಷಾಯ ನಮಃ
೬೧ ಓಂ ಪ್ರಥಮಾಯ ನಮಃ
೬೨ ಓಂ ಉಷ್ಣೀಷಿಣೇ ನಮಃ
೬೩ ಓಂ ಮಕುಟಿನೇ ನಮಃ
೬೪ ಓಂ ಗದಾಹಸ್ತಾಯ ನಮಃ
೬೫ ಓಂ ವಜ್ರಿಣೇ ನಮಃ
೬೬ ಓಂ ಖಡ್ಗಖೇಟಕರಾಯ ನಮಃ
೬೭ ಓಂ ಭಿಷಗ್ವರ್ಯಾಯ ನಮಃ
೬೮ ಓಂ ಭರ್ಗಾಯ ನಮಃ
೬೯ ಓಂ ಸಹಮಾನಾಯ ನಮಃ
೭೦ ಓಂ ಯುಗಾವರ್ತಾಯ ನಮಃ
೭೧ ಓಂ ಭಾವಿನೇ ನಮಃ
೭೨ ಓಂ ಜ್ವಲಜ್ಜ್ವಾಲಾಯುತಾಯ ನಮಃ
೭೩ ಓಂ ತುಷ್ಟಾಯ ನಮಃ
೭೪ ಓಂ ಪುಷ್ಟಹೃಷ್ಟಾಯ ನಮಃ
೭೫ ಓಂ ಧೃಷ್ಣವೇ ನಮಃ
೭೬ ಓಂ ಗಣಪ್ರಿಯಾಯ ನಮಃ
೭೭ ಓಂ ಗದ್ಯಾಯ ನಮಃ
೭೮ ಓಂ ವರ್ಣಶದ್ಯಾಯ ನಮಃ
೭೯ ಓಂ ವೈದ್ಯುತೇ ನಮಃ
೮೦ ಓಂ ವಾಮದೇವಾಯ ನಮಃ
೮೧ ಓಂ ಸದ್ಯೋಜಾತಾಯ ನಮಃ
೮೨ ಓಂ ಪಾವಿನೇ ನಮಃ
೮೩ ಓಂ ವರ್ಷತೇ ನಮಃ
೮೪ ಓಂ ಗ್ರಸತೇ ನಮಃ
೮೫ ಓಂ ಅವರ್ಷ್ಯಾಯ ನಮಃ
೮೬ ಓಂ ವಟಾಯ ನಮಃ
೮೭ ಓಂ ಕಾಟ್ಯಾಯ ನಮಃ
೮೮ ಓಂ ಪ್ರಪಥ್ಯಾಯ ನಮಃ

ಪುರುಷಾಯ ಪುರಾಣಾಯ ಋಷಯೇ ವೇದಮೂರ್ತಯೇ ।
ಅನಾದಿಪತಯೇ ಚೈವ ಸರ್ವೇಷಾಂ ಪತಯೇ ನಮಃ ॥೫೭॥

ವೀತಿಹೋತ್ರಾಯ ಪಾತ್ರಾಯ ಸುತ್ರಾಮ್ಣೇ ಭೂಧರಾಯ ಚ ।
ಪರಮೇಶಾಯ ಭಿದ್ಯಾಯ ಅಭಿದ್ಯಾಯ ಸುರಾಯ ಚ ॥೫೮॥

ಬ್ರಹ್ಮಕಂಧರಮಾಲಾಯ ವಾಮನಾಂಗಧರಾಯ ಚ ।
ಇತ್ಯೇತದ್ದೇವಿ ನಾಮ್ನಾ ಮೇ ಶತಾಷ್ಟೇನ ಪ್ರಪೂಜಯೇತ್ ।

ಬಿಲ್ವಪತ್ರೈಶ್ಚ ಕುಸುಮೈಃ ಕಾರ್ತಿಕೇತಿವಿನಾಶಕೃತ್ ॥೬೦॥
ಸ್ತವ್ಯೇನ ಸಂಸ್ತುವೀದೀಶಂ ತಸ್ಮಿನ್ಮಾಸಿ ಶೃಣುಷ್ವ ಮೇ ।

ಪುಣ್ಯೇನಾಯುಷ್ಮದೇನೇಶಿ ಸ್ತೋತ್ರೇಣ ಪರಮೇಶ್ವರಂ ॥೬೧॥

ವಿನಾಶನಜನಾವನಾವಸಿಕ ಭೂಧರೋಮಾಪತೇ
ವಿನಾಶನಿಗಮಾಂತಿಮಪ್ರಥಿಮಧಾಮಸೀಮಾಯ ತೇ ।
ಅಹೀನಮಖಭೂಷಣ ಪ್ರಿಯವರಾಯ ಪಾರ್ಥಾಯ ತೇ
ಹರಾಯ ಪುರಭೇದಿನೇ ಗಜಹರಾಯ ತುಭ್ಯಂ ನಮಃ ॥೬೨॥

---

೮೯ ಓಂ ವಾಸ್ತುಪಾಯ ನಮಃ
೯೦ ಓಂ ಗರಾದಿನೇ ನಮಃ
೯೧ ಓಂ ಬಲಪ್ರಮಥನಾಯ ನಮಃ
೯೨ ಓಂ ಸರ್ವಭೂತದಮನಾಯ ನಮಃ
೯೩ ಓಂ ಕಾಲನಾಶಾಯ ದೇವಾಯ
೯೪ ಓಂ ಫಲಜ್ವಾಲಾಯ ನಮಃ
೯೫ ಓಂ ದಂತಿನೇ ನಮಃ
೯೬ ಓಂ ಹನಾಹನಾಯ ನಮಃ
೯೭ ಓಂ ಪುಣ್ಯಾಪುಣ್ಯವಾಸಾಯ ನಮಃ
೯೮ ಓಂ ಪುರಾಣಪುರುಷಾಯ ನಮಃ
೯೯ ಓಂ ಋಷಯೆವೇದಮೂರ್ತಯೆ ನಮಃ
೧೦೦ ಓಂ ಅನಾದಿಪತಯೆ ನಮಃ
೧೦೧ ಓಂ ಸರ್ವೇಷಾಂಪತಯೇ ವೀತಿಹೋತ್ರಾಯ ನಮಃ
೧೦೨ ಓಂ ಪಾತ್ರಾಯಸುತ್ರಾಮ್ಣೇ ನಮಃ
೧೦೩ ಓಂ ಭೂಧರಾಯ ನಮಃ
೧೦೪ ಓಂ ಭಿದ್ಯಾಯಾಭಿದ್ಯಾಯ ನಮಃ
೧೦೫ ಓಂ ಸುರಾಯ ನಮಃ
೧೦೬ ಓಂ ಬ್ರಹ್ಮಕಂಧರಮಾಲಾಯ ನಮಃ
೧೦೭ ಓಂ ವಾಮನಾಂಗಧರಾಯ ನಮಃ
೧೦೮ ಓಂ ವಿಷ್ಣುರಕ್ತಪ್ರಪಾನಾಯ ಶ್ರೀನರಸಿಂಹಹರಾಯ ನಮಃ

ಗವಾಮಧಿಪ ಶಂಕರ ತ್ರಿನಯನಾರ ಮಹೇಶ್ವರ
ಪ್ರಸೀದ ಪರಮೇಶ್ವರ ಪ್ರಥಮಸೋಮಸೋಮಾಂಕಧೃಕ್ ।
ಶರಾವರ ಕೃತಾಬ್ಧಿಸದ್ಧರಿಶತೋರುಗರ್ವೋನ್ನತ
ತ್ರಿಷುಸ್ಥಿತ ಪುರಾವರ ಪ್ರಕಟಹಾರಿನೇತ್ರೋಜ್ಜ್ವಲ ॥೬೩॥

ಮೃಗಾಜಿನ ಧರಾಂಧಕಾಸುರ ನಿಬರ್ಹಣಾಶಾವಸತ್ಸ-
ವಿಾಕೃತ ಸುಸಾರಣಪ್ರಸರಣೋರುವೀರ್ಯಾಯ ತೇ ।

---

ದೇವಿಯೆ, ಈ ರೀತಿ ನನ್ನ ನೂರೆಂಟು ನಾಮಗಳನ್ನು ಚ್ಚರಿಸುತ್ತಾ ಬಿಲ್ವಪತ್ರೆ, ಪುಷ್ಪ ಇವುಗಳಿಂದ ಕಾರ್ತಿಕಮಾಸದಲ್ಲಿ ಪೂಜೆಮಾಡಿದರೆ ಸಕಲ ಪೀಡೆಯೂ ಪರಿಹಾರ ವಾಗುವುದು. ಪಾರ್ವತಿಯೆ, ಆ ತಿಂಗಳಲ್ಲಿ ಮುಂದೆ ಹೇಳುವ ಸ್ತೋತ್ರಗಳಿಂದ ಸ್ತುತಿಸಬೇಕು. ಪುಣ್ಯಕರವೂ ಆಯುಷ್ಯಪ್ರದವೂ ಪುತ್ರಸಂತಾನಕಾರಣವೂ ಆದ ಆ ಸ್ತೋತ್ರವನ್ನು ನಿನಗೆ ಹೇಳುತ್ತೇನೆ ಕೇಳು ; ॥೪೨-೪೩-೪೪-೪೫-೪೬-೪೭-೪೮-೪೯-೫೦-೫೧-೫೨-೫೩-೫೪-೫೫-೫೬-೫೭-೫೮-೫೯-೬೦-೬೧॥

ದಿಗಂಬರನೂ, ಜನರಕ್ಷಕನೂ, ಪರ್ವತದಲ್ಲಿ ವಾಸಿಸುವವನೂ, ಅಥವಾ ಆದಿಶೇಷನನ್ನು ಧರಿಸಿರುವವನೂ, ಉಮಾರಮಣನೂ, ವೇದಾಂತಪ್ರಖ್ಯಾತವಾದ ದಿವ್ಯ ಎಲ್ಲೆಯುಳ್ಳವನೂ, ಸರ್ಪಭೂಷಣನೂ, ಪ್ರಿಯವಾದ ವರಗಳನ್ನು ಕೊಡು ವವನೂ, ದುಃಖಗಳನ್ನು ಹೋಗಲಾಡಿಸುವವನೂ, ತ್ರಿಪುರರನ್ನು ಭೇದಿಸಿದವನೂ, ಗಜಾಸುರನಿಹಂತೃವೂ ಆದ ನಿನಗೆ ನಮಸ್ಕರಿಸುವೆನು. ॥೬೨॥

ಗೋವುಗಳ ಸ್ವಾಮಿಯೆ, ಲೋಕಮಂಗಳಕರನೆ, ಮೂರುಕಣ್ಣುಗಳುಳ್ಳವನೆ, ನನ್ನನ್ನು ಕಾಪಾಡು ; ಈಶ್ವರನೇ, ಪರಮೇಶನೆ, ಅಗ್ರಗಣ್ಯನೆ, ಉಮಾರಮಣನೆ, ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿರುವವನೆ, ಪ್ರಸನ್ನನಾಗಿ ನನ್ನನ್ನು ಪಾಲಿಸು ; ವಿಷ್ಣುವನ್ನು ಬಾಣವನ್ನಾಗಿ ಮಾಡಿಕೊಂಡು ಸಮುದ್ರವನ್ನೆ ಬತ್ತಳಿಕೆಯನ್ನಾಗಿ ಧರಿಸಿಮೂರು ಲೋಕಗಳಲ್ಲಿಯೂ ಗರ್ವದಿಂದ ಕೊಬ್ಬಿದ್ದ ತ್ರಿಪುರಾಸುರರನ್ನು ಸಂಹ ರಿಸಿದವನೆ, ಮೂರು ಕಣ್ಣುಗಳಿಂದ ಪ್ರಜ್ವಲಿಸುವವನೆ, ನನ್ನನ್ನು ಪಾಲಿಸು. ॥೬೩॥

ಪವಿತ್ರವಾದ ಕೃಷ್ಣಾಜಿನವನ್ನು ಧರಿಸಿರುವವನೂ, ಅಂಧಕಾಸುರಧ್ವಂಸ ಕನೂ, ಆಗಿ ದಿಕ್ಕುಗಳನ್ನೇ ಅಂಬರವನ್ನಾಗಿ ಮಾಡಿಕೊಂಡಿರುವವನೆ, ನೀನು ನಿನ್ನ ಪರಾಕ್ರಮವನ್ನು ವಿಸ್ತರಗೊಳಿಸುವುದಕ್ಕೂ, ಸಂಕೋಚಿಸುವುದಕ್ಕೂ ಸಮರ್ಥನೆನಿ

ಭವಾರ್ಣವ ನಿವಾಸಿನೋದ್ಧೃತ ಕರಾವಲಂಬಾಯ ತೇ
ವೃಷಾಂಗವರಚಾರಿಣೇ ವಸಿತಚೇರಿಣೇ ತೇ ನಮಃ ॥೬೪॥

ಸಮೀರಣ ಸುಪಾರಣಪ್ರವರಧಾರಿಣೇ ವೀರಿಣೇ
ಧರಾಧಿಪ ಸುನಾಮಿತ ಪ್ರಕಟಸಾಮಿಸದ್ವರ್ಷ್ಮಣೇ ।
ಗುಣಾತಿಗ ಗಣಾಸನ ಪ್ರಥಮಸಾಮಗಣ್ಯಾಯ ತೇ
ಶರಣ್ಯ ಪದಪಂಕಜಾನ ತು(?)ಸುಪರ್ವ ಶರ್ವಾಯ ತೇ ॥೬೫॥

ಉಗಣಸ್ತ್ವಂ ಭಗಣಾಧಿಪೋರುಮೌಲಿ-
ರ್ಗಣನಾಥೋರುಗುರುಃ ಪಿತಾಸಿ ಶಂಭೋ ।
ಶರಣಾಗತಿಪಾಲಕೋ ಮಹಾತ್ಮಾ
ವರುಣಾರ್ಚ್ಯೋ ಭವಹಾ ಪುರತ್ರಯಾರಿಃ ॥೬೬॥

---

ಸಿರುವೆ. ಸಂಸಾರವೆಂಬ ಸಾಗರದಲ್ಲಿ ವಾಸಿಸಿ ಉದ್ಧತರಾಗಿರುವ ಜನರನ್ನು ಉದ್ಧಾರ ಮಾಡುವುದರಲ್ಲಿ ಹಸ್ತಾವಲಂಬವನ್ನಿಟ್ಟಿರುವವನೂ, ಶ್ರೇಷ್ಠವಾದ ವೃಷಭದ ಮೇಲೆ ಸಂಚರಿಸುವವನೂ, ಗಜಚರ್ಮಧಾರಿಯೂ ಆದ ನಿನಗೆ ನಮಸ್ಕಾರಮಾಡುವೆನು. ನನ್ನ ಮೇಲೆ ಅನುಗ್ರಹವಿಟ್ಟು ನನ್ನನ್ನು ರಕ್ಷಿಸು. ॥೬೪॥

ಆದಿಶೇಷನನ್ನು ಧರಿಸಿರುವವನೂ, ವೀರನೂ, ವಿಷ್ಣುವಿನಿಂದ ನಮಸ್ಕೃತನೂ, ಪ್ರಖ್ಯಾತನಾದ ಅರ್ಧಚಂದ್ರನನ್ನು ಧರಿಸಿರುವ ದಿವ್ಯದೇಹವುಳ್ಳವನೂ, ಗುಣಗಳನ್ನು ಅತಿಕ್ರಮಿಸಿ ಅವುಗಳಿಗೆ ಸಿಲುಕದವನೂ ಗಣಗಳಿಗೆಲ್ಲಾ ಮೊದಲನೆಯವನೂ, ಸಾಮವೇದದಿಂದ ವಿಶೇಷವಾಗಿ ಸ್ತುತಿಸಲ್ಪಡುವನೂ ಶರಣಾಗತರಾದವರನ್ನು ಸಲಹುವ ಅಡಿದಾವರೆಯುಳ್ಳವನೂ, ದೇವತೆಗಳನ್ನೂ ತಕ್ಕಕಾಲಗಳಲ್ಲಿ ಶಿಕ್ಷಿಸುವವನೂ ಆದ ನಿನಗೆ ನಮಸ್ಕಾರಮಾಡುವೆನು. ॥೬೫॥

ಚಂದ್ರಶೇಖರನೆನಿಸಿ, ಗಣಾಧಿಪನೇ ಮೊದಲಾದವರಿಗೆ ಗುರುವೂ ತಂದೆಯೂ ಆಗಿರುವೆ. ಶರಣುಹೊಕ್ಕವರನ್ನು ಸಲಹುವ ಮಹಾತ್ಮನೂ ವರುಣಪೂಜ್ಯನೂ, ಭವಬಂಧನಾಶಕನೂ, ತ್ರಿಪುರಾಂತಕನೂ ನೀನೇ ಆಗಿರುವೆ. ನಿನ್ನ ಅನುಗ್ರಹದಿಂದಲೇ ಸಾಂಸಾರಿಕವಾದ ಸಮಸ್ತಪೀಡೆಗಳೂ ಪರಿಹಾರವಾಗುವುವು. ॥೬೬॥

ಪತಿರೀಶೋ ಭುವನಸ್ಯ ವಿಶ್ರುತಿ ತ್ವಂ
ಮಯಿ ದೃಷ್ಟಿಂ ವಿತರಾದ್ಯ ಸಂಮುಖೀನಾಂ ।
ಅಧುನಾ ಮಧುನಾಧಿಕಾಂ ಮಹೇಶ
ವಿಧುನಾ ಚಾರುದೃಶಾ ಧುನೋತು ಪಾಪಂ ॥೬೭॥

ಇತಿಸ್ತವೇನ ಮಾಂ ಸ್ತುತ್ವಾ
ನತ್ವಾದೇವಂ ಮಹೇಶ್ವರಂ ।
ಕಾರ್ತಿಕ್ಯಾಂ ಪೌರ್ಣಮಾಯಾಂ ತು
ಹೋಮಃ ಕಾರ್ಯೋ ದ್ವಿಜೋತ್ತಮೈಃ ॥೬೮॥

ಕಪಿಲಾಗೋದ್ವಯಂ ದೇಯಂ ಸವತ್ಸಂ ಚ ಸದಕ್ಷಿಣಾಂ ।
ಮಾಸಂ ನಕ್ತಾಶನೋ ಭೂಯಃ ಸೋಮವಾರೇ ಉಪೋಷಿತಃ ॥೬೯॥

ಕಾರ್ತಿಕೇ ಸೋಮವಾರೇಷು ಪೂಜಯೇತ್ಪರಮೇಶ್ವರಂ ।
ಚತುರ್ಷೂತ್ತಮಮಾಸೇಷು ಪಾಯಸಂ ಚ ನಿವೇದಯೇತ್ ॥೭೦॥

---

ನೀನು ಪ್ರಪಂಚಕ್ಕೇ ಒಡೆಯನಾಗಿ ಈಶ್ವರನೆನಿಸಿರುವೆ. ದೇವ! ನಿನಗೆ ಭಕ್ತರೆನಿಸಿರುವ ನಮ್ಮಮೇಲೆ ಮಧುವಿಗಿಂತಲೂ ಹೆಚ್ಚಾಗಿರುವ ನಿನ್ನ ದೃಷ್ಟಿಯನ್ನು ಬೀರಿ, ಚಂದ್ರರೂಪವಾದ ನಿನ್ನ ಶೀತಲವಾದ ನೋಟದಿಂದ ನಮ್ಮ ಪಾಪಗಳನ್ನು ತೊಲಗಿಸು. ॥೬೭॥

ಈ ರೀತಿಯಾದ ಸ್ತೋತ್ರದಿಂದ ನನ್ನನ್ನು ಸ್ತುತಿಸಿ ಮಹೇಶ್ವರನಿಗೆ ನಮಸ್ಕರಿಸಿ, ಕಾರ್ತಿಕಮಾಸದ ಹುಣ್ಣಿಮೆಯ ದಿನ ಬ್ರಾಹ್ಮಣೋತ್ತಮರಿಂದ ಹೋಮಮಾಡಿಸಬೇಕು. ಕರುವಿನೊಡನೆ ಎರಡು ಕಪಿಲಾಗೋವುಗಳನ್ನು ಯೋಗ್ಯವಾದ ದಕ್ಷಿಣೆಯೊಡನೆ ವಿಪ್ರರಿಗೆ ದಾನಮಾಡಿ, ಆ ಒಂದು ತಿಂಗಳೂ ರಾತ್ರಿ ಭೋಜನಮಾಡಬೇಕು. ವಿಶೇಷವಾಗಿ ಕಾರ್ತಿಕಮಾಸದ ಸೋಮವಾರದ ದಿನ ಉಪವಾಸ ಮಾಡುತ್ತಾ ಪರಮೇಶ್ವರನನ್ನು ಪೂಜಿಸಬೇಕು. ಉತ್ತಮವಾದ ನಾಲ್ಕು ತಿಂಗಳಲ್ಲಿಯೂ ಪಾಯಸವನ್ನು ಸ್ವಾಮಿಗೆ ನಿವೇದನಮಾಡಬೇಕು. ॥೬೮-೬೯-೭೦॥

ದ್ರೋಣಧತ್ತೂರಬಿಲ್ವೈಶ್ಚ ಪೂಜಯೇತ್ಪರಮೇಶ್ವರಂ ।
ಏಕಂ ವಾಪಿ ಚ ಧತ್ತೂರಂ ಮಯಿ ದತ್ವಾ ವಿಲೀಯತೇ ॥೨೧॥

ಸರ್ವೇಷ್ವಪಿ ಚ ಮಾಸೇಷು ಸೋಮವಾರೋ ಪರಃ ಪರಃ ।
ತತ್ರಾಪಿ ಶ್ರಾವಣೇ ಪುಣ್ಯಃ ಕಾರ್ತಿಕಸ್ತಚ್ಛತೋತ್ತರಃ ॥೨೨॥

ತಸ್ಮಿನ್ನುಪೋಷಣಂ ಪೂಜಾ ಪ್ರಶಸ್ತಾ ಸೋಮವಾಸರೇ ।
ಶಕ್ತೇನೋಪೋಷಣಂ ಕಾರ್ಯಮನ್ಯಥಾ ನಿಶಿ ಭೋಜನಂ ॥೨೩॥

ಧಾತ್ರೀಮೂಲೇ ವಿಶೇಷೇಣ ನಕ್ತಂ ಪೂಜ್ಯ ಮಹೇಶ್ವರಂ ।
ಶಾಂಭವಾನ್ಭೋಜಯನ್ದೇವಿ ಧರಿತ್ರೀಫಲಮಶ್ನುತೇ ॥೨೪॥

ಬ್ರಾಹ್ಮಣೈರೇವ ಕರ್ತವ್ಯಂ ನ ವಾರವ್ರತಮೇವ ಮೇ ।
ಸದಾ ಪ್ರಿಯಕರಂ ದೇವಿ ಸೋಮವಾರಂ ಶಿವೇ ಸದಾ ॥೨೫॥

---

ಈ ಕಾರ್ತಿಕಮಾಸದಲ್ಲಿ ಕಂಚುವಾಳ, ದತ್ತೂರಿ ಈ ಹೂಗಳಿಂದಲೂ ಬಿಲ್ವಪತ್ರಿಗಳಿಂದಲೂ ಪರಮೇಶ್ವರನನ್ನು ಪೂಜಿಸಬೇಕು. ದೇವಿ, ಕಾರ್ತಿಕ ಸೋಮವಾರದ ದಿನ ಒಂದು ದತ್ತೂರಿ ಹೂವನ್ನು ನನಗೆ ಪೂಜಿಸಿದವನೂ ನನ್ನಲ್ಲಿಯೇ ಐಕ್ಯವಾಗುವನು. ಎಲ್ಲಾ ತಿಂಗಳಲ್ಲಿಯೂ ಸೋಮವಾರವೇ ಅತಿ ಶ್ರೇಷ್ಠವೂ ಮುಖ್ಯವೂ ಆಗಿರುವುದು. ಅದರಲ್ಲಿ ಶ್ರಾವಣಮಾಸದ ಸೋಮವಾರವು ಪುಣ್ಯಕರವು. ಅದಕ್ಕಿಂತಲೂ ಕಾರ್ತಿಕಸೋಮವಾರವು ನೂರುಪಾಲು ಹೆಚ್ಚು ಗುಣವುಳ್ಳದ್ದು. ಆ ಸೋಮವಾರ ಉಪವಾಸಮಾಡಿ, ಶಿವನನ್ನು ಪೂಜಿಸುವುದು ಪ್ರಶಸ್ತವೆನಿಸುವುದು. ದೇವಿ! ಈ ಸೋಮವಾರಗಳಲ್ಲಿ ಶಕ್ತಿಯಿದ್ದವನು ಉಪವಾಸ ಮಾಡುವುದೊಳ್ಳೆಯದು. ಶಕ್ತಿಯಿಲ್ಲದವನಾದರೆ ಹಗಲೆಲ್ಲಾ ಉಪವಾಸವಿದ್ದು ರಾತ್ರಿವೇಳೆ ಭೋಜನಮಾಡಬೇಕು. ॥೨೧-೨೨-೨೩॥

ದೇವಿಯೇ, ನೆಲ್ಲಿಮರದಬುಡದಲ್ಲಿ ರಾತ್ರಿ ಮಹೇಶನನ್ನರ್ಚಿಸಿ, ಶೈವರಿಗೆ ಭೋಜನಮಾಡಿಸಿದವನು ಭೂದಾನಮಾಡಿದ ಫಲವನ್ನು ಹೊಂದುವನು. ಬ್ರಾಹ್ಮಣರೇ ಈ ಮಾಸವ್ರತವನ್ನು ಮಾಡಬೇಕೆಂಬ ನಿಯಮವೇನೂ ಇಲ್ಲ ಈ ವಾರ ವ್ರತವನ್ನು ಯಾರುಬೇಕಾದರೂ ಆಚರಿಸಬಹುದು. ಒಟ್ಟಿನಲ್ಲಿ ಎಲ್ಲಾವಾರಗಳಿಗಿಂತಲೂ ಸೋಮವಾರವ್ರತವು ನನಗೆ ಯಾವಾಗಲೂ ಪ್ರೀತಿಪಾತ್ರವಾಗಿರುವುದೆಂದು ತಿಳಿ. ॥೨೪-೨೫॥

ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್ ।
ಯೇ ಸೋಮವಾರೇ ಸ್ವಚ್ಛಂದಂ ದಿವಾ ಕುರ್ವಂತಿ ಭೋಜನಂ ॥೨೬॥

ತೇ ವಿಷ್ಠಾಭೋಜಿನೋ ದೇವಿ ಭವಿಷ್ಯಂತಿ ಪರೇತಕಾಃ ।
ಸೋಮಾರ್ದ್ರಾಪಾತಯುಕ್ತಶ್ಚೇಚ್ಛಿವಯೋಗಃ ಸ ಏವ ಹಿ ॥೨೭॥

ವಿಶೇಷಾತ್ಕಾರ್ತಿಕೇ ಮಾಸಿ ತಸ್ಮಿನ್ಪೂಜಾ ಮಮೋತ್ತಮಾ ।
ಸೋಮಾರ್ದ್ರಾಪಾತಯುಕ್ತೋ ಯಃ ಸೋಮವಾರಃ ಶಿವೇ ಸದಾ ॥೨೮॥

ಸಹಸ್ರಾರ್ಕಗ್ರಹೈಸ್ತುಲ್ಯಃ ಸರ್ವಪಾಪಪ್ರಣಾಶಕೃತ್ ।
ತಸ್ಮಿನ್ನಭ್ಯರ್ಚನಂ ಪುಣ್ಯಂ ಪ್ರಶಸ್ತಂ ಪ್ರೀತಿಕೃನ್ಮಮ ॥೨೯॥

॥ ಈಶ್ವರ ಉವಾಚ ॥

ಏವಂ ಯಃ ಕಾರ್ತಿಕಂ ಮಾಸಂ ಪೂಜಯೈವ ಹಿ ಯಾಪಯೇತ್ ।
ತಸ್ಯ ಪುಣ್ಯಫಲಂ ವಕ್ತುಂ ನಾಲಂ ವೇದಾಸುರಾಸುರೈಃ ॥೩೦॥

ಕಾಂಚನೇನ ವಿಮಾನೇನ ವಂಶಕೋಟಿಸಮನ್ವಿತಃ ।
ಯಾತಿ ಮತ್ಸದನಂ ದೇವಿ ಕೈಲಾಸಂ ದೇವದುರ್ಲಭಂ ॥೩೧॥

---

ಈ ಸೋಮವಾರವ್ರತವು ಶ್ರುತಿವಿಹಿತವಾಗಿರುವುದರಿಂದ ಅದನ್ನು ತ್ಯಜಿಸಿದವನು ಪತಿತನಾಗುವನು. ಸೋಮವಾರದದಿನ ಸ್ವಚ್ಛಂದವಾಗಿ ಹಗಲು ಭೋಜನ ಮಾಡುವವರು ಅಮೇಧ್ಯಭೋಜಿಗಳೆನಿಸಿ ಪ್ರೇತಸ್ವರೂಪಿಗಳಾಗುವರು. ಸೋಮವಾರ, ಆರ್ದ್ರಾನಕ್ಷತ್ರ, ಮತ್ತು ವ್ಯತೀಪಾತ ಈ ಮೂರೂ ಸೇರಿದರೆ ಅದೇ ಶಿವಯೋಗವೆಂದು ಹೇಳಲ್ಪಡುವುದು. ಈ ಶಿವಯೋಗವು ಕಾರ್ತಿಕಮಾಸದಲ್ಲಿ ಒದಗಿದರೆ ಆಗ ಮಾಡುವ ನನ್ನ ಪೂಜೆಯು ತುಂಬಾ ಶ್ರೇಷ್ಠವೆನಿಸುವುದು. ॥೨೬-೨೭॥

ಸೋಮವಾರ, ಆದ್ರಾನಕ್ಷತ್ರ, ವ್ಯತೀಪಾತಗಳಿಂದಕೂಡಿದ ಕಾರ್ತಿಕಮಾಸದ ದಿನವು ಸಾವಿರಸೂರ್ಯಗ್ರಹಣಗಳಿಗೆ ಸಮಾನವೆನಿಸಿ ಸಕಲಪಾತಕನಾಶಕರವಾಗಿರುವುದು. ಆದಿನ ನನ್ನ ಪೂಜೆಯು ಪುಣ್ಯವೂ, ಪ್ರಶಸ್ತವೂ, ನನಗೆ ಪ್ರೀತಿಕರವೂ ಆಗಿರುವುದು. ॥೨೮-೨೯॥

ದೇವಿಯೇ, ಹೀಗೆ ನನ್ನ ಪೂಜೆಯಿಂದಲೇ ಕಾರ್ತಿಕಮಾಸವನ್ನು ಕಳೆಯುವವನ ಪುಣ್ಯಫಲವನ್ನು ಹೇಳಲು ವೇದ ಮತ್ತು ದೇವದಾನವರಾರಿಂದಲೂ ಸಾಧ್ಯ

ಆರಾತ್ರಿಕ್ಯಂ ಕಾರ್ತಿಕೇ ಯಸ್ತು ಕುರ್ಯಾ-
ದಾರ್ತಿಘ್ನಂ ತತ್ಕೀರ್ತಿದಂ ತತ್ತ್ರಿಲೋಕೇ ।
ವರ್ತಿಂ ಘೃತಾಕ್ತಾಮಭಿತಃ ಪ್ರದೀಪ್ತಾಂ
ಸಸ್ತಾರ್ತಿಂ ವೈ ಲಿಂಗಮೂರ್ತಿಂ ಮಹೇಶಂ ॥೮೨॥

ದೃಷ್ಟ್ವಾ ಚೇಷ್ಟ್ವಾ ಯತ್ಫಲಂ ಸರ್ವಸತ್ರೈ-
ಸ್ತಲ್ಲಬ್ಧ್ವಾ ವೈ ಯಾತಿ ಶಂಭೋಃ ಪದಂ ನೋ ।
ಊರ್ಜೇ ಸ್ಯೂರ್ಜೇ ಧೂರ್ಜಟೇರ್ಲಿಂಗವೀಕ್ಷ್ಯ
ಸಾಯಂ ಸೋಮೇ ವಾಸರೇ ಪಾಪಸಂಘಂ ॥೮೩॥

ಗರ್ಜತ್ಯೇವಂ ತರ್ಜಿತಾ ಸೌರಿದೂರಾ ।
ವರ್ಜತ್ಯೇನಂ ತೇನರಾಸ್ತರ್ಜಿತಾ ಹಿ ॥೮೪॥

---

ವಿಲ್ಲ. ಅವನು ಚಿನ್ನದ ವಿಮಾನದಲ್ಲಿ ಕುಳಿತು ತನ್ನ ಕೋಟಿವಂಶದವರೊಡನೆ ದೇವತೆಗಳಿಗೂ ದುರ್ಲಭವೆನಿಸಿರುವ ನನ್ನ ಕೈಲಾಸವನ್ನು ಸೇರುತ್ತಾನೆ. ॥೮೦-೮೧॥

ಕಾರ್ತಿಕಮಾಸದಲ್ಲಿ ದೀಪಾರತಿಗಳನ್ನೇರ್ಪಡಿಸಿದರೆ ಅದು ಹಾಗೆ ದೀಪಗಳನ್ನಿಡಿಸಿದವನ ಪೀಡೆಗಳನ್ನೆಲ್ಲಾ ಪರಿಹರಿಸಿ ಮೂರುಲೋಕಗಳಲ್ಲಿಯೂ ಕೀರ್ತಿಯನ್ನುಂಟುಮಾಡುತ್ತದೆ. ತುಪ್ಪದಿಂದ ನೆನೆಸಿದ ಬತ್ತಿಗಳನ್ನು ಸುತ್ತಲೂ ಹೊತ್ತಿಸಿ, ಲಿಂಗಮೂರ್ತಿಯಾದ ಮಹೇಶನಿಗೆ ಈ ಕಾರ್ತಿಕಮಾಸದಲ್ಲಿ ಆರತಿಮಾಡಬೇಕು. ಇದರಿಂದ ಮಹೇಶ್ವರನು ಸುಪ್ರೀತನಾಗುವನು. ॥೮೨॥

ಈ ಕಾರ್ತಿಕಮಾಸವ್ರತಾಚರಣೆಯಿಂದ ವೈದಿಕಗಳಾದ ಸಮಸ್ತಯಾಗಗಳನ್ನು ನೋಡಿ ಅಥವಾ ಆಚರಿಸಿ ಪಡೆಯಬಹುದಾದ ಫಲವನ್ನೆಲ್ಲಾ ಪಡೆದು ಕೊನೆಗೆ ಶಂಕರನ ದಿವ್ಯಸ್ಥಾನವನ್ನು ಸೇರುವನಲ್ಲದೇ, ಸೋಮವಾರದ ಸಾಯಂಕಾಲದಲ್ಲಿ ಮಹಾಮಹಿಮವಾದ ಶಿವಲಿಂಗವನ್ನು ಕೇವಲ ದರ್ಶನಮಾಡಿದವರೂ ಕೂಡ ಪಾಪರಾಶಿಯನ್ನೂ ಅನಾಯಾಸವಾಗಿ ಕಳೆದುಕೊಳ್ಳುವರು. ॥೮೩॥

ಯಮನಿಗೆ ಭಯಪಡುತ್ತಿದ್ದವರು ಈ ಪೂಜಾಫಲವನ್ನು ಸಂಪಾದಿಸಿದರೆ ಆ ಯಮನನ್ನೇ ಭಯಪಡಿಸಬಹುದು. ಅಂದರೆ ಅವರಿಗೆ ಐಹಿಕದಲ್ಲಿ ಯಮನಿಂದ ಯಾವ ಭಯವೂ ಇರುವುದಿಲ್ಲ. ॥೮೪॥

ಪರ್ವಣ್ಯುನೋ ಸರ್ವಮುಖರ್ವಪುಣ್ಯದಂ
ದೂರ್ವಾಭಿದೇವಾರ್ಚ್ಯಸುಪರ್ವವಂದ್ಯಃ ।
ಔರ್ವಾನಲೇಬ್ಧಾವಿವ ಪಾಪರಾಶಿಃ
ಶೋಷೋ ಭವೇತ್ಪರ್ವತರಾಜಪುತ್ರಿ ॥೮೫॥

ಧಾತ್ರೀಪತ್ರೈಃ ಪೂಜಯಂತ್ಯೂರ್ಜಮಾಸಿ
ತೇ ವೈ ಧರಿತ್ರೀಪ್ರತಿದಾತುಃ ಫಲಂ ಹಿ ।
ತೇ ಸಾವಿತ್ರೀಜಾಪಿನಾಂ ಸಂಲಭಂತೇ
ಸವಿತ್ರೀ ತ್ವಂ ಗುಹ್ಯಮೇತಚ್ಛೃಣುಷ್ವ ॥೮೬॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಕಾರ್ತಿಕಮಾಸಾರ್ಚನಂ ನಾಮ
ಪ್ರಕರಣನಿರೂಪಣಂ ನಾಮೈಕವಿಂಶೋಽಧ್ಯಾಯಃ

---

ಎಲೌ ಪರ್ವತರಾಜಕುಮಾರಿಯೆ, ಪರ್ವಕಾಲಗಳಲ್ಲಿ ಶಿವಪೂಜೆಯು ಸಂಪೂರ್ಣ ಪುಣ್ಯಪ್ರದವು. ಆ ಕಾಲದಲ್ಲಿ ಶಿವಲಿಂಗವನ್ನು ಗರಿಕೆಗಳಿಂದ ಅರ್ಚಿಸಿದ ಮಾತ್ರದಿಂದಲೇ ಮಾನವನು ದೇವವಂದ್ಯನಾಗುವನು. ಅವನು ಮಾಡಿದ ಪಾಪವೆಲ್ಲವೂ ಸಮುದ್ರದ ಮಧ್ಯದಲ್ಲಿರುವ ಬಡಬಾಗ್ನಿಯು ನೀರನ್ನು ಇಂಗಿಸುವಂತೆ ಈ ಪೂಜಾಮಹಿಮೆಯಿಂದ ಒಣಗಿಹೋಗುವುವು. ॥೮೫॥

ಈ ಕಾರ್ತಿಕಮಾಸದಲ್ಲಿ ನೆಲ್ಲಿಯ ಎಲೆಗಳಿಂದ ನನ್ನನ್ನು ಪೂಜೆಮಾಡುವವನು ಭೂದಾನಮಾಡುವ ಫಲವನ್ನು ಹೊಂದುತ್ತಾನೆ. ಆರೀತಿ ಕಾರ್ತಿಕಮಾಸದಲ್ಲಿ ಶಿವಪೂಜಾನಿರತರಿಗೆ ಗಾಯತ್ರೀಮಂತ್ರಜಪ ಮಾಡುವವರಿಗೆ ಗಾಯತ್ರೀಸ್ವರೂಪವು ಗೋಪ್ಯವಾಗಿರುವಂತೆ ಈ ಮಾಸಶಿವಪೂಜಾರಹಸ್ಯವೇರ್ಪಟ್ಟಿರುವುದು. ದೇವಿ, ಅದನ್ನೇ ನಿನಗೆ ಹೇಳಿರುವೆನು. ಕೇಳು, ಎಂದು ಶಿವನು ಪಾರ್ವತಿಗೆ ಹೇಳಿದನು. ॥೮೬॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಕಾರ್ತಿಕಮಾಸಪೂಜಾಪ್ರಕರಣ ನಿರೂಪಣೆಯೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ದ್ವಾವಿಂಶೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

ಮಾರ್ಗಶೀರ್ಷೇಽರ್ಚಯೇದ್ದೇವಂ ವಿಶೇಷೇಣಾಂತರಾತ್ಮನಾ ।
ಮಾಸಾನಾಂ ಪರಮೋ ಮಾಸಃ ಮಾರ್ಗಶೀರ್ಷೋ ಗಿರೀಂದ್ರಜೇ ||೧||

ಅಸ್ಮಿನ್ನಭ್ಯರ್ಚನಂ ಪುಂಸಾಂ ವಿಶಿಷ್ಟಫಲದಾಯಕಂ ।
ಮಾಸಾದೌ ಪ್ರಥಮಂ ಸ್ನಾಯಾನ್ನದೀನದತಟಾಕಕೇ ||೨||

ಸ ಮಂತ್ರಂ ಸ ಕುಶಂ ದೇವಿ ಕೃತಶೌಚೋ ಬಹಿರ್ಜಲೇ ।
ಸಂಕಲ್ಪ್ಯ ಮಾಸನಾಮಂ ಚ ಅಬ್ಲಿಂಗೈರ್ವಾರುಣೈರಪಿ ||೩||

---

## ಇಪ್ಪತ್ತೆರಡನೆಯ ಅಧ್ಯಾಯ

ದೇವಿಯೇ, ಮಾರ್ಗಶೀರ್ಷಮಾಸದಲ್ಲಿ ವಿಶೇಷವಾಗಿ ಹೃದಯಶುದ್ಧಿಯಿಂದ ಶಿವನನ್ನು ಪೂಜಿಸಬೇಕು. ಮಾರ್ಗಶೀರ್ಷಮಾಸವು ಎಲ್ಲ ಮಾಸಗಳಿಗಿಂತಲೂ ಶ್ರೇಷ್ಠವಾದ ಮಾಸವಾಗಿರುವುದು. ಈ ತಿಂಗಳಲ್ಲಿ ಶಿವಲಿಂಗಾರ್ಚನೆಯು ಪುರುಷರಿಗೆ ವಿಶೇಷ ಫಲದಾಯಕವು. ತಿಂಗಳಿನ ಮೊದಲಲ್ಲಿ ನದಿ, ನದ, ಕೆರೆ ಮುಂತಾದ ಜಲಾಶಯಗಳಲ್ಲಿ ಸ್ನಾ ಮಾಡಬೇಕು. ||೧-೨||

ನಿತ್ಯಶೌಚವನ್ನು ಮುಗಿಸಿದ ನಂತರ ಮಂತ್ರಪೂರ್ವಕವಾಗಿ ದರ್ಭೆಯ ಪವಿತ್ರ ಪಾಣಿಯಾಗಿ ಸಂಕಲ್ಪಮಾಡಿ ಮಾಸನಾಮವನ್ನು ಹೇಳಿ ಜಲರೂಪಿಯಾದ ವರುಣ ನಲ್ಲಿ (ಜಲದಲ್ಲಿ) ಸ್ನಾನಮಾಡಿ ಬಟ್ಟೆಗಳನ್ನು ಧರಿಸಿ, ಎರಡುಸಲ ಆಚಮನ

ಹರಿಧಾಯ ತತೋ ವಾಸೋ ದ್ವಿರಾಚಮ್ಯ ಚ ಭಸ್ಮಧೃಕ್ ।
ಅಗ್ನಿರಿತ್ಯಾದಿನಾ ದೇವಿ ತ್ರಿಪುಂಡ್ರಪರಿಭೂಷಿತಃ ॥೪॥

ರುದ್ರಾಕ್ಷಧಾರಣಂ ಕೃತ್ವಾ ಪ್ರಾತಃಸಂಧ್ಯಾಮುಪಾಸ್ಯ ಚ ।
ಹುತ್ವಾ ಚ ವಿಧಿವದ್ವಹ್ನಿಂ ಕುಂಭಮಂಭಃಪ್ರಪೂರಿತಂ ॥೫॥

ಫಲಪಲ್ಲವಪುಷ್ಪಾದಿಸಂಪಾದ್ಯ ವಿಧಿವತ್ತದಾ ।
ಗೋಚರ್ಮಮಾತ್ರಮಾಲಿಪ್ಯಮಂಡಲಂ ಗೋಮಯೇನ ತು ॥೬॥

ಚತುರಸ್ರಂ ವಿಧಾನೇನ ಚಾದ್ಭಿರಭ್ಯುಕ್ಷ್ಯ ಮಂತ್ರವಿತ್ ।
ಪಂಚಾಶದ್ದಲಸಂಯುಕ್ತಮಾಲಿಖೇತ್ಪದ್ಮಮುತ್ತಮಂ ॥೭॥

ತತ್ತದ್ವರ್ಣೈಸ್ತಥಾಪೂರ್ಣೈಃ ಶ್ವೇತಚೂರ್ಣೈರಥಾಪಿ ವಾ ।
ಏಕಹಸ್ತಪ್ರಮಾಣೇನ ಕೃತ್ವಾ ಪದ್ಮಂ ಸುದರ್ಶನಂ ॥೮॥

ಕರ್ಣಿಕಾಭ್ಯಾಂ ಸ್ವಸೇತ್ಪೀಠಂ ತದೂರ್ಧ್ವಂ ಮಂಡಪೋಜ್ವಲಂ ।
ಅಲಂಕೃತ್ಯ ವಿತಾನಾದ್ಯೈಃ ಪುಷ್ಪಮಾಲಾವಲಂಬಿನಂ ॥೯॥

---

ಮಾಡಿ ಭಸ್ಮಧರಿಸಿ, 'ಅಗ್ನಿರಾಯುಷ್ಮಾನ್' ಎಂಬ ಮಂತ್ರದಿಂದ ತ್ರಿಪುಂಡ್ರವನ್ನೂ ಧರಿಸಿಕೊಂಡು ರುದ್ರಾಕ್ಷಗಳನ್ನಲಂಕರಿಸಿಕೊಳ್ಳಬೇಕು. ಅನಂತರ ಪ್ರಾತಃಸಂಧ್ಯೆಯನ್ನು ನೆರವೇರಿಸಬೇಕು. ||೩-೪||

ವಿಧಿಪ್ರಕಾರ ಅಗ್ನಿಯಲ್ಲಿ ಹೋಮಮಾಡಿ, ನೀರಿನಿಂದ ತುಂಬಲ್ಪಟ್ಟ ಕಲಶಗಳನ್ನು ಹಣ್ಣು, ಚಿಗುರು, ಹೂ ಮುಂತಾದವುಗಳನ್ನೂ ಸಂಗ್ರಹಿಸಿಟ್ಟುಕೊಂಡು ವಿಧಿಮೀರದೆ ಒಂದು ಹಸುವಿನ ಚರ್ಮದಷ್ಟಗಲ ಸಗಣಿಯಿಂದ ಸಾರಿಸಿ, ನಾಲ್ಕು ಮೂಲೆಯುಳ್ಳ ಮಂಡಲಮಾಡಿ, ವಿಧಿಪ್ರಕಾರ ಮಂತ್ರಜ್ಞನಾದವನು ನೀರನ್ನು ಆ ಮಂಡಲದ ಮೇಲೆ ಚುಮುಕಿಸಿ, ಐವತ್ತು ದಳಗಳುಳ್ಳ ಉತ್ತಮವಾದ ಒಂದು ಪದ್ಮವನ್ನು ಬರೆಯಬೇಕು. ||೫-೬-೭||

ಆಯಾ ಬಣ್ಣಗಳಿಂದ ಅಥವಾ ಬಿಳಿಯ ಚೂರ್ಣಗಳಿಂದ ಪದ್ಮವನ್ನು ಒಂದು ಮೊಳದ ಪ್ರಮಾಣದಲ್ಲಿ ಸುಂದರವಾಗಿ ಬರೆದು ಕರ್ಣಿಕೆಗಳಿಂದ ಪೀಠವನ್ನು ರಚಿಸಿ, ಅದರ ಮೇಲೆ ಉಜ್ವಲವಾದ ಮಂಟಪವನ್ನಿರಿಸಬೇಕು. ಆ ಮಂಟಪವನ್ನು ಮೇಲ್ಕಟ್ಟು ಮುಂತಾದವುಗಳಿಂದಲಂಕರಿಸಿ, ಹೂಮಾಲೆಗಳನ್ನು ಜೋಲುಹಾಕಿ,

ಪಂಚಾಶದ್ದೀಪಮಾಲಾಭಿರ್ಧೂಪೈರ್ದೀಪೈಃ ಸಮುಜ್ಜ್ವಲಂ ।
ಸಿತೈರ್ವಿಕಸಿತೈಃಪದ್ಮೈರ್ಬಿಲ್ವನೀಲೋತ್ಪಲೈಃ ಶುಭೈಃ ॥೧೦॥

ಸೇವಂತಪಾರಿಜಾತೈಶ್ಚ ಕುಸುಮೈರನ್ವಿತಂ ಶಿವೇ ।
ಕಲ್ಕಶೋಧಿತಪಾತ್ರಾಣಿ ದರ್ಭಾದಿಷು ನ್ಯಸೇತ್ಕ್ರಮಾತ್ ॥೧೧॥

ಕುಂಭಂ ಸ್ಥಾಪ್ಯಾಂಬುಸಂಪೂರ್ಣಂ ಪಲ್ಲವಾಢ್ಯಂ ತದಗ್ರತಃ ।
ಪಾತ್ರಾಣ್ಯಭ್ಯುಕ್ಷ್ಯ ಪುಷ್ಪಾಂಬುಪೂರಿತಾನಿ ವಿಧಾಯ ಚ ॥೧೨॥

ಸಂಕಲ್ಪ್ಯ ಶಾಂಭವಾಂಸ್ತತ್ರ ವರಯೇತ್ಪೂರ್ವವದ್ದ್ವಿಜಾನ್ ।
ತೈರನುಜ್ಞಾಮವಾಪ್ಯಾಥ ಮಾಸಂ ಸಂಕಲ್ಪ್ಯ ಪೂಜನಂ ॥೧೩॥

ಪಂಚಾಮೃತಂ ಪಂಚಗವ್ಯಂ ಶುಕ್ಷೀರಾಜ್ಯೇ ದಧೀಮಧು ।
ಸಿತಾಫಲರಸಾನೀಶೇ ಸಂಪಾದ್ಯ ಸ ಕುಶೋದಕಂ ॥೧೪॥

ಜಪೇತ್ಪಂಚಾಕ್ಷರಂ ವಿದ್ಯಾಂ ಸಮಾಹಿತಮನಾಃ ಶುಚಿಃ ।
ಆಪಃ ಪೂತಾ ಭವಂತ್ಯೇವ ವಸ್ತ್ರಪೂತಾಃ ಸಮುದ್ಧೃತಾಃ ॥೧೫॥

---

ಐವತ್ತು ದೀಪಮಾಲೆಗಳಿಂದಲೂ, ಧೂಪ ಮತ್ತು ದೀಪಗಳಿಂದಲೂ ಪ್ರಜ್ವಲಿಸುವಂತೆ ಅಲಂಕರಿಸಿ, ಅರಳಿದ ಬಿಳಿದಾವರೆಗಳು, ಬಿಲ್ವದಳ, ಕನ್ನೈದಿಲೆ ಮುಂತಾದವು ಗಳಿಂದಲೂ, ಸೇವಂತಿಕೆ, ಪಾರಿಜಾತ ಮುಂತಾದ ಹೂಗಳಿಂದಲೂ ಅಲಂಕಾರ ಮಾಡಬೇಕು. ಕಲ್ಕದಿಂದ ಶೋಧಿಸಿದ ಪಾತ್ರೆಗಳನ್ನು ದರ್ಭೆಯ ಮೇಲೆ ಕ್ರಮವಾಗಿರಿಸಬೇಕು. ॥೮-೯-೧೦-೧೧॥

ಜಲಪೂರ್ಣವಾದ ಕಲಶವನ್ನು ಚಿಗುರುಗಳಿಂದಲಂಕರಿಸಿ ಅದರ ಮುಂದೆ ಹೂ ಮತ್ತು ನೀರುಗಳಿಂದ ಪೂರ್ಣವಾದ ಪಾತ್ರೆಗಳನ್ನು ಚುಮುಕಿಸಿ (ಪ್ರೋಕ್ಷಿಸಿ) ಸ್ಥಾಪಿಸಬೇಕು. ಅನಂತರ ಸಂಕಲ್ಪಮಾಡಿ ಹಿಂದಿನಂತೆಯೇ ಶೈವವಿಪ್ರರನ್ನು ಮಂತ್ರಪಾರಾಯಣಕ್ಕಾಗಿ ವರಣಮಾಡಬೇಕು. ಆಮೇಲೆ ಅವರ ಅನುಜ್ಞೆಪಡೆದು ಮಾಸಸಂಕಲ್ಪಮಾಡಿ ಅನಂತರ ಪೂಜಿಸಬೇಕು. ॥೧೨-೧೩॥

ಪಂಚಾಮೃತ, ಪಂಚಗವ್ಯದ ಪದಾರ್ಥಗಳು, ಒಳ್ಳೆಯ ಹಾಲು, ತುಪ್ಪ, ಮೊಸರು, ಜೇನು, ಸಕ್ಕರೆ, ಹಣ್ಣಿನ ರಸಗಳು ಇವುಗಳನ್ನೂ ಕುಶೋದಕಗಳನ್ನೂ

ಅದ್ಭಿಃ ಕಾರ್ಯಾಣಿ ಕುರ್ವೀತ ಪೂತಾಭಿಃ ಸರ್ವಸಿದ್ಧಯೇ ।
ಸಹಸ್ರಂ ವಾ ಶತಾಷ್ಟಂ ವಾ ಜಪೇನ್ಮಂತ್ರಂ ಷಡಕ್ಷರಂ ॥೧೬॥

ಧ್ಯಾಯೇದ್ದೇವಂ ವಿರೂಪಾಕ್ಷಂ ನೀಲಕಂಠಮುಮಾಯುತಂ ।
ಮೃಗಾಂಕಶೇಖರಂ ಶಾಂತಂ ಸರ್ವಾಭರಣಭೂಷಿತಂ ॥೧೭॥

ಧ್ಯಾತ್ವಾ ದೇವಂ ಚ ಹೃತ್ಪದ್ಮೇ ಪೀಠಪೂಜಾಂ ವಿಧಾಯ ಚ ।
ಭೂತಶುದ್ಧಿಂ ಚ ಭೂಶುದ್ಧಿಂ ಮಾಸಾರ್ಚನಮಥಾಚರೇತ್ ॥೧೮॥

ಕಲಶಂ ಶಂಖಮಾವಾಹ್ಯ ಸೋಮಾಮೃತಸುಧಾರಯಾ ।
ದಹನಾಪ್ಲಾವನಾದ್ಯೈಸ್ತು ಕೃತ್ವಾ ದೇಹಂ ಸುಧಾಮಯಂ ॥೧೯॥

ನಿರ್ಮಾಲ್ಯಮಪನೋದ್ಯೇಶಂ ಲಿಂಗಂ ಪೀಠೇ ನಿವೇಶಯೇತ್ ।
ವೈಡೂರ್ಯಸಂಭವಂ ಹೈಮಂ ಪಂಚಸೂತ್ರಸಮುಜ್ಜ್ವಲಂ ॥೨೦॥

---

ಸಂಪಾದಿಸಿಕೊಂಡು ನೆಟ್ಟಮನಸ್ಸಿನಿಂದ ಶುಚಿರ್ಭೂತನಾಗಿ ಶಿವಪಂಚಾಕ್ಷರ ವಿದ್ಯೆಯನ್ನು ಜಪಿಸಬೇಕು. ಬಟ್ಟೆಯಿಂದ ಶೋಧಿಸಿ ತೆಗೆದುಕೊಂಡ ನೀರು ಪೂಜೆಗೆ ಪವಿತ್ರವೆನಿಸುವುದು. ಈ ಪವಿತ್ರೋದಕಗಳಿಂದ ಸಕಲ ಕಾರ್ಯಗಳನ್ನೂ ಇಷ್ಟಾರ್ಥಸಿದ್ಧಿಗೋಸ್ಕರ ಮಾಡಬಹುದು. ||೧೪-೧೫||

ಸಾವಿರ ಅಥವಾ ನೂರೆಂಟು ಸಾರಿ ಷಡಕ್ಷರಮಂತ್ರವನ್ನು ಜಪಮಾಡಬೇಕು. ಆಮೇಲೆ ಮೂರು ಕಣ್ಣುಗಳುಳ್ಳವನೂ, ಕಪ್ಪುಕೊರಳುಳ್ಳವನೂ, ಉಮಾಸಹಿತನೂ, ಚಂದ್ರಶೇಖರನೂ, ಶಾಂತಮೂರ್ತಿಯೂ, ಸಕಲಾಭರಣಮಂಡಿತನೂ ಆದ ಮಹಾದೇವನನ್ನು ಧ್ಯಾನಿಸಬೇಕು. ||೧೬-೧೭||

ಹೃದಯಕಮಲದಲ್ಲಿ ಮಹಾದೇವನನ್ನು ಧ್ಯಾನಮಾಡಿ, ಪೀಠಪೂಜೆಯನ್ನು ಮಾಡಿದನಂತರ ಭೂತಶುದ್ಧಿ ಭೂಶುದ್ಧಿಗಳನ್ನೆಸಗಿ ಅನಂತರ ಮಾಸಪೂಜೆಯನ್ನು ಆಚರಿಸಬೇಕು. ಕಲಶ ಮತ್ತು ಶಂಖಗಳನ್ನು (ಸೋಮಾಮೃತಸುಧಾರೆಯಿಂದ)? ಜಲಧಾರೆಯಿಂದ ಆವಾಹಿಸಿ, ದಹನ ಮತ್ತು ಆಪ್ಲಾವನೆಗಳಿಂದ ತನ್ನ ದೇಹವನ್ನೂ ಅಮೃತಮಯವನ್ನಾಗಿ ಮಾಡಿ, ನಿರ್ಮಾಲ್ಯಗಳನ್ನು ತೆಗೆದು ಶಿವಲಿಂಗವನ್ನು ಪೀಠದಲ್ಲಿ ಸ್ಥಾಪಿಸಬೇಕು. ||೧೮-೧೯||

ಪಂಚಸೂತ್ರಗಳಿಂದ ಪ್ರಜ್ವಲಿಸುವ ವೈಡೂರ್ಯ ಅಥವಾ ಸುವರ್ಣದ ಲಿಂಗ ವನ್ನು ಸ್ಥಾಪಿಸಿ, ಪಾದ್ಯ, ಆಚಮನ, ಅರ್ಘ್ಯ ಇವುಗಳನ್ನು ಪುಷ್ಪಗಳೊಡನೆ ಸಮ

ಪಾದ್ಯಮಾಚಮನಂ ಚಾರ್ಘ್ಯಂ ಸ ಪುಷ್ಪಂ ವಿನಿವೇದಯೇತ್ ।
ಪಂಚಗವ್ಯಯುತಂ ದೇವಿ ಮಧುಪರ್ಕಂ ನಿವೇದಯೇತ್ ॥೨೧॥

ಪಂಚಾಮೃತಂ ತಥಾಕ್ಷೀರಂ ದಧ್ಯಾಜ್ಯಕ್ಷಾದ್ರಸೇಚನಂ ।
ಶರ್ಕರಾನಾರಿಕೇಲಾಂಬುರಂಭಾಭಿರ್ಗಂಧವಾರಿಭಿಃ ॥೨೨॥

ಕುಶೋದಕಹಿರಣ್ಯೋದಕೋರ್ಚಾಂಬು ವಿನಿಯೋಜಯೇತ್ ।
ಹವಿರ್ನಿವೇದ್ಯ ದೇವಾಯ ದತ್ವಾ ದೀಪಂ ಚ ಧೂಪಕಂ ॥೨೩॥

ಸ್ನಾನವೇದ್ಯಾಂ ತತೋ ಲಿಂಗಂ ಸ್ಥಾಪ್ಯ ಸಂಸೇಚಯೇಚ್ಛಿವೇ ।
ಸಹಸ್ರಧಾರಾಕಲಶೈಃ ಶತಧಾರೈರಪೀಶ್ವರಂ ॥೨೪॥

ನಾನಾವಾದಿತ್ರಘೋಷೈಶ್ಚ ಪುಣ್ಯೈರುದ್ರಾಂಬುಸೇಚನೈಃ ।
ಸಶಾಂತಿಕಃ ಸಚಮಕೋ ರುದ್ರೋ ಏಕಾದಶಾವೃತಃ ॥೨೫॥

ಜಪ್ಯೋ ವೈ ಶಾಂಭವೈಃ ಸಾರ್ಧಂ ಏಕದ್ವಿತ್ರಿಕ್ರಮಾದಪಿ ।
ಧೂಪಯೇದ್ದೀಪಯೇದ್ದೇವಂ ತತ್ರೈವಾಭ್ಯುಕ್ಷಣೇ ಶಿವೇ ॥೨೬॥

---

ರ್ಪಿಸಬೇಕು. ಪಂಚಗವ್ಯಸಮೇತವಾದ ಮಧುಪರ್ಕವನ್ನು ಸಮರ್ಪಿಸಬೇಕು. ಪಂಚಾಮೃತ, ಹಾಲು, ಮೊಸರು, ತುಪ್ಪ, ಜೇನು ಇವುಗಳನ್ನು ಅಭಿಷೇಕಮಾಡಿ ಸಕ್ಕರೆ, ಎಳನೀರು, ಬಾಳೆಯಹಣ್ಣು, ಗಂಧೋದಕ, ಸುವರ್ಣೋದಕ, ಕೂರ್ಚೋದಕಗಳನ್ನು ಅಭಿಷೇಕಮಾಡಬೇಕು. ॥೨೦-೨೧-೨೨॥

ಹವಿಸ್ಸನ್ನು ನಿವೇದಿಸಿ, ಮಹಾದೇವನಿಗೆ ದೀಪ ಮತ್ತು ಧೂಪಗಳನ್ನು ಸಮರ್ಪಿಸಿ, ಸ್ನಾನವೇದಿಕೆಯಲ್ಲಿ ಶಿವಲಿಂಗವನ್ನು ಸ್ಥಾಪಿಸಿ, ಸಾವಿರ ಧಾರಾಕಲಶಗಳಿಂದಲೂ ಸಹ ಈಶ್ವರನಿಗೆ ಅಭಿಷೇಕಮಾಡಬೇಕು. ಅನೇಕ ವಾದ್ಯಘೋಷಗಳೊಡನೆ ಪುಣ್ಯಕರವಾದ ಜಲಧಾರೆಯಿಂದ ರುದ್ರಮಂತ್ರವನ್ನು ಶಾಂತಿಪಾಠಸಮೇತವಾದ ಚಮಕಪಾಠವನ್ನೂ ಹನ್ನೊಂದುಬಾರಿ ಜಪಮಾಡುತ್ತಾ ಅಭಿಷೇಕಮಾಡಬೇಕು. ॥೨೩-೨೪-೨೫॥

ಅಭಿಷೇಕಸಮಯದಲ್ಲಿ ಶೈವವರ್ಯರೊಡನೆ ಒಂದು, ಎರಡು ಮತ್ತು ಮೂರು ಬಾರಿಯಾದರೂ ರುದ್ರವನ್ನು ಜಪಿಸಬೇಕು. ಅನಂತರ ಮಹಾದೇವನಿಗೆ ಧೂಪದೀಪಗಳನ್ನು ಸಮರ್ಪಿಸಬೇಕು. ಅಲ್ಲಿಯೇ ಪ್ರೋಕ್ಷಣೆಮಾಡಿ ಅನಂತರ ದರ್ಭೋದಕ

ಭವಾಯೇತಿ ತತೋಽಂತೇ ಚ ತರ್ಪಯೇಚ್ಚ ಕುಶಾಂಬುಭಿಃ ।
ಉದ್ವರ್ತಯೇತ್ಸೂಕ್ಷ್ಮವಸ್ತ್ರೈಃ ಪೀಠೇ ಸ್ಥಾಪ್ಯ ಶಿವಂ ಶಿವೇ ॥೨೭॥

ವಸ್ತ್ರೋಪವೀತಂ ಗಂಧಂ ಚ ಭಸಿತಂ ಚ ತಥಾಕ್ಷತೈಃ ।
ಅಖಂಡತಂಡುಲಾಧೌತಾ ಸಮುದ್ಗಾಃ ಕ್ಷಾಲಿತಾಃ ಶಿವೇ ॥೨೮॥

ದದ್ಯಾಲ್ಲಿಂಗೇ ತತೋ ಭೂಷ್ಯ ಭೂಷಣೈರ್ಹೇಮರತ್ನಜೈಃ ।
ಶತಾಷ್ಟಬಿಲ್ವಮಾಲಾಂ ಚ ಹೈಮೀಂ ವಾಕಾರಯೇಚ್ಛಿವೇ ॥೨೯॥

ರಾಜತೀಂ ವಾ ಯಥಾಜೋಷಂ ಬಿಲ್ವಪತ್ರೇಣ ಕೇವಲಂ ।
ಕುಟಜಂ ಚಂಪಕಂ ಪದ್ಮ ಸೇವಂತೀ ಪಾರಿಜಾತಕಂ ॥೩೦॥

ಕುಸುಮಂ ಪೂಜಯೇದ್ದೇವಿ ಅಪಾಮಾರ್ಗಂ ತು ಮಾರ್ಗಕೇ ।
ನಿಧನೇತ್ಯಾದಿಭಿರ್ದೇವಿ ಬಿಲ್ವಪತ್ರೈಶ್ಚ ಕ್ಷಾಳಿತೈಃ ।
ಉತ್ತರಾಗ್ರೈಃ ಪೂಜಯೇತ್ತಂ ಶಿವಮೌಲೌ ಮಹೇಶ್ವರಿ ॥೩೧॥

---

ಗಳಿಂದ 'ಭವಂ ತರ್ಪಯಾಮಿ' ಎಂಬ ಶಿವನಾಮಪೂರ್ವಕವಾಗಿ ತರ್ಪಣಮಾಡಬೇಕು. ಅನಂತರ ಸೂಕ್ಷ್ಮವಸ್ತ್ರಗಳಿಂದ ಒರಸಿ, ಶಿವನನ್ನು ಪೀಠದಲ್ಲಿ ಸ್ಥಾಪಿಸಬೇಕು. ॥೨೬-೨೭॥

ವಸ್ತ್ರ, ಉಪವೀತ, ಗಂಧ, ಭಸ್ಮ, ಮತ್ತು ಅಕ್ಷತಗಳನ್ನು ಪೂಜಿಸಬೇಕು. ಮೊನೆಮುರಿಯದ ತೊಳೆದ ಅಕ್ಕಿಗೆ ಹೆಸರನ್ನು ತೊಳೆದು ಬೆರೆಸಿ ಅಕ್ಷತೆಯಾಗಿ ಉಪಯೋಗಿಸಬೇಕು. ಶಿವಲಿಂಗಕ್ಕೆ ಚಿನ್ನ, ರತ್ನಖಚಿತವಾದ ಆಭರಣಗಳನ್ನು ಅಲಂಕರಿಸಿ, ನೂರೆಂಟು ಬಿಲ್ವದಳದ ಮಾಲೆಯನ್ನು ಹಾಕಬೇಕು. ಅಥವಾ ಚಿನ್ನದಿಂದಲಾದರೂ ಹಾರಮಾಡಿಸಬಹುದು. ॥೨೮-೨೯॥

ಬೆಳ್ಳಿಯಿಂದಲಾದರೂ ಸೌಕರ್ಯವಿದ್ದರೆ ರುದ್ರಾಕ್ಷಮಾಲೆಯನ್ನು ಮಾಡಿಸಬಹುದು. ಅದೂ ಸಾಧ್ಯವಿಲ್ಲದಿದ್ದಲ್ಲಿ ಕೇವಲ ಬಿಲ್ವದಳಗಳಿಂದಲೇ ಮಾಲೆಯನ್ನು ಮಾಡಿಸಬೇಕು. ಮಲ್ಲಿಗೆ, ಸಂಪಿಗೆ, ತಾವರೆ, ಸೇವಂತಿಗೆ, ಪಾರಿಜಾತಪುಷ್ಪಗಳನ್ನೂ ಅಪಾಮಾರ್ಗಪತ್ರೆಯನ್ನೂ ಮಾರ್ಗಶಿರಮಾಸದಲ್ಲಿ ಪೂಜೆಮಾಡಬೇಕು. ದೇವಿ! 'ಭವಾಯ ನಮಃ' ಎಂಬ ನಾಮಪೂರ್ವಕವಾಗಿ ಹವಿಸ್ಸನ್ನೂ ಅಪೂಪದೊಡನೆ ನಿವೇದನಮಾಡಿ, ತೊಳೆದ ಬಿಲ್ವದಳಗಳನ್ನು 'ನಿಧನಪತಯೇ ನಮಃ' ಎಂಬ

ಸಾಮ್ರಾಣಿ ಧೂಪೈಸ್ತತ್ರೈವಂ ದೀಪೈಸ್ಸಂದೀಪಯೇಚ್ಛಿವಂ ।
ತಾಂಬೂಲಂ ಚ ತತೋ ದದ್ಯಾನ್ಮುಖವಾಸಂ ಫಲಾನಿ ಚ ॥೩೩॥

ನಿವೇದಯಿತ್ವಾ ನೀರಾಜ್ಯ ಶತಾಷ್ಟವರದೀಪತಃ ।
ಚಂದ್ರಖಂಡೇನ ಚ ತತಶ್ಚಂದ್ರಚೂಡಶಿಖಾಮಣಿಂ ॥೩೪॥

ಭೇರೀಮರ್ದಲವೀಣಾದಿಶಂಖಕಾಹಲನಿಸ್ಸ್ವನೈಃ ।
ಋಕ್ಸಾಮಯಜುಷಾಥರ್ವಪೌರಾಣಸ್ತುತಿಭಿಃ ಶಿವೇ ॥೩೫॥

ಛತ್ರಂ ಚ ಚಾಮರಂ ಶುಭ್ರಂ ವ್ಯಜನಾದರ್ಶಕಧ್ವಜಂ ।
ನಿವೇದಯೀತ ದೇವಾಯ ಪ್ರಣಾಮಪ್ರಕ್ರಮಂ ತತಃ ॥೩೬॥

ನರ್ತನಂ ಚ ಪ್ರಸಾದಂ ಚ ತತೋನಾಮ್ನಾರ್ಚನಂ ಮಮ ।
ಮಾರ್ಗಶೀರ್ಷೇ ವಿಶೇಷೇಣ ಮುಕ್ತಿಮಾರ್ಗಪ್ರದಾಯಿನಿ ॥೩೭॥

---

ಶಿವನಾಮಪೂರ್ವಕವಾಗಿ ಮಹೇಶನ ಲಿಂಗಮೌಳಿಯಲ್ಲಿ ಉತ್ತರಾಗ್ರವಾಗಿ ಪೂಜಿಸಬೇಕು. ॥೩೦-೩೧-೩೨॥

ಸಾಮ್ರಾಣಿಧೂಪಗಳನ್ನೂ ಹಾಕಿ, ಶಿವನಿಗೆ ದೀಪಗಳನ್ನು ಹೊತ್ತಿಸಬೇಕು. ಅನಂತರ ತಾಂಬೂಲ, ಮುಖವಾಸ, ಜಾಯಿಕಾಯಿ ಮುಂತಾದವುಗಳನ್ನು ಸಮರ್ಪಿಸಿ, ನೂರೆಂಟು ಶ್ರೇಷ್ಠದೀಪಗಳಿಂದ ಆರತಿಮಾಡಿ ಅನಂತರ ಚಂದ್ರಖಂಡದಿಂದ ಚಂದ್ರಶೇಖರನಿಗೆ ನೀರಾಜನಮಾಡಬೇಕು. ॥೩೩-೩೪॥

ನಗಾರಿ, ಮದ್ದಲೆ, ವೀಣೆ, ಶಂಖ, ಕಹಳೆ, ಈ ವಾದ್ಯಧ್ವನಿಗಳಿಂದಲೂ, ಋಕ್ಕು, ಸಾಮ, ಯಜಸ್ಸು, ಅಥರ್ವಮಂತ್ರಗಳಿಂದಲೂ ಪುರಾಣಸ್ತುತಿಗಳಿಂದಲೂ ಮಹಾದೇವನನ್ನು ಸ್ತುತಿಸಿ, ಅನಂತರ ಛತ್ರಿ, ಚಾಮರ, ಶುಭ್ರವಾದ ಬೀಸಣಿಗೆ, ಕನ್ನಡಿ, ಬಾವುಟ ಇವುಗಳನ್ನು ನಮಸ್ಕಾರಕ್ರಮಾನುಗುಣವಾಗಿ ಮಹಾದೇವನಿಗೆ ಸಮರ್ಪಿಸಬೇಕು. ನಾಟ್ಯ, ಪ್ರಸಾದ, ಅನಂತರ ನಾಮಪೂಜೆ, ಇವುಗಳಿಂದ ಮಾರ್ಗಶೀರ್ಷಮಾಸದಲ್ಲಿನ ಶಿವಪೂಜೆಯು ಮೋಕ್ಷಮಾರ್ಗದಾಯಕವಾಗಿರುವುದು. ಎಲೌ ಪಾರ್ವತಿಯೆ ! ಸ್ತುತಿಕ್ರಮವನ್ನು ನಿನಗೆ ಹೇಳುವೆನು, ಸಾವಧಾನಚಿತ್ತದಿಂದ ಲಾಲಿಸು, ಎಂದು ಶಿವನಿಂತೆಂದನು. ॥೩೫-೩೬-೩೭॥

ಸ್ತವಂ ಚ ತತ್ರ ವಕ್ಷ್ಯಾಮಿ ಸಮಾಹಿತಮನಾಃ ಶೃಣು ।
ವಿಶ್ವೇಶಃ ಖಂಡಪರಶುಃ ಶಿವಃ ಶೀತಾಂಶುಭೂಷಣಃ ॥೩೮॥

ಅಖಂಡನಗಕೋದಂಡಶ್ಚಂಡಿಕೇಶಪ್ರಿಯೋ ಹರಃ ।
ಗಂಭೀರೋ ಗಗನಾಂತಸ್ಥಃ ಸ್ಥಾಣುಃ ಸರ್ವಶರೀರಗಃ ॥೩೯॥

ಊರ್ಧ್ವರೇತಾ ಮಹಾವೀರ್ಯೋ ಗಣನಾಥೋಽಂಬಿಕಾಪ್ರಿಯಃ ।
ಜಟಾಧರೋಽಂಧಕಹರಸ್ತ್ರಿಶೂಲೀ ನೀಲಲೋಹಿತಃ ॥೪೦॥

ಗರಾದನೋ ವಿರೂಪಾಕ್ಷೋ ಭವಃ ಸಂಸಾರರೋಗಹೃತ್ ।
ವಸನಾದ್ರ್ಯೋ ಭಗಾಕ್ಷಿಘ್ನೋ ವಾಮನೋ ಮನ್ಮಥಾಂತಕಃ ॥೪೧॥

ಭವಾಮಯಹರೋ ಯೋಗೀ ಕರ್ತಾ ಸರ್ವಸ್ವತಂತ್ರವಾನ್ ।
ಅಣೋರಣೀಯಾನ್ಪರದೋ ಮಹತೋಽಪಿ ಮಹತ್ತರಃ ॥೪೨॥

---

೧ ಓಂ ವಿಶ್ವೇಶಾಯ ನಮಃ
೨ ಓಂ ಖಂಡಪರಶವೇ ನಮಃ
೩ ಓಂ ಶಿವಾಯ ನಮಃ
೪ ಓಂ ಶೀತಾಂಶುಭೂಷಣಾಯ ನಮಃ
೫ ಓಂ ಅಖಂಡನಗಕೋದಂಡಾಯ ನಮಃ
೬ ಓಂ ಚಂಡೀಶಪ್ರಿಯಾಯ ನಮಃ
೭ ಓಂ ಹರಾಯ ನಮಃ
೮ ಓಂ ಗಂಭೀರಾಯ ನಮಃ
೯ ಓಂ ಗಗನಾಂತಃಸ್ಥಾಯ ನಮಃ
೧೦ ಓಂ ಸ್ಥಾಣವೇ ನಮಃ
೧೧ ಓಂ ಸರ್ವಶರೀರಗಾಯ ನಮಃ
೧೨ ಓಂ ಊರ್ಧ್ವರೇತಸೇ ನಮಃ
೧೩ ಓಂ ಮಹಾವೀರ್ಯಾಯ ನಮಃ
೧೪ ಓಂ ಗಣನಾಥಾಯ ನಮಃ
೧೫ ಓಂ ಅಂಬಿಕಾಪ್ರಿಯಾಯ ನಮಃ
೧೬ ಓಂ ಜಟಾಧರಾಯ ನಮಃ
೧೭ ಓಂ ಅಂಧಕಹರಾಯ ನಮಃ
೧೮ ಓಂ ತ್ರಿಶೂಲಿನೇ ನಮಃ
೧೯ ಓಂ ನೀಲಲೋಹಿತಾಯ ನಮಃ
೨೦ ಓಂ ಗರಾದನಾಯ ನಮಃ
೨೧ ಓಂ ವಿರೂಪಾಕ್ಷಾಯ ನಮಃ
೨೨ ಓಂ ಭವಾಯ ನಮಃ
೨೩ ಓಂ ಸಂಸಾರರೋಗಹೃತೇ ನಮಃ
೨೪ ಓಂ ವಸನಾದ್ರ್ಯಾಯ ನಮಃ
೨೫ ಓಂ ಭಗಾಕ್ಷಿಘ್ನೇ ನಮಃ
೨೬ ಓಂ ವಾಮನಾಯ ನಮಃ
೨೭ ಓಂ ಮನ್ಮಥಾಂತಕಾಯ ನಮಃ
೨೮ ಓಂ ಭವಾಮಯಹರಾಯ ನಮಃ
೨೯ ಓಂ ಯೋಗಿನೇ ನಮಃ

ಸರ್ವತ್ರಕಾರಕೋ ಧನ್ವೀ ಕಂಜಜಾತೋಂತಕಾಗಧೃತ್ ।
ವಿಷ್ಣುನೇತ್ರಪ್ರಪೂಜ್ಯಾಂಘ್ರಿರ್ಮಧುಸೂದನಸೂದನಃ ॥೪೩॥

ವಿಚಾರರಹಿತೋ ಮಾನೀ ಮನಸ್ವೀ ಕಾಲನಾಶನಃ ।
ಸೋಮಸೂರ್ಯಾಗ್ನಿನಯನೋ ಭೀಮೋ ಭವ್ಯಯುಗಾಂತಕೃತ್ ॥೪೪॥

ಸರಸ್ಯೋ ಧೂಮ್ರಕೇಶಾಂಗೋ ಬಭ್ಲುಶೋ ಭಯಹಾರಕಃ ।
ವಾತಾಶನಧರೋ ಗರ್ತಃ ಕೈಲಾಸನಿಲಯಃ ಸ್ವರಾಟ್ ॥೪೫॥

ತುರಾಷಾಟ್ಪೂಜಿತಪದೋ ವೇದವಾಜಿಪ್ರಿಯೋ ಯುವಾ ।
ಸನಾತನೋ ದೀನದಯೋ ವಸುಷೇಣಃ ಪ್ರಸಾದಕೃತ್ ॥೪೬॥

ಸ್ತುತಿಪ್ರಿಯೋ ವಾಸ್ತುಪೋಘೋ ಹವ್ಯಕವ್ಯಭುಗೀಶ್ವರಃ ।
ವ್ಯೋಮಕೇಶೋ ವಾಮದೇವೋ ಕೃತ್ತಿವಾಸಾಃ ಪ್ರಭೇದನಃ ॥೪೭॥

---

೩೦ ಓಂ ಕರ್ತ್ರೇ ನಮಃ
೩೧ ಓಂ ಸರ್ವಸ್ವತಂತ್ರಾಯ ನಮಃ
೩೨ ಓಂ ಅಣೋರಣೀಯಸೇ ನಮಃ
೩೩ ಓಂ ವರದಾಯ ನಮಃ
೩೪ ಓಂ ಮಹತೇ ನಮಃ
೩೫ ಓಂ ಮಹತ್ತರಾಯ ನಮಃ
೩೬ ಓಂ ಸರ್ವತ್ರಕಾರಕಾಯ ನಮಃ
೩೭ ಓಂ ಧನ್ವಿನೇ ನಮಃ
೩೮ ಓಂ ಕಂಜಜಾತಾಯ ನಮಃ
೩೯ ಓಂ ಅಂತಕಾಗಧೃತೇ ನಮಃ
೪೦ ಓಂ ವಿಷ್ಣುನೇತ್ರಪ್ರಪೂಜ್ಯಾಂಘ್ರಯೇ ನಮಃ
೪೧ ಓಂ ಮಧುಸೂದನಸೂದನಾಯ ನಮಃ
೪೨ ಓಂ ವಿಚಾರರಹಿತಾಯ ನಮಃ
೪೩ ಓಂ ಮಾನಿನೇ ನಮಃ
೪೪ ಓಂ ಮನಸ್ವಿನೇ ನಮಃ
೪೫ ಓಂ ಕಾಲನಾಶನಾಯ ನಮಃ
೪೬ ಓಂ ಸೋಮಸೂರ್ಯಾಗ್ನಿನಯನಾಯ ನಮಃ
೪೭ ಓಂ ಭೀಮಾಯ ನಮಃ
೪೮ ಓಂ ಭವ್ಯಾಯ ನಮಃ
೪೯ ಓಂ ಯುಗಾಂತಕೃತೇ ನಮಃ
೫೦ ಓಂ ಸರಸ್ಯಾಯ ನಮಃ
೫೧ ಓಂ ಧೂಮ್ರಕೇಶಾಂಗಾಯ ನಮಃ
೫೨ ಓಂ ಬಭ್ಲುಶೇ ನಮಃ
೫೩ ಓಂ ಭಯಹಾರಕಾಯ ನಮಃ
೫೪ ಓಂ ವಾತಾಶನಧರಾಯ ನಮಃ
೫೫ ಓಂ ಗರ್ತಾಯ ನಮಃ
೫೬ ಓಂ ಕೈಲಾಸನಿಲಯಾಯ ನಮಃ

ಪಶೂನಾಂ ಪತಿರಾತನ್ವೋ ವಿಘಸಾಶೀ ಮಖಾಂತಕಃ ।
ಆಷಾಢಃ ಪಾರ್ವತೀನಾಥೋ ಘೋರೋ ರುದ್ರೋ ಮಹೇಶ್ವರಃ ॥೪೮॥

ಕಪಾಲಪಾಣಿರ್ಮೃಗಧೃಕ್ಪಾದುಕಾಪದಪದ್ಮಧೃಕ್ ।
ವನೋವನ್ಯೋ ವೈದ್ಯುತಾತ್ಮಾ ಗತಿದೋ ಮುಕ್ತಿದಾಯಕಃ ॥೪೯॥

ವಿಷಾಭರಣಭೂಷಾಢ್ಯೋ ಮೃಡೋ ಪರಿವೃಢೋಽಂತಕಃ ।
ಪಾಶವಿಚ್ಛೇದಕೋ ದೇವೋ ವೇದಗೀತಃ ಪುರಾಂತಕಃ ॥೫೦॥

ವಿರಾಗೋ ವಿಕಟೋ ಮುಂಡಸ್ತಂಡುಪ್ರೀತೋ ಭಯಾವಹಃ ।
ವಿಶಾಲವಕ್ಷಾ ಭೂಷಾಢ್ಯಸ್ತ್ರಿಪುಂಡ್ರಲಲಿತಾಲಕಃ ॥೫೧॥

ಚಕ್ಷುಃ ಶ್ರವಮಹಾಹಾರೋ ರುದ್ರಾಕ್ಷನವಲಂಕೋಜ್ವಲಃ ।
ಗಣಾಧಿಪೋ ಗಹ್ವರೇಷ್ಠಃ ಶತಧನ್ವಾ ಸಹಸ್ರಧೃಕ್ ॥೫೨॥

---

೫೭ ಓಂ ಸ್ವರಾಜೇ ನಮಃ
೫೮ ಓಂ ತುರಾಷಾಟ್ಪೂಜಿತಪದಾಯ ನಮಃ
೫೯ ಓಂ ವೇದವಾಚಿಪ್ರಿಯಾಯ ನಮಃ
೬೦ ಓಂ ಯೂನೇ ನಮಃ
೬೧ ಓಂ ಸನಾತನಾಯ ನಮಃ
೬೨ ಓಂ ದೀನದಯಾಯ ನಮಃ
೬೩ ಓಂ ವಸುಷೇಣಾಯ ನಮಃ
೬೪ ಓಂ ಪ್ರಸಾದಕೃತೇ ನಮಃ
೬೫ ಓಂ ಸ್ತುತಿಪ್ರಿಯಾಯ ನಮಃ
೬೬ ಓಂ ವಾಸ್ತುಪೋಥಾಯ ನಮಃ
೬೭ ಓಂ ಹವ್ಯಕವ್ಯಭುಜೇ ನಮಃ
೬೮ ಓಂ ಈಶ್ವರಾಯ ನಮಃ
೬೯ ಓಂ ವ್ಯೋಮಕೇಶಾಯ ನಮಃ
೭೦ ಓಂ ವಾಮದೇವಾಯ ನಮಃ
೭೧ ಓಂ ಕೃತ್ತಿವಾಸಾಯ ನಮಃ
೭೨ ಓಂ ಪ್ರಭೇದನಾಯ ನಮಃ
೭೩ ಓಂ ಪಶೂನಾಂ ಪತಯೇ ನಮಃ
೭೪ ಓಂ ಆತನ್ವಾಯ ನಮಃ
೭೫ ಓಂ ವಿಘಸಾಶಿನೇ ನಮಃ
೭೬ ಓಂ ಮಖಾಂತಕಾಯ ನಮಃ
೭೭ ಓಂ ಆಷಾಢಾಯ ನಮಃ
೭೮ ಓಂ ಪಾರ್ವತೀನಾಥಾಯ ನಮಃ
೭೯ ಓಂ ಘೋರಾಯ ನಮಃ
೮೦ ಓಂ ರುದ್ರಾಯ ನಮಃ
೮೧ ಓಂ ಮಹೇಶ್ವರಾಯ ನಮಃ
೮೨ ಓಂ ಕಪಾಲಪಾಣಯೆ ನಮಃ
೮೩ ಓಂ ಮೃಗಧೃಶೇ ನಮಃ
೮೪ ಓಂ ಪಾದುಕಾಪದಾಯ ನಮಃ
೮೫ ಓಂ ಪದ್ಮಧೃಶೇ ನಮಃ

ಏಭಿರ್ನಾಮಭಿರೇವೇಶಿ ಮಾಸಿ ಬಿಲ್ವೈಃ ಪ್ರಪೂಜನಂ ।
ಸ್ತವಂ ಚ ತೇ ಪ್ರವಕ್ಷ್ಯಾಮಿ ಪುಣ್ಯಂ ಪ್ರಿಯಕರಂ ಮಮ ॥೫೩॥

ಶಂಭೋ ಮಯಸ್ಕರ ಹರಾಮರ ಧೀರ ವೀರ
ಗಂಗಾಧರಪ್ರಮಥನಾಥ ಸನಾತನೇಶ ।
ವಿಶ್ವೇಶ ವಿಶ್ವಮದನಾಂತಕ ವಿಶ್ವಮೂರ್ತೇ
ವಿಶ್ವಾಕ್ಷವಿಶ್ವಮುಖ ಪಾಹಿ ನಮೋ ನಮಸ್ತೇ ॥೫೪॥

ನಮಾಮಿ ಶಶಿಶೇಖರಂ ಪುರಹರಂ ಚ ಗಂಗಾಧರಂ
ವಿಭೂತಿಧರಮೀಶ್ವರಂ ಗರಧರಂ ಚ ವಿಶ್ವೇಶ್ವರಂ ।
ಹರಾಮರವರಂ ಶಿವಂ ಹರಿಶರಾಸನಸಕ್ತಂ ಪರಂ
ಜಲಂಧರಯಮಾಂತಕಂ ಸುರವಶಂ ನತೋಽಸ್ಮೀಶ್ವರಂ ॥೫೫॥

---

೮೬ ಓಂ ವನಾಯ ನಮಃ
೮೭ ಓಂ ವನ್ಯಾಯ ನಮಃ
೮೮ ಓಂ ವೈದ್ಯುತಾತ್ಮನೇ ನಮಃ
೮೯ ಓಂ ಗತಿದಾಯ ನಮಃ
೯೦ ಓಂ ಮುಕ್ತಿದಾಯಕಾಯ ನಮಃ
೯೧ ಓಂ ವಿಷಾಭರಣಭೂಷಾಢ್ಯಾಯ ನಮಃ
೯೨ ಓಂ ವೃಷಾಯ ನಮಃ
೯೩ ಓಂ ಪರಿವೃಢಾಯ ನಮಃ
೯೪ ಓಂ ಅಂತಕಾಯ ನಮಃ
೯೫ ಓಂ ಪಾಶವಿಚ್ಛೇದಕಾಯ ನಮಃ
೯೬ ಓಂ ದೇವಾಯ ನಮಃ
೯೭ ಓಂ ವೇದಗೀತಾಯ ನಮಃ
೯೮ ಓಂ ಪುರಾಂತಕಾಯ ನಮಃ
೯೯ ಓಂ ವಿರಾಗಾಯ ನಮಃ
೧೦೦ ಓಂ ವಿಕಟಾಯ ನಮಃ
೧೦೧ ಓಂ ಮುಂಡಾಯ ನಮಃ
೧೦೨ ಓಂ ತಂಡುಪ್ರೀತಾಯ ನಮಃ
೧೦೩ ಓಂ ಭಯಾವಹಾಯ ನಮಃ
೧೦೪ ಓಂ ವಿಶಾಲವಕ್ಷಸೇ ನಮಃ
೧೦೫ ಓಂ ಭೂಷಾಢ್ಯಾಯ ನಮಃ
೧೦೬ ಓಂ ತ್ರಿಪುಂಡ್ರಲಲಿತಾಲಕಾಯ
೧೦೭ ಓಂ ಚಕ್ಷುಃಶ್ರವಮಹಾಹಾರಾಯ ನಮಃ
೧೦೮ ಓಂ ರುದ್ರಾಕ್ಷವಲಯೋಜ್ಜ್ವಲಾಯ ನಮಃ
೧೦೯ ಓಂ ಗಣಾಧಿಪಾಯ ನಮಃ
೧೧೦ ಓಂ ಗಹ್ವರೇಷ್ಟಾಯ ನಮಃ
೧೧೧ ಓಂ ಶತಧನ್ವನೇ ನಮಃ
೧೧೨ ಓಂ ಸಹಸ್ರಧೃಶೇ ನಮಃ

ಶಂಭೋ ಸೋಮಕಲಾವತಂಸ ಗಿರಿಜಾವಕ್ಷೋಜದಕ್ಷಾಯತೇ
ತ್ರ್ಯಕ್ಷಾಯೋಕ್ಷವಹಾಯ ದಕ್ಷಮಖಹೃತ್ಕಕ್ಷಾಯ ರಕ್ಷಾಂಗಧೃಕ್ ।
ಪಕ್ಷೀಂದ್ರಪ್ರಿಯವಾಹಪೂಜಿತ ಸುರಾಧ್ಯಕ್ಷಾಯ ಮೋಕ್ಷಪ್ರದಾ-
ನಂಗಧ್ವಾಂಕ್ಷವಿಸಾರಿಣೇ ಮಯಿ ದೃಶಾ ತ್ವಂ ಪಕ್ಷಪಾತಾದವ ॥೫೬॥

---

ಈ ನಾಮಗಳಿಂದಲೇ ಮಾರ್ಗಶಿರಮಾಸದಲ್ಲಿ ಶಿವನನ್ನು ಬಿಲ್ವದಳಗಳಿಂದ ಪೂಜಿಸಬೇಕು. ದೇವಿಯೆ! ಪುಣ್ಯಕರವೂ ನನಗೆ ಪ್ರೀತಿಕರವೂ ಆದ ಸ್ತೋತ್ರವನ್ನು ನಿನಗೆ ಹೇಳುವೆನು ಕೇಳು. ॥೩೮-೩೯-೪೦-೪೧-೪೨-೪೩-೪೪-೪೫-೪೬-೪೭-೪೮-೪೯-೫೦-೫೧-೫೨-೫೩॥

ಸುಖಕರನಾದ ಶಂಭುವೆ! ಪಾಪನಾಶಕನೂ ದೇವತೆಗಳಲ್ಲೆಲ್ಲಾ ಧೀರನೂ ವೀರನೂ, ಗಂಗೆಯನ್ನು ಮುಡಿಯಲ್ಲಿ ಧರಿಸಿರುವವನೂ, ಪ್ರಮಥಗಣಾಧಿಪನೂ, ಸನಾತನನೂ, ಈಶ್ವರನೂ, ಜಗದೊಡೆಯನೂ, ಪ್ರಪಂಚವನ್ನೇ ಮದಗೊಳಿಸುತ್ತಿದ್ದ ಮನ್ಮಥನನ್ನು ಭಸ್ಮಮಾಡಿದವನೂ, ಜಗನ್ಮೂರ್ತಿಯೂ, ಜಗಚ್ಚಕ್ಷುವೂ, ಜಗನ್ಮುಖನೂ ಆದ ನಿನಗೆ ನಮಸ್ಕಾರಮಾಡುವೆನು. ॥೫೪॥

ಚಂದ್ರಶೇಖರನೂ, ತ್ರಿಪುರಾಂತಕನೂ, ಗಂಗೆಯನ್ನು ಜಡೆಯಲ್ಲಿ ಧರಿಸಿರುವವನೂ, ವಿಭೂತಿಯನ್ನು ಧರಿಸಿರುವವನೂ, ಈಶ್ವರನೂ, ವಿಷಕಂಠನೂ, ಜಗದೊಡೆಯನೂ ಆದ ಈಶ್ವರನಿಗೆ ನಮಸ್ಕರಿಸುತ್ತೇನೆ. ಓ ಪರಶಿವನೇ! ದೇವವರ್ಯನೂ, ಶಿವನೂ, ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡಿದ್ದವನೂ, ಶ್ರೇಷ್ಠನೂ, ಜಲಂಧರ ಮತ್ತು ಯಮ ಇವರನ್ನು ಸಂಹರಿಸಿದವನೂ, ದೇವತೋತ್ತಮನೂ ಎನಿಸಿರುವೆ. ಇಂತಹ ನಿನಗೆ ನಮಿಸುವೆನು. ॥೫೫॥

ಚಂದ್ರಕಲಾಮೌಳಿಯಾದ ಶಂಭುವೆ! ಪಾರ್ವತಿಯ ಕುಚಮರ್ದನ ಲಾಲಸನಾದ ನಿನಗೆ ನಮಸ್ಕಾರಮಾಡುವೆನು. ಮೂರುಕಣ್ಣುಳ್ಳವನೂ, ವೃಷಭ ವಾಹನನೂ, ದಕ್ಷಬ್ರಹ್ಮನ ಯಾಗವನ್ನು ನಾಶಪಡಿಸಿದವನೂ, ಅಭಯಮುದ್ರೆಯಿಂದ ಭಕ್ತರನ್ನು ರಕ್ಷಿಸುವವನೂ, ವಿಷ್ಣುಪೂಜಿತನೂ, ದೇವಾಧ್ಯಕ್ಷನೂ, ಮೋಕ್ಷಪ್ರದನೂ, ಮನ್ಮಥನೆಂಬ ಕಾಗೆಯನ್ನು ಧ್ವಂಸಮಾಡಿದವನೂ ಆದ ಮಹೇಶನೆ! ನನ್ನಲ್ಲಿ ಪಕ್ಷಪಾತದೃಷ್ಟಿಯಿಟ್ಟು ಕಾಪಾಡು. ॥೫೬॥

ನಗಕೋದಂಡ ಸುಚಂಡದೀಧಿತಿವರಸ್ಫಾರೋರುನೇತ್ರಜ್ವಲ-
ಚ್ಚಾಮುಂಡಾಜನಕೋತ್ತಮಾಂಗಕಲಿತಾಗಂಗಾರಯೋಲ್ಲಾಸಿತ ।
ಸೋಮೋತ್ತಂಸ ಮರೀಚಿಭಿರ್ವಿಕಸಿತಾ ಲೋಲೋತ್ಪಲಸ್ರಗ್ವಿಣೇ
ಪಾರಾವಾರಭವೋರುಸಾಗರಮಹಾಕಲ್ಲೋಲಲಗ್ನಂ ವಿಭೋ ॥೫೭॥

ಭಗ್ನಂ ಕಾಮವಿಷಾಗ್ನಿನಾ ಜನಿಜರಾನಾಶಾಂಬುಮಗ್ನಂ ಸದಾ ।
ಮಾಮಾಶೂದ್ಧರ ದೇಹಿ ಶಂಕರ ಕರಂ ಸಂಪ್ಲಾವನೇ ಕಿಂಕರಂ ॥೫೮॥

ದೀನಾವನ ಪ್ರಥಿತ ಚಾರುದಶಾಮಹೇಶ
ಶ್ರೀವ್ಯೋಮಕೇಶ ಕುಶಕಾಶಸಮರ್ಚಿತಾಂಘ್ರೇ ।
ಕೋಶಾವಕಾಶ ಮಹಿಮಸ್ವರಶೇಷಭೂಷ
ಯೋಷಾರ್ಧಕಾಯ ಮಾಮಾಶು ವೀಕ್ಷಯ ಸುಶಿಕ್ಷಯ ಕಾಮವರ್ಗಂ ॥೫೯॥

---

ಮೇರುಪರ್ವತವನ್ನೇ ಬಿಲ್ಲನ್ನಾಗಿಮಾಡಿಕೊಂಡವನೂ, ಸೂರ್ಯರೂಪವಾದ ವಿಶಾಲನೇತ್ರವುಳ್ಳವನೂ, ಚಾಮುಂಡಾಜನಕನೂ, ಪ್ರವಾಹಭರಿತವಾದ ಗಂಗೆಯನ್ನು ಮುಡಿಯಲ್ಲಿ ಧರಿಸಿರುವವನೂ, ಚಂದ್ರಶೇಖರನೆನಿಸಿ, ಆ ಚಂದ್ರಕಿರಣಗಳಿಂದಲೇ ಅರಳಿಸಿದ ಕನ್ನೈದಿಲೆಯ ಹಾರವುಳ್ಳವನೂ ಆದ ವಿಭುವೆ! ಈ ಸಂಸಾರವೆಂಬ ಕೊನೆಮೊದಲಿಲ್ಲದ ಘೋರ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ಪಾರುಮಾಡು. ॥೫೭॥

ಮನ್ಮಥನೆಂಬ ವಿಷದ ಬೆಂಕಿಯಿಂದ ಸುಡಲ್ಪಟ್ಟು, ಯಾವಾಗಲೂ ಜನನ ಮರಣರೂಪವಾದ ಆಶೆಯಿಂದ ಕೂಡಿದ ಸಂಸಾರ ಸಾಗರದಲ್ಲಿ ಮುಳುಗಿರುವ ನನಗೆ ಕೈಗೊಟ್ಟು, ನಿನ್ನ ಸೇವಕನನ್ನು ಜಾಗ್ರತೆಯಾಗಿ ಮೇಲೆತ್ತಿ ಉದ್ಧಾರಮಾಡು. ॥೫೮॥

ದೀನರಕ್ಷಕನೂ, ಪ್ರಖ್ಯಾತವಾದ ಮನೋಹರನಿವಾಸವುಳ್ಳವನೂ, ಮಹೈಶ್ವರ್ಯ ಯುಕ್ತನೂ, ಆಕಾಶರೂಪವಾದ ಕೇಶವುಳ್ಳವನೂ, ಕುಶ, ಕಾಶತೃಣಗಳಿಂದ ಪೂಜಿಸಲ್ಪಟ್ಟ ಪಾದವುಳ್ಳವನೂ, ಸಮಸ್ತ ಬ್ರಹ್ಮಾಂಡಗಳಿಗೂ ಅವಕಾಶರೂಪನೆನಿಸಿದವನೂ, ಮಹಾಮಹಿಮೆಯುಳ್ಳವನೂ, ಶ್ರೇಷ್ಠನಾದ ಆದಿಶೇಷನನ್ನೇ ಅಲಂಕರಿಸಿರುವವನೂ, ಅರ್ಧನಾರೀಶ್ವರನೂ ಆದ ಶಂಕರನೆ! ನನ್ನನ್ನು ಜಾಗ್ರತೆ ಸಲಹು. ಮನ್ಮಥ ವರ್ಗವು ನನ್ನನ್ನು ಪೀಡಿಸದಂತೆ ಚೆನ್ನಾಗಿ ಅವರನ್ನು ಶಿಕ್ಷಿಸು. ॥೫೯॥

ಸ್ತವೇನಾಽನೇನ ದೇವೇಶಿ ಸ್ತುವೀತ ಪರಮೇಶ್ವರಂ ।
ಪೌರ್ಣಮ್ಯಾಂ ಶಾಂಭವೈಃ ಸಾರ್ಧಂ ಹೋಮಃ ಕಾರ್ಯೋ ವಿಧಾನತಃ ॥೬೦॥

ಚಿತ್ರಂ ಗೋಮಿಥುನಂ ದೇಯಂ ಸವತ್ಸಂ ಚ ಸ ದಕ್ಷಿಣಂ ।
ಸ್ವಯಂಭುಂಜೀತ ತಸ್ಯಾಂತೇ ಬಾಂಧವೈಃ ಶಾಂಭವೈಃ ಸಹ ॥೬೧॥

ಮಾಸಂ ನಕ್ತಾಶನೋ ಭೂಯಾಚ್ಛಿವಭಕ್ತೋ ಜಿತೇಂದ್ರಿಯಃ ।
ಸ ಚ ಯತ್ಫಲಮಾಪ್ನೋತಿ ತದೇಕಾಗ್ರಮನಾಃ ಶೃಣು ॥೬೨॥

ಗೀತಾವಾದಿತ್ರಬಹುಲೈರಪ್ಸರೋಗಣನರ್ತನೈಃ ।
ಗಂಧಸ್ರಗನುಲಿಪ್ತಾಂಗೋ ದಿವ್ಯಾಭರಣಭೂಷಿತಃ ॥೬೩॥

ಕಾಂಚನೇನ ವಿಮಾನೇನ ಯಾತಿ ಶಂಭೋರ್ವರಾಲಯಂ ।
ಚಾಪಸ್ಥಿತೇ ದಿವಾನಾಥೇ ತಸ್ಮಿನ್ನುಷಸಿ ಪೂಜನಂ ॥೬೪॥

ಕಾರ್ಯಂ ದೇವಿ ಪ್ರಿಯಕರಂ ಸದಾಲಿಂಗಾರ್ಚನಂ ಮಮ ।
ಸಮುದ್ಗಾನ್ನಂ ಘೃತಾಕ್ತಂ ಚ ನಿವೇದ್ಯ ಪರಮೇಶ್ವರಂ ॥೬೫॥

---

ಈ ಸ್ತೋತ್ರದಿಂದ ಪರಮೇಶನನ್ನು ಸ್ತುತಿಸಿ ಹುಣ್ಣಿಮೆಯದಿನ ಶೈವರೊಡನೆ ವಿಧಿಪೂರ್ವಕವಾಗಿ ಹೋಮಮಾಡಬೇಕು. ಅನಂತರ ಚಿತ್ರವರ್ಣದ ಗೋಮಿಥುನವನ್ನು ಕರುವಿನೊಡನೆ ಉಚಿತ ದಕ್ಷಿಣೆಯಿಟ್ಟು ದಾನಮಾಡಬೇಕು. ಕೊನೆಯಲ್ಲಿ ಶೈವರಾದ ಬಂಧುಗಳೊಡನೆ ತಾನೂ ಊಟಮಾಡಬೇಕು. ॥೬೦-೬೧॥

ಪಾರ್ವತಿಯೆ ! ಶಿವಭಕ್ತನು ಜಿತೇಂದ್ರಿಯನಾಗಿ ಈ ಒಂದು ತಿಂಗಳೂ ರಾತ್ರಿ ಭೋಜನಮಾಡಬೇಕು. ಅವನು ಯಾವ ಫಲವನ್ನು ಪಡೆಯುವನೆಂಬುದನ್ನು ಹೇಳುವೆನು ಕೇಳು ; ಸಂಗೀತ ಮತ್ತು ವಾದ್ಯಧ್ವನಿಗಳಿಂದಲೂ ಅಪ್ಸರೆಯರ ನಾಟ್ಯಗಳಿಂದಲೂ ವಿನೋದಪಡುತ್ತಾ ಗಂಧ, ಹೂಮಾಲೆಗಳನ್ನು ಧರಿಸಿ, ದಿವ್ಯಾಭರಣಗಳನ್ನು ಅಲಂಕರಿಸಿಕೊಂಡು ಸುವರ್ಣವಿಮಾನದಲ್ಲಿ ಕುಳಿತು ಶಿವನ ಕೈಲಾಸಕ್ಕೆ ತೆರಳುವನು. ॥೬೨-೬೩॥

ಸೂರ್ಯನು ಧನೂರಾಶಿಯಲ್ಲಿದ್ದಾಗ (ಧನುರ್ಮಾಸದಲ್ಲಿ) ಉಷಃಕಾಲದಲ್ಲಿ ಯಾವಾಗಲೂ ಶಿವಲಿಂಗಾರ್ಚನೆ ಮಾಡಬೇಕು. ಅದು ನನಗೆ ಪ್ರೀತಿಕರವಾಗುವುದು. ತುಪ್ಪದಿಂದ ಬೆರಸಿದ ಹುಗ್ಗಿಯನ್ನು ಪರಮೇಶನಿಗೆ ನಿವೇದನಮಾಡಿ ಒಂದು

ಯಾವನ್ಮಾಸಂ ವಿಶೇಷೇಣ ಪೂಜನಂ ತತ್ಪ್ರಶಸ್ಯತೇ ।
ಶತವರ್ಷಾಸು ಯಾ ಪೂಜಾ ಮಾಸೇನ ಉಷಸಿ ಧ್ರುವಂ ॥೬೬॥

ತತ್ಫಲಂ ಲಭತೇ ಗೌರಿ ತಸ್ಮಿನ್ಮಾಸೇ ವಿಶೇಷತಃ ।
ಚಾಪೇ ರೌದ್ರರ್ಕ್ಷಕೇ ದೇವಿ ಪೌರ್ಣಮ್ಯಾಂ ಶಶಿಶೇಖರಂ ॥೬೭॥

ನೃತ್ತಮಾನಂ ತ್ರಯೀನೇತ್ರಂ ಕೃಶಾನುವರಹಸ್ತಕಂ ।
ತ್ವಯಾಯುಕ್ತಂ ವಿಶೇಷೇಣ ಭೂಷಣಂ ಪರಮೇಶ್ವರಂ ॥೬೮॥

ಸಂಪೂಜ್ಯ ಸ್ನಾಪಯೇದ್ದೇವಮಭಿಷೇಚನಕಕ್ರಮೈಃ ।
ಗಂಧಂ ಸುಗಂಧಮಾಲಿಪ್ಯ ಧೂಪದೀಪಸುಮೈಃ ಶಿವೇ ॥೬೯॥

ನೈವೇದ್ಯೈಃ ಫಲಮೂಲೈಶ್ಚ ಹವಿಷಾಪೂಪಸಂಯುತಂ ।
ದೃಷ್ಟ್ವಾ ಪ್ರಮುಚ್ಯತೇ ಪಾಪೈರ್ಬುದ್ಧಿಪೂರ್ವಕೃತೈರಪಿ ॥೭೦॥

---

ತಿಂಗಳು ಪೂರ್ಣವಾಗಿ ನನ್ನನ್ನು ಪೂಜಿಸಬೇಕು. ಈ ಪೂಜೆಯು ಶ್ರೇಷ್ಠವೆನಿಸು ವುದು. ನೂರುವರ್ಷಕಾಲ ಸಾಮಾನ್ಯಪೂಜೆಮಾಡುವುದರಿಂದ ಬರುವ ಫಲವು ಈ ಧನುರ್ಮಾಸದಲ್ಲಿ ಒಂದು ತಿಂಗಳು ಮಾಡುವುದರಿಂದಲೇ ನಿಶ್ಚಯವಾಗಿಯೂ ಲಭಿಸುವುದು. ॥೬೪-೬೫-೬೬॥

ಗೌರಿಯೆ! ಧನುರ್ಮಾಸದಲ್ಲಿ ಅಂತಹ ಫಲವನ್ನು ವಿಶೇಷವಾಗಿ ಹೊಂದು ತ್ತಾನೆ. ಧನುರ್ಮಾಸದಲ್ಲಿ ಪೂರ್ಣಿಮಾ, ಆರ್ದ್ರಾನಕ್ಷತ್ರವಿರುವ ದಿನ, ಚಂದ್ರ ಶೇಖರನೂ, ಮೂರುಕಣ್ಣುಳ್ಳವನೂ, ಶ್ರೇಷ್ಠವಾದ ಕೈಯಲ್ಲಿ ಅಗ್ನಿಯನ್ನು ಹಿಡಿ ದಿರುವವನೂ, ನಾಟ್ಯವಾಡುತ್ತಿರುವವನೂ, ವಿಶೇಷವಾಗಿ ನಿನ್ನೊಡನೆ ಅಲಂಕೃತನಾಗಿ ವಿಹರಿಸುತ್ತಿರುವ ಪರಮೇಶ್ವರನನ್ನು ಪೂಜಿಸಿ, ಅಭಿಷೇಕಕ್ರಮಗಳಿಂದ ಸ್ನಾನ ಮಾಡಿಸಬೇಕು. ಅನಂತರ ಸುಗಂಧಪೂರ್ಣವಾದ ಗಂಧವನ್ನು ಲೇಪನಮಾಡಿ ಧೂಪ, ದೀಪಗಳನ್ನಿತ್ತು ಹೂಗಳಿಂದ ಅರ್ಚಿಸಬೇಕು. ॥೬೭-೬೮-೬೯॥

ಹಣ್ಣು, ಗೆಡ್ಡೆಗೆಣಸುಗಳು, ಹವಿಸ್ಸು, ಒಬ್ಬಟ್ಟು ಮುಂತಾದ ನೈವೇದ್ಯ ಗಳನ್ನು ಸಮರ್ಪಿಸಬೇಕು. ಅಂತಹ ದಿನ ಕೇವಲ ಶಿವದರ್ಶನಮಾಡಿದಮಾತ್ರ ದಿಂದಲೇ ಮಾನವನು ಬುದ್ಧಿಪೂರ್ವಕವಾಗಿ ಮಾಡಿದ ಸಕಲ ಪಾತಕಗಳಿಂದಲೂ ಬಿಡುಗಡೆ ಹೊಂದುವನು. ಆರ್ದ್ರಾನಕ್ಷತ್ರಯುಕ್ತವಾದ ಧನುರ್ಮಾಸದ ಪೂರ್ಣಿಮೆ

ಪುಂಡರೀಕಪುರೇವಾಪಿ ಪಶ್ಯೇನ್ನೃತ್ಯಂತಮೀಶ್ವರಂ ।
ರೌದ್ರರ್ಕ್ಷೇ ಚಾಪಸಂಯುಕ್ತೇ ಮಾಸ್ಯಸ್ಮಿನ್ಪೌರ್ಣಮಾತಿಥೌ ॥೨೧॥

ಸ್ನಾತ್ವಾಥ ಶಿವಗಂಗಾಯಾಂ ಪಶ್ಯೇದ್ದೇವಂ ಪಿನಾಕಿನಂ ।
ಬ್ರಹ್ಮಹತ್ಯಾದಿಭಿರ್ಮುಕ್ತೋ ಭುಕ್ತಿಂ ಮುಕ್ತಿಂ ಚ ವಿಂದತಿ ॥೨೨॥

॥ ಈಶ್ವರ ಉವಾಚ ॥

ಯೋ ಮಾರ್ಗಶೀರ್ಷೇ ವಿಧಿಶೀರ್ಷಮಾಲಾ
ಚಲಲ್ಲಲದ್ವಕ್ಷಸಮಾರ್ದ್ರಕರ್ಕ್ಷೇ ।
ಸಂಪೂಜ್ಯ ತನ್ಮಾಸಿ ಮುದಾ ಮಮೇತಿ
ನೃತ್ತಂ ಚ ಸಂವೀಕ್ಷ್ಯ ವಿಮುಕ್ತಿಮೇತಿ ॥೨೩॥

ಯೋ ಮಾರ್ಗಶೀರ್ಷೇ ವಿಧಿಪೂಜನಕೃದ್ಭವಾನಿ
ವಿಮುಕ್ತಿಮಾರ್ಗಂ ಲಭತೇ ಮನುಷ್ಯಃ ।
ಪುಣ್ಯೈರಪಾಮಾರ್ಗದಲೈರ್ಮುದಾಯುತೋ
ನ ದುರ್ಗಮಾಯಾತಿ ಗತಿಂ ಮದಾಶ್ರಯಃ ॥೨೪॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಮಾರ್ಗಶೀರ್ಷಮಾಸ
ಪೂಜಾವಿಧಾನನಿರೂಪಣಂ ನಾಮ ದ್ವಾವಿಂಶೋಽಧ್ಯಾಯಃ

---

ಯಲ್ಲಿ ಪುಂಡರೀಕಪುರದಲ್ಲಾದರೂ ನಾಟ್ಯವಾಡುವ ಈಶ್ವರನನ್ನು ದರ್ಶನಮಾಡಬೇಕು. ಶಿವಗಂಗೆಯಲ್ಲಿ ಸ್ನಾನಮಾಡಿ ಅನಂತರ ಶಿವನನ್ನು ದರ್ಶನಮಾಡಬೇಕು. ಹೀಗೆ ಮಾಡುವುದರಿಂದ ಬ್ರಹ್ಮಹತ್ಯಾದಿ ಸಕಲ ಪಾತಕಗಳಿಂದಲೂ ಮುಕ್ತನಾಗಿ ಮೋಕ್ಷವನ್ನೂ ಇಹಲೋಕ ಭೋಗಗಳನ್ನೂ ಅನುಭವಿಸುವನು. ॥೨೦-೨೧-೨೨॥

ಈಶ್ವರಿಯೆ, ಮಾರ್ಗಶೀರ್ಷಮಾಸದಲ್ಲಿ ಆರ್ದ್ರಾನಕ್ಷತ್ರದ ದಿವಸ ಬ್ರಹ್ಮನ ರುಂಡಮಾಲೆಯಿಂದ ಶೋಭಿಸುವ ವಕ್ಷಸ್ಥಳವುಳ್ಳ ನನ್ನನ್ನು ಸಂತೋಷದಿಂದ ಪೂಜಿಸಿ ನನ್ನ ನಾಟ್ಯಮೂರ್ತಿಯನ್ನೂ ದರ್ಶನಮಾಡಿದವನು ಮೋಕ್ಷಪಡೆಯುವನು. ॥೨೩॥

ಎಲೌ ಪಾರ್ವತಿಯೆ! ಮಾರ್ಗಶೀರ್ಷಮಾಸದಲ್ಲಿ ವಿಧಿಪ್ರಕಾರ ಪೂಜಿಸುವ ಮನುಜನು ಮೋಕ್ಷಮಾರ್ಗವನ್ನು ಹೊಂದುವನು. ಪುಣ್ಯಕರಗಳಾದ ಅಪಾಮಾರ್ಗ

ದಳಗಳಿಂದ ಪ್ರೀತಿಪೂರ್ವಕವಾಗಿ ನನ್ನನ್ನು ಪೂಜಿಸುವ ಭಕ್ತನು ಎಂದೆಂದಿಗೂ ದುರ್ಗತಿಯನ್ನು ಪಡೆಯುವುದಿಲ್ಲವೆಂದು ಶಿವನು ದೇವಿಗೆ ಹೇಳಿದನು. ||೭೪||

ಇಂತು ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಮಾರ್ಗಶೀರ್ಷಮಾಸ ಪೂಜಾವಿಧಿ ನಿರೂಪಣೆಯೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ತ್ರಯೋವಿಂಶೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

ಪೌಷೇಪಿ ಶೃಣು ಮೇ ಮಾಸಿ ಪೂಜನಂ ಸರ್ವಕಾಮದಂ ।
ಪುಷ್ಯೇ ಚೋಷಸಿ ಉತ್ಥಾಯ ಧ್ಯಾತ್ವಾ ದೇವಂ ತ್ರಿಯಂಬಕಂ ||೧||

ಪ್ರಾಙ್ಮುಖೋದಙ್ಮುಖೋವಾಪಿ ಬಹಿರ್ಗಚ್ಛನ್ನದೀತಟೇ ।
ಸಕಮಂಡಲುಹಸ್ತೋಽಥ ಸೋದಕಂ ಪ್ರಾವೃತಂ ಶಿವಃ ||೨||

ಕುರ್ಯಾಚ್ಚತುಷ್ಪಥೇ ನದ್ಯಾಂ ಗೋಷ್ಠ ಕೃಷ್ಟೇಽಪಿವಾ ಭುವಿ ।
ಗುರುದೇವದ್ವಿಜಾಗ್ನೀನಾಂ ಸ್ತ್ರೀಣಾಂ ಚೈವ ತು ಸಂನಿಧೌ ||೩||

---

## ಇಪ್ಪತ್ತಮೂರನೆಯ ಅಧ್ಯಾಯ

ದೇವಿ! ಪುಷ್ಯಮಾಸದಲ್ಲಿಯೂ ಸಕಲ ಇಷ್ಟಾರ್ಥಗಳನ್ನೂ ಕೊಡುವ ನನ್ನ ಮಾಸಪೂಜೆಯ ಕ್ರಮವನ್ನು ಹೇಳುತ್ತೇನೆ ಕೇಳು; ಪುಷ್ಯಮಾಸದಲ್ಲಿ ಉಷಃಕಾಲದಲ್ಲಿ ಎದ್ದು ಮಹೇಶನನ್ನು ಧ್ಯಾನಿಸಿ ಪೂರ್ವ ಅಥವಾ ಉತ್ತರದಿಗಭಿಮುಖವಾಗಿ ಹೊಳೆಯ ದಡಕ್ಕೆ ಬಹಿರ್ದೇಶಕ್ಕೆ ಹೋಗಿ, ಜಲಪೂರ್ಣವಾದ ಕಮಂಡಲುವನ್ನು ಕೈಯಲ್ಲಿ ಹಿಡಿದು ನಾಲ್ಕುದಾರಿಸೇರುವ ಸ್ಥಳ, ನದಿ, ದನಗಳ ಕೊಟ್ಟಿಗೆ ಅಥವಾ ಉತ್ತ ಭೂಮಿ ಇವುಗಳಲ್ಲಿ ಗುರು, ದೇವರು, ಬ್ರಾಹ್ಮಣ, ಅಗ್ನಿ ಮತ್ತು ಸ್ತ್ರೀಯರ ಸನ್ನಿಧಿಯಲ್ಲಿ ಶುದ್ಧವಾದ ನೀರನ್ನು ಪ್ರೋಕ್ಷಣೆಮಾಡಬೇಕು. ||೧-೨-೩||

ನಾಪ್ಸು ಮೂತ್ರಪುರೀಷಾಣಿ ಕುರ್ಯಾದ್ಗಂಡೂಷಧಾವನಂ ।
ಸ್ವಗೃಹಾದ್ದಕ್ಷಿಣೇ ದೇಶೇ ತೃಣಪ್ರಚ್ಛಾದಿತೇ ಭುವಿ ॥೪॥

ಕುರ್ಯಾನ್ಮೂತ್ರಪುರೀಷಾಣಿ ತತಃ ಶೌಚಂ ಯಥಾರುಚಿ ।
ಗಂಧಲೇಪಕ್ಷಯಂ ವಾಪಿ ಮನಃ ಪೂತಮಥಾಪಿ ವಾ ॥೫॥

ಸಕ್ಷೀರವೃಕ್ಷಕಾಷ್ಠೈಶ್ಚ ದಂತಶೋಧನಮಾಚರೇತ್ ।
ನದೀಹ್ರದಸದೇಕೂಪೇ ದೇವಖಾತೇ ತಟಾಕಕೇ ॥೬॥

ಸ್ನಾಯಾತ್ಸಮಂತ್ರಂ ಸ ಕುಶಂ ಸಾಕ್ಷತಂ ವಾರುಣಂ ಜಪೇತ್ ।
ತ್ರಿವಾರಮಪ್ಸು ನಿಷ್ಠಾವಾನಘಮರ್ಷಣಕೃದ್ಭವೇತ್ ॥೭॥

ಜಪೇದ್ರೌದ್ರಾಣಿ ಸೂಕ್ತಾನಿ ಅಂಭೋಲಿಂಗಾನಿ ವಾ ಶಿವೇ ।
ತ್ರಿರಾಚಮ್ಯ ಶುಚಿರ್ದೇವಾನೃಷೀನ್ಪಿತೃಗಣಾಂಸ್ತಥಾ ॥೮॥

---

ನೀರಿನಲ್ಲಿ ಮೂತ್ರ, ಮಲ, ಬಾಯಿಮುಕ್ಕಳಿಸಿ ಉಗುಳುವುದು ಮುಂತಾದವುಗಳನ್ನು ಮಾಡಬಾರದು. ತನ್ನ ಮನೆಯಿಂದ ದಕ್ಷಿಣದಿಕ್ಕಿನಲ್ಲಿ ಹುಲ್ಲುಗಳಿಂದ ಮುಚ್ಚಲ್ಪಟ್ಟ ಜಾಗದಲ್ಲಿ ಮಲಮೂತ್ರಗಳನ್ನು ವಿಸರ್ಜಿಸಿ, ಅನಂತರ ತನ್ನಿಷ್ಟಕ್ಕನುಗುಣವಾಗಿ ಶೌಚವನ್ನಾಚರಿಸಬೇಕು. ದುರ್ಗಂಧ ನಾಶವಾಗುವವರೆಗೂ, ತೊಳೆಯುವುದು ಮತ್ತು ಮನಸ್ಸನ್ನು ಪವಿತ್ರಗೊಳಿಸುವುದು ಇವುಗಳನ್ನಾಚರಿಸಬೇಕು. ಅನಂತರ ಹಾಲುಳ್ಳ ಮರದ ಕಡ್ಡಿಗಳಿಂದ ಹಲ್ಲನ್ನು ಶುದ್ಧಮಾಡಬೇಕು. ॥೪-೫॥

ನದಿ, ಮಡು, ಹಳ್ಳ, ಬಾವಿ, ದೇವರಕೊಳ, ಕೆರೆ ಮುಂತಾದವುಗಳಲ್ಲಿ ಮಂತ್ರಪುರಸ್ಸರವಾಗಿ ಸ್ನಾನಮಾಡಬೇಕು. ಅನಂತರ ದರ್ಭೆ ಮತ್ತು ಅಕ್ಷತೆಗಳನ್ನು ಹಿಡಿದು ವರುಣಮಂತ್ರವನ್ನು ಜಪಮಾಡಬೇಕು. ನೀರಿನಲ್ಲಿಯೇ ನಿಂತುಕೊಂಡು ಮೂರುಸಲ ಈ ವರುಣಮಂತ್ರವನ್ನುಚ್ಚರಿಸುವವನು ಅಘಮರ್ಷಣಸ್ನಾನಮಾಡಿದ ಫಲಭಾಗಿಯಾಗುವನು. ಎಲೌ ಪಾರ್ವತಿಯೆ, ರುದ್ರಸೂಕ್ತಗಳನ್ನೂ ಆಪೋಹಿಷ್ಠಾದಿ ಮಂತ್ರಗಳನ್ನೂ ಜಪಿಸಬೇಕು. ಆಮೇಲೆ ಮೂರುಸಲ ಆಚಮನಮಾಡಿ ಶುಚಿಯಾದ ದೇವತೆಗಳನ್ನೂ ಪಿತೃಗಣಗಳನ್ನೂ ತರ್ಪಣಮಾಡಿದ ಬಳಿಕ ದಡಕ್ಕೆ ಬಂದು ಮಡಿಬಟ್ಟೆಯನ್ನು ಧರಿಸಬೇಕು. ॥೬-೭-೮॥

ಸಂತರ್ಪ್ಯ ತೀರ ಆಗತ್ಯ ಧೌತವಸ್ತ್ರಧರಸ್ತದಾ ।
ಭಸ್ಮನಾಂಗಾನಿ ಸಂಮೃಜ್ಯ ಅಗ್ನಿರಿತ್ಯಾದಿಮಂತ್ರತಃ ॥೯॥

ತ್ರಿಯಾಯುಷೇಣ ಮಂತ್ರೇಣ ತ್ರಿಪುಂಡ್ರಪರಿಧಾರಣಂ ।
ಶಿರೋವಕ್ಷೋಲಲಾಟೇ ಚ ಬಾಹ್ವೋರಥ ಪಿಚಂಡಿಕೇ ॥೧೦॥

ರೇಖಾಸಂಸ್ಪೃಷ್ಟಿರಹಿತಂ ಕುರ್ವನ್ಪಾಪೈಃ ಪ್ರಮುಚ್ಯತೇ ।
ರುದ್ರಾಕ್ಷಧಾರಣಂ ಕುರ್ಯಾತ್ತತಃ ಸಂಧ್ಯಾಮುಪಾಸ್ಯ ಚ ॥೧೧॥

ಹುತ್ವಾನಲೇ ಚ ಶೈವಶಾನೇ ಸ್ಮಾರ್ತೇ ವಾಪಿ ಯಥಾಬಲಂ ।
ನದೀನದಾಹೃತೈಸ್ತೋಯೈಃ ಸ್ವಯಂ ಕುಂಭಪ್ರಪೂರಿತೈಃ ॥೧೨॥

ವಸ್ತ್ರಪೂತೈಸ್ತಥಾ ದೇವಿ ಕುರ್ಯಾತ್ಸಂಮಾರ್ಜನಂ ಭುವಿ ।
ಮಾರ್ಜನ್ಯಾ ಸೂಕ್ಷ್ಮಯಾ ದೇವಿ ಲೇಪಯೇದ್ಗೋಮಯಾಂಭಸಾ ॥೧೩॥

ಗಂಧಚಂದನತೋಯೇನ ಪೂಜಾಸ್ಥಾನಂ ಪ್ರಸೇಚಯೇತ್ ।
ಪದ್ಮಸ್ವಸ್ತಿಕಗೋಪದ್ಮೈಃ ಕುರ್ಯಾದ್ವರ್ಣಂ ಕಮಂಡಲುಂ ॥೧೪॥

---

'ಅಗ್ನಿರಾಯುಷ್ಮಾನ್' ಮುಂತಾದ ಮಂತ್ರಗಳಿಂದ ಭಸ್ಮವನ್ನು ಅಂಗಗಳಿಗೆಲ್ಲಾ ಲೇಪನಮಾಡಿಕೊಂಡು, ತ್ರಿಯಾಯುಷಮಂತ್ರದಿಂದ ತಲೆ, ಎದೆ, ಹಣೆ, ಎರಡು ತೋಳ್ಗಳು ಮತ್ತು ಹೊಟ್ಟೆಯಲ್ಲಿ ಪರಸ್ಪರ ಒಂದುಗೆರೆಗೊಂದು ಸೇರದಂತೆ ಭಸ್ಮತ್ರಿಪುಂಡ್ರಗಳನ್ನು ಧಾರಣೆಮಾಡಬೇಕು. ಹೀಗೆ ಭಸ್ಮತ್ರಿಪುಂಡ್ರಧಾರಣೆಮಾಡುವವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ. ॥೯-೧೦॥

ರುದ್ರಾಕ್ಷಗಳನ್ನು ಧರಿಸಿ, ಅನಂತರ ಸಂಧ್ಯಾಕರ್ಮಗಳನ್ನು ತೀರಿಸಿಕೊಂಡು ಅಗ್ನಿಯಲ್ಲಿ ಶೈವ ಅಥವಾ ಸ್ಮಾರ್ತವಿಧಿಯನ್ನನುಸರಿಸಿ, ತನ್ನ ಶಕ್ತ್ಯನುಗುಣವಾಗಿ ಹೋಮಮಾಡಬೇಕು. ದೇವಿಯೆ! ಹೊಳೆ, ಮಡುಗಳಿಂದ ಬಟ್ಟೆಯನ್ನು ಶೋಧಿಸಿ, ಕಲಶಗಳಲ್ಲಿ ತಂದಿರುವ ನೀರಿನಿಂದ ನೆಲವನ್ನು ಶುದ್ಧಿಮಾಡಿ ಸೂಕ್ಷ್ಮ ಕಸಪರಿಕೆಯಿಂದ ಗುಡಿಸಿ. ಸಗಣಿ ಮತ್ತು ನೀರಿನಿಂದ ತೆಳ್ಳಗೆ ಸಾರಿಸಬೇಕು. ಅನಂತರ ಗಂಧ ಮತ್ತು ಚಂದನ ಜಲಗಳಿಂದ ಪೂಜೆಮಾಡುವ ಜಾಗವನ್ನು ಚುಮುಕಿಸಬೇಕು. ॥೧೧-೧೨-೧೩॥

ಪದ್ಮ, ಸ್ವಸ್ತಿಕ, ಗೋವು ಮತ್ತು ತಾವರೆಗಳನ್ನು ಬಣ್ಣಗಳಲ್ಲಿ ಬರೆಸಿ,

ಪುಷ್ಪಮಾಲಾದಿರಚಿತಂ ವಿತಾನಾದ್ಯೈರಲಂಕೃತಂ ।
ಮಂಡಪಂ ರಚಯೇತ್ತತ್ರ ಧೂಪದೀಪವಿರಾಜಿತಂ ॥೧೫॥

ತಸ್ಮಿನ್ಪೀಠೇ ಪುಷ್ಯರಾಗಲಿಂಗಂ ಸಂಸ್ಥಾಪ್ಯ ಹೇಮಜಂ ।
ಯಥಾಭಿಮತಮೀಶಾನಿ ತದಗ್ರೇ ಕಲಶಂ ನವಂ ॥೧೬॥

ನದೀತೋಯೇನ ಸಂಪೂರ್ಣಂ ಧೌತಂ ಪಲ್ಲವಶೋಭಿತಂ ।
ಸಂಸ್ಥಾಪ್ಯ ತತ್ರ ಪಾತ್ರಾಣಿ ಕ್ಷಾಳಿತಾನಿ ಪ್ರಸೇಚಯೇತ್ ॥೧೭॥

ಗಂಧಪುಷ್ಪಾಂಬುಭಿರ್ದೇವಿ ಪಂಚಗವ್ಯಾದಿಕಂ ತತಃ ।
ಸಾಮಾನ್ಯಾರ್ಘ್ಯವಿಶೇಷಾರ್ಘ್ಯೌ ಶಂಖಂ ಪುಷ್ಪಾಂಬುಪೂರಿತಂ ॥೧೮॥

ಮಧುಪರ್ಕಂ ಸ ಪಿಧಾನಂ ಕ್ಷೀರಾಜ್ಯದಧಿಶರ್ಕರಾಂ ।
ಕ್ಷೌದ್ರಂ ಫಲೋದಕಾನೀಶೇ ಗಂಧಹೇಮಕುಶೋದಕಂ ॥೧೯॥

ಸ್ಥಾಪ್ಯ ಪಾತ್ರೇಷು ಪುಷ್ಪಾಣಿ ಗಂಧಧೂಪಾದಿಸಾಕ್ಷತಂ ।
ಸ್ವಯಂ ಕುಶಾಸನೇ ಸ್ಥಿತ್ವಾ ದೇವಸ್ಯಾಗ್ರೇ ಮಹೇಶ್ವರಿ ॥೨೦॥

---

ಕಮಂಡಲುವನ್ನಿಟ್ಟು ಅಲ್ಲಿ ಹೂಮಾಲೆ, ವಿತಾನ ಮುಂತಾದವುಗಳಿಂದ ಅಲಂಕೃತವಾದ ಮಂಟಪವನ್ನು ನಿರ್ಮಿಸಿ, ಧೂಪ ಮತ್ತು ದೀಪಗಳನ್ನು ಸ್ಥಾಪಿಸಬೇಕು. ಅನಂತರ ಆ ಮಂಟಪದ ಪೀಠದಲ್ಲಿ ಪುಷ್ಯರಾಗ ಅಥವಾ ಚಿನ್ನ ಇವುಗಳಲ್ಲಿ ಯಾವುದಾದರೊಂದು ತನಗೆ ಇಷ್ಟವಾದ ಲಿಂಗವನ್ನು ಇರಿಸಬೇಕು. ಆ ಲಿಂಗದ ಮುಂದೆ ಹೊಳೆಯ ನೀರಿನಿಂದ ತುಂಬಲ್ಪಟ್ಟು ಶುಭ್ರವಾದ ಚಿಗುರುಗಳಿಂದ ಶೋಭಿಸುತ್ತಿರುವ ಹೊಸ ಕಲಶವನ್ನು ಸ್ಥಾಪಿಸಬೇಕು. ಅನಂತರ ಇತರ ಪಾತ್ರೆಗಳನ್ನು ಅಲ್ಲಿರಿಸಿಕೊಂಡು ಅವುಗಳಿಗೆಲ್ಲಾ ಕಲಶೋದಕದಿಂದ ಪ್ರೋಕ್ಷಣಮಾಡಬೇಕು. ॥೧೪-೧೫-೧೬-೧೭॥

ದೇವಿ, ಆ ಪಾತ್ರೆಗಳಲ್ಲಿ ಗಂಧೋದಕ, ಪುಷ್ಪೋದಕ, ಪಂಚಗವ್ಯ, ಸಾಮಾನ್ಯಾರ್ಘ್ಯ, ವಿಶೇಷಾರ್ಘ್ಯ, ಪುಷ್ಪೋದಕಪೂರ್ಣವಾದ ಶಂಖ, ಮೇಲೆ ಮುಚ್ಚಿದ ಮಧುಪರ್ಕದ್ರವ್ಯಗಳು, ಹಾಲು, ತುಪ್ಪ, ಮೊಸರು, ಸಕ್ಕರೆ, ಜೇನು, ಎಳನೀರು, ಗಂಧಜಲ, ಸ್ವರ್ಣಜಲ, ಗಂಧ, ಧೂಪ, ಅಕ್ಷತೆ ಇವುಗಳನ್ನು ಇರಿಸಬೇಕು. ಅನಂತರ

ವರಯೇದ್ಬ್ರಾಹ್ಮಣಾಂಸ್ತತ್ರ ಸಂಕಲ್ಪ್ಯ ಶಿವಪೂಜನಂ ।
ಮಾಸನಾಮ ಚ ಗೌರೀಶಂ ಶಿವಂ ಧ್ಯಾತ್ವಾ ಹೃದಂಬುಜೇ ॥೨೧॥

ಚಂದ್ರಗಂಗಾಧರಂ ಸೌಮ್ಯಂ ಸೋಮಕುಂದದ್ಯುತಿಂ ಶಿವೇ ।
ತ್ರಿಲೋಚನಂ ನೀಲಕಂಠಂ ವರದಾಭಯಪಾಣಿನಂ ॥೨೨॥

ತ್ರಿಪುಂಡ್ರವಿಲಸತ್ಫಾಲಂ ವಾಸೋಲಂಕಾರಭೂಷಿತಂ ।
ಬ್ರಹ್ಮವಿಷ್ಣ್ವಾದಿವಂದ್ಯಾಂಘ್ರಿಂ ತರುಣಂ ಪ್ರಿಯದರ್ಶನಂ ॥೨೩॥

ಧ್ಯಾತ್ವಾ ಹೃತ್ಪದ್ಮನಿಲಯಂ ದೇವದೇವಂ ಪಿನಾಕಿನಂ ।
ಪಂಚಾಕ್ಷರಂ ನ್ಯಸೇದ್ದೇಹೇ ಕೃತ್ವಾ ಶೈವಾಂ ತನುಂ ಶಿವೇ ॥೨೪॥

ಸ್ಮರೇತ್ಪೂರ್ವಮೃಷಿಂ ಛಂದೋ ದೇವತಾಬೀಜಮೇವ ಚ ।
ಶಕ್ತಿಂ ಚ ಪರಮಾತ್ಮಾನಂ ರುದ್ರಂ ತ್ವಾಂ ಚ ವರಾನನೇ ॥೨೫॥

---

ಭಕ್ತಿಭರಿತನಾಗಿ, ತಾನು ದೇವರ ಮುಂದೆ ದರ್ಭಾಸನದಲ್ಲಿ ಕುಳಿತುಕೊಳ್ಳಬೇಕು. ॥೧೮-೧೯-೨೦॥

ಶಿವಪೂಜೆಯ ಸಂಕಲ್ಪವನ್ನೂ, ಮಾಸನಾಮವನ್ನೂ ಉಚ್ಚರಿಸಿಕೊಂಡು ಬ್ರಾಹ್ಮಣರನ್ನು ವರಣಮಾಡಬೇಕು. ಅನಂತರ ಗೌರೀರಮಣನೂ, ಚಂದ್ರ ಮತ್ತು ಗಂಗೆಯರನ್ನು ಧರಿಸಿರುವವನೂ, ಸೌಮ್ಯಮೂರ್ತಿಯೂ, ಚಂದ್ರ ಮತ್ತು ಮಲ್ಲಿಗೆಯಂತೆ ಶುಭ್ರವಾಗಿ ಶೋಭಿಸುವವನೂ, ಸೋಮಸೂರ್ಯಾಗ್ನಿರೂಪವಾದ ಮೂರುಕಣ್ಣುಗಳುಳ್ಳವನೂ, ಕಪ್ಪುಗೊರಳುಳ್ಳವನೂ, ವರದ ಮತ್ತು ಅಭಯ ಹಸ್ತಗಳುಳ್ಳವನೂ, ಭಸ್ಮತ್ರಿಪುಂಡ್ರಗಳಿಂದ ಶೋಭಿಸುವ ಹಣೆಯುಳ್ಳವನೂ, ವಸ್ತ್ರಾಭರಣಗಳಿಂದ ಅಲಂಕೃತನೂ, ಬ್ರಹ್ಮ ವಿಷ್ಣು ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದವುಳ್ಳವನೂ, ತರುಣನೂ, ಪ್ರೀತಿಕರವಾದ ದರ್ಶನವುಳ್ಳವನೂ, ದೇವಾದಿ ದೇವನೂ, ಹೃದಯಕಮಲವಾಸಿಯೂ, ಪಿನಾಕಪಾಣಿಯೂ ಆದ ಶಿವನನ್ನು ಧ್ಯಾನಿಸಿ, ತನ್ನ ದೇಹವನ್ನು ಶೈವತನುವನ್ನಾಗಿ ಮಾಡಿಕೊಂಡು, ಆ ದೇಹದಲ್ಲಿ ಶಿವಪಂಚಾಕ್ಷರಮಂತ್ರವನ್ನು ಜಪಮಾಡಬೇಕು. ॥೨೧-೨೨-೨೩-೨೪॥

ಎಲೌ ಸುಂದರಮುಖಿಯೆ! ಮೊದಲು ಋಷಿ, ಛಂದಸ್ಸು, ದೇವತೆ, ಬೀಜ, ಶಕ್ತಿ, ಪರಮಾತ್ಮ, ರುದ್ರ ಮತ್ತು ನಿನ್ನನ್ನು ಸ್ಮರಣೆಮಾಡಬೇಕು. ಮಂತ್ರ

ಮಂತ್ರೇಣ ಪಾಣಿಂ ಸಂಸ್ಪರ್ಶೇನ್ನೇತ್ರಲಯೋಃ ಪ್ರಣವಂ ನ್ಯಸೇತ್ ।
ಓಂಕಾರಂ ಸಂಪುಟೀಕೃತ್ಯ ಸರ್ವಾಂಗೇಷು ಚ ವಿನ್ಯಸೇತ್ ॥೨೬॥

ಕರಯೋರುಭಯೋಶ್ಚೈವ ದಶಸ್ವಂಗುಲಿಷು ಕ್ರಮಾತ್ ।
ಅಂಗುಲೀನಾಂ ಚ ಸರ್ವಾಸಾಂ ತಥಾಽದ್ಯಂತಪರ್ವಸು ॥೨೭॥

ಸ ಬಿಂದುಕಾನಿ ಬೀಜಾನಿ ಪಂಚಮಧ್ಯಾನಿ ಪರ್ವಸು ।
ಉತ್ಪತ್ತ್ಯಾದಿಷು ಭೇದೇನ ನ್ಯಸೇದಾತ್ಮಾ ತತಃ ಕ್ರಮಾತ್ ॥೨೮॥

ಉಭಾಭ್ಯಾಮಥ ಪಾಣಿಭ್ಯಾಮಾಪಾದತಲಮಸ್ತಕಂ ।
ಮಂತ್ರೇಣ ಸಂಸ್ಪೃಶೇದ್ದೇಹಂ ಪ್ರಣವೇನೈವ ಸಂಪುಟಂ ॥೨೯॥

ಮೂರ್ಧ್ನಿ ವಕ್ತ್ರೇ ಚ ಗುಹ್ಯೇ ಚ ಹೃದಯೇ ಹಸ್ತಪಾದಯೋಃ ।
ಕಂಠೇ ಚೈವನ್ಯಸೇದೇವಂ ಪ್ರಣವಾದಿತ್ರಿಭೇದತಃ ॥೩೦॥

ಕೃತ್ವಾಂಗನ್ಯಾಸಮೇವಂ ಹಿ ಮುಖಾನಿ ಪರಿಕಲ್ಪಯೇತ್ ।
ಪೂರ್ವಾದಿಚೋರ್ಧ್ವಪರ್ಯಂತಂ ನಕಾರಾದಿ ಯಥಾಕ್ರಮಂ ॥೩೧॥

---

ದಿಂದ ಕೈಗಳನ್ನು ಮುಟ್ಟಿಕೊಂಡು ಅಂಗೈಗಳಿಂದ ಪ್ರಣವನ್ಯಾಸಮಾಡಬೇಕು. ಓಂಕಾರವನ್ನು ಸಂಪುಟೀಕರಿಸಿ, ಸಕಲದೇಹಗಳಲ್ಲಿಯೂ ವಿನ್ಯಾಸಮಾಡಬೇಕು. ಎರಡುಕೈಗಳ ಹತ್ತುಬೆರಳುಗಳಲ್ಲಿಯೂ. ಕ್ರಮವಾಗಿ ಕೊನೆಯ ಮತ್ತು ಮೊದಲಿನ ಗಿಣ್ಣುಗಳಲ್ಲಿ ನ್ಯಾಸಮಾಡಬೇಕು. ಬಿಂದುಸಮೇತವಾದ ಬೀಜಮಂತ್ರವನ್ನು ಮಧ್ಯದ ಐದು ಗಿಣ್ಣುಗಳಲ್ಲಿಯೂ ಕ್ರಮವಾಗಿ ಉತ್ಪತ್ತ್ಯಾದಿಭೇದಗಳಿಂದ ವಿನ್ಯಾಸ ಮಾಡಬೇಕು. ||೨೫-೨೬-೨೭-೨೮||

ದೇವಿ, ಎರಡು ಕೈಗಳಿಂದಲೂ ಕಾಲಿನಿಂದ ತಲೆಯವರೆಗೂ ಪ್ರಣವಮಂತ್ರ ದಿಂದ ಶರೀರವನ್ನು ಸ್ಪರ್ಶಮಾಡಿಕೊಂಡು, ತಲೆ, ಮುಖ, ಗುಹ್ಯ, ಹೃದಯ, ಕೈಕಾಲುಗಳು, ಕೊರಳು ಇವುಗಳಲ್ಲಿಯೂ ಇದರಂತೆ ಪ್ರಣವಾದಿಯಾದ ಮೂರು ಭೇದಗಳಿಂದ ಅಂಗನ್ಯಾಸಮಾಡಬೇಕು. ||೨೯-೩೦||

ಹೀಗೆ ಅಂಗನ್ಯಾಸಮಾಡಿದ ನಂತರ ಮುಖಗಳನ್ನು ಕಲ್ಪನೆಮಾಡಬೇಕು. ಪೂರ್ವದಿಕ್ಕಿನಿಂದ ಮೇಲ್ಭಾಗದ ಮುಖದವರೆಗೂ ನಕಾರಾದಿಯಾಗಿ ಕ್ರಮದಿಂದ ಷಡಂಗಗಳನ್ನು ನ್ಯಾಸಮಾಡಬೇಕು. ಆಮೇಲೆ ಸ್ಥಾನವನ್ನು ಮೀರದೆ ಆಯಾ

ಷಡಂಗಾನಿ ನ್ಯಸೇತ್ಪಶ್ಚಾದ್ಯಥಾಸ್ಥಾನಂ ಚ ಭೇದತಃ ।
ಪ್ರಣವಂ ಹೃದಯಂ ವಿದ್ಯಾನ್ನಕಾರಃ ಶಿರ ಉಚ್ಯತೇ ॥೩೨॥

ಶಿಖಾ ಮಕಾರ ಆಖ್ಯಾತಃ ಶಿಕಾರಂ ಕವಚಂ ವಿದುಃ ।
ವಕಾರನೇತ್ರಮಸ್ತ್ರಂ ತು ಯಕಾರಃ ಪರಿಕೀರ್ತಿತಃ ॥೩೩॥

ಇತ್ಥಮಂಗಾನಿ ವಿನ್ಯಸ್ಯ ತತೋ ವೈ ಬಂಧಯೇದ್ದಿಶಃ ।
ವಿಘ್ನೇಶೋ ಮಾತರೋ ದುರ್ಗಾ ಕ್ಷೇತ್ರಜ್ಞೋ ದೇವತಾ ದಿಶಃ ॥೩೪॥

ಆಗ್ನೇಯಾದಿಷು ಕೋಣೇಷು ಚತುರ್ಷ್ವಪಿ ಯಥಾಕ್ರಮಂ ।
ಏವಂ ನ್ಯಾಸಂ ಪರಂಪ್ರೋಕ್ತಂ ಸರ್ವಪಾಪಹರಂ ಪದಂ । ॥೩೫॥

ಸರ್ವಸಿದ್ಧಿಕರಂ ದೇವಿ ಸರ್ವರಕ್ಷಾಕರಂ ಶಿವೇ ॥೩೬॥

ನ್ಯಸ್ತಮಾತ್ರೇಣ ದೇಹೇಽಥ ಶಂಕರಪ್ರತಿಮೋ ಭವೇತ್ ।
ನ ತಂ ಸ್ಪೃಶಂತಿ ಪಾಪಾನಿ ನ್ಯಾಸಾದೀಶೇ ವಿಧಾನತಃ ॥೩೭॥

---

ಭಾಗಗಳಿಂದ ನ್ಯಾಸರಚನೆಮಾಡಬೇಕು. ಪ್ರಣವವನ್ನು ಹೃದಯವೆಂದು ತಿಳಿಯಬೇಕು. ನಕಾರವು ತಲೆಯೆಂದು ಹೇಳಲ್ಪಡುವುದು. ಮಕಾರವು ಶಿಖೆಯೆಂದು ತಿಳಿಯಬೇಕು. ಶಿಎಂಬ ವರ್ಣವನ್ನು ಕವಚವೆಂದು ಭಾವಿಸಬೇಕು. ವಕಾರವನ್ನು ನೇತ್ರವೆಂದೂ, ಯಕಾರವನ್ನು ಅಸ್ತ್ರವೆಂದೂ ಹೇಳುವರು. ಹೀಗೆ ಅಂಗನ್ಯಾಸಮಾಡಿ ನಂತರ ದಿಗ್ಬಂಧನವನ್ನು ಮಾಡಬೇಕು. ||೩೧-೩೨-೩೩||

ಆಗ್ನೇಯ ಮೊದಲಾದ ನಾಲ್ಕು ಕೋಣಗಳಲ್ಲಿಯೂ, (ಅಂದರೆ ಆಗ್ನೇಯ ನೈಋತ್ಯ ವಾಯುವ್ಯ, ಈಶಾನ್ಯ ಮೂಲೆಗಳಲ್ಲಿ) ಕ್ರಮವಾಗಿ ವಿಘ್ನೇಶ್ವರ, ಸಪ್ತಮಾತೃಕೆಯರು ದುರ್ಗಾ, ಕ್ಷೇತ್ರಜ್ಞ ಈ ದೇವತೆಗಳನ್ನು ನ್ಯಾಸಮಾಡಬೇಕು. ಅಂಗುಷ್ಠ ಮತ್ತು ತರ್ಜನಿ ಬೆರಳುಗಳ ತುದಿಯನ್ನು ತನ್ನ ಮುಖಕಮಲದಲ್ಲಿರಿಸಿ, ಈರೀತಿ ನ್ಯಾಸಮಾಡುವುದು ಪರಮಶ್ರೇಷ್ಠವೂ ಸಕಲ ಪಾಪನಾಶಕವೂ ಆಗಿರುವುದು. ಪಾರ್ವತಿಯೇ! ಈ ನ್ಯಾಸವು ಸಕಲ ಸಿದ್ಧಿಕರವೂ, ಸಮಸ್ತ ರಕ್ಷಾಕರವೂ ಆಗಿದೆಯೆಂದು ತಿಳಿ. ||೩೪-೩೫-೩೬||

ಹೀಗೆ ನ್ಯಾಸಮಾಡಿದ ದೇಹದಲ್ಲಿ ಶಿವಸಾನ್ನಿಧ್ಯವುಂಟಾಗುವುದು. ಪಾರ್ವತಿಯೆ! ವಿಧಿಪೂರ್ವಕವಾಗಿ ನ್ಯಾಸಮಾಡಿದವನಿಗೆ ಪಾಪಸ್ಪರ್ಶವೇರ್ಪಡುವುದಿಲ್ಲ. ಹೀಗೆ ನ್ಯಾಸ

ಜಪೇತ್ಪಂಚಾಕ್ಷರಂ ಮಂತ್ರಂ ಲಬ್ಧ್ವಾಚಾರ್ಯಪ್ರಸಾದತಃ ।
ಆಜ್ಞಾಪ್ರದಕ್ಷಿಣಾಹೀನಂ ಶ್ರದ್ಧಾಹೀನಮನಾತ್ಮಕಂ ॥೩೮॥

ಆಜ್ಞಾಹೀನಂ ಕ್ರಿಯಾಹೀನಂ ಮಂತ್ರಂ ಜಪ್ತ್ವಾಪಿ ನಿಷ್ಫಲಂ ।
ಪಂಚಾಕ್ಷರಸ್ಯ ಮಂತ್ರಸ್ಯ ಪ್ರಾಣಾಯಾಮ ಉದಾಹೃತಃ ॥೩೯॥

ಪ್ರಾಣಾಯಾಮೋ ಭವೇಚ್ಛೀಘ್ರಂ ಸರ್ವಪಾಪಪರಿಕ್ಷಯಾ ।
ಇಂದ್ರಿಯಾಣಾಂ ವಶಿತ್ವಾಚ್ಚ ತಸ್ಮಾತ್ಪ್ರಾಣಾಂಶ್ಚ ಸಂಯಮೇತ್ ॥೪೦॥

ಗೃಹೇ ಜಪೇ ಸಮಂ ವಿದ್ಯಾದ್ಗೋಷ್ಠೇಶತಗುಣಂ ಭವೇತ್ ।
ನದ್ಯಾಂ ಶತಸಹಸ್ರಂತು ಅನಂತಂ ಶಿವಸಂನಿಧೌ ॥೪೧॥

ಅಂಗುಲೀಜಪಸಂಖ್ಯಾನಮೇಕಮೇಕಂ ಶುಭಾನನೇ ।
ರೇಖಾಭಾರ್ದ್ವಿಗುಣಂ ಜಾಪ್ಯಂ ಪುತ್ರಜೀವೈರ್ದಶೋತ್ತರಂ ॥೪೨॥

ಶತಂ ವೈಶಂಖಮಣಿಭಿಃ ಪ್ರವಾಲೈಶ್ಚ ಸಹಸ್ರಕಂ ।
ಸ್ಫಾಟಿಕೈರ್ದಶಸಾಹಸ್ರಂ ಮೌಕ್ತಿಕೈರ್ಲಕ್ಷ ಉಚ್ಯತೇ ॥೪೩॥

---

ಮಾಡಿದ ತರುವಾಯ ಆಚಾರ್ಯರ ಅನುಗ್ರಹದಿಂದ ಪಡೆದ ಪಂಚಾಕ್ಷರಮಂತ್ರವನ್ನು ಜಪಮಾಡಬೇಕು. ದೇವಿ! ಆಜ್ಞೆ, ಪ್ರದಕ್ಷಿಣೆ, ಮತ್ತು ಶ್ರದ್ಧಾರಹಿತವಾದುದೂ, ಮಾನಸಿಕವಲ್ಲದಿರುವುದೂ, ಆಜ್ಞಾಹೀನವೂ, ಕ್ರಿಯಾಹೀನವೂ ಆದ ಮಂತ್ರವನ್ನು ಜಪಿಸಿದರೂ ಪ್ರಯೋಜನಲ್ಲ. ಪಂಚಾಕ್ಷರಮಂತ್ರಕ್ಕೆ ಪ್ರಾಣಾಯಾಮವು ಉದಾಹೃತವಾಗಿದೆ. ॥೩೭-೩೮-೩೯॥

ಪ್ರಣವಸಹಿತವಾದ ಪಂಚಾಕ್ಷರಿಯು ಜಾಗ್ರತೆ ಸಕಲಪಾಪಗಳನ್ನೂ ನಾಶಮಾಡುವುದು. ಇದು ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳುವುದರಿಂದ ತನ್ನ ಪ್ರಾಣಗಳನ್ನು ಈಪ್ರಾಣಾಯಾಮದಿಂದ ಬಿಗಿಹಿಡಿಯಬೇಕು. ಇದನ್ನು ಮನೆಯಲ್ಲಿ ಜಪಿಸುವುದು ಸಮಾನಫಲಕವು. ದನಗಳಕೊಟ್ಟಿಗೆಯಲ್ಲಿ ಮಾಡುವ ಜಪವು ನೂರುಗುಣ ಅಧಿಕವು, ನದಿಯಲ್ಲಿ ಜಪಿಸುವುದು ಲಕ್ಷಬಾರಿ ಹೆಚ್ಚುಫಲಕಾರಿಯು. ಆದರಲ್ಲಿಯೂ ಶಿವಸಂನಿಧಿಯಲ್ಲಿ ಈಮಂತ್ರ ಜಪಮಾಡುವುದು ಅನಂತಫಲದಾಯಕವು. ॥೪೦-೪೧॥

ಸುಂದರಮುಖಿಯೆ! ಬೆರಳುಗಳಿಂದ ಜಪಸಂಖ್ಯೆಯನ್ನು ಒಂದೊಂದಾಗಿ ಜಪಿಸಬೇಕು. ಹಸ್ತರೇಖೆಗಳಿಂದ ಜಪಮಾಡುವುದರಿಂದ ಫಲವು ಎರಡರಷ್ಟಾಗು

ಪದ್ಮಾಕ್ಷೈರ್ದಶಲಕ್ಷಂ ತು ಸುವರ್ಣೈಃ ಕೋಟಿರುಚ್ಯತೇ ।
ಕುಶಗ್ರಂಥ್ಯಾ ಚ ರುದ್ರಾಕ್ಷೈರನಂತಂ ಗುಣಿತಂ ಭವೇತ್ ॥೪೪॥

ಪಂಚವಿಂಶತಿಮೋಕ್ಷಾರ್ಥೀ ಸಪ್ತವಿಂಶತಿ ಪೌಷ್ಟಿಕಂ ।
ತ್ರಿಂಶತಾ ಧನಸಂಪತ್ತಿಃ ಪಂಚದಶ್ಯಾಭಿಚಾರಿಕೇ ॥೪೫॥

ತತ್ಪೂರ್ವಾಭಿಮುಖಂ ವಶ್ಯಂ ದಕ್ಷಿಣಂ ಚಾಭಿಚಾರಕಂ ।
ಪಶ್ಚಿಮಂ ಧನದಂ ವಿದ್ಯಾದೌತ್ತರಂ ಶಾಂತಿಕಂ ಭವೇತ್ ॥೪೬॥

ಅಂಗುಷ್ಠಂ ಮೋಕ್ಷದಂ ವಿದ್ಯಾತ್ತರ್ಜನೀ ಶತ್ರುನಾಶಿನೀ ।
ಮಧ್ಯಮಾ ಧನದಾ ಶಾಂತಿಂ ಕರೋತ್ಯೇಷಾಹ್ಯನಾಮಿಕಾ ॥೪೭॥

---

ವುದು. ಹುಲ್ಲೇಮಣಿಗಳಿಂದ ಹತ್ತುಪಾಲು ಹೆಚ್ಚುವುದು. ಶಂಖಮಣಿಗಳಿಂದ ನೂರರಷ್ಟು ಫಲವುಂಟಾಗುವುದು. ಹವಳಗಳಿಂದ ಸಾವಿರಪಾಲು ಪುಣ್ಯಪ್ರಾಪ್ತಿಯುಂಟು. ಸ್ಫಟಿಕಗಳಿಂದ ಜಪಮಾಡುವುದು ಹತ್ತುಸಾವಿರಪಾಲು ಗುಣಾಧಿಕವು. ಮುತ್ತುಗಳಿಂದ ಲಕ್ಷಪಾಲು ಜಪಫಲವುಂಟಾಗುವುದು. ಕಮಲಮಣಿಗಳಿಂದ ಜಪಿಸುವುದು, ಹತ್ತುಲಕ್ಷಪಾಲು ಗುಣಾಧಿಕವು. ಚಿನ್ನದಮಣಿಗಳಿಂದ ಕೋಟಿ ಗುಣವುಂಟಾಗುವುದು. ಕುಶಗ್ರಂಥಿ ಮತ್ತು ರುದ್ರಾಕ್ಷಗಳಿಂದ ಮಾಡುವ ಜಪವು ಅನಂತಫಲವುಳ್ಳದೆಂದು ಹೇಳಲ್ಪಟ್ಟಿದೆ. ॥೪೨-೪೩-೪೪॥

ಮೋಕ್ಷವನ್ನು ಅಪೇಕ್ಷಿಸುವವನು ಇಪ್ಪತ್ತೈದುಮಣಿ ಮುಂತಾದವುಗಳಿಂದ ಜಪವನ್ನು ಮಾಡಬೇಕು. ಇಪ್ಪತ್ತೇಳು ರುದ್ರಾಕ್ಷಮಾಲೆಗಳ ಜಪವು ಪುಷ್ಟಿಕರವಾದದ್ದು. ಮೂವತ್ತುಮಣಿಗಳ ಜಪವು ಧನಸಂಪತ್ತನ್ನುಂಟುಮಾಡುವುದು, ಅಭಿಚಾರಕರ್ಮಗಳಲ್ಲಿ ಹದಿನೈದು ರುದ್ರಾಕ್ಷಮಣಿ ನಿರ್ಮಿತವಾದ ಮಾಲೆಗಳಿಂದ ಜಪಮಾಡಬೇಕು. ಆದರಲ್ಲಿಯೂ ಪೂರ್ವಾಭಿಮುಖವಾಗಿ ಜಪಿಸುವುದರಿಂದ ವಶೀಕರಣವುಂಟಾಗುವುದು. ಅಭಿಚಾರಕಕರ್ಮಮಾಡುವಾಗ ದಕ್ಷಿಣಾಭಿಮುಖವಾಗಿ ಜಪಮಾಡಬೇಕು. ಪಶ್ಚಿಮಾಭಿಮುಖವಾದ ಜಪದಿಂದ ಧನಪ್ರಾಪ್ತಿಯುಂಟಾಗುವುದು. ಉತ್ತರದಿಕ್ಕಿಗೆ ಅಭಿಮುಖವಾಗಿ ಜಪಿಸುವುದು ಶಾಂತಿಕರವಾದ ಜಪವೆನಿಸುವುದು. ॥೪೫-೪೬॥

ಅಂಗುಷ್ಠವು ಮೋಕ್ಷಪ್ರದವು, ತರ್ಜನಿಯು ಶತ್ರುನಾಶಕವು, ಮಧ್ಯದಬೆರಳು ಧನಪ್ರದವು, ಅನಾಮಿಕೆಯು ಶಾಂತಿಕರವು, ಜಪಕರ್ಮದಲ್ಲಿ ಕಿರುಬೆರಳು ರಕ್ಷಣೆ

ಕನಿಷ್ಠಾ ರಕ್ಷಣೀಯಾ ಸಾ ಜಪಕರ್ಮಣಿ ಶೋಭನಾ ।
ಯದುಚ್ಚನೀಚಸ್ವರಿತೈಃ ಶಬ್ದೈಃ ಸ್ಪಷ್ಟಪದಾಕ್ಷರೈಃ ॥೪೮॥

ಮಂತ್ರಮುಚ್ಚಾರಯೇದ್ವಾಚಾ ಜಪಯಜ್ಞಃ ಸವಾಚಿಕಃ ।
ಹಿಂಸ್ರೇಭ್ಯಃ ಸರ್ವಯಜ್ಞೇಭ್ಯೋ ಜಪಯಜ್ಞೋಽಪ್ಯಹಿಂಸಕಃ ॥೪೯॥

ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ಉಪಗಮ್ಯ ಗುರುಂ ಶಾಂತಂ ಮಂತ್ರತತ್ವಾರ್ಥಕೋವಿದಂ ॥೫೦॥

ತೋಷಯೇತ್ತಂ ಪ್ರಯತ್ನೇನ ಭಾವೇನ ಚ ಧನೇನ ಚ ।
ಆದದೀತ ಗುರೋರ್ಮಂತ್ರಂ ಪುಣ್ಯೇಽಹನಿ ಶುಭರ್ಕ್ಷಗೇ ॥೫೧॥

ವಿತ್ತಶಾಠ್ಯಂ ನ ಕುರ್ವೀತ ಯದಿಚ್ಛೇತ್ಸಿದ್ಧಿಮಾತ್ಮನಃ ।
ಪಶ್ಚಾನ್ನಿವೇದಯೇದ್ದೇವಿ ಆತ್ಮಾನಂ ಸಪರಿಚ್ಛದಂ ॥೫೨॥

---

ಯನ್ನುಂಟುಮಾಡುತ್ತಾ ಶುಭಕರವಾಗಿರುವುದು. ಉಚ್ಚ, ನೀಚ, ಮತ್ತು ಸ್ವರಿತ ಸ್ವರಯುಕ್ತವಾದ ಸ್ಪಷ್ಟವಾದ ಪದಾಕ್ಷರಗಳಿಂದ ಕೂಡಿದ ಶಬ್ದಗಳನ್ನು ಮಂತ್ರ ರೂಪವಾಗಿ ಉಚ್ಚರಿಸಬೇಕು. ವಾಗ್ರೂಪವಾಗಿರುವ ಅವಾಚಿಕ ಮಂತ್ರವು ಜಪಯಜ್ಞವೆನಿಸುವುದು. ಪ್ರಾಣಿಹಿಂಸಕಗಳಾದ ಸಮಸ್ತ ಯಾಗಗಳಿಗಿಂತಲೂ ಈ ಜಪಯಜ್ಞವು ಅಹಿಂಸಾರೂಪವಾಗಿದೆ. ಇತರ ಯಜ್ಞಗಳೆಲ್ಲವೂ ಜಪಯಜ್ಞದ ಹದಿನಾರನೆಯ ಒಂದು ಭಾಗಕ್ಕೂ ಸಾಟಿಯಾಗಲಾರವು. ॥೪೭-೪೮-೪೯॥

ಶಾಂತಮೂರ್ತಿಯೂ, ಮಂತ್ರರಹಸ್ಯವನ್ನರಿತವನೂ ಆದ ಗುರುವಿನ ಸಮೀಪಕ್ಕೆ ಹೋಗಿ ಅವನಿಗೆ ಯೋಗ್ಯತಾನುಸಾರ ಧನವನ್ನರ್ಪಿಸಿ, ಭಕ್ತಿಭಾವದಿಂದ ವಿನೀತನಾಗಿ ಗುರುವನ್ನು ಸಂತೋಷಪಡಿಸಬೇಕು. ಅನಂತರ ಪುಣ್ಯದಿವಸದಲ್ಲಿ ಶುಭನಕ್ಷತ್ರಯುಕ್ತಲಗ್ನದಲ್ಲಿ ಆ ಗುರುವಿನ ಅನುಗ್ರಹದಿಂದ ಮಂತ್ರವನ್ನು ಉಪದೇಶರೂಪವಾಗಿ ಪಡೆಯಬೇಕು. ಹೀಗೆ ಮಂತ್ರೋಪದೇಶಹೊಂದುವಾಗ ತನಗೆ ಸಿದ್ಧಿಯುಂಟಾಗಬೇಕೆಂದಪೇಕ್ಷೆಯುಳ್ಳವನು ದುಡ್ಡುಕಾಸುಗಳಲ್ಲಿ ಜಿಪುಣತನಮಾಡಬಾರದು. ಗುರುಗಳಿಗೆ ಶಕ್ತಿಮೀರಿ ದಕ್ಷಿಣೆಯನ್ನರ್ಪಿಸಿದ ಮೇಲೆ ತನ್ನ ಪರಿವಾರದೊಡನೆ ತನ್ನನ್ನು ಆತನಿಗೆ ಸಮರ್ಪಿಸಬೇಕು. ॥೫೦-೫೧-೫೨॥

ಏವಂ ತುಷ್ಟೋಽಥ ಸ ಗುರುಃ ಶಿಷ್ಯಂ ಸಂವತ್ಸರೋಷಿತಂ ।
ಪರೀಕ್ಷ್ಯ ದದ್ಯಾನ್ಮಂತ್ರಂ ಚ ಗುರುರ್ಮಂತ್ರರಹಸ್ಯವಿತ್ ॥೫೩॥

ಜಪೇಚ್ಚ ನಿತ್ಯಂ ಸಂಕಲ್ಪ್ಯ ಪುರಶ್ಚರಣಸಿದ್ಧಯೇ ।
ಯಾವಜ್ಜೀವಂ ಜಪೇನ್ನಿತ್ಯಂ ಅಷ್ಟೋತ್ತರಸಹಸ್ರಕಂ ॥೫೪॥

ಜಪೇದಕ್ಷರಲಕ್ಷಂ ವೈ ಚತುರ್ಗುಣಿತಮಾದರಾತ್ ।
ತದ್ದಶಾಂಶಂ ತರ್ಪಣಂ ಚ ಹೋಮಂ ಬ್ರಾಹ್ಮಣಭೋಜನಂ ॥೫೫॥

ಏವಂ ಷಡಕ್ಷರಂ ಜಪ್ತ್ವಾ ತಸ್ಮಿನ್ಮಾಸಿ ಶಿವಾರ್ಚಕಃ ।
ಯೋ ಗುರುಃ ಸ ಶಿವಃ ಸಾಕ್ಷಾನ್ನತಂ ದ್ರುಹ್ಯಾತ್ಕದಾಚನ ॥೫೬॥

ಪೀಠೇ ಲಿಂಗೇ ಪ್ರತಿಷ್ಠಾಪ್ಯ ಸ್ನಾನವೇದ್ಯಾಂ ಶಿವಂ ಜಪೇತ್ ।
ಪಾದ್ಯಮಾಚಮನಂ ಚಾರ್ಘ್ಯಂ ದದ್ಯಾತ್ಪಂಚಾಕ್ಷರೇಣ ತು ॥೫೭॥

ಮಧುಪರ್ಕಂ ಪಂಚಗವ್ಯಂ ಮಧುಕ್ಷೀರಾಜ್ಯಸದ್ದಧಿ ।
ಫಲಸಾರಾಣಿ ದೇಯಾನಿ ಗಂಧರತ್ನೋದಹೇಮಜಂ ॥೫೮॥

---

ಹೀಗೆ ಶಿಷ್ಯನ ಸೇವೆಯಿಂದ ಸಂತುಷ್ಟನಾದ ಮಂತ್ರರಹಸ್ಯವನ್ನರಿತ ಗುರುವು ಒಂದು ವರ್ಷದ ವರೆಗೆ ತನ್ನ ಬಳಿ ವಾಸಮಾಡಿದ ಶಿಷ್ಯನನ್ನು ಪರೀಕ್ಷಿಸಿ, ಅವನಿಗೆ ಮಂತ್ರವನ್ನು ಉಪದೇಶಿಸಬೇಕು. ಗುರುವಿನಿಂದ ಉಪದೇಶಪಡೆದ ಶಿಷ್ಯನು ಪುರಶ್ಚರಣಸಿದ್ಧಿಗೋಸ್ಕರ ನಿತ್ಯವೂ ಸಂಕಲ್ಪಮಾಡಿ ತಾನು ಬದುಕಿರುವವರೆಗೂ ಸಾವಿರದೆಂಟು ಸಾರಿ ಜಪಮಾಡಬೇಕು. ನಾಲ್ಕುಲಕ್ಷ ಅಕ್ಷರಗಳನ್ನಾದರೂ ಆದರದಿಂದ ಜಪಮಾಡಬೇಕು. ತಾನು ಜಪಮಾಡಿದ ಹತ್ತನೆಯ ಒಂದು ಭಾಗದ ತರ್ಪಣವನ್ನೂ, ಹೋಮ ಮತ್ತು ಬ್ರಾಹ್ಮಣಭೋಜನವನ್ನೂ ಮಾಡಿಸಬೇಕು. ಈ ರೀತಿ ಪುಷ್ಯ ಮಾಸದಲ್ಲಿ ಷಡಕ್ಷರಮಂತ್ರವನ್ನು ಜಪಿಸುತ್ತಾ ಶಿವಾರ್ಚಕನಾಗಿರುವ ಮಹಾತ್ಮನೇ ನಿಜವಾದ ಗುರುವು, ಅವನೇ ಸಾಕ್ಷಾತ್ಪರಶಿವನು. ಅವನಿಗೆಂದಿಗೂ ದ್ರೋಹಮಾಡಬಾರದು. ||೫೩-೫೪-೫೫-೫೬||

ಸ್ನಾನವೇದಿಕೆಯಲ್ಲಿರುವ ಪೀಠದಲ್ಲಿ ಶಿವನನ್ನು ಪ್ರತಿಷ್ಠಿಸಿ, ಶಿವಪಂಚಾಕ್ಷರ ಮಂತ್ರ ಜಪಮಾಡಬೇಕು. ಪಾದ್ಯ, ಆಚಮನ, ಅರ್ಘ್ಯ, ಮಧುಪರ್ಕ, ಪಂಚಗವ್ಯ, ಜೇನು, ಹಾಲು, ತುಪ್ಪ, ಒಳ್ಳೆಯ ಮೊಸರು, ಫಲೋದಕಗಳು, ಗಂಧೋದಕ,

ಕೂರ್ಚೋದಕಂ ತತೋ ದದ್ಯಾದ್ಗಂಧಕರ್ಪೂರವಾಸಿತಂ ।
ಹವಿರ್ನಿವೇದ್ಯ ದೇವಾಯ ಧೂಪಂ ದೀಪಂ ಚ ಭಾವತಃ ॥೫೯॥

ರುದ್ರೈಕಾದಶಕಂ ಜಪ್ತ್ವಾ ಅಭಿಷಿಂಚೇನ್ಮಹೇಶ್ವರಿ ।
ಶಾಂಭವೈಃ ಶುದ್ಧನೀರೇಣ ಧಾರಾಪಾತ್ರೇಣ ಶಂಕರಿ ॥೬೦॥

ಭವಾಯೇತ್ಯಷ್ಟಭಿರ್ದೇವಿ ತರ್ಪಯೇತ ಕುಶಾಂಬುನಾ ।
ವಸ್ತ್ರೈಶ್ಚ ವೇಷ್ಟ್ಯ ಪೀಠಸ್ಥಂ ಕೃತ್ವಾ ಲಿಂಗಂ ಚ ಸಾಕ್ಷತಂ ॥೬೧॥

---

ಸುವರ್ಣೋದಕ ಇವುಗಳನ್ನೆಲ್ಲಾ ಆ ಪರಶಿವನಿಗೆ ಪಂಚಾಕ್ಷರಮಂತ್ರಪೂರ್ವಕವಾಗಿಯೇ ಅರ್ಪಿಸಬೇಕು. ||೫೭-೫೮||

ದೇವಿ! ಗಂಧ ಮತ್ತು ಪಚ್ಚಕರ್ಪೂರಗಳಿಂದ ಸುವಾಸಿತವಾಗಿರುವ ಕೂರ್ಚೋದಕವನ್ನು ಅನಂತರ ಸಮರ್ಪಿಸಿ, ಮಹೇಶನಿಗೆ ಹವಿಸ್ಸನ್ನು ನಿವೇದನ ಮಾಡಿ, ಧೂಪ, ದೀಪಗಳನ್ನು ಭಕ್ತಿಯಿಂದ ಸಮರ್ಪಿಸಿ, ಹನ್ನೊಂದುಬಾರಿ ರುದ್ರ ಮಂತ್ರಜಪಮಾಡುತ್ತಾ ಅಭಿಷೇಕಮಾಡಬೇಕು. ಶುದ್ಧವಾದನೀರನ್ನು ಧಾರಾಪಾತ್ರೆಗಳಲ್ಲಿಟ್ಟುಕೊಂಡು ಶೈವರೊಡನೆ ಮಹೇಶನಿಗೆ ಅಭಿಷೇಕಮಾಡಬೇಕು. ದೇವಿ! ಸ್ನಾನಾನಂತರ 'ಭವಂದೇವಂತರ್ಪಯಾಮಿ' ಮೊದಲಾದ ಶಿವನ ಎಂಟು ನಾಮಗಳೊಡನೆ ಕುಶೋದಕದಿಂದ ಮಹೇಶನಿಗೆ ತರ್ಪಣಮಾಡಬೇಕು. ||೫೯-೬೦||

ತರ್ಪಣವಾದಮೇಲೆ ಬಟ್ಟೆಗಳಿಂದ ಪೀಠದಲ್ಲಿರುವ ಲಿಂಗವನ್ನು ಒರೆಸಿ, ವಸ್ತ್ರಗಳನ್ನು ಧರಿಸಿ, ಅಕ್ಷತೆ, ಚಂದ್ರಮಿಶ್ರವಾದಗಂಧ, ಹೂ, ಆಭರಣಗಳನ್ನು ಅರ್ಪಿಸಿ, ಧೂಪ, ದೀಪ, ನೈವೇದ್ಯಗಳನ್ನಿತ್ತು ತಾಂಬೂಲವನ್ನು, ಹಣ್ಣುಗಳ ಸಮೂಹವನ್ನೂ ಸಮರ್ಪಿಸಿ, ಬಿಲ್ವದಳಗಳಿಂದ ಪೂಜೆಮಾಡಬೇಕು. ಅನಂತರ ಲಿಂಗಕ್ಕೆ ಆರತಿಯೆತ್ತಿ, ಅದರಲ್ಲಿ ಚಂದ್ರವನ್ನು ಮಣಿಶಿಲೆಯನ್ನು ಅರ್ಪಿಸಬೇಕು. ದೇವಿ! ಆಮೇಲೆ ಛತ್ರಿ, ಚಾಮರ, ಬೀಸಣಿಗೆ, ಕನ್ನಡಿಗಳ ಸೇವೆಯನ್ನು ಸಲ್ಲಿಸಿ ನಗಾರಿ, ಮದ್ದಲೆ, ಶಂಖ, ಕಹಳೆ, ಮುಂತಾದ ವಾದ್ಯಧ್ವನಿಮಾಡಿಸಿ, ಸುಂದರ ಮತ್ತು ಮನೋಹರವೂ ಆದ ದಿವ್ಯನಾರಿಯರಿಂದ ನಾಟ್ಯವನ್ನು ಶಿವಲಿಂಗದಮುಂದೆ ನಡಿಸಬೇಕು. ಅನಂತರ ಬಿಲ್ವದಳ ಮತ್ತು ತಾವರೆಹೂಗಳಿಂದ ಶಿವನಾಮಗಳನ್ನು ಹೇಳಿಕೊಂಡು ಪೂಜೆಮಾಡಬೇಕು. || ೬೧.೬೨-೬೩-೬೪-೬೫||

ಗಂಧಂ ಚಂದ್ರೇಣ ಮಿಶ್ರಂ ತು ಪುಷ್ಪಾಣ್ಯಾಭರಣಾನಿ ಚ ।
ದತ್ವಾ ಧೂಪಂ ಚ ದೀಪಂ ಚ ನೈವೇದ್ಯಂ ಚ ಮಹೇಶ್ವರಿ ॥೬೨॥

ತಾಂಬೂಲಂ ಫಲಜಾಲಾನಿ ಬಿಲ್ವೈಃ ಪದ್ಮೈರಥಾರ್ಚಯೇತ್ ।
ನೀರಾಜಯೇತ್ತತೋಲಿಂಗಂ ಚಂದ್ರಂ ದದ್ಯಾನ್ಮನಃ ಶಿಲಾಂ ॥೬೩॥

ಛತ್ರಂ ಚ ಚಾಮರಂ ದೇವಿ ವ್ಯಜನಾದರ್ಶಕಂ ತಥಾ ।
ಭೇರೀ ಮರ್ದಲಶಂಖಾನಿಕಾಹಲಾದಿನಿಧಾಯ ಚ ॥೬೪॥

ನಾಟ್ಯಂ ಚ ವರನಾರೀಣಾಂ ದರ್ಶಯೇತ್ತು ಸುರೂಪಕಂ ।
ನಾಮಭಿಃ ಪೂಜಯೇದ್ದೇವಂ ಬಿಲ್ವಪತ್ರೈಶ್ಚ ಚಂಪಕೈಃ ॥೬೫॥

ಓಂ ಪಂಚಾಶಚ್ಛಕ್ತಿರೂಪಾಯ ಪಂಚಾಶಚ್ಛಕ್ತಿಮೂರ್ತಯೇ ।
ಆತ್ಮತತ್ವವರಿಷ್ಠಾಯ ವಿದ್ಯಾತತ್ವಾಯ ತೇ ನಮಃ ॥೬೬॥

---

೧ ಓಂ ಪಂಚಾಶಚ್ಛಕ್ತಿರೂಪಾಯ ನಮಃ
೨ ಓಂ ಪಂಚಾಶಚ್ಛಕ್ತಿಮೂರ್ತಯೇ ನಮಃ
೩ ಓಂ ಆತ್ಮತತ್ವವರಿಷ್ಠಾಯ ನಮಃ
೪ ಓಂ ವಿದ್ಯಾತತ್ವಾಯ ನಮಃ
೫ ಓಂ ಶಿವಾಯ ನಮಃ
೬ ಓಂ ಶಿವತತ್ವಾಯ ನಮಃ
೭ ಓಂ ಅಘೋರಾಯ ನಮೋ ನಮಃ
೮ ಓಂ ಅಘೋರಾಖ್ಯಾಪ್ತತತ್ವಾಯ ನಮಃ
೯ ಓಂ ದ್ವಾದಶಾತ್ಮಸ್ವರೂಪಿಣೇ ನಮಃ
೧೦ ಓಂ ಷಟ್ಪ್ರಕಾರಕತತ್ವಾಯ ನಮಃ
೧೧ ಓಂ ಸ್ವಶಕ್ತಿವಿಹಿತಾತ್ಮನೇ ನಮಃ
೧೨ ಓಂ ಅನಿರ್ದೇಶಾದಿತತ್ವಾಯ ನಮಃ
೧೩ ಓಂ ವಿದ್ಯುಲ್ಲಯವಿರೂಪಿಣೇ ನಮಃ
೧೪ ಓಂ ವಿದ್ಯುದುತ್ಕೃಷ್ಟರೂಪಾಯ ನಮಃ
೧೫ ಓಂ ಸ್ಥಿರಾಯ ನಮಃ
೧೬ ಓಂ ಅನಂತರೂಪಿಣೇ ನಮಃ
೧೭ ಓಂ ಅಗ್ನಿವರ್ಣಾಯ ನಮಃ
೧೮ ಓಂ ದೇವಾಯ ನಮಃ
೧೯ ಓಂ ಅಂಬಿಕಾರ್ಧಶರೀರಿಣೇ ನಮಃ
೨೦ ಓಂ ಶ್ಯಾಮಾಯ ನಮಃ
೨೧ ಓಂ ಶಮರೂಪಾಯ ನಮಃ
೨೨ ಓಂ ಶಕ್ತಿದಾಯ ನಮಃ
೨೩ ಓಂ ಅಮರಾಯ ನಮಃ
೨೪ ಓಂ ಜ್ಯೇಷ್ಠಾಯ ನಮಃ
೨೫ ಓಂ ರುದ್ರರೂಪಾಯ ನಮಃ
೨೬ ಓಂ ಕಾಯಾಯ ನಮಃ
೨೭ ಓಂ ವರದಾಯ ನಮಃ

ಶಿವಾಯ ಶಿವತತ್ವಾಯ ಅಘೋರಾಯ ನಮೋನಮಃ ।
ಅಘೋರಾಷ್ಟ್ಯಷ್ಟತತ್ವಾಯ ದ್ವಾದಶಾತ್ಮಸ್ವರೂಪಿಣೇ ॥೬೭॥

ಷಟ್ಪ್ರಕಾರಕತತ್ವಾಯ ಸ್ವಶಕ್ತಿನಿಹಿತಾತ್ಮನೇ ।
ಅನಿರ್ದೇಶಾದಿತತ್ವಾಯ ವಿದ್ಯುಲ್ಲಯವಿರೂಪಿಣೇ ॥೬೮॥

ವಿದ್ಯುದುತ್ಕೃಷ್ಟರೂಪಾಯ ಸ್ಥಿರಾಯಾನಂತರೂಪಿಣೇ ।
ಅಗ್ನಿಪರ್ಣಾಯ ದೇವಾಯ ಅಂಬಿಕಾರ್ಧಶರೀರಿಣೇ ॥೬೯॥

ಶ್ಯಾಮಾಯ ಶಮರೂಪಾಯ ಶಕ್ತಿದಾಯಾಮರಾಯ ಚ ।
ಜ್ಯೇಷ್ಠಾಯ ರುದ್ರರೂಪಾಯ ಕಾಮಾಯ ವರದಾಯ ಚ ॥೭೦॥

ತ್ರಿಮಾತ್ರಾಯ ಮಿತಾಕ್ಷಾಯ ಅಕಾರಾಯ ನಮೋನಮಃ ।
ದ್ವಾವಿಂಶತ್ತತ್ವರೂಪಾಯ ಉಕಾರಾಯ ನಮೋನಮಃ ॥೭೧॥

---

೨೮ ಓಂ ತ್ರಿಮಾತ್ರಾಯ ನಮಃ
೨೯ ಓಂ ಮಿತಾಕ್ಷಾಯ ನಮಃ
೩೦ ಓಂ ಅಕಾರಾಯ ನಮಃ
೩೧ ಓಂ ದ್ವಾವಿಂಶತ್ತತ್ವರೂಪಾಯ ನಮಃ
೩೨ ಓಂ ಉಕಾರಾಯ ನಮಃ
೩೩ ಓಂ ಷೋಡಶಾತ್ಮಸ್ವರೂಪಾಯ ನಮಃ
೩೪ ಓಂ ಉಕಾರಾಯ ನಮೋ ನಮಃ
೩೫ ಓಂ ಅಷ್ಟಧಾತ್ಮಸ್ವರೂಪಾಯ ನಮಃ
೩೬ ಓಂ ಏಕಾರಾಯ ನಮಃ
೩೭ ಓಂ ಓಂಕಾರಾಯ ನಮಃ
೩೮ ಓಂ ಚತುರ್ಧಾಸಂಸ್ಥಿತಾಯ ನಮಃ
೩೯ ಓಂ ಗಗನೇಶಾಯ ನಮಃ
೪೦ ಓಂ ದೇವಾಯ ನಮಃ
೪೧ ಓಂ ಖಗೇಶಾಯ ನಮೋ ನಮಃ
೪೨ ಓಂ ಮರ್ತ್ಯಲೋಕಾಯ ನಮಃ
೪೩ ಓಂ ಪಾತಾಲನರಕೇಶಾಯ ನಮಃ
೪೪ ಓಂ ಅಷ್ಟಕ್ಷೇತ್ರಾಷ್ಟರೂಪಾಯ ನಮಃ
೪೫ ಓಂ ಪರಾಪರತರಾಯ ನಮಃ
೪೬ ಓಂ ಸಹಸ್ರಶಿರಸೇ ನಮಃ
೪೭ ಓಂ ಸಹಸ್ರಾಕ್ಷಾಯ ನಮಃ
೪೮ ಓಂ ಸಹಸ್ರಪಾದಯುಕ್ತಾಯ ನಮಃ
೪೯ ಓಂ ಶರ್ವಾಯ ನಮಃ
೫೦ ಓಂ ಪರಮೇಷ್ಠಿನೇ ನಮಃ
೫೧ ಓಂ ನವಾತ್ಮಶಕ್ತಿರೂಪಾಯ ನಮಃ
೫೨ ಓಂ ತ್ರಿಷಾಣಾಂ ಪತಯೇ ನಮಃ
೫೩ ಓಂ ಪುನರಷ್ಟಪ್ರಕಾರಾಯ ನಮಃ
೫೪ ಓಂ ಅಷ್ಟಾಷ್ಟಕಮೂರ್ತಯೇ ನಮಃ
೫೫ ಓಂ ಚತುಃಷಷ್ಟ್ಯಾತ್ಮತತ್ವಾಯ ನಮಃ

ಷೋಡಶಾತ್ಮಸ್ವರೂಪಾಯ ಉಕಾರಾಯ ನಮೋನಮಃ ।
ಅಷ್ಟಧಾತ್ಮಸ್ವರೂಪಾಯ ಏಕಾರಾಯ ನಮೋನಮಃ ॥೭೨॥

ಓಂಕಾರಾಯ ನಮಸ್ತುಭ್ಯಂ ಚತುರ್ಧಾಸಂಸ್ಥಿತಾಯ ಚ ।
ಗಗನೇಶಾಯ ದೇವಾಯ ಖಗೇಶಾಯ ನಮೋನಮಃ ॥೭೩॥

ಮರ್ತ್ಯಲೋಕಾಯ ಪಾತಾಲನರಕೇಶಾಯ ತೇ ನಮಃ ।
ಅಷ್ಟಕ್ಷೇತ್ರಾಷ್ಟರೂಪಾಯ ಪರಾಪರತರಾಯ ಚ ॥೭೪॥

ಸಹಸ್ರಶಿರಸೇ ತುಭ್ಯಂ ಸಹಸ್ರಾಕ್ಷಾಯ ತೇ ನಮಃ ।
ಸಹಸ್ರಪಾದಯುಕ್ತಾಯ ಶರ್ವಾಯ ಪರಮೇಷ್ಠಿನೇ ॥೭೫॥

ನವಾತ್ಮಶಕ್ತಿರೂಪಾಯ ತ್ರಿಷಾಣಾಂಪತಯೇ ನಮಃ ।
ಪುನರಷ್ಟಪ್ರಕಾರಾಯ ತಥಾಷ್ಟಾಷ್ಟಕಮೂರ್ತಯೇ ॥೭೬॥

---

೫೬ ಓಂ ಅಷ್ಟವಿಧಾಯಿನೇ ನಮಃ
೫೭ ಓಂ ಗುಣಾಷ್ಟಕಪ್ರದಾನಾಯ ನಮಃ
೫೮ ಓಂ ಗುಣಿನೇ ನಮಃ
೫೯ ಓಂ ನಿರ್ಗುಣಾಯ ಮೂಲಸ್ಥಾಯ ನಮಃ
೬೦ ಓಂ ಶಾಶ್ವತಸ್ಥಾನವಾಸಿನೇ ನಮಃ
೬೧ ಓಂ ನಾಭಿಮಂಡಲಸಂಸ್ಥಾಯ ನಮಃ
೬೨ ಓಂ ಹೃದಿನಿಸ್ವನಕಾರಿಣೇ ನಮಃ
೬೩ ಓಂ ಕಂಠದೇಶಸ್ಥಿತಾಯ ನಮಃ
೬೪ ಓಂ ಶಿವಾಯ ಶಿವವೇದಿನೇ ನಮಃ
೬೫ ಓಂ ವಹ್ನಿಸೋಮಾರ್ಕರೂಪಾಯ ನಮಃ
೬೬ ಓಂ ತ್ರಿಂಶಚ್ಛಕ್ತಿಸ್ವರೂಪಿಣೇ ನಮಃ
೬೭ ಓಂ ಚಂದ್ರಬಿಂಬಸ್ಥಿತಾಯ ನಮಃ
೬೮ ಓಂ ತಾಲುಪೃಷ್ಠಸ್ಥಿತಾಯ ನಮಃ
೬೯ ಓಂ ಭ್ರೂಮಧ್ಯಸಂಸ್ಥಿತಾಯ ನಮಃ
೭೦ ಓಂ ನಾದಮಧ್ಯೇಸ್ಥಿತಾಯ ನಮಃ
೭೧ ಓಂ ತ್ರಿಮಾತ್ರಪ್ರಣವಾಯ ನಮಃ
೭೨ ಓಂ ತ್ರಿಧಾಮಸ್ಥಿತಯೇ ನಮಃ
೭೩ ಓಂ ಸದಾಶಿವಾಯ ಶಾಂತಾಯ ನಮಃ
೭೪ ಓಂ ಮಹೇಶಾಯ ನಮಃ
೭೫ ಓಂ ಪಿನಾಕಿನೇ ನಮಃ
೭೬ ಓಂ ಸರ್ವಜ್ಞಾಯ ಶರಣ್ಯಾಯ ನಮಃ
೭೭ ಓಂ ಸದ್ಯೋಜಾತಾಯ ನಮಃ
೭೮ ಓಂ ಅಘೋರಾಯ ನಮಃ
೭೯ ಓಂ ವಾಮದೇವಾಯ ನಮಃ
೮೦ ಓಂ ತತ್ಪುರುಷಾಯ ನಮಃ
೮೧ ಓಂ ಈಶಾನಾಯ ನಮಃ
೮೨ ಓಂ ಅನಂತೇಶಾಯ ಸೂಕ್ಷ್ಮಾಯ ನಮಃ

ಚತುಃಷಷ್ಟ್ಯಾತ್ಮತತ್ವಾಯ ಪುನರಷ್ಟವಿಧಾಯಿನೇ ।
ಗುಣಾಷ್ಟಕಪ್ರದಾನಾಯ ಗುಣಿನೇ ನಿರ್ಗುಣಾಯ ಚ ॥೭೭॥

ಮೂಲಸ್ಥಾಯ ನಮಸ್ತುಭ್ಯಂ ಶಾಶ್ವತಸ್ಥಾನವಾಸಿನೇ ।
ನಾಭಿಮಂಡಲಸಂಸ್ಥಾಯ ಹೃದಿ ನಿಸ್ವನಕಾರಿಣೇ ॥೭೮॥

ಕಂಠದೇಶಸ್ಥಿತಾಯೈವ ಶಿವಾಯ ಶಿವವೇದಿನೇ ।
ವಹ್ನಿಸೋಮಾರ್ಕರೂಪಾಯ ತ್ರಿಂಶಚ್ಛಕ್ತಿಸ್ವರೂಪಿಣೇ ॥೭೯॥

ಚಂದ್ರಬಿಂಬಸ್ಥಿತಾಯೈವ ತಾಲುಪೃಷ್ಠಸ್ಥಿತಾಯ ಚ ।
ಭ್ರೂಮಧ್ಯಸಂಸ್ಥಿತಾಯೈವ ನಾದಮಧ್ಯೇಸ್ಥಿತಾಯ ಚ ॥೮೦॥

ತ್ರಿಮಾತ್ರಪ್ರಣವಾಯಾಥಾ ತ್ರಿಧಾಮಸ್ಥಿತಯೇ ನಮಃ ।
ಸದಾಶಿವಾಯ ಶಾಂತಾಯ ಮಹೇಶಾಯ ಪಿನಾಕಿನೇ ॥೮೧॥

---

೮೩ ಓಂ ಉತ್ತಮಾಯ ನಮಃ
೮೪ ಓಂ ಏಕಾಕ್ಷಾಯ ನಮಃ
೮೫ ಓಂ ಏಕರುದ್ರಾಯ ನಮಃ
೮೬ ಓಂ ತ್ರಿಮೂರ್ತಯೆ ನಮಃ
೮೭ ಓಂ ಶ್ರೀಕಂಠಾಯ ನಮಃ
೮೮ ಓಂ ಶಿಖಂಡಿನೇ ನಮಃ
೮೯ ಓಂ ಅನಂತಾಸನಸಂಸ್ಥಾಯ ನಮಃ
೯೦ ಓಂ ಸರ್ವದಾಯ ನಮಃ
೯೧ ಓಂ ಗದಾಭೃತೇ ನಮಃ
೯೨ ಓಂ ವಿಮಲಾಯ ವಿಶಾಲಾಯ
೯೩ ಓಂ ವಿಮಲಾಂಗಾಯ ನಮಃ
೯೪ ಓಂ ವೇದಾಗಮಾರ್ಥರೂಪಾಯ ನಮಃ
೯೫ ಓಂ ಯೋಗಸಾಂಖ್ಯರತಾಯ ನಮಃ
೯೬ ಓಂ ಯೋಗಸಂಸ್ಥಾಯ ನಮಃ
೯೭ ಓಂ ದಿವ್ಯಾಯಯೋಗಿನೇ ನಮಃ
೯೮ ಓಂ ಯೋಗದಾಯಿನೇ ನಮಃ
೯೯ ಓಂ ಸಮಸ್ತಲೋಕಸಂಹರ್ತ್ರೇ ನಮಃ
೧೦೦ ಓಂ ದೃಗ್ದೃಶ್ಯಾತೀತ ತೇಜಸೇ ನಮಃ
೧೦೧ ಓಂ ಪ್ರತ್ಯಾಹಾರಾಯ ನಮಃ
೧೦೨ ಓಂ ಶುದ್ಧಾಯ ಯಮಾಯ ನಮಃ
೧೦೩ ಓಂ ನಿಯಮಾಯ ನಮಃ
೧೦೪ ಓಂ ಧ್ಯಾನಧ್ಯೇಯಾದ್ಯದೂರಾಯ ನಮಃ
೧೦೫ ಓಂ ನಿರ್ವಾಚ್ಯಾಪಾರಾಯ ನಮಃ
೧೦೬ ಓಂ ಅಲಿಂಗಿನೆ ನಮಃ
೧೦೭ ಓಂ ಲಿಂಗಾಯ ನಮಃ
೧೦೮ ಓಂ ಲಿಂಗಸ್ಥಾನಾಯ ನಮಃ

ಸರ್ವಜ್ಞಾಯ ಶರಣ್ಯಾಯ ಸದ್ಯೋಜಾತಾಯ ತೇ ನಮಃ ।
ಅಘೋರಾಯ ನಮಸ್ತುಭ್ಯಂ ವಾಮದೇವಾಯ ತೇ ನಮಃ ॥೮೨॥

ತತ್ಪುರುಷಾಯ ನಮಸ್ತುಭ್ಯಂ ಈಶಾನಾಯ ನಮೋನಮಃ ।
ಅನಂತೇಶಾಯ ಸೂಕ್ಷ್ಮಾಯ ಉತ್ತಮಾಯ ನಮೋನಮಃ ॥೮೩॥

ಏಕಾಕ್ಷಾಯ ನಮಸ್ತುಭ್ಯಂ ಏಕರುದ್ರಾಯ ತೇ ನಮಃ ।
ನಮಸ್ತ್ರಿಮೂರ್ತಯೇ ತುಭ್ಯಂ ಶ್ರೀಕಂಠಾಯ ಶಿಖಂಡಿನೇ ॥೮೪॥

ಅನಂತಾಸನಸಂಸ್ಥಾಯ ಸರ್ವದಾಯ ಗದಾಭೃತೇ ।
ವಿಮಲಾಯ ವಿಶಾಲಾಯ ವಿಮಲಾಂಗಾಯ ತೇ ನಮಃ ॥೮೫॥

ವೇದಾಗಮಾರ್ಥರೂಪಾಯ ಯೋಗಸಾಂಖ್ಯರತಾಯ ಚ ।
ಯೋಗಸಂಸ್ಥಾಯ ದಿವ್ಯಾಯ ಯೋಗಿನೇ ಯೋಗದಾಯಿನೇ ॥೮೬॥

ಸಮಸ್ತಶೋಕಸಂಹರ್ತ್ರೇ ದ್ವಂದ್ವಾತೀತತೇಜಸೇ ।
ಪ್ರತ್ಯಾಹಾರಾಯ ಶುದ್ಧಾಯ ಯಮಾಯ ನಿಯಮಾಯ ಚ ॥೮೭॥

ಧ್ಯಾನಧ್ಯೇಯಾದ್ಯದೂರಾಯ ನಿರ್ವ್ಯಾಪಾರಾಯ ತೇ ನಮಃ ।
ಅಲಿಂಗಿನೇ ಚ ಲಿಂಗಾಯ ಲಿಂಗಸ್ಥಾನಾಯ ತೇ ನಮಃ ॥೮೮॥

ಏವಂ ನಾಮಭಿರೇಭಿಶ್ಚ ಪೌಷೇ ಸಂಪೂಜಯೇಚ್ಛಿವಂ ।
ಸ್ತವಂ ಚ ತೇ ಪ್ರವಕ್ಷ್ಯಾಮಿ ಪುಣ್ಯಂ ಪಾಪನಿವಾರಕಂ ॥೮೯॥

ದುರ್ವಾರದುಃಖಶಮನಾಯ ಭವೌಷಧಾಯ
ಸಂಸಾರವಾರಾಂನಿಧಿತಾರಕಾಯ ।

---

ಎಂಬುದಾಗಿ ಪುಷ್ಯಮಾಸದಲ್ಲಿ ಈ ನಾಮಗಳಿಂದ ಶಿವನನ್ನು ಪೂಜಿಸಬೇಕು. ದೇವಿಯೆ! ಪುಣ್ಯಕರವೂ ಪಾಪನಾಶಕವೂ ಆದ ಸ್ತೋತ್ರವನ್ನು ಹೇಳುತ್ತೇನೆ ಕೇಳು. ॥ ೬೬-೬೭-೬೮-೬೯-೭೦-೭೧-೭೨-೭೩-೭೪-೭೫-೭೬-೭೭-೭೮-೭೯-೮೦-೮೧-೮೨-೮೩-೮೪-೮೫-೮೬-೮೭-೮೮-೮೯॥

ಸಹಿಸಲಸಾಧ್ಯವಾದ ದುಃಖವನ್ನು ಶಮನಮಾಡುವವನೂ, ಜನನ ಮರಣ ರೂಪವಾದ ಬಂಧನ ಮೋಚನೆಗೆ ಔಷಧರೂಪನೂ, ಸಂಸಾರವೆಂಬ ಸಮುದ್ರವನ್ನು

ಸರ್ವೇಶ್ವರಾಯೈವ ದಯಾಮಯಾಯ
ವೇದಾಂತವೇದ್ಯಾಯ ನಮಃ ಶಿವಾಯ ॥೯೦॥

ಜಾಗ್ರತ್ಸು ಉತ್ಪಾದ್ಯ ವಿದೂರಕಾಯ
ಸುಸ್ವಪ್ನದುಃಸ್ವಪ್ನಫಲಪ್ರದಾಯ ।
ವೇದಾಂತವೇದ್ಯಾಯ ಬಲಾಬಲಾಯ
ವರ್ಷಾರ್ಕಾಯ ರೇಷ್ಮಾಕ್ಯಾಯ ನಮಃ ಶಿವಾಯ ॥೯೧॥

ಉಗ್ರಾಯ ಭೀಮಾಯ ಸನಾತನಾಯ
ರುದ್ರಾಯ ದೇವಾಯ ಸದಾಶಿವಾಯ ।
ಶಿವಾಯ ಶರ್ವಾಯ ಹರಾಯ ಶಂಭೋ
ಶ್ರೀನೀಲಕಂಠಾಯ ನಮಃ ಶಿವಾಯ ॥೯೨॥

ವ್ಯಾಲೋರುಮಾಲಾಯ ಪಿನಾಕಪಾಣಯೆ
ತ್ರಿಶೂಲಹಸ್ತಾಯ ಕಪಾಲಮಾಲಿನೇ ।

---

ದಾಟಿಸುವವನೂ, ಸಕಲರಿಗೂ ಸ್ವಾಮಿಯೂ, ದಯಾಮೂರ್ತಿಯೂ, ವೇದಾಂತ ಗೋಚರನೂ, ಆದ ಶಿವನಿಗೆ ಪ್ರಣಾಮ ಮಾಡುವೆನು. ॥೯೦॥

ಜಾಗ್ರದವಸ್ಥೆಯಲ್ಲಿ ಪ್ರಪಂಚವನ್ನು ನಿರ್ಮಿಸಿ ಆ ಲೋಕಬಂಧನಕ್ಕೊಳಗಾಗದೆ ತಾ ದೂರವಿರುವವನೂ, ಒಳ್ಳೆಯ ಮತ್ತು ಕೆಟ್ಟಕನಸುಗಳಿಗೆ ಫಲಗಳನ್ನುಂಟುಮಾಡುವವನೂ, ವೇದಾಂತ ಪ್ರತಿಪಾದ್ಯನೂ, ಬಲಾಬಲಸ್ವರೂಪನೂ, ಮಳೆಗಾಲದಲ್ಲಿ ಜನಿಸುವ ಕಪ್ಪೆ ಮುಂತಾದವುಗಳ ಸ್ವರೂಪನೂ, ಜಗತ್ಕಾರಣಮಯನೂ ಆದ ಶಿವನಿಗೆ ಪ್ರಣಾಮ ಮಾಡುವೆನು. ॥೯೧॥

ಪಾಪಿಗಳನ್ನು ಉಗ್ರವಾಗಿ ಶಿಕ್ಷಿಸುವವನೂ, ಶತ್ರುಭಯಂಕರನೂ, ಅನಾದಿ ಸ್ವರೂಪನೂ, ಪ್ರಳಯಕಾಲದಲ್ಲಿ ಪ್ರಪಂಚ ಲಯಮಾಡುವವನೂ, ಕ್ರೀಡಾದಿಗುಣ ಭರಿತನೂ, ನಿತ್ಯಮಂಗಳಮೂರ್ತಿಯೂ, ಯೋಗಿಹೃದಯವಾಸಿಯೂ, ಕೊನೆಗಾಲದಲ್ಲಿ ಜಗತ್ಪ್ರಳಯವೆಸಗುವನೂ, ಪಾಪನಾಶಕನೂ, ಸುಖಪ್ರದನೂ, ವಿಷಪಾನದಿಂದ ಕಪ್ಪಾದಕೊರಳುಳ್ಳವನೂ, ಆದ ಶಿವನಿಗೆ ನಮಸ್ಕಾರಮಾಡುವೆನು. ॥೯೨॥

ಆದಿಶೇಷನನ್ನೇ ದೊಡ್ಡಹಾರವನ್ನಾಗಿ ಧರಿಸಿರುವವನೂ, ಪಿನಾಕವೆಂಬ ಬಿಲ್ಲನ್ನು ಹಿಡಿದಿರುವವನೂ, ತ್ರಿಶೂಲಪಾಣಿಯೂ, ಕಪಾಲಗಳ ಮಾಲೆಯನ್ನು ಧರಿಸಿರುವವನೂ,

ಭವಾಯ ಭವ್ಯಾಯ ದಯಾಮಯಾಯ
ಭಕ್ತಾಸುರಕ್ಷಾಯ ನಮಃ ಶಿವಾಯ ॥೯೩॥

ಸದ್ಯಾಯ ವಾಮಾಯ ಅಘೋರಮೂರ್ತಯೆ
ತತ್ಪೂರ್ಷರೂಪಾಯ ಚ ಈಶಮೂರ್ತಯೆ ।
ಸರ್ವಾನುಭಾವಾಯ ಜಗತ್ಸ್ವರೂಪಿಣೇ
ಹಿತಾಯ ಮೇಧ್ಯಾಯ ನಮಃ ಶಿವಾಯ ॥೯೪॥

ಸ್ತವಮೇತತ್ಪ್ರಯುಂಜೀತ ಪೌಷೇ ಪುಷ್ಟಿಪ್ರದಂ ಶಿವೇ ।
ದದ್ಯಾದ್ಗೋಮಿಥುನಂ ರಕ್ತಂ ಸವತ್ಸಂ ದಕ್ಷಿಣಾದಿಕಂ ॥೯೫॥

ಶಾಂಭವೀಭ್ಯಸ್ತಥಾಹೋಮಂ ಕುರ್ಯಾತ್ಪರ್ವಣಿ ಭೋಜನಂ ।
ಬ್ರಾಹ್ಮಣೈರ್ಬಾಂಧವೈರ್ವಾಪಿ ಭುಂಜೀತೈವಂ ಸನಾತನಂ ॥೯೬॥

ರಾಜತೇನ ವಿಮಾನೇನ ಯಾತ್ಯಂತೇ ಮಮ ಸಂನಿಧಿಂ ।
ಯಸ್ತ್ವೇತಚ್ಛೃಣುಯಾನ್ನಿತ್ಯಂ ಸೋಽಪಿ ತತ್ಫಲಮಾಪ್ನುಯಾತ್ ॥೯೭॥

---

ಪ್ರಪಂಚದ ಉತ್ಪತ್ತಿಗೆ ಕಾರಣನೂ, ಮಂಗಳವಿಗ್ರಹನೂ, ದಯಾಸ್ವರೂಪನೂ, ಭಕ್ತರನ್ನು ಕಾಪಾಡುವವನೂ, ಆದ ಶಿವನಿಗೆ ನಮಸ್ಕಾರಮಾಡುತ್ತೇನೆ. ॥೯೩॥

ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಗಳೆಂಬ ಐದು ಮೂರ್ತಿಗಳುಳ್ಳವನೂ, ಸಕಲರನ್ನೂ ರಕ್ಷಿಸುವವನೂ, ಜಗದ್ರೂಪಿಯೂ, ಹಿತಕಾರಿಯೂ, ಪೂಜ್ಯನೂ ಆದ ಶಿವನಿಗೆ ನಮಸ್ಕಾರ. ॥೯೪॥

ಪಾರ್ವತಿಯೆ, ಪುಷ್ಯಮಾಸದಲ್ಲಿ ಪುಷ್ಟಿಕರವಾದ ಈ ಸ್ತೋತ್ರವನ್ನು ಭಕ್ತಿಯಿಂದ ಮಾಡಬೇಕು. ಕೆಂಪುಬಣ್ಣದ ಒಂದು ಗೋಮಿಥುನವನ್ನು ಕರುವಿನೊಡನೆ ಉಚಿತ ದಕ್ಷಿಣೆ ತಾಂಬೂಲಗಳನ್ನಿಟ್ಟು ಶಾಂಭವರಿಗೆ ದಾನಮಾಡಬೇಕು. ಹಾಗೆಯೇ ಪರ್ವಕಾಲದಲ್ಲಿ ಹೋಮಮಾಡಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಅನಂತರ ಬ್ರಾಹ್ಮಣರೊಡನೆಯೂ, ತನ್ನ ಬಂಧುಬಳಗಗಳೊಡನೆಯೂ ಕೂಡಿ ತಾನೂ ಊಟಮಾಡಬೇಕು. ಸನಾತನವಾದ ಈ ನನ್ನ ವ್ರತವನ್ನು ಮಾಡುವುದರಿಂದ ಆತನು ಕೊನೆಯಲ್ಲಿ ಬೆಳ್ಳಿಯ ವಿಮಾನದಲ್ಲಿ ಕುಳಿತು ನನ್ನ ಸಂನಿಧಿಯನ್ನೈದುವನು.

॥ ಸ್ಕಂದ ಉವಾಚ ॥

ಪುಷ್ಯೇ ವಿಶಿಷ್ಯ ಶಿವಲಿಂಗಸಮರ್ಚನೇನ
ಪುಷ್ಪೋದ್ಭವಂ ಭಯಮುಮೇ ನ ಲಭೇನ್ಮನುಷ್ಯಃ ।
ಆಯುಷ್ಯಮೇತಿ ಶತಕಂ ಭುವಿ ಶಂಭುನಾಮ
ಘುಷ್ಯಸ್ಪ್ರಯಾತಿ ಸದನಂ ಮದನಾಂತಕಾರೇಃ ॥೯೮॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಪೌಷಮಾಸಾರ್ಚನ
ವಿಧಿವಿವರಣಂ ನಾಮ ತ್ರಯೋವಿಂಶೋಽಧ್ಯಾಯಃ

---

ಈ ನನ್ನ ವ್ರತವಿಚಾರವನ್ನು ನಿತ್ಯವೂ ಕೇಳುವವನೂ ಕೂಡ ಅದೇ ಫಲವನ್ನು ಪಡೆಯುವನು ಎಂದು ಶಿವನು ಪಾರ್ವತಿಗೆ ಹೇಳಿದನು. ॥೯೫-೯೬-೯೭॥

ಮಹರ್ಷಿಗಳೇ, ಈ ಪುಷ್ಯಮಾಸದಲ್ಲಿ ವಿಶೇಷನಿಯಮದಿಂದ ಶಿವಲಿಂಗ ಪೂಜೆ ಮಾಡುವುದರಿಂದ ಮಾನವನು ಕಾಮಕ್ರೋಧಾದಿಗಳಿಂದ ಲಭಿಸುವ ಭಯವನ್ನು ಹೊಂದುವುದಿಲ್ಲ. ಅಲ್ಲದೆ ಭೂಮಿಯಲ್ಲಿ ನೂರುವರ್ಷಕಾಲ ಬದುಕಿ, ಶಿವನಾಮಘೋಷಮಾಡುತ್ತಾ ಕೊನೆಗೆ ಮನ್ಮಥಾಂತಕನಾದ ಪರಶಿವನ ಕೈಲಾಸ ವನ್ನು ಹೊಂದುವನೆಂದು ಷಣ್ಮುಖನು ಶಿವಗೌರೀಸಂವಾದರೂಪವಾದ ಈ ಕಥೆ ಯನ್ನು ಜೈಗೀಷವ್ಯಾದಿಗಳಿಗರುಹಿದನು. ॥೯೮॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಧ್ಯಾಯದಲ್ಲಿ ಪುಷ್ಯಮಾಸದಲ್ಲಿನ
ಶಿವಪೂಜಾವಿಧಿವರ್ಣನೆಯ ವಿವರಣೆಯೆಂಬ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಚತುರ್ವಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಮಾಘಮಾಸಾರ್ಚನಂ ವಕ್ಷ್ಯೇ ಅಘಹಾರಿ ಮಹೇಶ್ವರಿ ।
ತಸ್ಮಿನ್ಮಾಸಿ ಶಿವಂ ಪೂಜ್ಯ ಗಾಣಾಪತ್ಯಮವಾಪ್ನುಯಾತ್ ॥೧॥

ಸ್ನಾನಾದ್ದಾನಾರ್ಚನಾದ್ದೇವಿ ವಿಶಿಷ್ಟಫಲದಾಯಕಃ ।
ಅಘಹಾ ಮಾಘಮಾಸೋಽಯಂ ವಿಘಸಾಶೀ ಭವೇನ್ನಿಶಿ ॥೨॥

ಮಾಘಕೃಷ್ಣಚತುರ್ದಶ್ಯಾಮಾದಿದೇವೋಽಹಮೀಶ್ವರಿ ।
ಶಿವಲಿಂಗತಯೋದ್ಭೂತಃ ಪೂಜನಾನ್ಮುಕ್ತಿದೋ ನೃಣಾಂ ॥೩॥

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ಪುನಃ ಪರಶಿವನು ಪಾರ್ವತಿಗೆ ಹೀಗೆಂದನು. "ಮಹೇಶ್ವರಿ, ಪಾಪನಾಶಕವಾದ ಮಾಘಮಾಸಪೂಜಾವಿಧಾನವನ್ನರುಹುವೆನು ಕೇಳು ; ಈ ತಿಂಗಳಲ್ಲಿ ಶಿವನನ್ನು ಪೂಜಿಸಿದವನು ಗಣಾಧಿಪ ಪದವಿಯನ್ನು ಪಡೆಯುವನು. ಈ ತಿಂಗಳಲ್ಲಿ ಮಾಡುವ ಸ್ನಾನ, ದಾನ ಮತ್ತು ಶಿವಪೂಜೆಗಳು ಒಂದಕ್ಕಿಂತ ಮತ್ತೊಂದು ಹೆಚ್ಚು ಫಲದಾಯಕಗಳೆಂದು ತಿಳಿ. ಈ ಮಾಘಮಾಸವೇ ಪಾಪನಾಶಕವಾಗಿದೆಯೆಂದು ತಿಳಿ. ಆ ತಿಂಗಳು ರಾತ್ರಿಯಲ್ಲಿ ಮಾತ್ರವೇ ಊಟಮಾಡಬೇಕು. ॥೧-೨॥

ಈಶ್ವರಿಯೆ, ಮಾಘಮಾಸ ಕೃಷ್ಣಪಕ್ಷಚತುರ್ದಶಿಯ ದಿವಸ ಆದಿದೇವನಾದ ನಾನೇ ಶಿವಲಿಂಗರೂಪದಿಂದ ಉತ್ಪನ್ನನಾದೆನು. ಪೂಜಾಮಾತ್ರದಿಂದ ಮಾನವರಿಗೆ

ತದಾಪ್ರಭೃತಿ ದೇವೇಶಿ ಮಾಘಕೃಷ್ಣಚತುರ್ದಶೀ ।
ಶಿವರಾತ್ರಿಃ ಸಮಾಖ್ಯಾತಾ ಪ್ರಿಯೋಽಯಂ ತ್ರಿಪುರದ್ವಿಷಃ ॥೪॥

ಮಾಸಾರ್ಚನಂ ಪ್ರವಕ್ಷ್ಯಾಮಿ ತತ್ರಾದೌ ಸ ವಿಶೇಷಕಃ ।
ಪ್ರಾತಃಸ್ನಾತ್ವಾ ಬಹಿರ್ದೇಶಂ ನದ್ಯಾಂ ವಾ ದೇವಖಾತಕೇ ॥೫॥

ಮಾಘೇ ಗರ್ಜಂತಿ ಪಾಪಾನಿ ಸ್ನಾನದಾನಾರ್ಚನಾದಿಷು ।
ವಿಧ್ಯಾ ಸ್ನಾನಂ ಪ್ರಕುರ್ವೀತ ಸಂತರ್ಪ್ಯ ಚ ಸುರಾನ್ಪಿತ್ರ್ಯಾನ್ ॥೬॥

ಅಗ್ನಿರಿತ್ಯಾದಿಮಂತ್ರೈಶ್ಚ ಭಸ್ಮ ಧೃತ್ವಾ ಯಥಾಬಲಂ ।
ತ್ರಿಪುಂಡ್ರಧಾರಣಂ ಕುರ್ಯಾತ್ತತೋ ರುದ್ರಾಕ್ಷಧಾರಣಂ ॥೭॥

ಪುಷ್ಪಾಣಿ ಬಿಲ್ವಪತ್ರಾಣಿ ನದೀಜಲಸುಪೂರಿತಂ ।
ಪಲ್ಲವಾಭಿಮುಖಂ ಕುಂಭಂ ಸ್ವಯಮೇವ ಸಮಾಹರೇತ್ ॥೮॥

ಕೃತನಿತ್ಯಕ್ರಿಯೋ ಧೀಮಾನ್ಪೂಜಾಸ್ಥಾನಂ ಪ್ರವಿಶ್ಯ ಚ ।
ಗೋಮಯೇನೋಪಲಿಪ್ಯಾಥ ಕೃತ್ವಾ ಮಂಡಲವರ್ಣಕಂ ॥೯॥

---

ಮೋಕ್ಷವನ್ನೀಯುವ ನಾನು ಲಿಂಗರೂಪದಿಂದ ಅವತರಿಸಿದುದರಿಂದ ಅಲ್ಲಿಂದ ಮುಂದೆ ಆ ಮಾಘ ಕೃಷ್ಣಚತುರ್ದಶೀ ತಿಥಿಯು ಶಿವರಾತ್ರಿಯೆಂದು ಪ್ರಖ್ಯಾತವಾಯಿತು. ಎಲೌ ದೇವೇಶಿ, ಈ ಶಿವರಾತ್ರಿಯು ತ್ರಿಪುರಾಂತಕನಾದ ನನಗೆ ವಿಶೇಷ ಪ್ರೀತಿಕರವೆನಿಸಿರುವುದು. ॥೩-೪॥

ದೇವಿ, ಮಾಘಮಾಸಪೂಜಾವಿಧಿಯನ್ನರುಹುವೆನು ಕೇಳು; ಪೂಜೆಗೆ ಮೊದಲು ವಿಶೇಷವಾಗಿ ಪ್ರಾತಃಕಾಲ ಊರ ಹೊರಗಡೆಯಿರುವ ನದಿ, ದೇವಾಲಯದ ಕೊಳ ಅಥವಾ ಸರಸ್ಸುಗಳಲ್ಲಿ ವಿಧಿವತ್ತಾಗಿ ಸ್ನಾನಮಾಡಬೇಕು. ಮಾಘಮಾಸದಲ್ಲಿ ಸ್ನಾನ, ದಾನ, ಪೂಜಾದಿಗಳನ್ನು ಮಾಡುವುದರಿಂದ ಮಾನವನ ಪಾಪರಾಶಿಗಳೆಲ್ಲವೂ ಹೆದರಿ ನಡುಗುವುವು. ವಿಧಿಪ್ರಕಾರ ಸ್ನಾನಮಾಡಿ ದೇವಪಿತೃಗಳಿಗೆ ತರ್ಪಣ ಕೊಟ್ಟು ಅಗ್ನಿರಿತ್ಯಾದಿ ಮಂತ್ರಗಳಿಂದ ಬಲಾನುಗುಣವಾಗಿ ಭಸ್ಮಲೇಪನ ತ್ರಿಪುಂಡ್ರ ಧಾರಣ ಅನಂತರ ರುದ್ರಾಕ್ಷಧಾರಣೆಗಳನ್ನು ಮಾಡಿಕೊಳ್ಳಬೇಕು. ॥೫-೬-೭॥

ಹೂ, ಬಿಲ್ವದಳ, ನದಿಯ ನೀರಿನಿಂದ ಪೂರ್ಣವಾಗಿ ಚಿಗುರುಗಳಿಂದಲಂಕೃತವಾದ ಕಲಶ, ಇವುಗಳನ್ನು ಯಜಮಾನನೇ ತರಬೇಕು. ನಿಷ್ಠಾಪರನಾದ ಅರ್ಚ

ಅಷ್ಟಪತ್ರಂ ಕರ್ಣಿಕಾಢ್ಯಂ ಪಂಚವರ್ಣೈರಲಂಕೃತಂ ।
ವಿತಾನತೋರಣೋಪೇತಂ ಮಂಡಪಂ ಪುಷ್ಪಮಂಡಿತಂ ॥೧೦॥

ಕದಲೀಸ್ತಂಭವಿಹಿತಂ ಕುರ್ಯಾತ್ತತ್ರ ಸ ಪೀಠಕಂ ।
ಕ್ಷಾಳಿತಾನಿ ಚ ಪಾತ್ರಾಣಿ ಸ್ಥಾಪ್ಯಾನ್ಯಗ್ರೇ ಶಿವಸ್ಯ ತು ॥೧೧॥

ಪುಷ್ಪಾಂಬುಪೂರಿತಾನ್ಯೇವ ಕುಂಭಂ ಶಂಖಂ ನ್ಯಸೇಚ್ಛಿವಂ ।
ಪಾದ್ಯಾಚಮನಮರ್ಘ್ಯಂ ಚ ಪಂಚಗವ್ಯಸುಪಾತ್ರಕಂ ॥೧೨॥

ಮಧುಪರ್ಕಕೃತಂ ಪಾತ್ರಂ ಪುಣ್ಯಂ ಪಂಚಾಮೃತಾನಿ ಚ ।
ಕ್ಷೀರಾಜ್ಯದಧಿಸುಕ್ಷೌದ್ರಶರ್ಕರಾಫಲಸಾರಕಂ ॥೧೩॥

ನಾರಿಕೇಲಾಮ್ರಪನಸಜಂಬೀರಕದಲೀಫಲಂ ।
ಸ್ನಾನಾನುಗುಣಮೀಶಾನಿ ಕಲ್ಪಯೇದ್ಗಂಧಪುಷ್ಪಕಂ ॥೧೪॥

---

ಕನು ತನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪೂಜಾಸ್ಥಾನಕ್ಕೆ ಪ್ರವೇಶಿಸಿ, ಆ ಜಾಗವನ್ನು ಗೋಮಯದಿಂದ ಸಾರಿಸಿ, ಅಲ್ಲಿ ಐದು ಬಣ್ಣದ ರಂಗವಲ್ಯಾದಿಗಳಿಂದ ಎಂಟುದಳ ಮತ್ತು ಕರ್ಣಿಕೆಗಳಿಂದ ಕೂಡಿದ ಕಮಲವನ್ನು ಬರೆದು ವಿತಾನ (ಮೇಲ್ಚಪ್ಪರ) ತೋರಣಗಳಿಂದ ಹೂಮಂಟಪವನ್ನು ಅಲಂಕರಿಸಿ ಆ ಮಂಟಪಕ್ಕೆ ಬಾಳೆಯ ಕಂಬಗಳನ್ನು ಕಟ್ಟಬೇಕು. ಆ ಮೇಲೆ ಆ ಮಂಟಪಮಧ್ಯದಲ್ಲಿ ಪೀಠವನ್ನು ಸ್ಥಾಪಿಸಬೇಕು. ॥೮-೯-೧೦॥

ತೊಳೆದ ಪಾತ್ರೆಗಳನ್ನು ಶಿವನ ಮುಂದೆ ಇರಿಸಿ, ಹೂ ಮತ್ತು ನೀರನ್ನು ಅವುಗಳಿಗೆ ತುಂಬಬೇಕು. ಮಂಗಳಕರಗಳಾದ ಕಲಶಗಳನ್ನೂ ಶಂಖವನ್ನೂ ಶಿವನ ಮುಂದೆ ಸ್ಥಾಪಿಸಬೇಕು. ಪಾದ್ಯ, ಆಚಮನ, ಅರ್ಘ್ಯ, ಪಂಚಗವ್ಯಗಳನ್ನು ಒಳ್ಳೆಯ ಪಾತ್ರೆಗಳಲ್ಲಿ ಸ್ಥಾಪಿಸಬೇಕು. ಮಧುಪರ್ಕದ ಪಾತ್ರೆಯನ್ನೂ, ಹಾಲು, ತುಪ್ಪ, ಮೊಸರು, ಒಳ್ಳೆಯ ಜೇನು ಸಕ್ಕರೆಗಳಿಂದ ಪೂರ್ಣವಾದ ಪಾತ್ರೆಗಳನ್ನೂ ಹಣ್ಣಿನ ರಸ, ಎಳನೀರು, ಮಾವು, ಹಲಸು, ನಿಂಬೆ, ಬಾಳೆ ಮುಂತಾದ ಹಣ್ಣುಗಳನ್ನೂ ದೇವರ ಮುಂದೆ ಇರಿಸಬೇಕು. ಅಭಿಷೇಕಕ್ಕೆ ಅನುಗುಣವಾಗಿ ಗಂಧ, ಹೂ ಮುಂತಾದವುಗಳನ್ನು ಸಿದ್ಧಪಡಿಸಬೇಕು. ॥೧೧-೧೨-೧೩-೧೪॥

ಕುಶರತ್ನೋದಹೇಮಾಂಬುಕೂರ್ಚೋದಂ ಸಾಧಯೇತ್ತತಃ ।
ಶಾಂಭವಾನ್ವರಯೇತ್ತತ್ರ ಮಾಸಂ ಸಂಕಲ್ಪ್ಯ ಪೂಜನೇ ॥೧೫॥

ಸೂರ್ಯಕಾಂತೋದ್ಭವಂ ಲಿಂಗಂ ಸ್ಥಾಪ್ಯ ಪೀಠೇ ಸ ವಸ್ತ್ರಕಂ ।
ಪಂಚಾಕ್ಷರಂ ಜಪೇದ್ಧೀಮಾಂತ್ಸಹಸ್ರಂ ಶತಮೇವ ಚ ॥೧೬॥

ಧ್ಯಾಯೇದ್ದೇವಂ ಚ ಚಂದ್ರಾರ್ಕಸೋಮಾಸ್ಕಂದಂ ತ್ರಿಲೋಚನಂ ।
ಸರ್ವಾಭರಣಸಂಪನ್ನಂ ಮೃಗಟಂಕಧರಂ ಶಿವಂ ॥೧೭॥

ಧೂಪದೀಪಾದಿಕಂ ತತ್ರ ರಚಯೇತ್ಸೇಚಯೇಚ್ಛಿವೇ ।
ಪಾದ್ಯಾಚಮನಮರ್ಘ್ಯಂ ಚ ಮಧುಪರ್ಕಂ ತತಃ ಪರಂ ॥೧೮॥

ಪಂಚಾಮೃತೈಃ ಫಲರಸೈರ್ಗಂಧಪುಷ್ಪಾಂಬುಭಿಃ ಶಿವೇ ।
ಅಭಿಷಿಚ್ಯ ವಿಧಾನೇನ ನಿವೇದ್ಯ ಹವಿರುತ್ತಮಂ ॥೧೯॥

ದತ್ವಾ ದೀಪಂ ಚ ಧೂಪಂ ಚ ತಾಂಬೂಲಂ ಶಂಭವೇ ಶಿವೇ ।
ಸ್ನಾನವೇದ್ಯಾಂ ಮಹಾಲಿಂಗಂ ಸ್ಥಾಪ್ಯ ನೀರಸುಧಾರಯಾ ॥೨೦॥

---

ಅನಂತರ ಕುಶೋದಕ, ರತ್ನೋದಕ, ಸುವರ್ಣೋದಕ ಮತ್ತು ಕೂರ್ಚೋದಕಗಳನ್ನು ಸಿದ್ಧಗೊಳಿಸಬೇಕು. ಮಾಘಮಾಸದ ಪೂಜೆಗೋಸ್ಕರ ಸಂಕಲ್ಪಮಾಡಿ ಶೈವರನ್ನು ವರಣಮಾಡಬೇಕು. ಸೂರ್ಯಕಾಂತಶಿಲಾರಚಿತಲಿಂಗವನ್ನು ಪೀಠದಲ್ಲಿ ಸ್ಥಾಪಿಸಿ, ವಸ್ತ್ರಗಳನ್ನಲಂಕರಿಸಿ, ಬುದ್ಧಿವಂತನಾದ ಯಜಮಾನನು ಸಾವಿರ ಅಥವಾ ನೂರುಬಾರಿಯಾದರೂ ಶಿವಪಂಚಾಕ್ಷರಜಪಮಾಡಬೇಕು. ಅನಂತರ ಚಂದ್ರಲಾಂಛನನೂ, ಮೂರು ಕಣ್ಣುಗಳುಳ್ಳವನೂ, ಸಮಸ್ತ ಆಭರಣಸಂಪನ್ನನೂ, ಜಿಂಕೆ, ಟಂಕ ಇವುಗಳನ್ನು ಧರಿಸಿರುವವನೂ ಆದ ಶಿವನನ್ನು ಧ್ಯಾನಮಾಡಬೇಕು. ॥೧೫-೧೬-೧೭॥

ಪಾರ್ವತಿಯೆ ! ಧೂಪದೀಪಾದಿಗಳನ್ನು ಅಲ್ಲಿ ಕಲ್ಪಿಸಿ, ಅನಂತರ ಅಭಿಷೇಕ ಮಾಡಬೇಕು. ಪಾದ್ಯ, ಆಚಮನ, ಅರ್ಘ್ಯ, ಮಧುಪರ್ಕಗಳನ್ನು ಸಮರ್ಪಣೆ ಮಾಡಿ, ತರುವಾಯ ಪಂಚಾಮೃತದ್ರವ್ಯಗಳಿಂದಲೂ, ಹಣ್ಣಿನರಸ, ಗಂಧೋದಕ, ಪುಷ್ಪೋದಕಗಳಿಂದಲೂ ಶಿವನಿಗೆ ವಿಧಿಪೂರ್ವಕವಾಗಿ ಅಭಿಷೇಕ ಮಾಡಿ ಉತ್ತಮವಾದ ಹವಿಸ್ಸನ್ನು ನಿವೇದಿಸಿ, ಧೂಪದೀಪತಾಂಬೂಲಗಳನ್ನು ಶಿವನಿಗೆ ಸಮರ್ಪಿಸ

ಶಾಂಭವೈಃ ಸೇಚಯೇತ್ತತ್ರ ತೌರ್ಯತ್ರಿಕಸುವಾದನೈಃ ।
ಸ ಶಾಂತಿಕಃ ಸ ಚಮಕೋ ರುದ್ರಸ್ತ್ವೇಕಾದಶಾವೃತಃ ॥೨೦॥

ಜಪ್ಯೋ ಮಹಾನ್ಯಾಸಯುತೋ ಏಕದ್ವಿತ್ರಿಕ್ರಮೈಃ ಶಿವೇ ।
ಭವಾಯೇತಿ ಚ ತತ್ರಾಂತೇ ತರ್ಪಯೇತ್ಸಕುಶಾಂಬುಭಿಃ ॥೨೨॥

ಪರಿಮೃಜ್ಯ ತತೋ ವಸ್ತ್ರೈಃ ಪೀಠೇ ಸಂಸ್ಥಾಪ್ಯ ಶಂಕರಂ ।
ಯಜ್ಞೋಪವೀತಂ ವಸ್ತ್ರಂ ಚ ಭಸ್ಮಗಂಧಾಕ್ಷತೈರ್ಯಜೇತ್ ॥೨೩॥

ರತ್ನಾಭರಣಹೇಮಾದಿ ಬಿಲ್ವಮಾಲಾಂ ಚ ಗೋಲಕಂ ।
ದದ್ಯಾತ್ಸಂಪೂಜಯೇದ್ಬಿಲ್ವೈರ್ಮಂದಾರೈಃ ಕರ್ಣಿಕಾರಕೈಃ ॥೨೪॥

ಧೂಪಂ ದದ್ಯಾತ್ಸುಗಂಧಾಢ್ಯಂ ಘೃತದೀಪಾನ್ಯಥಾವಿಧಿ ।
ಹವಿರ್ನಿವೇದ್ಯ ಶರ್ವಾಯ ಸಾಪೂಪಂ ಸೋಪದಂಶಕಂ ॥೨೫॥

---

ಬೇಕು. ದೇವಿಯೆ! ಸ್ನಾನವೇದಿಕೆಯಲ್ಲಿ ಶಿವನ ದೊಡ್ಡ ಲಿಂಗವನ್ನು ಸ್ಥಾಪಿಸಿ, ಮಂಗಳವಾದ್ಯಗಳ ಧ್ವನಿಯೊಡನೆ ಶುದ್ಧವಾದ ಜಲಧಾರೆಗಳಿಂದ ಶೈವರಿಂದ ಅಭಿಷೇಕಮಾಡಬೇಕು. ॥೧೮-೧೯-೨೦॥

ಅಭಿಷೇಕಮಾಡುವಾಗ ಶಾಂತಿಪಾಠಸಮೇತವಾದ ಮಹಾನ್ಯಾಸಪೂರ್ವಕವಾಗಿ ರುದ್ರ ಮತ್ತು ಚಮಕ ಮಂತ್ರಗಳನ್ನು ಹನ್ನೊಂದುಬಾರಿ, ಒಂದು ಎರಡು ಅಥವಾ ಮೂರುಸಲವಾಗಲಿ ಜಪಮಾಡಬೇಕು. ಅಭಿಷೇಕವಾದ ನಂತರ 'ಭವಂತರ್ಪಯಾಮಿ' 'ಶರ್ವಂ ತರ್ಪಯಾಮಿ' ಈರೀತಿ ಕುಶೋದಕಗಳಿಂದ ಶಿವನಿಗೆ ತರ್ಪಣಮಾಡಬೇಕು. ಆನಂತರ ಬಟ್ಟೆಯಿಂದ ಒರೆಸಿ, ಶಂಕರನನ್ನು ಪೀಠದಲ್ಲಿ ಸ್ಥಾಪಿಸಿ, ಯಜ್ಞೋಪವೀತ, ವಸ್ತ್ರ, ಭಸ್ಮ, ಗಂಧ ಮತ್ತು ಅಕ್ಷತೆಗಳಿಂದ ಪೂಜಿಸಬೇಕು. ॥೨೧-೨೨-೨೩॥

ರತ್ನಾಭರಣ, ಸುವರ್ಣದೊಡವೆ, ಬಿಲ್ವಮಾಲೆ, ಗೋಲಕಗಳನ್ನು ಸಮರ್ಪಿಸಿ, ಬಿಲ್ವ, ಪಾರಿಜಾತ ಮತ್ತು ಕಣಿಗಲೆಹೂಗಳಿಂದ ಪೂಜಿಸಬೇಕು. ಸುಗಂಧಭರಿತವಾದ ಧೂಪವನ್ನು ಹಾಕಿ, ವಿಧಿಯನ್ನು ಮೀರದೆ ತುಪ್ಪದದೀಪಗಳನ್ನು ಹೊತ್ತಿಸಿ, ಶಿವನಿಗೆ ಹವಿಸ್ಸನ್ನೂ ಅಪೂಪವನ್ನೂ ವ್ಯಂಜನದೊಡನೆ ನಿವೇದಿಸಿ, ತಾಂಬೂಲ, ಅಡಿಕೆ, ಜಾಯಿಪತ್ರೆ, ಜಾಯಿಕಾಯಿಗಳನ್ನರ್ಪಿಸಿ, ತರುವಾಯ ನೀರಾಜನಮಾಡಬೇಕು. ॥೨೪-೨೫॥

ತಾಂಬೂಲಂ ಫಲಜಾತಂ ಚ ದದ್ಯಾನ್ನೀರಾಜನಂ ಶಿವೇ ।
ಕರ್ಪೂರಖಂಡದೀಪಂ ಚ ಛತ್ರವ್ಯಜನಚಾಮರೇ ॥೨೬॥

ಪತಾಕಂ ಚ ತಥಾದರ್ಶಂ ಗೀತಂ ನಾಟ್ಯಂ ಸ್ತುತಿರ್ನತಿಃ ।
ಪ್ರದಕ್ಷಿಣಾ ನರ್ತನಂ ಚ ಕೃತ್ವಾ ನಾಮಭಿರೀಶ್ವರಂ ॥೨೭॥

ಪೂಜಯೇದ್ಬಿಲ್ವಪತ್ರಾದ್ಯೈರೇಭಿರ್ನಾಮಭಿರೇವ ಹಿ ।
ತಾನಿ ನಾಮಾನಿ ತೇ ವಚ್ಮಿ ಸ್ತುತಿಂ ಚೈವ ಮಹೇಶ್ವರಿ ॥೨೮॥

ಓಂ ನಮಃ ಶಿವಾಯ ಶರ್ವಾಯ ಶಂಕರಾಯಾರ್ತಿಹಾರಿಣೇ ।
ನಮಸ್ಕಾರ್ಯಾಥ ವಿಶ್ವಾಯ ವಿಷ್ಣವೇ ಬ್ರಹ್ಮರೂಪಿಣೇ ॥೨೯॥

ಹಿರಣ್ಯಬಾಹವೇ ಸಾಕ್ಷಾದ್ಧಿರಣ್ಯಪತಯೇ ನಮಃ ।
ಶರ್ವಾಯ ಸರ್ವರೂಪಾಯ ಪುರುಷಾಯ ನಮೋನಮಃ ॥೩೦॥

ರುದ್ರಾಯ ನೀಲರೂಪಾಯ ಕದ್ರುದ್ರಾಯ ಪ್ರಚೇತಸೇ ।
ಕಾಲಾಯ ಕಾಲರುದ್ರಾಯ ಯಥಾಕಾಲಾಂಗಹಾರಿಣೇ ॥೩೧॥

ಮೀಢುಷ್ಟಮಾಯ ದೇವಾಯ ಶಿಪಿವಿಷ್ಟಾಯ ತೇ ನಮಃ ।
ಶಂಭವೇ ಧಾತವೇ ಚೈವ ಮನ್ಯವೇ ರುದ್ರಮೂರ್ತಯೇ ॥೩೨॥

ನಮಃಕಪರ್ದಿನೇ ತುಭ್ಯಂ ನೀಲಕಂಠಾಯ ತೇ ನಮಃ ।
ಶ್ರೀಕಂಠಾಯ ಮಹೇಶಾಯ ಭರ್ಗಾಯ ಚ ನಮೋನಮಃ ॥೩೩॥

ನಮಸ್ತ್ರಿಶೂಲಹಸ್ತಾಯ ಉಗ್ರಾಯ ಚ ನಮೋನಮಃ ।
ಭೀಮಾಯ ಚ ಮೃಗೇಂದ್ರಾಯ ಭೀಮರೂಪಾಯ ಬಂಧವೇ ॥೩೪॥

---

ಕರ್ಪೂರದ ತುಂಡುಗಳಿಂದ ದೀಪವನ್ನು ಹೊತ್ತಿಸಿ ಛತ್ರ, ಬೀಸಣಿಗೆ, ಚಾಮರ, ಪತಾಕೆ, ಕನ್ನಡಿ, ಗೀತ, ನಾಟ್ಯ, ಸ್ತೋತ್ರ, ಪ್ರದಕ್ಷಿಣೆ ನಮಸ್ಕಾರ, ಮತ್ತು ನರ್ತನಗಳನ್ನು ಮಾಡಿ ಈಶ್ವರನಾಮಗಳಿಂದ ಪೂಜಿಸಬೇಕು. ಎಲೌ ಮಹೇಶ್ವರಿ! ಆ ಹೆಸರುಗಳನ್ನು ನಿನಗೆ ಹೇಳುವೆನು ಕೇಳು. ॥೨೬-೨೭-೨೮॥

ಭಸ್ಮದಿಗ್ಧಶರೀರಾಯ ದಂಡೀಮುಂಡೀಶ್ವರಾಯ ಚ ।
ನಮೋ ಹ್ರಸ್ವಾಯ ದೀರ್ಘಾಯ ವಾಮನಾಯೋರುಮೇಧಸೇ ॥೩೫॥

ಅಗ್ರೇವಧಾಯ ದೇವಾಯ ನಮೋ ದೂರೇವಧಾಯ ಚ ।
ಧನ್ವಿನೇ ಶೂಲಿನೇ ತುಭ್ಯಂ ಗದಿನೇ ಹಲಿನೇ ನಮಃ ॥೩೬॥

ಚಕ್ರಿಣೇ ಚರ್ಮಿಣೇ ತುಭ್ಯಂ ದೈತ್ಯದಾನವಭೇದಿನೇ ।
ಸದ್ಯಾಯ ಹೃದ್ಯರೂಪಾಯ ಸರ್ಣಶದ್ಯಾಯ ತೇ ನಮಃ ॥೩೭॥

ಸದ್ಯೋಜಾತಾಯ ವಾಮಾಯ ಅಘೋರಾಯ ನಮೋನಮಃ ।
ಪುರುಷಾಯ ಪುರೀಶಾಯ ಪುರುಷಾರ್ಥಪ್ರದಾಯ ಚ ॥೩೮॥

---

೧ ಓಂ ಶಿವಾಯ ನಮಃ
೨ ಓಂ ಶರ್ವಾಯ ನಮಃ
೩ ಓಂ ಶಂಕರಾಯ ನಮಃ
೪ ಓಂ ಆರ್ತಿಹಾರಿಣೇ ನಮಃ
೫ ಓಂ ನಮಸ್ಕಾರ್ಯಾಯ ನಮಃ
೬ ಓಂ ವಿಶ್ವಾಯ ನಮಃ
೭ ಓಂ ವಿಷ್ಣವೇ ನಮಃ
೮ ಓಂ ಬ್ರಹ್ಮರೂಪಿಣೇ ನಮಃ
೯ ಓಂ ಹಿರಣ್ಯಬಾಹವೇ ನಮಃ
೧೦ ಓಂ ಹಿರಣ್ಯಪತಯೇ ನಮಃ
೧೧ ಓಂ ಶರ್ವಾಯ ನಮಃ
೧೨ ಓಂ ಸರ್ವರೂಪಾಯ ನಮಃ
೧೩ ಓಂ ಪುರುಷಾಯ ನಮಃ
೧೪ ಓಂ ರುದ್ರಾಯ ನಮಃ
೧೫ ಓಂ ನೀಲರೂಪಾಯ ನಮಃ
೧೬ ಓಂ ಕದ್ರುದ್ರಾಯ ನಮಃ
೧೭ ಓಂ ಪ್ರಚೇತಸೇ ನಮಃ
೧೮ ಓಂ ಕಾಲಾಯ ನಮಃ
೧೯ ಓಂ ಕಾಲರುದ್ರಾಯ ನಮಃ
೨೦ ಓಂ ಯಥಾಕಾಲಾಯ ನಮಃ
೨೧ ಓಂ ಕಾಲಾಂಗಧಾರಿಣೇ ನಮಃ
೨೨ ಓಂ ಮೀಢುಷ್ಟಮಾಯ ನಮಃ
೨೩ ಓಂ ದೇವಾಯ ನಮಃ
೨೪ ಓಂ ಶಿಪಿವಿಷ್ಟಾಯ ನಮಃ
೨೫ ಓಂ ಶಂಭವೇ ನಮಃ
೨೬ ಓಂ ಧಾತವೇ ನಮಃ
೨೭ ಓಂ ಮನ್ಯವೇ ನಮಃ
೨೮ ಓಂ ರುದ್ರಮೂರ್ತಯೇ ನಮಃ
೨೯ ಓಂ ಕಪರ್ದಿನೇ ನಮಃ
೩೦ ಓಂ ತುಭ್ಯಂ ನಮಃ
೩೧ ಓಂ ನೀಲಕಂಠಾಯ ನಮಃ
೩೨ ಓಂ ಶ್ರೀಕಂಠಾಯ ನಮಃ
೩೩ ಓಂ ಮಹೇಶಾಯ ನಮಃ
೩೪ ಓಂ ಭರ್ಗಾಯ ನಮಃ
೩೫ ಓಂ ತ್ರಿಶೂಲಹಸ್ತಾಯ ನಮಃ
೩೬ ಓಂ ಉಗ್ರಾಯ ನಮಃ

ಗಹ್ವರೇಷ್ಠಾಯ ಶಿಷ್ಪ್ಯಾಯ ತ್ರಿಶುಕ್ಲಾಯ ಸುವೈದ್ಯುತೇ ।
ಈಶಾನಾಯ ನಮಸ್ತುಭ್ಯಮೀಶ್ವರಾಯ ಸುರಾಯ ಚ ॥೪೯॥

ಮಹಾಗ್ರಾಸಾಯ ಧೀರಾಯ ವಿಶಿಷ್ಟಾಯ ನಮೋನಮಃ ।
ಪರಮೇಷ್ಠಿನೇ ನಿರೂಪಾಯ ವಿಶ್ವರೂಪಾಯ ತೇ ನಮಃ ॥೫೦॥

ಬ್ರಹ್ಮಣ್ಯಾಯ ನಮಸ್ತೇಽಸ್ತು ಸುಬ್ರಹ್ಮಣ್ಯೇಶ್ವರಾಯ ಚ ।
ಬ್ರಹ್ಮಣೇ ಬ್ರಹ್ಮರೂಪಾಯ ಬ್ರಾಹ್ಮಣ್ಯಾರ್ಚ್ಯಪದಾಯ ಚ ॥೫೧॥

ವಿಶ್ವಾಧಿಕಾಯ ಸೂಕ್ಷ್ಮಾಯ ಪದ್ಮಮಾಲಾಧರಾಯ ಚ ।
ಶ್ವೇತಾಯ ಹರಿಕೇಶಾಯ ನೀಲಗ್ರೀವಾಯ ಹೇತವೇ ॥೫೨॥

---

೩೭ ಓಂ ಭೀಮಾಯ ನಮಃ
೩೮ ಓಂ ಮೃಗೇಂದ್ರಾಯ ನಮಃ
೩೯ ಓಂ ಭೀಮರೂಪಾಯ ನಮಃ
೪೦ ಓಂ ಬಂಧವೇ ನಮಃ
೪೧ ಓಂ ಭಸ್ಮದಿಗ್ಧಶರೀರಾಯ ನಮಃ
೪೨ ಓಂ ದಂಡಿನೆ ನಮಃ
೪೩ ಓಂ ಮುಂಡಿನೇ ನಮಃ
೪೪ ಓಂ ಹ್ರಸ್ವಾಯ ನಮಃ
೪೫ ಓಂ ದೀರ್ಘಾಯ ನಮಃ
೪೬ ಓಂ ವಾಮನಾಯ ನಮಃ
೪೭ ಓಂ ಉರುಮೇಧಸೇ ನಮಃ
೪೮ ಓಂ ಅಗ್ರೇವಧಾಯ ನಮಃ
೪೯ ಓಂ ದೇವಾಯ ನಮಃ
೫೦ ಓಂ ದೂರೇವಧಾಯ ನಮಃ
೫೧ ಓಂ ಧನ್ವಿನೇ ನಮಃ
೫೨ ಓಂ ಶೂಲಿನೇ ನಮಃ
೫೩ ಓಂ ತುಭ್ಯಂ ನಮಃ
೫೪ ಓಂ ಗದಿನೇ ನಮಃ
೫೫ ಓಂ ಹಲಿನೇ ನಮಃ
೫೬ ಓಂ ಚಕ್ರಿಣೇ ನಮಃ
೫೭ ಓಂ ಚರ್ಮಿಣೇ ನಮಃ
೫೮ ಓಂ ದೈತ್ಯಭೇದಿನೇ ನಮಃ
೫೯ ಓಂ ದಾನವಭೇದಿನೇ ನಮಃ
೬೦ ಓಂ ಸದ್ಯಾಯ ನಮಃ
೬೧ ಓಂ ಹೃದ್ಯರೂಪಾಯ ನಮಃ
೬೨ ಓಂ ಪರ್ಣಶದ್ಯಾಯ ನಮಃ
೬೩ ಓಂ ಸದ್ಯೋಜಾತಾಯ ನಮಃ
೬೪ ಓಂ ವಾಮಾಯ ನಮಃ
೬೫ ಓಂ ಅಘೋರಾಯ ನಮಃ
೬೬ ಓಂ ಪುರುಷಾಯ ನಮಃ
೬೭ ಓಂ ಪುರೀಶಾಯ ನಮಃ
೬೮ ಓಂ ಪುರುಷಾರ್ಥಪ್ರದಾಯ ನಮಃ
೬೯ ಓಂ ಗಹ್ವರೇಷ್ಠಾಯ ನಮಃ
೭೦ ಓಂ ಶಿಷ್ಪ್ಯಾಯ ನಮಃ
೭೧ ಓಂ ತ್ರಿಶುಕ್ಲಾಯ ನಮಃ
೭೨ ಓಂ ಸುವೈದ್ಯುತೇ ನಮಃ

ನಿಷಂಗವರಪೃಷ್ಠಾಯ ಶರಹೇತಿಧರಾಯ ಚ ।
ಮಹಾದಂಷ್ಟ್ರಾಯ ಕಾಲಾಯ ಶ್ಮಶ್ರವೇ ಜಟಿಲಾಯ ಚ ॥೪೩॥

ತಾನಾಯ ಲಯಮಧ್ಯಾಯ ಮಹಾಡಮರುವಾದಿನೇ ।
ಗರುಡಧ್ವಜಪೂಜ್ಯಾಯ ಇಜ್ಯಾಯ ಕ್ಷಾಯಭಾತಿನೇ ॥೪೪॥

ವಿಷ್ಣುರಕ್ತಪ್ರಪಾನಾಯ ಮತ್ಸ್ಯಮುಂಡಧರಾಯ ಚ ।
ಕೂರ್ಮಕ್ರೋಡಾಸ್ಥಿಮಾಲಾಯ ನರಸಿಂಹಾಜಿನಾವೃತೇ ॥೪೫॥

---

೭೩ ಓಂ ಈಶಾನಾಯ ನಮಃ
೭೪ ಓಂ ಈಶ್ವರಾಯ ನಮಃ
೭೫ ಓಂ ಸುರಾಯ ನಮಃ
೭೬ ಓಂ ಬ್ರಹ್ಮಣ್ಯಾಯ ನಮಃ
೭೭ ಓಂ ಸುಬ್ರಹ್ಮಣ್ಯಾಯ ನಮಃ
೭೮ ಓಂ ಈಶ್ವರಾಯ ನಮಃ
೭೯ ಓಂ ಬ್ರಹ್ಮಣೇ ನಮಃ
೮೦ ಓಂ ಬ್ರಹ್ಮರೂಪಾಯ ನಮಃ
೮೧ ಓಂ ಬ್ರಾಹ್ಮಣ್ಯಾರ್ಚ್ಯಪದಾಯ ನಮಃ
೮೨ ಓಂ ವಿಶ್ವಾಧಿಕಾಯ ನಮಃ
೮೩ ಓಂ ಸೂಕ್ಷ್ಮಾಯ ನಮಃ
೮೪ ಓಂ ಪದ್ಮಮಾಲಾಧರಾಯ ನಮಃ
೮೫ ಓಂ ಶ್ವೇತಾಯ ನಮಃ
೮೬ ಓಂ ಹರಿಕೇಶಾಯ ನಮಃ
೮೭ ಓಂ ನೀಲಗ್ರೀವಾಯ ನಮಃ
೮೮ ಓಂ ಹೇತವೇ ನಮಃ
೮೯ ಓಂ ನಿಷಂಗವರಪೃಷ್ಠಾಯ ನಮಃ
೯೦ ಓಂ ಶರಹೇತಿಧರಾಯ ನಮಃ
೯೧ ಓಂ ಮಹಾದಂಷ್ಟ್ರಾಯ ನಮಃ
೯೨ ಓಂ ಕಾಲಾಯ ನಮಃ
೯೩ ಓಂ ಶ್ಮಶ್ರವೇ ನಮಃ
೯೪ ಓಂ ಜಟಿಲಾಯ ನಮಃ
೯೫ ಓಂ ತಾನಾಯ ನಮಃ
೯೬ ಓಂ ಲಯರುಧ್ಯಾಯ ನಮಃ
೯೭ ಓಂ ಮಹಾಡಮರುವಾದಿನೇ ನಮಃ
೯೮ ಓಂ ಗರುಡಧ್ವಜಪೂಜ್ಯಾಯ ನಮಃ
೯೯ ಓಂ ಇಜ್ಯಾಯ ನಮಃ
೧೦೦ ಓಂ ಕ್ಷಾಯಭಾತಿನೇ ನಮಃ
೧೦೧ ಓಂ ವಿಷ್ಣುರಕ್ತಪ್ರಪಾನಾಯ ನಮಃ
೧೦೨ ಓಂ ಮತ್ಸ್ಯಮುಂಡಧರಾಯ ನಮಃ
೧೦೩ ಓಂ ಕೂರ್ಮಾಸ್ಥಿಮಾಲಾಯ ನಮಃ
೧೦೪ ಓಂ ಕ್ರೋಡಾಸ್ಥಿಮಾಲಾಯ ನಮಃ
೧೦೫ ಓಂ ನರಸಿಂಹಾಜಿನಾವೃತೇ ನಮಃ
೧೦೬ ಓಂ ಈಶ್ವರಾಯ ನಮಃ
೧೦೭ ಓಂ ಶ್ರೀ ಪರಮೇಶ್ವರಾಯ ನಮಃ
೧೦೮ ಓಂ ಶ್ರೀಮನ್ಮಹಾದೇವಾಯನಮಃ

ವೇದಾಂತಪ್ರಥಿತಾಯ ತೇಽದ್ಯಮಹಸೇ ಘೋರಾಂಧಕಾರಾಯ ತೇ ॥೫೦॥

ರಮಾರಮಣಸಾಯಕಾರುಣಪ್ರತಿಪ್ರಸನ್ನೇಕ್ಷಣ
ಕ್ಷಪಾಪತಿಕಲಾಧರಕ್ಷಪಿತಪಾಪತಾಪಾಯ ತೇ ।
ವಿಶಿಷ್ಟಜನರಕ್ಷಣೇಕ್ಷಣ ವಿಶಿಷ್ಟತುಷ್ಟಾಯ ತೇ
ಸುಕಷ್ಟಮಿದಮರ್ಪಯೆ ಭವಜ ದುಷ್ಟಕಷ್ಟಂಕರ ॥೫೧॥

ಭವಾನಭಯದಾರಿಹಾ ಹರಶರಣ್ಯಗಣ್ಯೋತ್ತಮೋ
ವಿಗುಣ್ಯಮಪಿ ಮಾಂ ವಿಭೋ ತವ ಶರಣ್ಯಪಾದೇರಿತಂ ।
ಸದಾಕರುಣಯಾನಯಾ ಶಮನಜಾತಭೀತಿಂ ಹರ
ಹರಾಯ ವಿಭವಾದಿಕಂ ಕುರು ಮಹೇಶ ಮಾಮರ್ಭಕಂ ॥೫೨॥

---

ಮೂಲಭೂತನೂ, ಪ್ರಖ್ಯಾತನೂ, ಚಂದ್ರಕಲೆಯನ್ನು ಅಲಂಕರಿಸಿಕೊಂಡಿರುವವನೂ, ತನ್ನಲ್ಲಿ ವಿಶ್ವಾಸವಿಟ್ಟಿರುವವರನ್ನು ಸಂರಕ್ಷಿಸುವವನೂ, ಭಯಂಕರವಾದ ಭವಬಂಧನವನ್ನು ಪರಿಹರಿಸುವವನೂ, ಮನೋಹರನೂ, ಶಾಂತಸ್ವರೂಪನೂ, ವೇದಾಂತ ಪ್ರಸಿದ್ಧನೂ, ಘೋರನಾದ ಅಂಧಕಾರಕ್ಕೆ ತೇಜೋರೂಪಿಯೂ ಆದ ನಿನಗೆ ನಮಸ್ಕಾರ ಮಾಡುವೆನು. ॥೪೯-೫೦॥

ವಿಷ್ಣುವನ್ನೇ ಬಾಣವನ್ನಾಗಿಮಾಡಿಕೊಂಡಿರುವವನೂ, ಕೆಂಪಾಗಿಯೂ ಪ್ರಸಾದ ಗುಣಪೂರ್ಣವೂ ಆದ ಕಣ್ಣಗಳುಳ್ಳವನೂ, ಚಂದ್ರಕಲಾಧರನೂ, ಪಾಪದತಾಪಗಳನ್ನಳಿದವನೂ, ಸಕಲಜನರನ್ನೂ ರಕ್ಷಿಸುವ ದೃಷ್ಟಿಯುಳ್ಳವನೂ, ವಿಶೇಷವಾಗಿ ಸ್ತೋತ್ರದಿಂದ ಸಂತುಷ್ಟನಾಗುವವನೂ ಆದ ಸ್ವಾಮಿಯೆ! ನಿನಗೆ ನಮಿಸುವೆನು. ಶಿಷ್ಯಜನರಕ್ಷಕನೇ, ಈ ಸಂಸಾರಜನ್ಯವಾದ ವ್ಯಾಪಾರಗಳಲ್ಲಿ ಒದಗುವ ದುಷ್ಟಕಷ್ಟಗಳನ್ನು ಪರಿಹರಿಸಿ ಕಾಪಾಡು. ॥೫೧॥

ದೇವ! ನೀನು ಅಭಯಪ್ರದವಾದ ತೋಳುಳ್ಳವನು. ಶಂಕರನೆ! ನೀನು ಶರಣಾಗತರನ್ನು ರಕ್ಷಿಸುವುದರಲ್ಲಿ ಗಣ್ಯನೂ, ಉತ್ತಮನೂ ಆಗಿರುವೆ. ಪ್ರಭುವೆ! ನಿನ್ನ ಪಾದವನ್ನು ಮರೆಹೊಕ್ಕಿರುವ ಈ ನಾನು ಗುಣಹೀನನಾದರೂ ಯಾವಾಗಲೂ ದಯವಿಟ್ಟು ಸಲಹುತ್ತಾ ಯಮನ ಭೀತಿಯನ್ನು ಹೋಗಲಾಡಿಸು. ಎಲೈ ಮಹೇಶ್ವರಸ್ವಾಮಿಯೆ! ಈ ಬಾಲಕನನ್ನು (ಏನೂ ತಿಳಿಯದವನನ್ನು) ಐಶ್ವರ್ಯಾದಿಗಳನ್ನಿತ್ತು ಸಂರಕ್ಷಿಸು. ॥೫೨॥

॥ ಶ್ರೀಶಿವ ಉವಾಚ ॥

ಇತ್ಥಂ ಸ್ತುತ್ವಾಥ ಮಾಂ ಮಾಘೇ ಪೌರ್ಣಮ್ಯಾಂ ಹೋಮಯಾಚರೇತ್ ।
ಪೂರ್ವೋಕ್ತಕ್ರಮಯೋಗೇನ ಶಾಂಭವೈಃ ಸಹ ಸಾದರಂ ॥೫೩॥

ದದ್ಯಾದ್ಗೋಮಿಥುನಂ ದೇವಿ ಕಪಿಲಾಂ ಚ ಸವತ್ಸಕಾಂ ।
ಪೌರ್ಣಮ್ಯಾಂ ಚ ಪ್ರಕುರ್ವೀತ ಮಹೇಶಘೃತಕಂಬಲಂ ॥೫೪॥

ಲಿಂಗತ್ರಿವೇದಿಪರ್ಯಂತಂ ಗವ್ಯೇನ ಸುಘೃತೇನ ಚ ।
ಸಪ್ತಮಾಂಶೇ ವಿಧಿಃ ಪ್ರೋಕ್ತೋ ಮಹೇಶಘೃತಕಂಬಲೇ ॥೫೫॥

ವಿಧಿನಾ ತೇನ ಕುರ್ವೀತ ಮಹೇಶಿ ಘೃತಕಂಬಲಂ ।
ಸರ್ವಪಾಪವಿನಿರ್ಮುಕ್ತಃ ಶಿವಸಾಯುಜ್ಯಮಾಪ್ನುಯಾತ್ ॥೫೬॥

ಶಿವರಾತ್ರಿವ್ರತಂ ವಕ್ಷ್ಯೇ ಶಿವಪ್ರೀತಿಕರಂ ಪರಂ ।
ಅಹೋರಾತ್ರಂ ಮಾಘಮಾಸಿ ಘೃತಧಾರಾಂ ಪ್ರಕಲ್ಪಯೇತ್ ॥೫೭॥

---

ದೇವಿ, ಮಾಘಮಾಸದಲ್ಲಿ ಈರೀತಿ ನನ್ನನ್ನು ಸ್ತುತಿಸಿ ಅದೇಮಾಸದ ಹುಣ್ಣಿಮೆಯ ದಿವಸ ಹಿಂದೆ ಹೇಳಿದ ಕ್ರಮವನ್ನನುಸರಿಸಿ ಶೈವರೊಡನೆ ಆದರದಿಂದ ಹೋಮಮಾಡಬೇಕು. ಹೋಮಾನಂತರ ಕರುವಿನೊಡನೆ ಕಪಿಲವರ್ಣದ ಒಂದು ಗೋಮಿಥುನವನ್ನು ಉಚಿತ ದಕ್ಷಿಣೆಯೊಡನೆ ಶೈವವರ್ಯರಿಗೆ ದಾನಮಾಡಬೇಕು. ಅಲ್ಲದೆ ಹುಣಿಮೆಯ ದಿವಸ ಮಹೇಶ್ವರನಿಗೆ ಘೃತಕಂಬಲವನ್ನು ಲಿಂಗದ ಮೂರು ವೇದಿಕೆಗಳ ವರೆಗೂ ಹಸುವಿನ ತುಪ್ಪದಿಂದ ಮಾಡಿಸಬೇಕು. ಎಲೌ ಮಹೇಶ್ವರಿ! ಏಳನೆಯ ಅಂಶದಲ್ಲಿ ಈ ಘೃತಕಂಬಲವಿಧಿಯು ಹೇಳಲ್ಪಟ್ಟಿದೆ. ॥೫೩-೫೪-೫೫॥

ಮಹೇಶ್ವರಿ, ಆ ವಿಧಿಪ್ರಕಾರ ಶಿವಲಿಂಗಕ್ಕೆ ಘೃತಕಂಬಲವನ್ನಾಚರಿಸಬೇಕು. ಇದರಿಂದ ಸಕಲ ಪಾಪಗಳನ್ನೂ ಕಳೆದುಕೊಂಡು ಕೊನೆಗೆ ಶಿವನ ಸಾಯುಜ್ಯವನ್ನೈದುವನು. ಶಿವನಿಗೆ ಪ್ರೀತಿಕರವೂ ಶ್ರೇಷ್ಠವೂ ಆದ ಶಿವರಾತ್ರಿವ್ರತವನ್ನರುಹುವೆನು ಕೇಳು. ಹಗಲಿರುಳೂ ಮಾಘಮಾಸದಲ್ಲಿ ಶಿವಲಿಂಗದಮೇಲೆ ತುಪ್ಪದ ಧಾರೆಯ ಅಭಿಷೇಕವನ್ನು ಏರ್ಪಡಿಸಬೇಕು. ಇದರಿಂದ ಸಮಸ್ತ ಪಾಪಗಳು ಧಾರಾಕಾರವಾಗಿ ನಾಶವಾಗುವುದರಲ್ಲಿ ಸಂದೇಹವೇ ಇಲ್ಲ. ॥೫೬-೫೭॥

ಧಾರಾರೂಪಾಣಿ ಪಾಪಾನಿ ವಿನಷ್ಟಾನಿ ನ ಸಂಶಯಃ ।
ದರ್ಶನಂ ಸ್ಪರ್ಶನಂ ಲಿಂಗೇ ಘೃತಸ್ನಾನಂ ವಿಶೇಷತಃ ॥೫೮॥

ಏವಮೇಕಗುಣಂ ಜ್ಞೇಯಂ ಗೃಹಕ್ಷೇತ್ರೇಷ್ವತೋಽಧಿಕಂ ।
ಸರ್ವಾಘೌಘಹರೋ ಮಾಸಃ ಮಾಘೋಽಯಂ ಪುಣ್ಯವರ್ಧನಃ ॥೫೯॥

ಸ್ನಾನದಾನಾರ್ಚನವಿಧೌ ವಿಶಿಷ್ಟೋ ಭವತುಷ್ಟಿದಃ ।
ಪ್ರಯಾಗೇ ತು ವಿಶೇಷಣ ಮಕರಸ್ಥೇ ದಿವಾಕರೇ ॥೬೦॥

ಗಂಗಾಯಮುನಯೋರ್ಮಧ್ಯೇ ಮೇಧ್ಯೇ ವಿಧ್ಯಾಪಿ ವರ್ಜಿತಃ ।
ಸ್ನಾನಂ ದಾನಾರ್ಚನಂ ದೇವಿ ಶ್ರಾದ್ಧೇನಾನಂತ್ಯಮಶ್ನುತೇ ॥೬೧॥

॥ ಈಶ್ವರ ಉವಾಚ ॥

ಪ್ರಾಜ್ಯಾಜ್ಯಾದಿಭಿರೀಶಲಿಂಗಮಗಜೇ ಯೋಽಭಿಷಿಚ್ಯಾದರಾತ್-
ಸಾಮ್ರಾಜ್ಯಂ ಲಭತೇ ಕಿಲೈಷ ಭವಹೃಚ್ಚೇಜ್ಯಾಯುತಾನಾಂ ಫಲಂ ।

---

ಶಿವಲಿಂಗದ ದರ್ಶನ, ಸ್ಪರ್ಶನ, ಘೃತಸ್ನಾನ ಇವುಗಳು ಒಂದೊಂದು ಪಾಲು ಗುಣಾಧಿಕವು. ಶ್ರೇಷ್ಠವಾದ ಗೃಹ ಮತ್ತು ಕ್ಷೇತ್ರಗಳಲ್ಲಿ ಇವುಗಳನ್ನು ಮಾಡುವುದು ಇದಕ್ಕಿಂತಲೂ ಹೆಚ್ಚಿನ ಫಲದಾಯಕವು. ಈ ಮಾಘಮಾಸವು ಸಕಲ ಪಾಪನಾಶಕರವೂ, ಪುಣ್ಯವರ್ಧಕವೂ ಆದ ಮಾಸವು. ಸ್ನಾನ, ದಾನ, ಪೂಜೆ ಇವುಗಳ ವಿಧಿಯಲ್ಲಿ ಶಿವನು ವಿಶೇಷವಾಗಿ ಸಂತುಷ್ಟನಾಗುತ್ತಾನೆ. ಸೂರ್ಯನು ಮಕರ ರಾಶಿಯಲ್ಲಿರುವಾಗ ಪ್ರಯಾಗದಲ್ಲಿ ಪರಿಶುದ್ಧವಾದ ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ಯಾವ ವಿಧಿಯಿಂದಾದರೂ ಸ್ನಾನ, ದಾನ, ಪೂಜೆ ಮತ್ತು ಶ್ರಾದ್ಧಕರ್ಮಗಳನ್ನು ಮಾಡುವವನು ಅನಂತಫಲವನ್ನು ಪಡೆಯುವನು. ॥೫೮-೫೯-೬೦-೬೧॥

ವಿಶೇಷವಾದ ತುಪ್ಪವೇ ಮೊದಲಾದ ದ್ರವ್ಯಗಳಿಂದ ಶಿವಲಿಂಗಕ್ಕೆ ಆದರದಿಂದ ಅಭಿಷೇಕಮಾಡುವವನು ಸಾಮ್ರಾಜ್ಯವನ್ನು ಪಡೆಯುವನು. ಅಲ್ಲದೆ ಹತ್ತುಸಾವಿರ ಯಾಗಗಳ ಫಲವನ್ನು ಹೊಂದುತ್ತಾನೆ. ಇದೇ ಮಾಘಮಾಸದಲ್ಲಿ ಮಖನಕ್ಷತ್ರದ ದಿನ ಶಿವನನ್ನರ್ಚಿಸುವ ಭಕ್ತನು ನೂರು ಅಪರಾಧಮಾಡಿದ್ದರೂ ಮುಕ್ತನಾಗುವನು. ವಿಧಿಪ್ರಕಾರ ಈ ಮಾಘಮಾಸದಲ್ಲಿ ಶಿವಲಿಂಗಕ್ಕೆ ಘೃತ ಕಂಬಲವನ್ನಿಡುತ್ತಾ ರಾತ್ರಿವೇಳೆಯಲ್ಲಿ ಮಾತ್ರ ಭೋಜನಮಾಡುತ್ತಾ ಬ್ರಾಹ್ಮಣ

ಮಾಘ್ಯಾಂ ಮಾಸೇ ಮಘರ್ಕ್ಷೇ ತ್ವಘಶತಭಯತೋ ಮುಕ್ತ ಏವೇಹಭಕ್ತೈಃ
ಕುರ್ಯಾದ್ಯೋಽಷ್ಟತಕಂಬಲಂ ವಿಧಿಯುತಂ ಭುಕ್ತ್ವೈವ ಭೋಗಂ ಭುವಿ
ವಿಪ್ರಾನನ್ನವರ್ಯೈಃ ಸದಕ್ಷಿಣಮುಮೋ ನಕ್ತಾಶನಃ ಶಕ್ತಿಯುಕ್ ॥೬೨॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಮಾಘಮಾಸಾರ್ಚನವಿಧಿನಿರೂಪಣಂ
ನಾಮ ಚತುರ್ವಿಂಶೋಽಧ್ಯಾಯಃ

---

ರಿಗೆ ಉತ್ತಮವಾದ ಅನ್ನವನ್ನಿಟ್ಟು ಶಕ್ತ್ಯನುಸಾರ ದಕ್ಷಿಣೆಗಳನ್ನಿತ್ತು ಸಂತೋಷ ಪಡಿಸುವ ಮಾನವನು ಇಹಲೋಕದಲ್ಲಿ ಸಕಲ ಭೋಗಗಳನ್ನೂ ಪಡೆಯುವನಲ್ಲದೆ ಪರದಲ್ಲಿ ಮುಕ್ತಿಯನ್ನೂ ಹೊಂದುವನು, ಎಂದು ಶಿವನು ಪಾರ್ವತಿಗೆ ಹೇಳಿದನು. ॥೬೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ
ಮಾಘಮಾಸಪೂಜಾವಿಧಿನಿರೂಪಣೆಯೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಪಂಚವಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಫಾಲ್ಗುಣೇ ಮಾಸಿ ಸಂಪ್ರಾಪ್ತೇ ಶಿವಂ ಭಾಗವತಃ ಸ್ಮರನ್ ।
ನದೀನದತಟಾಕೇಷು ದೇವಖಾತೋದಕೇಷು ಚ ॥೧॥

ಸ ಕುಶಂ ಸಾಕ್ಷತಂ ಸ್ನಾಯಾದ್ವಾರುಣೈರ್ಮಂತ್ರಲಿಂಗಕೈಃ ।
ಕುಶಾಸಕ್ತಕರೋ ದೇವಿ ಸಂತರ್ಪ್ಯ ಚ ಸುರಾನ್ಪಿತೄನ್ ॥೨॥

ಭಸ್ಮಧೃತ್ವಾ ತ್ರಿಪುಂಡ್ರಂ ಚ ಕೃತ್ವಾರುದ್ರಾಕ್ಷಧಾರಣಂ ।
ಹೋಮಂ ಚ ಹಾವಯೇದ್ದೇವಿ ಸ್ವಯಂ ವಾ ಶ್ರುತಿದರ್ಶಿತಂ ॥೩॥

---

## ಇಪ್ಪತ್ತೈದನೆಯ ಅಧ್ಯಾಯ

ಫಾಲ್ಗುಣಮಾಸವ್ರತವನ್ನು ತಿಳಿಸುತ್ತಾ ಶಂಕರನು ದೇವಿಗೆ ಇಂತೆಂದನು. ಪಾರ್ವತಿಯೆ ! ಫಾಲ್ಗುನಮಾಸಸಂಪ್ರಾಪ್ತವಾಗಲು ಭಗವದ್ಭಕ್ತನಾದ ಮಾನವನು ಹೃದಯದಲ್ಲಿ ಶಿವನನ್ನು ಸ್ಮರಿಸುತ್ತಾ ಹೊಳೆ, ಮಡು, ಕೆರೆ, ದೇವರಕೊಳ ಮುಂತಾದ ಪವಿತ್ರಜಲಗಳಲ್ಲಿ ದರ್ಭೆ ಮತ್ತು ಅಕ್ಷತೆಗಳೊಡನೆ ವರುಣಮಂತ್ರ ಗಳಿಂದಲೂ, 'ಆಪೋಹಿಷ್ಠಾ' ಮುಂತಾದ ಅಬ್ಲಿಂಗ ಮಂತ್ರಗಳಿಂದಲೂ ಸ್ನಾನ ಮಾಡಬೇಕು. ಹೀಗೆ ಸ್ನಾನಮಾಡಿದ ನಂತರ ದರ್ಭಪಾಣಿಯಾಗಿ ದೇವತೆಗಳನ್ನೂ ಪಿತೃಗಳನ್ನೂ ತರ್ಪಣದಿಂದ ತೃಪ್ತಿಪಡಿಸಿ ವಿಧಿಪ್ರಕಾರ ಭಸ್ಮಧಾರಣೆ, ತ್ರಿಪುಂಡ್ರ,

ಕೃತನಿತ್ಯಕ್ರಿಯೋ ವಿಪ್ರಾಂತ್ಸಪುಷ್ಪಾಂಬುಕುಶಾದಿಕಂ ।
ಸಮಾಹೃತ್ಯ ವಿಶುದ್ಧಂ ಚ ಉದಕುಂಭೋದಕಂ ಶುಭಂ ॥೪॥

ಉಪಲಿಪ್ಯ ಶುಭಂ ದೇಶಂ ರಂಗವಲ್ಲ್ಯಾದ್ಯಲಂಕೃತಂ ।
ವಿತಾನತೋರಣೋಪೇತಂ ಮಂಟಪಂ ತತ್ರ ಕಾರಯೇತ್ ॥೫॥

ಗಂಧಂ ಧೂಪಂ ಚ ದೀಪಂ ಚ ಪುಷ್ಪಾಣಿ ವಿಮಲಾನ್ಯಪಿ ।
ಸ್ಥಾಪಯೇದ್ಬಿಲ್ವಪತ್ರಾಣಿ ಫಲಮೂಲಾನಿ ತತ್ರ ಹಿ ॥೬॥

ಅಕ್ಷತಾ ಧವಲಾಸ್ತತ್ರ ಶಾಲಿತಂಡುಲಜಾಸ್ತಿಲೈಃ ।
ಮಿಶ್ರೀಕುರ್ಯಾಚ್ಚ ಗಂಧಾಂಬುಪೂರಿತಂ ಚ ಘಟಂ ನವಂ ॥೭॥

ಪಾದ್ಯಾರ್ಘ್ಯಾಚಮನೀಯಾನಿ ಸ್ಥಾಪ್ಯ ಪಾತ್ರಾಣಿ ಶಂಕರಿ ।
ಪಂಚಾಮೃತಂ ಪಂಚಗವ್ಯಂ ದಧಿಕ್ಷೀರಾಜ್ಯಸನ್ಮಧು ॥೮॥

ಸುಶರ್ಕರಾಂ ಫಲೋದಂ ಚ ರಂಭಾಮ್ರಪನಸಂ ಶಿವೇ ।
ಜಂಬೀರಸಾರಂ ಗಂಧೋದಂ ಹೇಮರತ್ನಕುಶೋದಕಂ ॥೯॥

---

ರುದ್ರಾಕ್ಷ ಇವುಗಳನ್ನು ಧರಿಸಿಕೊಂಡು ವೇದಪ್ರತಿಪಾದ್ಯವಾದ ಹೋಮವನ್ನು ನಡೆಸಬೇಕು. ಅಥವಾ ತಾನೇ ಸ್ವಂತವಾಗಿಯಾದರೂ ಹೋಮಮಾಡಬಹುದು.॥೧-೨-೩॥

ಪಂಡಿತನಾದ ಯಜಮಾನನು ತನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪುಷ್ಪೋದಕ, ದರ್ಭೆ ಮುಂತಾದವುಗಳನ್ನು ಸಂಗ್ರಹಿಸಿ, ಪರಿಶುದ್ಧವೂ ಶುಭಕರವೂ ಆದ ಉದಕುಂಭದ ಜಲವನ್ನು ಸಂಗ್ರಹಿಸಿಟ್ಟುಕೊಂಡು, ಒಂದು ಶುದ್ಧ ಸ್ಥಳವನ್ನು ಸಾರಿಸಿ, ರಂಗವಲ್ಲಿಯೇ ಮುಂತಾದವುಗಳಿಂದಲಂಕರಿಸಿ, ವಿತಾನ, ತೋರಣ ಮುಂತಾದವುಗಳಿಂದಲಂಕೃತವಾದ ಮಂಟಪವನ್ನು ಅಲ್ಲಿ ರಚಿಸಬೇಕು. ॥೪-೫॥

ಗಂಧ, ಧೂಪ, ದೀಪ, ಪರಿಶುದ್ಧವಾದ ಹೂಗಳು, ಬಿಲ್ವಪತ್ರೆಗಳು, ಹಣ್ಣು, ಗೆಡ್ಡೆಗೆಣಸುಗಳು, ಬತ್ತ, ಅಕ್ಕಿ, ಎಳ್ಳು ಇವು ಗಳಿಂದ ಮಿಶ್ರವಾದ ಪವಿತ್ರ ಅಕ್ಷತೆಗಳು, ಗಂಧೋದಕಪೂರ್ಣವಾದ ಹೊಸ ಕಲಶ, ಪಾದ್ಯ, ಅರ್ಘ್ಯ, ಆಚಮನಪಾತ್ರೆಗಳು, ಪಂಚಾಮೃತ, ಪಂಚಗವ್ಯ, ಮೊಸರು, ಹಾಲು, ತುಪ್ಪ, ಶ್ರೇಷ್ಠ ಜೇನು, ಒಳ್ಳೆಯ ಸಕ್ಕರೆ, ಫಲೋದಕ, ಬಾಳೆ, ಮಾವು, ಹಲಸು ಈ ಹಣ್ಣುಗಳು, ನಿಂಬೆಯಹಣ್ಣಿನ ರಸ, ಗಂಧೋದಕ, ಸುವರ್ಣೋದಕ, ರತ್ನೋದಕ, ಕುಶೋದಕ ಮುಂತಾದವು

ಸಂಪಾದ್ಯ ದೀಪಾನುದ್ಬೋಧ್ಯ ವರಯೇಚ್ಛಾಂಭವಾಂಸ್ತತಃ ।
ಸಂಕಲ್ಪ್ಯ ಪೂಜಯೇದ್ದೇವಂ ಮಾಸಂ ನಕ್ತಾಶನಃ ಸ್ಥಿರಂ ॥೧೦॥

ಪಂಚಾಕ್ಷರಂ ಚ ಪ್ರಜಪೇತ್ಸಹಸ್ರಾಷ್ಟೋತ್ತರಂ ಶತಂ ।
ಧ್ಯಾಯೇದ್ಧೃದಾ ಮಹಾದೇವಂ ಸಾಂಬಂ ಚಂದ್ರಕಲಾಧರಂ ॥೧೧॥

ತ್ರಿನೇತ್ರಂ ನೀಲಕಂಠಂ ಚ ವರದಾಭಯಪಾಣಿನಂ ।
ಶಾಶ್ವತಂ ಶಂಕರಂ ದೇವಿ ಹೃತ್ಪದ್ಮಸದನಸ್ಥಿತಂ ॥೧೨॥

ಚಂದ್ರಕಾಂತಮಯಂ ಲಿಂಗಂ ಸ್ಥಾಪ್ಯ ಪೀಠೇ ಸ ಪುಷ್ಪಕಂ ।
ದದ್ಯಾತ್ಪಾದ್ಯಂ ತತೋಽರ್ಘ್ಯಂ ಚ ಮಧುಪರ್ಕಂ ಮಹೇಶ್ವರಿ ॥೧೩॥

ಕ್ಷೀರೇಣ ದಧ್ನಾಜ್ಯೇನಾಪಿ ಮಧುನಾ ಸಿತಯಾ ಶಿವಂ ।
ಅಭಿಷಿಚ್ಯ ಫಲೋದೈಶ್ಚ ಗಂಧಹೇಮಕುಶೋದಕೈಃ ॥೧೪॥

---

ಗಳನ್ನು ಸಂಪಾದಿಸಿಕೊಂಡು ದೀಪಗಳನ್ನು ಹೊತ್ತಿಸಿ, ಅನಂತರ ಶೈವರನ್ನು ವರಣ ಮಾಡಬೇಕು. ||೬-೭-೮-೯||

ಅನಂತರ ಸಂಕಲ್ಪಮಾಡಿ ಆ ಫಾಲ್ಗುನಮಾಸದಲ್ಲಿ ಸ್ಥಿರಮನದಿಂದ ರಾತ್ರಿ ಭೋಜನಮಾಡುತ್ತಾ ಮಹಾದೇವನನ್ನು ಪೂಜಿಸಬೇಕು. ಸಾವಿರ ಅಥವಾ ನೂರೆಂಟು ಪಂಚಾಕ್ಷರಮಂತ್ರ ಜಪಮಾಡಬೇಕು. ಆಮೇಲೆ ಮನಃಪೂರ್ವಕವಾಗಿ ಅಂಬಿಕಾರಮಣನೂ, ಚಂದ್ರಕಲಾಧಾರಿಯೂ, ಮುಕ್ಕಣ್ಣನೂ, ಕಪ್ಪುಗೊರಳನೂ, 'ವರದ ಮತ್ತು ಅಭಯ ಹಸ್ತಗಳುಳ್ಳವನೂ, ನಿತ್ಯನೂ, ಮಂಗಳಕರನೂ, ಹೃದಯ ಕಮಲದಲ್ಲಡಗಿರುವವನೂ ಆದ ಮಹಾದೇವನನ್ನು ಧ್ಯಾನಮಾಡಬೇಕು. ||೧೦-೧೧-೧೨||

ಚಂದ್ರಕಾಂತಶಿಲೆಯ ಲಿಂಗವನ್ನು ಹೂವಿನೊಡನೆ ಪೀಠದಲ್ಲಿ ಸ್ಥಾಪಿಸಿ, ಅನಂತರ ಪಾದ್ಯ, ಅರ್ಘ್ಯ, ಮಧುಪರ್ಕಗಳನ್ನು ಸಮರ್ಪಿಸಬೇಕು. ಎಲೌ ಮಹೇಶ್ವರಿಯೆ! ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ, ಫಲೋದಕ (ಎಳನೀರು) · ಗಂಧೋದಕ, ಸುವರ್ಣೋದಕ ಮತ್ತು ಕುಶೋದಕಗಳಿಂದ ಶಿವ ಲಿಂಗಕ್ಕೆ ಮಂತ್ರಪೂರ್ವಕವಾಗಿ ಅಭಿಷೇಕಮಾಡಬೇಕು. ||೧೩-೧೪||

ದತ್ವಾ ಧೂಪಂ ಚ ದೀಪಂ ಚ ನೈವೇದ್ಯಂ ಕಿಂಚಿದೇವ ಹಿ ।
ಉದ್ಧೃತ್ಯ ಶಿವಲಿಂಗಂ ಚ ಸ್ನಾನವೇದ್ಯಾಂ ನಿಧಾಯ ಚ ॥೧೫॥

ಸುಪುಷ್ಪವೌಲಿಲಿಂಗಂ ಚ ಸ್ನಾನವೇದ್ಯಾಂ ನಿಧಾಯ ಚ ।
ಸುಪುಷ್ಪವೌಲಿಂ ದೇವೇಶಿ ರುದ್ರೈಕಾದಶಸಂಖ್ಯಯಾ ॥೧೬॥

ಗೋಶೃಂಗಧಾರಾಪಾತ್ರೇಣ ಸೇಚಯೇಚ್ಛಾಂಭವೈಃ ಸಹ ।
ಸ್ನಾನಕಾಲೇ ಮಹೇಶಸ್ಯ ವಾದಿತ್ರಾಣಿ ನಿಧಾಯ ಚ ॥೧೭॥

ಶಂಖಕಾಹಳಭೇರ್ಯಾದಿವೇಣುವೀಣಾದಿನಿಸ್ವನಂ ।
ಭವಾಯೇತಿ ತತೋಽಂತೇ ಹಿ ತರ್ಪಯೇದಷ್ಟನಾಮಭಿಃ ॥೧೮॥

ಸಂಮೃಜ್ಯ ವಾಸಸಾ ದೇವಿ ಲಿಂಗಂ ಮಂಗಲದಂ ಮಮ ।
ವಸ್ತ್ರೋಪವೀತಂ ಗಂಧಾಢ್ಯಂ ಸುಭಸ್ಮಾಭರಣಾರ್ಪಣಂ ॥೧೯॥

ಪಲಾಶಬಿಲ್ವಮಂದಾರೈಃ ಪೂಜಯೇದುತ್ಪಲೈಃ ಶಿವೇ ।
ಧೂಪಂ ಗುಗ್ಗುಲಸಂಯುಕ್ತಂ ಸಾಜ್ಯಂ ದೇಯಂ ಮಹೇಶ್ವರಿ ॥೨೦॥

---

ಧೂಪ, ದೀಪ, ನೈವೇದ್ಯಗಳನ್ನು ಸ್ವಲ್ಪಮಟ್ಟಿಗೆ ಮಾಡಿ, ಶಿವಲಿಂಗವನ್ನು ಎತ್ತಿ ಸ್ನಾನವೇದಿಕೆಯಲ್ಲಿರಿಸಿ, ಒಳ್ಳೆಯ ಹೂವನ್ನು ಆ ಸ್ನಾನವೇದಿಕೆಯಲ್ಲಿಟ್ಟಿರುವ ಲಿಂಗವೌಳಿಯಲ್ಲಿಟ್ಟು, ಆ ಲಿಂಗದ ಶಿರೋಭಾಗದಲ್ಲಿ ಏಕಾದಶವಾರ ರುದ್ರಮಂತ್ರವನ್ನುಚ್ಚರಿಸುತ್ತಾ ಗೋಶೃಂಗದ ಧಾರಾಪಾತ್ರೆಯಿಂದ ಶೈವರೊಡನೆ ಅಭಿಷೇಕ ಮಾಡಬೇಕು. ||೧೫-೧೬||

ಮಹೇಶ್ವರನಿಗೆ ಅಭಿಷೇಕಮಾಡುವ ಸಮಯದಲ್ಲಿ ಶಂಖ, ಕಹಳೆ, ನಗಾರಿ, ವೀಣೆ, ಕೊಳಲು ಮುಂತಾದ ಮಂಗಳವಾದ್ಯಧ್ವನಿಗಳನ್ನು ನಡೆಸಿ, ಸ್ನಾನಾನಂತರ ಭವಾಯನಮಃ ಎಂಬ ಶಿವನ ಎಂಟು ನಾಮೋಚ್ಚಾರಣಪೂರ್ವಕವಾಗಿ ತರ್ಪಣಮಾಡಬೇಕು. ಆಮೇಲೆ ಶುಭ್ರವಸ್ತ್ರಗಳಿಂದ ಮಂಗಳಪ್ರದವಾದ ಶಿವಲಿಂಗವನ್ನು ಚೆನ್ನಾಗಿ ಒರೆಸಿ, ವಸ್ತ್ರ, ಉಪವೀತ, ಗಂಧ, ಉತ್ತಮಭಸ್ಮ, ಆಭರಣಗಳ ಇವುಗಳಿಂದಲಂಕರಿಸಿ, ಮುತ್ತುಗ, ಬಿಲ್ವ, ಪಾರಿಜಾತ, ನೈದಿಲೆ ಮುಂತಾದ ಹೂಗಳಿಂದ ಪೂಜಿಸಬೇಕು. ||೧೭-೧೮-೧೯||

ಗುಗ್ಗುಲು, ತುಪ್ಪಗಳಿಂದ ಮಿಶ್ರವಾದ ಧೂಪವನ್ನು ಮಹೇಶ್ವರನಿಗೆ ಅರ್ಪಿಸ

ಘೃತದೀಪಾಂತ್ಸಮುದ್ಬೋಧ್ಯ ಹವಿಃ ಕ್ಷೀರೇಣ ಸಾಚಿತಂ ।
ಮಂಡಕಾಃ ಫೇಣಿಕಾಪೂಪಂ ನಿವೇದ್ಯ ಸಘೃತಂ ಶಿವೇ ॥೨೧॥

ದದ್ಯಾಚ್ಛೈವ ಸುತಾಂಬೂಲಂ ಪಾನಕಂ ತಕ್ರಮೇವ ವಾ ।
ಗೀತಂ ನಾಟ್ಯಂ ಚ ವಾದ್ಯಾನಿ ನೀರಾಜನಪುರಸ್ಸರಂ ॥೨೨॥

ಚಂದ್ರದೀಪಂ ತತೋ ದದ್ಯಾಚ್ಛತ್ರಂ ಚಾಮರಯೋರ್ಯುಗಂ ।
ವ್ಯಜನಾದರ್ಶಕಂ ತತ್ರ ಪ್ರದಕ್ಷಿಣನಮಸ್ಕ್ರಿಯಾಃ ॥೨೩॥

ಸ್ತುತಿಂ ಚ ನರ್ತನಂ ದೇವಿ ಯಥಾಭಕ್ತಿ ಸಮಾಚರೇತ್ ।
ತತ್ರ ನಾಮಾನಿ ತೇ ವಚ್ಮಿ ಶೃಣು ಸ್ತವಮಪೀಶ್ವರಿ ॥೨೪॥

ಫಾಲ್ಗುನೇ ಫಲ್ಗುಪಾಪೇಭ್ಯೋ ಮುಚ್ಯತೇ ನಾಮಪೂಜಯಾ ।
ಬಿಲ್ವಪತ್ರೇಣ ದೇವೇಶಿ ಮಾಸೋಽಯಂ ಶಿವತುಷ್ಟಿದಃ ॥೨೫॥

---

ಬೇಕು. ತುಪ್ಪದ ದೀಪಗಳನ್ನು ಚೆನ್ನಾಗಿ ಉರಿಯುವಂತೆ ಹೊತ್ತಿಸಿ, ಹಾಲಿನೊಡನೆ ತುಪ್ಪದಲ್ಲಿ ಬೇಸಿದ, ಮಂಡಿಗೆ, ಫೇಣಿ, ಒಬ್ಬಟ್ಟು, ಭಕ್ಷ್ಯಗಳನ್ನು ತುಪ್ಪದೊಡನೆ ನಿವೇದನಮಾಡಿ ಒಳ್ಳೆಯ ತಾಂಬೂಲ, ಪಾನಕ, ಮಜ್ಜಿಗೆಗಳನ್ನರ್ಪಿಸಿ, ಗಾನ, ನಾಟ್ಯ ವಾದ್ಯಗಳನ್ನು ಮಾಡಿಸಿ, ಆರತಿಮಾಡಿಸಬೇಕು. ಅನಂತರ ಚಂದ್ರದೀಪ ವನ್ನು ಅರ್ಪಿಸಿ, ತರುವಾಯ ಛತ್ರಿ, ಎರಡು ಚಾಮರಗಳು, ಬೀಸಣಿಗೆ, ಕನ್ನಡಿ ಗಳನ್ನು ದೇವನಿಗೆ ಸಮರ್ಪಿಸಿ ಅನಂತರ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ತನ್ನ ಶಕ್ತಿಗನುಗುಣವಾಗಿ ಸ್ತೋತ್ರ ಮತ್ತು ನಾಟ್ಯಗಳನ್ನು ಭಕ್ತಿಯಿಂದ ನೆರವೇರಿಸ ಬೇಕು. ॥೨೦-೨೧-೨೨-೨೩॥

ಈ ಫಾಲ್ಗುಣಮಾಸದಲ್ಲಿ ಪೂಜಿಸುವ ಶಿವನಾಮಗಳನ್ನೂ ಶಿವಸ್ತೋತ್ರವನ್ನೂ ನಿನಗೆ ಹೇಳುತ್ತೇನೆ ಕೇಳು; ಪಾರ್ವತಿ, ಈ ನಾಮಪೂಜೆಯಿಂದ ಮಾನವನು ಮಹಾಪಾಪಗಳಿಂದಲೂ ಮುಕ್ತನಾಗುವನು. ಈ ಫಾಲ್ಗುಣಮಾಸದಲ್ಲಿ ಬಿಲ್ವದಳ ಗಳಿಂದ ಲಿಂಗಪೂಜೆಮಾಡುವುದರಿಂದ ಶಿವನಿಗೆ ಸಂತೋಷವುಂಟಾಗುತ್ತದೆ. ॥೨೪-೨೫॥

ಓಂ ನಮಃಶಿವಾಯ ಶಾಂತಾಯ ಸಹಮಾನಾಯ ಶಂಭವೇ ।
ಭವಾಯ ಭವರೂಪಾಯ ಶತಾವರ್ತಾಯ ವೇಧಸೇ ॥೨೬॥

ದುಂದುಭ್ಯಾಯ ವರೇಣ್ಯಾಯ ಶರಣ್ಯಾಯ ಪಿನಾಕಿನೇ ।
ಯೋಗಿನೇ ಧ್ಯಾನಗಮ್ಯಾಯ ರಮ್ಯಾಯ ಗುರವೇ ನಮಃ ॥೨೭॥

ಅವಸಾನ್ಯಾಯ ವನ್ಯಾಯ ಆಹನನ್ಯಾಯ ತೇ ನಮಃ ।
ಕಾಮನಾಶಾಯ ವಾಸಾಯ ಹರಣಾಯ ವಿಸಾರಿಣೇ ॥೨೮॥

ನಮೋಽಸ್ತು ತೇ ಮಹೇಶಾಯ ನಮಃ ಶಾಂತತಮಾಯ ಚ ।
ಪ್ರಧಾನಪುರುಷೇಶಾಯ ಯೋಗಾಧಿಪತಯೇ ನಮಃ ॥೨೯॥

ನಮಸ್ತ್ರಿಕಾಗ್ನಿಕಾಲಾಯ ತ್ರ್ಯಂಬಕಾಯ ಪಿನಾಕಿನೇ ।
ನಮಃಕಾಲಾಯ ರುದ್ರಾಯ ಮಹಾಸತ್ರಾಯ ಶೂಲಿನೇ ॥೩೦॥

---

೧ ಓಂ ಶಿವಾಯ ನಮಃ
೨ ಓಂ ಶಾಂತಾಯ ನಮಃ
೩ ಓಂ ಸಹಮಾನಾಯ ನಮಃ
೪ ಓಂ ಶಂಭವೇ ನಮಃ
೫ ಓಂ ಭವಾಯ ನಮಃ
೬ ಓಂ ಭವರೂಪಾಯ ನಮಃ
೭ ಓಂ ಶತವರ್ತಾಯ ನಮಃ
೮ ಓಂ ವೇಧಸೇ ನಮಃ
೯ ಓಂ ದುಂದುಭ್ಯಾಯ ನಮಃ
೧೦ ಓಂ ವರೇಣ್ಯಾಯ ನಮಃ
೧೧ ಓಂ ಶರಣ್ಯಾಯ ನಮಃ
೧೨ ಓಂ ಪಿನಾಕಿನೇ ನಮಃ
೧೩ ಓಂ ಯೋಗಿನೇ ನಮಃ
೧೪ ಓಂ ಧ್ಯಾನಗಮ್ಯಾಯ ನಮಃ
೧೫ ಓಂ ರಮ್ಯಾಯ ನಮಃ
೧೬ ಓಂ ಗುರವೇ ನಮಃ
೧೭ ಓಂ ಅವಸಾನ್ಯಾಯ ನಮಃ
೧೮ ಓಂ ವನ್ಯಾಯ ನಮಃ
೧೯ ಓಂ ಆಹನನ್ಯಾಯ ನಮಃ
೨೦ ಓಂ ಕಾಮನಾಶಾಯ ನಮಃ
೨೧ ಓಂ ವಾಸಾಯ ನಮಃ
೨೨ ಓಂ ಹರಣಾಯ ನಮಃ
೨೩ ಓಂ ವಿಸಾರಿಣೇ ನಮಃ
೨೪ ಓಂ ಮಹೇಶಾಯ ನಮಃ
೨೫ ಓಂ ಶಾಂತತಮಾಯ ನಮಃ
೨೬ ಓಂ ಪ್ರಧಾನಪುರುಷೇಶಾಯ ನಮಃ
೨೭ ಓಂ ಯೋಗಾಧಿಪತಯೇ ನಮಃ
೨೮ ಓಂ ತ್ರಿಕಾಗ್ನಿಕಾಲಾಯ ನಮಃ
೨೯ ಓಂ ತ್ರ್ಯಂಬಕಾಯ ನಮಃ
೩೦ ಓಂ ಪಿನಾಕಿನೇ ನಮಃ

ನಮೋ ಧೂರ್ಜಟಯೇ ತುಭ್ಯಂ ಜಟಿಲಾಯ ಕೃಶಾಯ ಚ ।
ನಮೋ ಭೇದ್ಯಾಯ ಮೇಧ್ಯಾಯ ಭವವೈದ್ಯಾಯ ಬಂಧವೇ ॥೩೦॥

ಬ್ರಹ್ಮಾಧಿಪತಯೇ ತುಭ್ಯಂ ಬ್ರಹ್ಮವಿದ್ಯಾಧಿಪಾಯ ಚ ।
ವಿಷ್ಣೋಶ್ಚ ಜನಕಾಯಾಥ ಕೇನಕಾಯಾಸಕಾಯ ಚ ॥೩೧॥

ನಮಸ್ತ್ರಿಮೂರ್ತಯೇ ತುಭ್ಯಂ ಬ್ರಹ್ಮಣೋ ಜನಕಾಯ ಚ ।
ನಮೋ ವೇದರಹಸ್ಯಾಯ ಹರ್ಷತರ್ಷಾಯ ತೇ ನಮಃ ॥೩೨॥

ವೇದವೇದಾಂತಸಾರಾಯ ಸುಪಾರಾಯ ನಮೋ ನಮಃ ।
ಅತೀತಾನಾಗತಜ್ಞಾಯ ವರ್ತಮಾನಾಯ ಬೃಂಹತೇ ॥೩೪॥

ಮೇರುಕೋದಂಡಹಸ್ತಾಯ ಗಂಗಾಮಸ್ತಾಯ ದಾರಿಣೇ ।
ನಮೋ ಬುದ್ಧಾಯ ಶುದ್ಧಾಯ ಮೇಧ್ಯಾಯ ಪರಮಾತ್ಮನೇ ॥೩೫॥

---

೩೧ ಓಂ ಕಾಲಾಯ ನಮಃ
೩೨ ಓಂ ರುದ್ರಾಯ ನಮಃ
೩೩ ಓಂ ಮಹಾಸತ್ರಾಯ ನಮಃ
೩೪ ಓಂ ಶೂಲಿನೇ ನಮಃ
೩೫ ಓಂ ಧೂರ್ಜಟಯೇ ನಮಃ
೩೬ ಓಂ ಜಟಿಲಾಯ ನಮಃ
೩೭ ಓಂ ಕೃಶಾಯ ನಮಃ
೩೮ ಓಂ ಭೇದ್ಯಾಯ ನಮಃ
೩೯ ಓಂ ಮೇಧ್ಯಾಯ ನಮಃ
೪೦ ಓಂ ಭವವೈದ್ಯಾಯ ಬಂಧವೇ ನಮಃ
೪೧ ಓಂ ತ್ರಿಮೂರ್ತಯೇ ನಮಃ
೪೨ ಓಂ ಬ್ರಹ್ಮಜನಕಾಯ ನಮಃ
೪೩ ಓಂ ವೇದರಹಸ್ಯಾಯ ನಮಃ
೪೪ ಓಂ ಹರ್ಷತರ್ಷಾಯ ನಮಃ
೪೫ ಓಂ ವೇದವೇದಾಂತಸಾರಾಯ ನಮಃ
೪೬ ಓಂ ಸುಪಾರಾಯ ನಮಃ
೪೭ ಓಂ ಅತೀತಾನಾಗತಜ್ಞಾನಾಯ ನಮಃ
೪೮ ಓಂ ವರ್ತಮಾನಾಯ ನಮಃ
೪೯ ಓಂ ಬೃಂಹತೇ ನಮಃ
೫೦ ಓಂ ಮೇರುಕೋದಂಡಹಸ್ತಾಯ ನಮಃ
೫೧ ಓಂ ಗಂಗಾಮಸ್ತಾಯ ನಮಃ
೫೨ ಓಂ ದಾರಿಣೇ ನಮಃ
೫೩ ಓಂ ಬುದ್ಧಾಯ ನಮಃ
೫೪ ಓಂ ಶುದ್ಧಾಯ ನಮಃ
೫೫ ಓಂ ಮೇಧ್ಯಾಯ ನಮಃ
೫೬ ಓಂ ಪರಮಾತ್ಮನೇ ನಮಃ
೫೭ ಓಂ ಭೂತನಾಥಾಯ ನಮಃ
೫೮ ಓಂ ಭವ್ಯಾಯ ನಮಃ

ಭೂತನಾಥಾಯ ಭವ್ಯಾಯ ಹವ್ಯಕವ್ಯಭುಜೇ ನಮಃ ।
ನಮೋ ದಿಗ್ವಾಸಸೇ ತುಭ್ಯಂ ದಂಡಿನೇ ಮುಂಡಿನೇ ನಮಃ ॥೩೬॥

ಅನಾದಿಮಲಹೀನಾಯ ಜ್ಞಾನಗಮ್ಯಾಯ ತೇ ನಮಃ ।
ಪ್ರಧಾನಪರಮಾಣ್ವಾದಿಮೂರ್ತಯೇಽನಂತಶಕ್ತಯೇ ॥೩೭॥

ವಿಚಿತ್ರಮಹಿಮಾಧಾರಸ್ವರೂಪಾಯ ನಮೋ ನಮಃ ।
ಭೂಮ್ನೇ ಸೀಮ್ನೇ ವೇದಧಾಮ್ನೇ ವ್ಯೋಮ್ನೇ ಸಾಮ್ನೇ ನಮೋ ನಮಃ ॥೩೮॥

ನಮಸ್ತಾರಾಯ ತೀರ್ಥ್ಯಾಯ ಸರ್ಗಾದಿಪರಮಾಯ ಚ ।
ನಮಃ ಪಾರ್ಯಾಯ ವಾರ್ಯಾಯ ಶರ್ವಾಯಾಪ್ರತಿಮಾಯ ಚ ॥೩೯॥

ಕುಕ್ಕುಟಾಯ ವಿಶೇಷಾಯ ಮಧ್ಯಾಂತರಹಿತಾಯ ಚ ।
ಪ್ರಸನ್ನಾಯ ಪರಾಯಾಥ ಕಾಮಾಂಗಾಯ ಸುರೇತಸೇ ॥೪೦॥

---

೫೯ ಓಂ ಹವ್ಯಕವ್ಯಭುಜೇ ನಮಃ
೬೦ ಓಂ ದಿಗ್ವಾಸಸೇ ನಮಃ
೬೧ ಓಂ ದಂಡಿನೇ ನಮಃ
೬೨ ಓಂ ಮುಂಡಿನೇ ನಮಃ
೬೩ ಓಂ ಅನಾದಿಮಲಹೀನಾಯ ನಮಃ
೬೪ ಓಂ ಜ್ಞಾನಗಮ್ಯಾಯ ನಮಃ
೬೫ ಓಂ ಪ್ರಧಾನಪರಮಾಣ್ವಾದಿಮೂರ್ತಯೇ ನಮಃ
೬೬ ಓಂ ಅನಂತಶಕ್ತಯೇ ನಮಃ
೬೭ ಓಂ ವಿಚಿತ್ರಮಹಿಮಾಧಾರಸ್ವರೂಪಾಯ ನಮಃ
೬೮ ಓಂ ಭೂಮ್ನೇ ನಮಃ
೬೯ ಓಂ ಸೀಮ್ನೇ ನಮಃ
೭೦ ಓಂ ವೇದಧಾಮ್ನೇ ನಮಃ
೭೧ ಓಂ ವ್ಯೋಮ್ನೇ ನಮಃ
೭೨ ಓಂ ಸಾಮ್ನೇ ನಮಃ
೭೩ ಓಂ ತಾರಾಯ ನಮಃ
೭೪ ಓಂ ತೀರ್ಥ್ಯಾಯ ನಮಃ
೭೫ ಓಂ ಸರ್ಗಾದಿಪರಮಾಯ ನಮಃ
೭೬ ಓಂ ಪಾರ್ಯಾಯ ನಮಃ
೭೭ ಓಂ ವಾರ್ಯಾಯ ನಮಃ
೭೮ ಓಂ ಶರ್ವಾಯ ನಮಃ
೭೯ ಓಂ ಅಪ್ರತಿಮಾಯ ನಮಃ
೮೦ ಓಂ ಕುಕ್ಕುಟಾಯ ವಿಶೇಷಾಯ ನಮಃ
೮೧ ಓಂ ಮಧ್ಯಾಂತರಹಿತಾಯ ನಮಃ
೮೨ ಓಂ ಪ್ರಸನ್ನಾಯ ನಮಃ
೮೩ ಓಂ ಪರಾಯ ನಮಃ
೮೪ ಓಂ ಕಾಮಾಂಗಾಯ ನಮಃ
೮೫ ಓಂ ಸುರೇತಸೇ ನಮಃ

ಗರ್ಜತೇ ತರ್ಜತೇ ಚೈವ ಮಾರ್ಜತೇ ಬ್ರಹ್ಮರೂಪಿಣೇ ।
ಊರ್ಜಾಯ ಫಾಲನೇತ್ರಾಯ ದುರ್ಗಗಮ್ಯಾಯ ಭಾನವೇ ॥೪೧॥

ನಾದ್ಯಾಯ ತರುಣಾಯಾಥ ಕಾರಣಾಯ ನಮೋ ನಮಃ ।
ನಮೋ ಧರ್ಮಾದಿಗಮ್ಯಾಯ ವಿರಾಗಾಯ ಸುರಾಗಿಣೇ ॥೪೨॥

ನಮಸ್ತೇ ನಿಷ್ಪ್ರಪಂಚಾಯ ನಿರಾಭಾಸಾಯ ತೇ ನಮಃ ।
ಬ್ರಹ್ಮಣೇ ವಿಶ್ವರೂಪಾಯ ಸನಾತನ್ಯಾಯ ಮನ್ಯವೇ ॥೪೩॥

ಪತ್ನೀನಾಂ ಪತಯೇ ಚೈವ ಕಾರಣಾಯ ಚ ಕಾರಿಣೇ ।
ನಮಃ ಪಾರದವೀರ್ಯಾಯ ದುರ್ಗಾರ್ತಿಶಮನಾಯ ಚ ॥೪೪॥

ಏಭಿರ್ನಾಮಭಿರೇವೇಶಿ ಸಂಪೂಜ್ಯ ಕುಸುಮೈಃ ಶಿವೇ ।
ಸ್ತವಮೇತತ್ಪ್ರಯುಂಜೀತ ಶರ್ವಪ್ರೀತಿಕರಂ ಮಮ ॥೪೫॥

ದೇವಾದಿದೇವ ಗಿರಿಜಾಯುತವಾಮಭಾಗ
ಭೋಗಿಪ್ರಿಯಾಭರಣಕಾರಣ ತಾರಣೇಶ ।
ವ್ಯೋಮಾದಿಸಂವರಣ ಸತ್ಪ್ರಣವಾಸುಮೇಯ
ಮಾಯಾವಿಹೀನ ಭಗವಂತ್ಸತತಂ ನಮಸ್ತೇ ॥೪೬॥

---

೮೬ ಓಂ ಗರ್ಜತೇ ನಮಃ
೮೭ ಓಂ ತರ್ಜತೇ ನಮಃ
೮೮ ಓಂ ಮಾರ್ಜತೇ ನಮಃ
೮೯ ಓಂ ಬ್ರಹ್ಮರೂಪಿಣೇ ನಮಃ
೯೦ ಓಂ ಊರ್ಜಾಯ ನಮಃ
೯೧ ಓಂ ಫಾಲನೇತ್ರಾಯ ನಮಃ
೯೨ ಓಂ ದುರ್ಗಗಮ್ಯಾಯ ನಮಃ
೯೩ ಓಂ ಭಾನವೇ ನಮಃ
೯೪ ಓಂ ನಾದ್ಯಾಯ ನಮಃ
೯೫ ಓಂ ತರುಣಾಯ ನಮಃ
೯೬ ಓಂ ಕಾರಣಾಯ ನಮಃ
೯೭ ಓಂ ಧರ್ಮಾದಿಗಮ್ಯಾಯ ವಿರಾಗಾಯ ನಮಃ
೯೮ ಓಂ ಸುರಾಗಿಣೇ ನಮಃ
೯೯ ಓಂ ನಿಷ್ಪ್ರಪಂಚಾಯ ನಮಃ
೧೦೦ ಓಂ ನಿರಾಭಾಸಾಯ ನಮಃ
೧೦೧ ಓಂ ಬ್ರಹ್ಮಣೇ ನಮಃ
೧೦೨ ಓಂ ವಿಶ್ವರೂಪಾಯ ನಮಃ
೧೦೩ ಓಂ ಸನಾತನ್ಯಾಯ ನಮಃ
೧೦೪ ಓಂ ಮನ್ಯವೇ ನಮಃ
೧೦೫ ಓಂ ಪತ್ನೀನಾಂಪತಯೇ ನಮಃ
೧೦೬ ಓಂ ಕಾರಿಣೇ ನಮಃ
೧೦೭ ಓಂ ಪಾರದವೀರ್ಯಾಯ ನಮಃ
೧೦೮ ಓಂ ದುರ್ಗಾರ್ತಿಶಮನಾಯ ನಮಃ

ವಿಶ್ವಂ ಪ್ರಭಾಭಸಿತಧೂಸರಕಾಮಧೂಮಂ-
ನೀತಾಂಗಸಂಗಕುಸುಮಾಂಗಪಿನಾಕಿಸಂಗ ।
ಗಂಗಾವತಂಸ ಭಗಣಾಧಿಪನೇತ್ರಪದ್ಮ-
ಮಿತ್ರತ್ರಿನೇತ್ರ ಭಗವಂತ್ಸತತಂ ನಮಸ್ತೇ ||೪೭||

ಕೃಪೀಟಾಪೀಡೋರ್ಧ್ವಪ್ರಕಟಿತರವಿಶ್ವಾಂತಕ ವಿಭೋ
ಮಹಾಭರ್ಗ ಸ್ವರ್ಗೇ ವಿನಿಹತಸುರಾಶ್ವಾಸುರಗಣಾಃ ।
ನ ಮನ್ಯೇ ಚಾನ್ಯಾಂಸ್ತಾನ್ತವ ನತಿರಹಿತಾನನ್ಯಸುಕೃತಾ-
ನ್ನತೋ ಹನ್ಯಾಮ್ಯಪ್ಯಾಢ ಶಿವವರಶರಣ್ಯಂ ತವ ಪದಂ ||೪೮||

---

ಎಲೌ ಮಹೇಶ್ವರಿಯೆ, ಇಲ್ಲಿ ಹೇಳಿದ ನೂರೆಂಟು ನಾಮಗಳನ್ನುಚ್ಚರಿಸಿಕೊಂಡು ಹೂವು, ಪತ್ರೆ ಮುಂತಾದವುಗಳಿಂದ ಶಿವಲಿಂಗವನ್ನು ಪೂಜಿಸಿ ಅನಂತರ ಶಿವನಿಗೆ ಪ್ರೀತಿಕರವಾದ ನನ್ನ ಈ ಸ್ತೋತ್ರವನ್ನು ಪಠಿಸಬೇಕು. ||೨೬-೨೭-೨೮-೨೯-೩೦-೩೧-೩೨-೩೩-೩೪-೩೫-೩೬-೩೭-೩೮-೩೯-೪೦-೪೧-೪೨-೪೩-೪೪-೪೫||

ಎಲ್ಲ ದೇವತೆಗಳಿಗೂ ಆದಿದೇವನೂ, ಎಡಭಾಗದಲ್ಲಿ ಪಾರ್ವತಿಯಿಂದ ಯುಕ್ತವಾದ ದೇಹವುಳ್ಳವನೂ, ಸರ್ಪವನ್ನೇ ಪ್ರಿಯವಾದ ಆಭರಣವನ್ನಾಗಿ ಧರಿಸಿರುವವನೂ, ಪ್ರಪಂಚಕಾರಣನೂ, ಜಗದ್ರಕ್ಷಕನೂ, ಈಶ್ವರನೂ, ಆಕಾಶವೇ ಮೊದಲಾದುವುಗಳಲ್ಲಿ ವ್ಯಾಪಿಸಿರುವವನೂ, ಶ್ರೇಷ್ಠವಾದ ಪ್ರಣವಮಂತ್ರದಿಂದ ಊಹಿಸಲ್ಪಡತಕ್ಕವನೂ, ಮಾಯಾರಹಿತನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಪರಮೇಶ್ವರನೆ! ನಿನಗೆ ಅನವರತವೂ ನಮಸ್ಕರಿಸುವೆನು. ||೪೬||

ಮಹೇಶ್ವರನೇ, ಶುಭ್ರವಾದ ನಿನ್ನ ಪ್ರಭೆಯಿಂದ ಜಗತ್ತಿನ ಕಾಮಾಂಧಕಾರವನ್ನೆಲ್ಲಾ ಹೋಗಲಾಡಿಸಿರುವೆ. ಸಕಲರ ಮನಸ್ಸನ್ನೂ ಚಂಚಲಗೊಳಿಸುವವನೂ ಮನ್ಮಥನ ದೇಹವನ್ನು ನಾಶಮಾಡಿದವನೂ, ಪಿನಾಕವೆಂಬ ಬಿಲ್ಲನ್ನು ಹಿಡಿದಿರುವವನೂ, ಗಂಗಾನದಿಯನ್ನು ಮುಡಿಯಲ್ಲಿ ಧರಿಸಿರುವವನೂ, ಸೂರ್ಯ, ಚಂದ್ರ ಮತ್ತು ಅಗ್ನಿಗಳೆಂಬ ಮೂರುಕಣ್ಣುಗಳುಳ್ಳವನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಸ್ವಾಮಿಯೆ, ನಿನಗೆ ಅನವರತವೂ ಪ್ರಣಾಮಮಾಡುವೆನು. ||೪೭||

ಅಗ್ನಿಯನ್ನೇ ಹಣೆಗಣ್ಣಿನಲ್ಲಿ ಧರಿಸಿ ಪ್ರಳಯಕಾಲದಲ್ಲಿ ಅದರ ಊರ್ಧ್ವಮುಖಜ್ವಾಲೆಯಿಂದ ಜಗತ್ಪ್ರಳಯ ಕಾರಣನಾಗುವ ಸ್ವಾಮಿಯೆ, ಮಹಾಪ್ರಳಯ

ಹೇ ಭರ್ಗ ಶಂಕರಮಹೇಶ ಪಿನಾಕಪಾಣೇ
ಗಂಗಾಧರಾಂತಕಹರಾಮರಧೀರ ವೀರ ।
ಹಾರೀಕೃತಾಹೀನ ವಿಭೋ ಸಮಾನಮಾನಾದಿ-
ಮೇಯರಹಿತಾಮಲ ಪಾಹಿ ದೀನಂ ॥೪೯॥

ತ್ವಯ್ಯೇವ ಸೃಷ್ಟಮಖಿಲಂ ತ್ವಯಿ ಲೀನಮೇತ-
ತ್ಸಂಕಲ್ಪಶಿಲ್ಪಮಖಿಲಂ ಭವಜಾಲಮೀಶ ।
ಭೂತಂ ಭವಜ್ಜನನಸಂಸ್ಥಿತಿನಾಶವಿವರ್ತಮಾನ
ಮೇತತ್ತ್ವದೋದರಗತಂ ಪರಿಪಾಹಿ ಶಂಭೋ ॥೫೦॥

---

ಕಾಲದಲ್ಲಿ ಸ್ವರ್ಗವಾಸಿಗಳಾದ ದೇವದಾನವ ಗಣಗಳೆಲ್ಲವೂ ನಿನ್ನಿಂದ ನಾಶವಾಗು ವುವು. ನಿನ್ನನಲ್ಲದೆ ಇತರ ದೇವತೆಗಳನ್ನು ನಮಸ್ಕರಿಸುವವರಿಗೆ ಅಷ್ಟು ಪುಣ್ಯವುಂಟಾ ಗಲಾರದು. ಹಾಗೆ ಇತರ ದೇವತೆಗಳನ್ನು ಆರಾಧಿಸಿ ಸುಕೃತಿಗಳಾಗಿರುವವರನ್ನು ನಾನು ಇದುವರೆಗೆ ನೋಡಿಲ್ಲ. ಪರಮೇಶ್ವರನೇ, ಆದ್ದರಿಂದಲೇ ನಾನು ಇನ್ನು ಮೇಲೆ ನಿನ್ನ ಶರಣಾಗತರಕ್ಷಕವಾದ ಪಾದವನ್ನು ಬಿಟ್ಟು ಬೇರೊಂದನ್ನು ನಂಬಲಾರೆ. ॥೪೮॥

ಮನ್ಮಥ ಮತ್ತು ಯಮ ಇವರನ್ನು ಶಿಕ್ಷಿಸಿದವನೂ, ಮಂಗಳಕರನೂ, ಮಹದೈಶ್ವರ್ಯಪೂರ್ಣನೂ, ಪಿನಾಕವೆಂಬ ಧನುಸ್ಸನ್ನು ಹಿಡಿದಿರುವವನೂ, ಗಂಗೆ ಯನ್ನು ತಲೆಯಲ್ಲಿ ಧರಿಸಿರುವವನೂ, ಯಮಾಂತಕನೂ, ದೇವತೆಗಳಲ್ಲಿ ಧೀರನೂ, ಶೂರನೂ, ಆದಿಶೇಷನನ್ನೇ ಹಾರವನ್ನಾಗಿ ಮಾಡಿಕೊಂಡಿರುವವನೂ, ಸಾಟಿಯಿಲ್ಲದ ಪ್ರಮಾಣಾದಿಗಳಿಲ್ಲದವನೂ, ಪ್ರಮಾಣರಹಿತನೂ, ಪವಿತ್ರನೂ ಆದ ಮಹಾದೇವನೆ, ದೀನನಾದ ನನ್ನನ್ನು ಸಲಹು. ॥೪೯॥

ಈಶ್ವರನೇ, ಈ ಸಕಲ ಬ್ರಹ್ಮಾಂಡವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟು, ಕೊನೆಗೆ ನಿನ್ನಲ್ಲಿಯೇ ಐಕ್ಯವಾಗುವುದು. ಪ್ರಭೋ, ಈ ಸಂಸಾರಜಾಲವೆಲ್ಲವೂ ನಿನ್ನ ಸಂಕಲ್ಪರೂಪವಾದ ಶಿಲ್ಪಕಲೆಯಾಗಿರುವುದು. ಭೂತ, ಭವಿಷ್ಯದ್ವರ್ತ ಮಾನರೂಪವಾದ ಕಾಲಪುರುಷನೆನಿಸಿರುವ ನೀನು ಸೃಷ್ಟಿ, ಸ್ಥಿತಿ, ಸಂಹಾರಕಾರ್ಯಗಳಲ್ಲಿ ಹೊರಳಾಡುತ್ತಿರುವ ಬ್ರಹ್ಮಾಂಡದಲ್ಲಿ ಸಿಲುಕಿ, ನಿನ್ನ ಹೊಟ್ಟೆಯಲ್ಲಡಗಿರುವ ಈ ನನ್ನನ್ನು ಪಾಲಿಸು. ॥೫೦॥

ಸ್ತವನೋತತ್ಪ್ರಯುಂಜೀತ ಫಾಲ್ಗುಣೇ ಮಾಸಿ ಸತ್ತಮೇ ।
ಹೃತ್ತಮೋನಾಶಕಂ ದೇವಿ ಪುಣ್ಯಮಾಯುಷ್ಯವರ್ಧನಂ ॥೫೧॥

ಏಕವಾರಂ ತ್ರಿವಾರಂ ವಾ ಪೂಜಯೇದಿಂದುಶೇಖರಂ ।
ಸರ್ವೇಷ್ವಪಿ ಚ ಮಾಸೇಷು ದದ್ಯಾದ್ಗೋಮಿಥುನಂ ಸಿತಂ ॥೫೨॥

ಸದಕ್ಷಿಣಂ ಸವಸ್ತ್ರಂ ಚ ಸತಾಂಬೂಲಮುಮಾಪತೇಃ ।
ಪ್ರೀತಯೇ ಶಾಂಭವೇಷ್ವೇವ ದಾಪಯೇಚ್ಛಿವಪೂಜಕಃ ॥೫೩॥

ಮಾಸಿ ತಸ್ಮಿನ್ನಿವೇ ಪೂರ್ಣೇ ಪರ್ವಣ್ಯೇವ ಸಮಾಹಿತಃ ।
ಮಧುಕಂಬಲಮೀಶಾಯ ಕೃತ್ವಾ ಪಾಪೈಃ ಪ್ರಮುಚ್ಯತೇ ॥೫೪॥

ಘೃತಕಂಬಲವನ್ಮಾಸೇನ ವೈಶಾಖೇ ದಧಿಕಂಬಲಂ ।
ಕೃತ್ವಾ ಪಾಪೈಃ ಪ್ರಮುಚ್ಯೇತ ಶಿವಸ್ಯಾತಿಪ್ರಿಯೋಭವೇತ್ ॥೫೫॥

ಮಧುಕಂಬಲಕಂ ಕುರ್ಯಾತ್ಫಾಲ್ಗುನೇ ಪಾಪಹಾರಿ ತತ್ ।
ಪೂಜಾವಿಶೇಷಮಾಸೇಷು ಕಥಿತಂ ಪ್ರೀತಿದಂ ಮಮ ॥೫೬॥

---

ದೇವಿ, ಶ್ರೇಷ್ಠವಾದ ಆ ಫಾಲ್ಗುಣಮಾಸದಲ್ಲಿ ಹೃದಯಾಂಧಕಾರನಾಶಕವೂ, ಪುಣ್ಯಕರವೂ ಆಯುಷ್ಯವರ್ಧಕವೂ ಆದ ಈ ಸ್ತೋತ್ರವನ್ನು ಪಠಿಸಬೇಕು. ಒಂದು ಎರಡು ಅಥವಾ ಮೂರುಬಾರಿಯಾದರೂ ಚಂದ್ರಶೇಖರನನ್ನು ತಪ್ಪದೆ ಪೂಜಿಸಬೇಕು. ಎಲ್ಲಾ ತಿಂಗಳುಗಳಲ್ಲಿಯೂ ಬಿಳಿಯಬಣ್ಣದ ಒಂದು ಗೋಮಿಥುನವನ್ನು ಶಿವಪ್ರೀತಿಕರವಾಗಿ ದಾನಮಾಡಬೇಕು. ದಕ್ಷಿಣೆ, ತಾಂಬೂಲ ಮತ್ತು ವಸ್ತ್ರಗಳೊಡನೆ ಶಿವನ ಪ್ರೀತಿ ಸಂಪಾದನೆಗೋಸ್ಕರ ಶೈವೋತ್ತಮರಿಗೇ ಆ ಗೋಮಿಥುನವನ್ನು ದಾನಮಾಡಬೇಕು. ॥೫೧-೫೨-೫೩॥

ಪಾರ್ವತಿಯೆ, ಹೀಗೆ ಆ ಫಾಲ್ಗುನ ಮಾಸವು ವ್ರತದಿಂದ ಪೂರ್ಣವಾಗುವಾಗ ಪೂರ್ಣಿಮೆಯಲ್ಲಿ ಈಶ್ವರನಿಗೆ ಹಿಂದೆ ಹೇಳಿರುವಂತೆ ಮಧುಕಂಬಲಸೇವೆಯನ್ನು ಮಾಡಿಸಿದವನು ಸಮಸ್ತ ಪಾಪರಹಿತನಾಗುವನು. ಘೃತಕಂಬಲಪ್ರಮಾಣದಂತೆಯೇ ವೈಶಾಖಮಾಸದಲ್ಲಿ ಶಿವನಿಗೆ ಮೊಸರಿನಿಂದ ದಧಿಕಂಬಲವನ್ನು ಮಾಡಿಸಿದವನೂ ಪಾಪರಹಿತನಾಗುವನಲ್ಲದೆ ಶಿವನಿಗೆ ತುಂಬಾ ಪ್ರೀತಿಪಾತ್ರನೆನಿಸುವನು. ॥೫೪-೫೫॥

ಫಾಲ್ಗುನಮಾಸದಲ್ಲಿ ಶಿವನಿಗೆ ಮಧುಕಂಬಲವನ್ನು ಮಾಡಿಸುವುದು

ಯತ್ಕೃತ್ವಾ ಮನುಜಃ ಸದ್ಯೋ ಮುಚ್ಯತೇ ಭವಬಂಧನಾತ್ ।
ಸಮುಚ್ಚರ್ಯ ಯಸ್ಸ್ತುವೀತೈವಂ ಸರ್ವೇಷ್ವಪಿ ಮಹೇಶ್ವರಿ ॥೫೭॥

ಸ್ತುವೀತ ಪರಯಾ ಭಕ್ತ್ಯಾ ದೇವದೇವಂ ಮಹೇಶ್ವರಂ ।
ತ್ವಯ್ಯೇವ ಸೃಷ್ಟಮಖಿಲಂ ತ್ವಯ್ಯೇವ ಸಕಲಂ ಸ್ಥಿತಂ ॥೫೮॥

ತ್ವಯಾ ಸಂಹ್ರಿಯತೇ ವಿಶ್ವಂ ಪ್ರಧಾನಪುರುಷಾತ್ಮಕಂ ।
ತ್ವಮೇವ ಪುರುಷೋಽನಂತಃ ಪ್ರಧಾನಂ ಪ್ರಕೃತಿಸ್ತಥಾ ॥೫೯॥

ಭೂಮಿರಾಪೋಽನಲೋವಾಯುರ್ವ್ಯೋಮಾಹಂಕಾರಮೇವ ಚ ।
ಯಸ್ಯ ರೂಪಂ ನಮಸ್ಯಾಮಿ ಭವಂತ್ವಾಂ ಬ್ರಹ್ಮಸಂಜ್ಞಿತಂ ॥೬೦॥

ಯಸ್ಯ ದ್ಯೌರಭವನ್ಮೂರ್ಧಾ ಪಾದೌ ಪೃಥ್ವೀ ದಿಶೋಭುಜಃ ।
ಆಕಾಶಮುದರಂ ತಸ್ಮೈ ವಿರಾಜೇ ಪ್ರಣಮಾಮ್ಯಹಂ ॥೬೧॥

---

ಸಕಲ ಪಾಪನಾಶಕವು. ಹೀಗೆ ಚೈತ್ರಾದಿಮಾಸಗಳಲ್ಲಿ ಮಾಡುವ ನನ್ನ ವಿಶೇಷಪೂಜಾ ವಿಧಾನವು ನನಗೆ ಅತಿ ಪ್ರೀತಿಕರವೆನಿಸುವುದು. ಅದನ್ನು ನಿನಗೆ ಈಗ ವಿಸ್ತಾರವಾಗಿ ಹೇಳಿರುವೆನು. ಇದನ್ನು ಕೂಡಲೇ ಮಾಡಿದ ಮಾನವನು ಸಂಸಾರಬಂಧನದಿಂದ ಮುಕ್ತನಾಗುವನು. ಒಟ್ಟಿನಲ್ಲಿ ಎಲೌ ಮಹೇಶ್ವರಿಯೆ, ಎಲ್ಲ ಮಾಸಗಳಲ್ಲಿಯೂ ಮಹೇಶ್ವರನನ್ನು ಈರೀತಿ ಸ್ತುತಿಸಬೇಕು ಪೂಜಿಸಬೇಕು. ದೇವಾದಿದೇವನಾದ ಮಹೇಶ್ವರನನ್ನು ಶ್ರೇಷ್ಠವಾದ ಭಕ್ತಿಯಿಂದ ಮುಂದೆ ಹೇಳುವಂತೆ ಪ್ರಾರ್ಥಿಸಬೇಕು. ॥೫೬-೫೭॥

ನಿನ್ನಿಂದಲೇ ಸಕಲ ಪ್ರಪಂಚವೂ ಸೃಷ್ಟಿಸಲ್ಪಟ್ಟು ನಿನ್ನಲ್ಲಿಯೇ ಅಡಗಿ, ಪ್ರಕೃತಿಪುರುಷಾತ್ಮಕವಾದ ಈ ಜಗತ್ತೆಲ್ಲವೂ ಪ್ರಳಯಕಾಲದಲ್ಲಿ ನಿನ್ನಿಂದಲೇ ಸಂಹರಿಸಲ್ಪಡುತ್ತದೆ. ದೇವ, ನಾಶರಹಿತನಾದ ನೀನೇ ಪುರುಷಸಂಜ್ಞಕನು. ಪ್ರಧಾನವೇ ಪ್ರಕೃತಿಯೆನಿಸಿರುವುದು. ಭೂಮಿ, ಜಲ, ಅಗ್ನಿ, ವಾಯು, ಆಕಾಶ ಮತ್ತು ಅಹಂಕಾರಗಳೆಂಬುವು ನಿನ್ನ ಅಧೀನವಾದ ಮಾಯಾವಿವರ್ತಗಳು. ಅಂತಹ ಪರಬ್ರಹ್ಮಸಂಜ್ಞಿತವಾದ ನಿನಗೆ ನಮಸ್ಕರಿಸುತ್ತೇನೆ. ॥೫೮-೫೯-೬೦॥

ಯಾವ ಮಹಾತ್ಮನಿಗೆ ಆಕಾಶವೇ ತಲೆಯೋ, ಭೂಮಿಯೇ ಕಾಲ್ಗಳೊ, ದಿಕ್ಕುಗಳೇ ಭುಜಗಳೋ, ಅಂತರಿಕ್ಷವೇ ಹೊಟ್ಟೆಯೋ ಅಂತಹ ವಿರಾಟ್ಪುರುಷನಿಗೆ ನಾನು ಪ್ರಣಾಮಮಾಡುತ್ತೇನೆ. ಪ್ರತಿನಿತ್ಯವೂ ತನ್ನ ಬ್ರಹ್ಮತೇಜೋಮಯವಾದ

ಸಂತಾಪಯತಿ ಯೋ ನಿತ್ಯಂ ಸ್ವಭಾಭಿರ್ಭಾಸಯನ್ದಿಶಃ ।
ಬ್ರಹ್ಮತೇಜೋಮಯಂ ವಿಶ್ವಂ ತಸ್ಮೈ ಸೂರ್ಯಾಯ ತೇ ನಮಃ ॥೬೨॥

ಹವ್ಯಂ ವಹತಿ ಯೋ ನಿತ್ಯಂ ರೌದ್ರೀಮಗ್ನಿಮಯೀಂ ತನುಃ ।
ಕವ್ಯಂ ಪಿತೃಗಣಾನಾಂ ಚ ತಸ್ಮೈವಹ್ನ್ಯಾತ್ಮನೇ ನಮಃ ॥೬೩॥

ಆಪ್ಯಾಯಯತಿ ಯೋ ದೇವಾಂಸ್ಸ್ವಧಾಮ್ನಿ ಸಕಲಂ ಜಗತ್ ।
ಸೋಮಃ ಸೋಮಾತ್ಮನೇ ತುಭ್ಯಂ ಓಷಧೀಶಾತ್ಮನೇ ನಮಃ ॥೬೪॥

ಬಿಭರ್ತ್ಯಶೇಷಭೂತಾನಿ ಯೋಽಂತಶ್ಚರತಿ ಸರ್ವಗಃ ।
ಶಕ್ತಿರ್ಮಾಹೇಶ್ವರೀ ಸಾಕ್ಷಾತ್ತಸ್ಮೈ ವಾಯ್ವಾತ್ಮನೇ ನಮಃ ॥೬೫॥

ಸೃಜತ್ಯಶೇಷಮೇವೇದಂ ಯಃ ಸ್ವಕರ್ಮಾನುರೂಪತಃ ।
ಸ್ವಾತ್ಮನ್ಯೇವ ಸ್ಥಿತಂ ಚೈತಚ್ಚತುರ್ವಕ್ತ್ರಾತ್ಮನೇ ನಮಃ ॥೬೬॥

ಯಃ ಶೇತೇಽಪ್ಸು ಶಿವಂ ಧ್ಯಾತ್ವಾ ಪಾಲಯನ್ಜಗದವ್ಯಯಃ ।
ತಸ್ಮೈ ವಿಶ್ವಾತ್ಮನೇ ತುಭ್ಯಂ ವಿಷ್ಣವೇ ಪಾಲನಾತ್ಮನೇ ॥೬೭॥

---

ಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಯಾವನು ತಾಪಗೊಳಿಸುತ್ತಾನೆಯೋ ಅಂತಹ ಸೂರ್ಯಸ್ವರೂಪನಾದ ನಿನಗೆ ನಮಸ್ಕರಿಸುವೆನು. ನಿತ್ಯವೂ ರುದ್ರಸಂಬಂಧವಾದ ಅಗ್ನಿರೂಪವಾದ ಹವಿಸ್ಸನ್ನೂ, ಪಿತೃಗಣಗಳ ಕವ್ಯವನ್ನೂ ಧರಿಸಿರುವ ಅಗ್ನಿಸ್ವರೂಪ ನಾದ ನಿನಗೆ ಪ್ರಣಾಮಮಾಡುತ್ತೇನೆ. ॥೬೧-೬೨-೬೩॥

ತನ್ನ ಅಮೃತಕಿರಣಗಳಿಂದ ದೇವತೆಗಳನ್ನೂ ಸಕಲ ಪ್ರಪಂಚವನ್ನೂ ಆನಂದಗೊಳಿಸುವ ಔಷಧಿಗಳಿಗಧಿಪತಿಯಾದ ಚಂದ್ರಸ್ವರೂಪನಾದ ನಿನಗೆ ನಮಸ್ಕಾರ ಮಾಡುತ್ತೇನೆ. ಸಕಲ ಪ್ರಾಣಿಗಳನ್ನೂ ಧರಿಸಿ, ಎಲ್ಲರ ಅಂತಃಕರಣದಲ್ಲಿಯೂ ಸಂಚರಿಸುತ್ತಾ ಮಹೇಶ್ವರನ ಶಕ್ತಿರೂಪವೆನಿಸಿರುವ ವಾಯುರೂಪಿಯಾದ ಮಹಾದೇವನೆ, ನಿನಗೆ ಪ್ರಣಾಮಮಾಡುವೆನು. ತನ್ನ ಕರ್ಮಾನುಗುಣವಾಗಿ ತನ್ನಲ್ಲಿಯೇ ಇರುವ ಈ ಸಕಲ ಪ್ರಪಂಚವನ್ನೂ ಸೃಷ್ಟಿಮಾಡುವ ಬ್ರಹ್ಮರೂಪಿಯಾದ ನಿನಗೆ ನಮಸ್ಕಾರ. ॥೬೪-೬೫-೬೬॥

ಶಿವನನ್ನು ಧ್ಯಾನಿಸಿ ಜಗದ್ರಕ್ಷಣೆಮಾಡುತ್ತಾ ನಾಶವಿಲ್ಲದೆ ನೀರಿನಲ್ಲಿ ಲೀಲೆಯಿಂದ ಮಲಗಿಕೊಳ್ಳುವ ಜಗದ್ರೂಪಿಯೂ ರಕ್ಷಕಸ್ವರೂಪನೂ ಆದ ವಿಷ್ಣುವೆನಿಸಿದ

ಯಃ ಸಂಹರೇಜ್ಜಗಜ್ಜಾಲಂ ಶೂಲೇನೈಕೇನ ಶಂಕರಿ ।
ತಸ್ಮೈ ರುದ್ರಾತ್ಮನೇ ತುಭ್ಯಂ ನಮಸ್ತೇಽಸ್ತು ಪಿನಾಕಿನೇ ॥೬೮॥

ಯಂ ವಿನಿದ್ರಾ ಜಿತಶ್ವಾಸಾಃ ಪಶ್ಯಂತಿ ಪರಮೇಶ್ವರಂ ।
ಜ್ಯೋತಿಃ ಪಶ್ಯಂತಿ ಯುಂಜಾನಾಸ್ತಸ್ಮೈ ಸರ್ವಾತ್ಮನೇ ನಮಃ ॥೬೯॥

ಇತಿ ಸ್ತವಂ ಪ್ರಯುಂಜೀತ ಸರ್ವಮಾಸೇಷು ಶಾಂಕರಿ ।
ಮಾಸಪೂಜಾಮಿಮಾಂ ಕೃತ್ವಾ ಸಂವತ್ಸರಮತಂದ್ರಿತಃ ॥೭೦॥

ನ ಸ ಭೂಯೋಽಭಿಜಾಯೇತ ಸಂಸಾರೇ ದುಃಖಸಾಗರೇ ॥೭೧॥

॥ ಈಶ್ವರ ಉವಾಚ ॥

ಯಃ ಫಾಲ್ಗುಣೇ ಮಾಸಿ ಶಿವಾರ್ಚಕೋ ನರೋ
ನ ಫಲ್ಗುಪಾಪೈರ್ಭಯಮೇತಿ ಶಂಕರಿ ।
ಸ ವಲ್ಗುತೇ ನಾಮ ಶಿವಸ್ಯ ಯಾನ್ಯೈಃ
ನ ಚಾಂತಿಮೇ ಯೋನಿಮವಾಪ್ಯ ಮೋದತೇ ॥೭೨॥

---

ನಿನಗೆ ಪ್ರಣಾಮವು. ಒಂದೇ ಒಂದು ಶೂಲದಿಂದ ಮಹಾಪ್ರಳಯಕಾಲದಲ್ಲಿ ಈ ಪ್ರಪಂಚ ಸಮೂಹವನ್ನೆಲ್ಲಾ ಸಂಹಾರಮಾಡುವ ಪಿನಾಕಪಾಣಿಯೂ ರುದ್ರ ರೂಪಿಯೂ ಆದ ನಿನಗೆ ನಮಸ್ಕಾರಮಾಡುವೆನು. ನಿದ್ರೆಯಿಂದ ಜಯಿಸಲ್ಪಟ್ಟ ಶ್ವಾಸವುಳ್ಳ ಯೋಗಿಗಳು ಯಾವ ಜ್ಯೋತಿಃಸ್ವರೂಪನಾದ ಪರಮೇಶ್ವರನನ್ನು ಕಂಡು ಆದರಲ್ಲಿ ಐಕ್ಯರಾಗುವರೋ ಅಂತಹ ಸಕಲಜಗದ್ರೂಪಿಯಾದ ನಿನಗೆ ನಮಸ್ಕರಿಸು ವೆನು. ॥೬೭-೬೮-೬೯॥

ಎಲೌ ಪಾರ್ವತಿ! ಎಲ್ಲತಿಂಗಳುಗಳಲ್ಲಿಯೂ ಈ ಸ್ತೋತ್ರವನ್ನು ಪಠಿಸಬೇಕು. ದೇವಿ! ಒಂದುವರ್ಷಕಾಲ ಆಲಸ್ಯವಿಲ್ಲದೆ ಈ ಚೈತ್ರಾದಿಮಾಸಪೂಜೆಗಳನ್ನು ಮಾಡಿ ದವನು ಮತ್ತೆ ದುಃಖಗಳಿಗೆ ಸಾಗರದಂತಿರುವ ಈ ಸಂಸಾರಬಂಧನದಲ್ಲಿ ಜನ್ಮ ತಾಳದೆ ಮುಕ್ತನಾಗುವನು. ॥೭೦-೭೧॥

ಪಾರ್ವತಿಯೇ, ಫಾಲ್ಗುಣಮಾಸದಲ್ಲಿ ಶಿವಪೂಜೆಮಾಡುವ ಮಾನವನು ಈ ಕ್ಷುದ್ರಪಾತಕಗಳಿಂದ ಕೊಂಚವೂ ಭಯಪಡಲಾರನು. ಕೊನೆಗೆ ಪುನರ್ಜನ್ಮವಿಲ್ಲ

ಮಧುಕಂಬಲಕೃತ್ತು ಫಾಲ್ಗುಣೇ
ವರಪರ್ವಣ್ಯಗಜೇ ಧುನೋತಿ ಪಾಪಂ ।
ಮುಖಮೇತತ್ಕಿಲ ಹಾಯನಸ್ಯ ಗೌರಿ
ಪ್ರಥಿತಾಪೌರ್ಣಮಸಿ ವಿಶಿಷ್ಟಮಾಸಿ ॥೭೩॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಫಾಲ್ಗುಣಮಾಸಾರ್ಚನವಿವರಣಂ
ನಾಮ ಪಂಚವಿಂಶೋಽಧ್ಯಾಯಃ

---

ದವನಾಗಿ ಶಿವನಾಮಾಂಕಿತವಾದ ವಿಮಾನಗಳಲ್ಲಿ ಕುಳಿತು ಆನಂದದಿಂದ ಕೈಲಾಸದಲ್ಲಿ ಸಂಚರಿಸುತ್ತಾನೆ. ॥೭೨॥

ಪಾರ್ವತಿಯೆ! ಫಾಲ್ಗುಣಮಾಸದ ಹುಣ್ಣಿಮೆಯ ದಿನ ಶಿವಲಿಂಗಕ್ಕೆ ಮಧುಕಂಬಲಸೇವೆಯನ್ನು ಮಾಡಿಸಿದರೆ ಸಕಲಪಾತಕಗಳೂ ನಾಶವಾಗುವುವು. ಈ ಫಾಲ್ಗುಣ ಮಾಸವು ವರ್ಷಕ್ಕೆ ಮುಖರೂಪವಾಗಿರುವುದು. ಆದ್ದರಿಂದಲೇ ಶ್ರೇಷ್ಠವಾದ ಇಂತಹ ಫಾಲ್ಗುಣಮಾಸದ ಪೂರ್ಣಿಮೆಯಲ್ಲಿ ಮಧುಕಂಬಲದ ಸೇವೆಯನ್ನು ಶಿವಲಿಂಗಕ್ಕೆ ಮಾಡಿಸುವುದು ಪಾಪನಾಶಕವೆಂದು ಶಿವನು ದೇವಿಗೆ ನಿರೂಪಿಸಿದನು. ॥೭೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಫಾಲ್ಗುಣಮಾಸ
ಪೂಜಾವಿವರಣೆಯೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.

॥ ಶ್ರೀ ಶಿವಾಯ ನಮಃ ॥

